# ನಿವೇದನೆ

೧೯೫೫ – ೧೯೫೬ – ೧೯೫೭ ರ ಎಸ್. ಎಸ್. ಸಿ ಪರೀಕ್ಷೆಗಳಿಗಾಗಿ ನಿಯಮಿಸಿದ ಸಂಸ್ಕೃತ ಗದ್ಯ ಪದ್ಯ ಸಂಗ್ರಹವನ್ನು ಅಭ್ಯಾಸಮಾಡುವ ವಿದ್ಯಾರ್ಥಿಗಳ ಅವಶ್ಯಕತೆಗಳನ್ನನುಲಕ್ಷಿಸಿ ಈ ಪುಸ್ತಕವನ್ನು ಸಿದ್ಧಗೊಳಿಸ-ಲಾಗಿದೆ.

ಇದು ನಮ್ಮ ಮೂರನೆಯ ಪ್ರಕಟನೆ. ನಮ್ಮ ಹಿಂದಿನ ಎರಡು ಪ್ರಕಟನೆಗಳು (೧೯೪೯–೫೧; ೧೯೫೨–೫೪) ವಿದ್ಯಾರ್ಥಿವೃಂದದ ತೊಂದರೆಗಳನ್ನು ಹೋಗಲಾಡಿಸಿ, ಜನಪ್ರಿಯವಾದಂತೆ ಈ ಮೂರನೆಯ ಪ್ರಕಟನೆಯಾದರೂ ವಿದ್ಯಾರ್ಥಿವೃಂದದ ತೊಂದರೆಗಳನ್ನು ಹೋಗಲಾಡಿಸಿ, ಅವರ ಅವಶ್ಯಕತೆ ಹಾಗೂ ಬೇಡಿಕೆಗಳನ್ನು ಪೂರೈಸಿ ಜನಮೆಚ್ಚುಗೆಯನ್ನು ಪಡೆಯುವದೆಂಬ ಬಲವಾದ ಆಶೆ ಇದೆ.

ಕವಿಗಳ ಸಂಕ್ಷಿಪ್ತ ಪರಿಚಯ, ಅದರ ಸ್ಥೂಲ ವಿಮರ್ಶೆ ಮುಂತಾದವುಗಳನ್ನು ಸೇರಿಸಲಾಗಿದೆ. ಪ್ರತಿಪಾಠದ ಮೊದಲು ಕಥಾ ಸಾರಾಂಶ, ಪಾಠದ ಸಂದರ್ಭ, ಪಾಠದ ಸಾರಾಂಶಗಳನ್ನು ಕೊಡಲಾಗಿದೆ. ಪಾಠದ ವಿವರವಾದ ಅಭ್ಯಾಸಕ್ಕೆ ಇದೆಲ್ಲ, ಪೂರ್ವಭಾವಿಯಾಗಿ ಬೇಕು ಎಂಬುದು ಅತ್ಯ-ವಶ್ಯ. ಅಲ್ಲದೆ ಪಾಠದ ವಿವರವಾದ ಅಭ್ಯಾಸಕ್ಕೆ ಈ ತೆರನಾದ ಸಾಮಾನ್ಯಜ್ಞಾನ ತೀರ ಆವಶ್ಯಕವೆಂದು ನಂಬಿ ಈ ಉಪಕ್ರಮವನ್ನು ಅನು-ಸರಿಸಿದ್ದೇವೆ. ನಂತರ ಪಾಠವನ್ನು ಭಾಷಾಂತರಿಸುವಾಗ, ಕನ್ನಡಭಾಷೆಯ ಕಟ್ಟು ಹಾಗೂ ಸೌಂದರ್ಯದ ಕಡೆಗೆ ಸಂಪೂರ್ಣ ಲಕ್ಷ್ಯ ಪೂರೈಸಲಾಗಿದೆ. ಪದ್ಯಗಳ ಅಭ್ಯಾಸಕ್ಕೆ ಅನುಕೂಲವಾಗಲೆಂದು ಅನ್ವಯ ಕೊಡಲಾಗಿದೆ. ವ್ಯಾಕರಣವಿಷಯವಾದ, ವಿವರಣಾತ್ಮಕವಾದ, ಐತಿಹಾಸಿಕ ಹಾಗೂ ಪೌರಾಣಿಕ ಸಂದರ್ಭಗಳಿಂದ ಕೂಡಿದ ವಿವರವಾದ ಟೀಕೆ–ಟಿಪ್ಪಣಿಗಳನ್ನು ಕೊಟ್ಟಿದ್ದೇವೆ. ತಮ್ಮ ಅಭ್ಯಾಸದ ಪ್ರಗತಿಯ ಮಟ್ಟವನ್ನು ಸ್ವತಃ ಅರಿಯಲು ಸಹಾಯವಾಗುವಂತೆ ಪ್ರತಿ ಪಾಠದ ಕೊನೆಗೂ ಮಹತ್ವದ ಪ್ರಶ್ನೆಗಳನ್ನು ಕೊಟ್ಟಿದ್ದೇವೆ. ಈ ಸಲ ಹೊಸದಾಗಿ ಅತ್ಯಂತ ಉಪಯುಕ್ತವಾದ **ಪಠ್ಯೇತರ ವಿಭಾಗವನ್ನು** (*General Section*) ಸೇರಿಸಲಾಗಿದೆ.

ಸುಭಾಷಿತಗಳ ವಿಚಾರವಿಸ್ತರಣ, ಭಾಷಾಂತರಕ್ಕಾಗಿ ಅವತರಣಿಕೆಗಳು, ಧಾತುಸಾಧಿತಗಳು, ಮಹತ್ವದ ರೂಪಗಳು, ವಿಶಿಷ್ಟ ಶಬ್ದಗಳ ಉಪಯೋಗ, ಸಮಾಸಗಳು, ಪ್ರಯೋಗಬದಲಾವಣೆ ಮುಂತಾದ ಮಹತ್ವದ ವಿಷಯಗಳನ್ನು ಸೇರಿಸಿದ್ದೇವೆ. ಪುಸ್ತಕದ ಸರ್ವಾಂಗೀಣ ಉಪಯುಕ್ತತೆಯನ್ನು ಹೆಚ್ಚಿಸುವದಕ್ಕಾಗಿ ಮಾದರಿಯ ಪ್ರಶ್ನೆಪತ್ರಿಕೆ ಹಾಗೂ ಮಾದರಿಯ ಉತ್ತರಗಳಿಂದೊಡಗೂಡಿದ ಪರಿಶಿಷ್ಟಗಳೂ ಇವೆ.

ಈ ಪುಸ್ತಕವನ್ನು ಈ ಮಟ್ಟಕ್ಕೆ ತರುವದಕ್ಕಾಗಿ ಮೂಲ ಗ್ರಂಥಗಳನ್ನೂ ಹಾಗೂ ಅವುಗಳ ಸಹಾಯಕ ಗ್ರಂಥಗಳನ್ನೂ ಪರಿಶೀಲಿಸಲಾಗಿದೆ. ಅವುಗಳ ವಿವರವನ್ನು ಬೇರೆಡೆಯಲ್ಲಿ ಕೊಡಲಾಗಿದೆ. ಆ ಎಲ್ಲ ಗ್ರಂಥಕರ್ತರಿಗೆ ಹಾಗೂ ಪ್ರಕಾಶಕರಿಗೆ ಆಭಾರಿಯಾಗಿದ್ದೇವೆ. ಕೊನೆಯದಾಗಿ ಈ ಪುಸ್ತಕವನ್ನು ಸಿದ್ಧಗೊಳಿಸಲು ಸಹಾಯ ಮಾಡಿದ ಎಲ್ಲ ಮಿತ್ರರಿಗೂ ತುಂಬಾ ಆಭಾರಿಯಾಗಿದ್ದೇವೆ.

ಧಾರವಾಡ.
೩-೬-೧೯೫೪

ಪ್ರಕಾಶಕರು.

# ಉಪಕಾರ ಸ್ಮರಣೆ

ಈ ಪುಸ್ತಕ ಸಿದ್ಧಗೊಳಿಸುವಾಗ ಹೆಚ್ಚಾಗಿ ಉಪಯೋಗಿಸಿಕೊಂಡ, ಕೆಳಗೆ ಕಾಣಿಸಿದ ಪುಸ್ತಕಗಳ ಲೇಖಕರಿಗೆ ಹಾಗೂ ಪ್ರಕಾಶಕರಿಗೆ ತುಂಬಾ ಆಭಾರಿಯಾಗಿದ್ದೇವೆ.

| ಪಾಠ | ಪುಸ್ತಕ | ಲೇಖಕರು |
|---|---|---|
| ಗದ್ಯ ೧-೪ | ಪಂಚತಂತ್ರ | ಶ್ರೀ. ಎಂ. ಆರ್. ಕಾಳೆ |
| ,, ೫ | ಪಂಚತಂತ್ರ | ,, ಎಂ. ಎಸ್. ಆಪ್ಟೆ |
| ,, ೫ | ಪ್ರತಿಮಾ ನಾಟಕಮ್ | ,, ಎಸ್. ಬಿ. ಪುರೋಹಿತ |
| ,, | ಭಾಸ ಮಹಾಕವಿ | ,, ಸಿ.ಕೆ.ವೆಂಕಟರಾಮಯ್ಯ |
| | ಭಾಸ | ,, ಎಚ್.ಎಲ್.ಹಿರಿಯಪ್ಪ |
| | ಸಂಸ್ಕೃತನಾಟಕ | ,, ಎ. ಆರ್. ಕೃಷ್ಣಶಾಸ್ತ್ರಿ |
| ,, ೬ | ಮಾಲವಿಕಾಗ್ನಿಮಿತ್ರಮ್ | ,, ಜೆ.ಟಿ.ಪರೀಖ ಮುಂತಾದವರು. |
| | ಮಾಲವಿಕಾಗ್ನಿಮಿತ್ರಮ್ | ,, ಆರ್. ಡಿ. ಕರಮರಕರ |
| | ,, | ,, ಜೆ. ಎಂ. ಆಠಾರ |
| | ಸಂಸ್ಕೃತನಾಟಕ | ,, ಎ. ಆರ್. ಕೃಷ್ಣಶಾಸ್ತ್ರಿ |
| ,, ೭ | ಮುದ್ರಾರಾಕ್ಷಸಮ್ | ,, ಎಂ. ಆರ್. ಕಾಳೆ |
| | ಸಂಸ್ಕೃತನಾಟಕ | ,, ಎ. ಆರ್. ಕೃಷ್ಣಶಾಸ್ತ್ರಿ |
| ,, ೮ | ಕಾದಂಬರಿ | ,, ಎಂ. ಆರ್. ಕಾಳೆ |
| | ,, | ,, ಭಾನುಚಂದ್ರ, ಟೀಕಾ |
| | ,, (ಉತ್ತರಭಾಗ) | ,, ವ್ಹಿ. ಆರ್. ನೆರೂರಕರ |
| | ಕಾದಂಬರಿಸಾರ | ,, ಎಂ. ಎಸ್. ಆಪ್ಟೆ |
| | ,, | ,, ಕೆ. ಬಿ. ವೀರಕರ |
| | ಬಾಣ ಕಾದಂಬರಿ | ,, ಗಂ. ಮ. ತೊರಮರಿ |
| ಪದ್ಯ ೧ | ವನಪರ್ವ ಸಟೀಕಾ | |
| | The Maha-Bharat | ,, P. C. Roy |
| | ಶ್ರೀಕೃಷ್ಣರಾಜವಾಣೀ ವಿಲಾಸಸಂಬ ಮಹಾ-ಭಾರತದ ಕನ್ನಡದ ಟೀಕು | |
| | F. Y. Selections in Sanskrit No.1(1936) | Shri P. L. Vaidya |

## ಪಠ್ಯೇತರ ವಿಭಾಗ (೨೮೮–೩೪೩)



## ಪರಿಶಿಷ್ಟ (೩೩೪–೩೪೩)

॥ श्री गणेशाय नमः ॥

ಎಸ್. ಎಸ್. ಸಿ.

# ಸಂಸ್ಕೃತ ಗಾಯಿಡ್

(೧೯೫೫, ೧೯೫೬, ೧೯೫೭ ಪರೀಕ್ಷೆಗಳಿಗಾಗಿ)

# ಗದ್ಯ ವಿಭಾಗ

## ೧. ವಿಸ್ರಾಶ್ಚಾರೇಣ ರಕ್ಷಿತಾಃ

**೧. ಕವಿ ಹಾಗೂ ಕಾವ್ಯ :—**

ಮೊದಲಿನ ನಾಲ್ಕು ಪಾಠಗಳನ್ನು **ಪಂಚತಂತ್ರ**ವೆಂಬ ಗ್ರಂಥದಿಂದ ಆಯ್ದುಕೊಳ್ಳಲಾಗಿದೆ. ಈ ಪುಸ್ತಕದಲ್ಲಿ, ಮಿತ್ರಭೇದ, ಮಿತ್ರಪ್ರಾಪ್ತಿ, ಕಾಕೋಲೂಕೀಯ, ಲಬ್ಧಪ್ರಣಾಶ ಮತ್ತು ಅಪರೀಕ್ಷಿತಕಾರಕ ಎಂಬ ೫ ತಂತ್ರಗಳಿರುವದರಿಂದ ಇದಕ್ಕೆ ಪಂಚತಂತ್ರವೆಂಬ ಹೆಸರು ಬಂದಿದೆ. (ಪಂಚಾನಾಂ ತಂತ್ರಾಣಾಂ ಸಮಾಹಾರಃ ಪಂಚತಂತ್ರಂ — ದ್ವಿಗು ಸಮಾಸ.)

ದಕ್ಷಿಣ ದೇಶದಲ್ಲಿಯ **ಮಹಿಲಾರೋಪ್ಯ**ವೆಂಬ ಪಟ್ಟಣದ ದೊರೆಯಾದ **ಅಮರಶಕ್ತಿ**ಯ ಮಂದಬುದ್ಧಿಯ ಮೂರು ಮಕ್ಕಳಿಗೆ ವ್ಯವಹಾರ ಜ್ಞಾನ ಹಾಗೂ ರಾಜನೀತಿಯ ಮಾರ್ಗವನ್ನು ಸುಲಭವಾಗಿ ತಿಳಿಸಿಕೊಡುವ ಉದ್ದೇಶದಿಂದ, ಸಕಲಶಾಸ್ತ್ರಪಂಡಿತನಾದ **ವಿಷ್ಣುಶರ್ಮ**ನೆಂಬ ಬ್ರಾಹ್ಮಣನು (ಸುಮಾರು ಕ್ರಿ. ಶ. ೬ ನೇ ಶತಮಾನ) ಈ ಗ್ರಂಥವನ್ನು

ರಚಿಸಿದನು. ಅನೇಕ ಉತ್ತಮ ಗ್ರಂಥಗಳಿಂದ ನೀತಿತತ್ವಗಳನ್ನು ಆರಿಸಿಕೊಂಡು ಅವೆಲ್ಲವನ್ನು ಈ ಗ್ರಂಥದಲ್ಲಿ ಸುಂದರವಾದ ಕಥೆಗಳ ಮೂಲಕ ಪ್ರತಿಪಾದಿಸಲಾಗಿದೆ. ಮೇಲಾಗಿ ಬಳಸಿದ ಭಾಷೆ ಅತ್ಯಂತ ಸುಲಭವಿದೆ; ಶೈಲಿಯು ಸರಳವೂ ಸುಮನೋಹರವೂ ಇದೆ. ಆದ್ದರಿಂದ ನಿರೂಪಿಸಲ್ಪಟ್ಟ ರಾಜನೀತಿತತ್ವಗಳು ನೇರವಾಗಿ ಹೃದಯವನ್ನು ಮುಟ್ಟಿ ಮನಸ್ಸಿನಲ್ಲಿ ಧೃಢವಾಗಿ ಒಡಮೂಡುತ್ತವೆ. ಅಂತೆಯೇ. ಮಂದಬುದ್ಧಿಯ ಮೂರೂ ರಾಜಪುತ್ರರು ಈ ಗ್ರಂಥವನ್ನು ಅಭ್ಯಾಸಮಾಡಿ ರಾಜನೀತಿಯಲ್ಲಿ ಜಾಣ್ಮೆ-ರಾದರಂತೆ ! ಅದೇನೇ ಇದ್ದರೂ, 'ಚಿಕ್ಕ ಚಿಕ್ಕ ಕಥೆಗಳ ಗುಚ್ಛವಾದ' ಈ ಪಂಚತಂತ್ರ ಗ್ರಂಥವು ತುಂಬಾ ಜನಪ್ರಿಯವಾಗಿದೆ ಜಗತ್ತಿನ ಅನೇಕ ಭಾಷೆಗಳಲ್ಲಿ ಭಾಷಾಂತರಿಸಲ್ಪಟ್ಟಿದೆ. ಬೈಬಲ್ಲಿನ ತರುವಾಯ ಜಗತ್ತಿನಲ್ಲಿಯೇ ಅತ್ಯಧಿಕ ಪ್ರಸಾರವುಳ್ಳ ಗ್ರಂಥವಿದು. ಈ ಎಲ್ಲ ಕಾರಣಗಳಿಂದ ಈ ಪುಸ್ತಕಕ್ಕೆ ಅತ್ಯಂತ ಮಹತ್ವ ಬಂದಿದೆ.

**೨. ಪಾಠದ ಸಾರಾಂಶ :—**

ಒಂದಾನೊಂದು ಊರಲ್ಲಿ ಒಬ್ಬ ದೊಡ್ಡ ಬ್ರಾಹ್ಮಣ ಪಂಡಿತನಿದ್ದನು. ಆದರೆ ಜನ್ಮಾಂತರದ ಪಾಪಕರ್ಮದಿಂದ ಅವನು ಕಳವು ಮಾಡುತ್ತಿದ್ದನು. ಆದ್ದರಿಂದ, ಬೇರೊಂದು ದೇಶದಿಂದ ಬಂದ ಹಾಗೂ ವ್ಯಾಪಾರೋದ್ಯೋಗದಿಂದ ಸಿರಿವಂತರಾದ ನಾಲ್ಕು ಬ್ರಾಹ್ಮಣರನ್ನು ಕಂಡು ಅವರ ದ್ರವ್ಯವನ್ನು ಅಪಹರಿಸಬೇಕೆಂಬ ವಿಚಾರವು ಈ ಕಳ್ಳ ಬ್ರಾಹ್ಮಣನ ಮನಸ್ಸಿನಲ್ಲಿ ಹುಟ್ಟಿತು. ಕೂಡಲೇ ಅವನು ತನ್ನ ಪಾಂಡಿತ್ಯದ ಮೂಲಕ ಅವರೊಡನೆ ಸರಸ ಸಂಭಾಷಣೆಗಳನ್ನಾಡುತ್ತ, ಅವರಿಗೆ ತನ್ನಲ್ಲಿ ವಿಶ್ವಾಸ ಹುಟ್ಟಿಸಿ, ಅವರ ಸೇವೆ ಮಾಡತೊಡಗಿದನು. ಹೀಗಿರುವಾಗ ಒಮ್ಮೆ ಆ ಬ್ರಾಹ್ಮಣರು ತಮ್ಮಲ್ಲಿಯ ಎಲ್ಲ ಪದಾರ್ಥಗಳನ್ನು ಮಾರಿ, ಬಂದ ಹಣದಿಂದ ಬಹಳ ಅಮೂಲ್ಯ ರತ್ನಗಳನ್ನು ಕೊಂಡು, ಅವೆಲ್ಲವನ್ನು ತಮ್ಮ ತೊಡೆಯೊಳಗೆ ಇಟ್ಟುಕೊಂಡು ಮರಳಿ ತಮ್ಮ ದೇಶಕ್ಕೆ ಹೊರಡಲು ಸಿದ್ಧರಾದರು. ಇದನ್ನು ಕಂಡ ಆ ಕಳ್ಳ ಬ್ರಾಹ್ಮಣನು ಅವರ ಮನವೊಲಿಸಿ ಅವರನ್ನು ಅನುಸರಿಸಿದನು. ಹೋಗುವಾಗ ದಾರಿಯಲ್ಲಿ ಬೇಡರು, ಕಾಗೆಗಳ ಮಾತಿನ ಮೇರೆಗೆ, ಅವರನ್ನು ಹಿಡಿದರು. ಆದರೆ ಅವರಲ್ಲಿ ಏನೂ ಹಣವಿದ್ದಿರಲಿಲ್ಲ. ಆದರೂ ಕಾಗೆಗಳಲ್ಲಿ ಪರಮ ವಿಶ್ವಾಸವಿದ್ದ ಆ ಬೇಡರು ಐದೂ ಬ್ರಾಹ್ಮಣರನ್ನು ಕೊಂದು ಅವರ ಚರ್ಮವನ್ನು ಸುಲಿದು ಹಣ ಪಡೆಯಲು ಉದ್ಯುಕ್ತರಾದರು. ತನ್ನ ಸಾವು ಹೇಗಾದರೂ ತಪ್ಪುವ

ಬಿಟ್ಟಿಂಬ ನಿರ್ಣಯಕ್ಕೆ ಬಂದ ಆ ಕಳ್ಳ ಬ್ರಾಹ್ಮಣ ಪಂಡಿತನು ಉಳಿದ ನಾಲ್ಕು ಬ್ರಾಹ್ಮಣರ ಜೀವವನ್ನುಳಿಸಿ ಶ್ರೇಷ್ಠ ಗತಿ ದೊರಕಿಸಲು ಇಚ್ಛಿಸಿ, 'ತನ್ನನ್ನೇ ಮೊದಲು ಕೊಂದು ಪರೀಕ್ಷಿಸಬೇಕಾಗಿ' ಆ ಬೇಡರಿಗೆ ಬಿನ್ನಯಿಸಿಕೊಂಡನು. ಆ ಬೇಡರಾದರೋ ಅವನನ್ನು ಕೊಂದು ಪರೀಕ್ಷಿಸಲಾಗಿ ಹಣ ದೊರೆಯಲಿಲ್ಲ. ಆದ್ದರಿಂದ, ಉಳಿದ ನಾಲ್ವರಲ್ಲಿಯೂ ಹಣವಿರಲಿಕ್ಕಿಲ್ಲೆಂದು ತಿಳಿದು ಆ ಬೇಡರು ಅವರನ್ನು ಬಿಟ್ಟುಬಿಟ್ಟರು. ಹೀಗೆ ಆ ಕಳ್ಳನು (ಬ್ರಾಹ್ಮಣ) ಉಳಿದ ಬ್ರಾಹ್ಮಣರನ್ನು ಜೀವಹೋಗುವ ಸಂಕಟದಿಂದ ರಕ್ಷಿಸಿ ಪಾರುಮಾಡಿದನು.

**೩. ಭಾಷಾಂತರ:—**

### ೧. ಬ್ರಾಹ್ಮಣರು ಕಳ್ಳನಿಂದ ರಕ್ಷಿಸಲ್ಪಟ್ಟರು.
### (ಕಳ್ಳನು ಬ್ರಾಹ್ಮಣರನ್ನು ರಕ್ಷಿಸಿದನು.)

ಒಂದು ಊರಲ್ಲಿ ಒಬ್ಬ ದೊಡ್ಡ ಬ್ರಾಹ್ಮಣ ಪಂಡಿತನಿದ್ದನು; ಆದರೆ ಹಿಂದಿನಜನ್ಮದ (ಪಾಪಕರ್ಮದ) ಸಂಬಂಧದಿಂದ ಅವನು ಕಳ್ಳನಾಗಿದ್ದನು. ಅವನು ಆ ಊರಲ್ಲಿ, ಬೇರೊಂದು ದೇಶದಿಂದ ಬಂದ ನಾಲ್ವರು ಬ್ರಾಹ್ಮಣರು ಒಳ್ಳೆ ಪದಾರ್ಥಗಳನ್ನು ಮಾರುತ್ತಿರುವದನ್ನು ಕಂಡು, 'ಎಲವೋ ನಾನು ಯಾವ ಉಪಾಯದಿಂದ ಇವರ ಹಣವನ್ನು ಪಡೆಯಬಹುದು (ಶಬ್ದಶಃ ಪಡೆಯುವೆ), ಎಂದು ಆಲೋಚಿಸಿದನು. ಹೀಗೆ ಆಲೋಚಿಸಿ, ಶಾಸ್ತ್ರಗಳಲ್ಲಿ ಹೇಳಿದ ಅನೇಕ ಒಳ್ನುಡಿಗಳನ್ನೂ (ಸುಭಾಷಿತ), ಒಳ್ಳೆ ಪ್ರಿಯವಾದ ಸಿಹಿ ಮಾತುಗಳನ್ನೂ ಅವರೆದುರಿಗೆ ಆಡುತ್ತ, ಅವರ ಮನಸ್ಸಿನಲ್ಲಿ (ತನ್ನ ಬಗ್ಗೆ) ವಿಶ್ವಾಸ ಹುಟ್ಟಿಸಿ, ಅವರ ಸೇವೆ ಮಾಡಲಾರಂಭಿಸಿದನು. ಅಥವಾ, ಈ ಮಾತು (ಶಬ್ದಶಃ, ಇದು) (ಹೀಗೆ) ಚೆನ್ನಾಗಿ ಹೇಳಲ್ಪಟ್ಟಿದೆ.

ಅದುಷ್ಟ ಸ್ತ್ರೀಯು ನಾಚಿಕೆಯುಳ್ಳವಳಾಗುತ್ತಾಳೆ (ನಾಚಿಕೆಯನ್ನು ನಟಿಸುತ್ತಾಳೆ); ಉಪ್ಪು ನೀರು ತಂಪಾಗಿರುತ್ತದೆ, ಡಾಂಭಿಕನು ವಿವೇಕಿಯಾಗಿ ನಟಿಸುತ್ತಾನೆ (ಶಬ್ದಶಃ, ವಿವೇಕಿಯಾಗುತ್ತಾನೆ); ಮತ್ತು ಠಕ್ಕನು ಸವಿ (ಪ್ರಿಯ) ಮಾತುಗಳನ್ನಾಡುವನು. (೧)

ತರುವಾಯ, ಅವನು ಅವರ ಸೇವೆ ಮಾಡುತ್ತಿರುವಾಗ, ಆ ಬ್ರಾಹ್ಮಣರು ಎಲ್ಲ ಪದಾರ್ಥಗಳನ್ನು ಮಾರಿ ಒಳ್ಳೆ ಬೆಲೆಬಾಳುವ ರತ್ನಗಳನ್ನು ಕೊಂಡರು. ಬಳಿಕ ಅವನ ಎದುರಿನಲ್ಲಿಯೇ ಆ ರತ್ನಗಳನ್ನು (ತಮ್ಮ) ತೊಡೆಯೊಳಗೆ ಇಟ್ಟುಕೊಂಡು (ಆ ಬ್ರಾಹ್ಮಣರು) ತಮ್ಮ ದೇಶಕ್ಕೆ ಹೋಗಲು ಸಿದ್ಧತೆ ಮಾಡ

ದರು. ಆಗ ಆ ಠಕ್ಕ ಬ್ರಾಹ್ಮಣನು, ಹೊರಡಲು ಸಿದ್ಧರಾದ ಆ ಬ್ರಾಹ್ಮಣರನ್ನು ಕಂಡು, ಚಿಂತೆಯಿಂದ ಕಳವಳಗೊಂಡ ಮನಸ್ಸುಳ್ಳವನಾದನು. “[illegible] ನನಗೆ ಈ ಹಣವು ಏನೂ ದೊರೆಯಲಿಲ್ಲ. ಆದ್ದರಿಂದ, ಇವರೊಡನೆ ಹೋಗುವೆನು; ದಾರಿಯಲ್ಲಿ ಎಲ್ಲಿಯಾದರೂ ವಿಷಕೊಟ್ಟು ಇವರನ್ನು ಕೊಂದು ಎಲ್ಲ ರತ್ನಗಳನ್ನು ತೆಗೆದುಕೊಳ್ಳುವೆನು” ಎಂದು ಆಲೋಚಿಸಿ, ಅವರೆದುರಿಗೆ ದುಃಖ ಹುಟ್ಟುವಂತೆ ಹೀಗೆ ಮಾತನಾಡಿದನು. ‘ಗೆಳೆಯರೇ ನನ್ನನ್ನು ಬಿಟ್ಟು [illegible] ನೀವು ಹೊರಡಲು ಸಿದ್ಧರಾಗಿರುವಿರಿ. ಕಾರಣ, ಪ್ರೀತಿಯೆಂಬ ಬಂಧನದಿಂದ ತಮ್ಮೊಡನೆ ಬಿಗಿಯಲ್ಪಟ್ಟ ನನ್ನ ಮನಸ್ಸು ನಿಮ್ಮ ಅಗಲುವಿಕೆಯ ಉಚ್ಚಾರ ಮಾತ್ರದಿಂದಲೇ ( ಹೆಸರಿನಿಂದಲೇ ), ಎಲ್ಲಿಯೂ ಧೈರ್ಯಗೊಳ್ಳದೆ ಕಳವಳಗೊಂಡಿದೆ. (ಮನಸ್ಸು ನಿರಾಶೆಗೊಂಡಿದೆ ಎಂದು ಅಭಿಪ್ರಾಯ.) (ಆದ್ದರಿಂದ) ಅನುಗ್ರಹ ಮಾಡಿ ಗೆಳೆಯನಾದ ನನ್ನನ್ನು ಕೂಡ ನಿಮ್ಮೊಡನೆ ಕರೆದೊಯ್ಯಿರಿ.’ ಅವನ ಮಾತು ಕೇಳಿ, ದಯೆಯಿಂದ ಕರಗಿದ ಮನಸ್ಸುಳ್ಳ ಅವರು, ಅವನೊಡನೆಯೇ ತಮ್ಮ ದೇಶಕ್ಕೆ ಹೊರಟರು.

ಬಳಿಕ ದಾರಿಯಲ್ಲಿ, ಪಲ್ಲೀಪುರವೆಂಬ ಊರೊಳಗೆ ಆ ಐವರು ಹೋಗುತ್ತಿರುವಾಗ ‘ಎಲೈ ಬೇಡರೇ ಓಡಿರಿ ಓಡಿರಿ; ಒಂದೂ ಕಾಲು ಲಕ್ಷ ಹಣವುಳ್ಳವರು ಹೋಗುತ್ತಿದ್ದಾರೆ. ಇವರನ್ನು ಕೊಂದು ತೆಗೆದುಕೊಳ್ಳಿರಿ’ ಎಂದು ಕಾಗೆಗಳು ಹೇಳಲಾರಂಭಿಸಿದವು. ನಂತರ, ಬೇಡರು ಕಾಗೆಗಳ ಮಾತು ಕೇಳಿ, ಬೇಗನೆ ಹೋಗಿ, ಬಡಿಗೆಗಳ ಹೊಡೆತಗಳಿಂದ ಆ ಬ್ರಾಹ್ಮಣರನ್ನು ಗಾಯಗೊಳಿಸಿ, ಅರಿವೆ ಬಿಚ್ಚಿ ನೋಡಿದರು; ಆದರೆ ಅವರಿಗೆ ಏನೂ ಹಣ ಸಿಗಲಿಲ್ಲ. ಆಗ ಆ ಬೇಡರು ನುಡಿದರು:— ‘ಎಲೈ ದಾರಿಗರೇ. ಹಿಂದೆ ಎಂದೂ ಕಾಗೆಗಳ ಮಾತು ಸುಳ್ಳಾಗಿಲ್ಲ. ಆದ್ದರಿಂದ ನಿಮ್ಮ ಬಳಿಯಲ್ಲಿ ಎಲ್ಲಿಯೋ ಹಣವಿದೆ; ಅದನ್ನು ಕೊಡಿರಿ. ಇಲ್ಲವಾದರೆ, ಎಲ್ಲರನ್ನು ಕೊಂದು ತೊಗಲು ಸುಲಿದು, (ದೇಹದ) ಪ್ರತಿಯೊಂದು ಅವಯವ (ಶೋಧಿಸಿ) ನೋಡಿ ಹಣ ಒಯ್ಯುವೆವು.’ ಆಗ, ಅವರ ಈ ಮಾತು ಕೇಳಿ, ಕಳ್ಳ ಬ್ರಾಹ್ಮಣನು ಮನಸ್ಸಿನಲ್ಲಿ (ಹೀಗೆ) ಆಲೋಚಿಸಿದನು. (ಈ ಬೇಡರು) ಎಲ್ಲ ಬ್ರಾಹ್ಮಣರನ್ನು ಕೊಂದು (ಪ್ರತಿಯೊಂದು) ಅವಯವ ಶೋಧಿಸಿ, ರತ್ನಗಳನ್ನು ತೆಗೆದುಕೊಂಡರೆ, ನನ್ನನ್ನೂ ಕೊಲ್ಲುವರು. ಆದ್ದರಿಂದ ನಾನು ಮೊದಲೇ, ರತ್ನಗಳಿಲ್ಲದ ನನ್ನನ್ನು ಒಪ್ಪಿಸಿ, ಈ ಬ್ರಾಹ್ಮಣರನ್ನು ಉಳಿಸುವೆನು. (ಹೀಗೆ) ಹೇಳಲ್ಪಟ್ಟಿದೆ:.

ಮಗುವೇ, ಮರಣಕ್ಕೇಕೆ ಅಂಜುವೆ ? ಮರಣವು ಅಂಜುವವನನ್ನು ಬಿಡುವದಿಲ್ಲ. ಇಂದಾಗಲೀ ಇಲ್ಲವೆ ನೂರು ವರ್ಷಗಳ ನಂತರವಾಗಲೀ ಪ್ರಾಣಿಗಳಿಗೆ ಮರಣವು ನಿಶ್ಚಿತವಾದುದು. (೨).

ಮತ್ತು,

ಆಕಳುಗಳಿಗಾಗಿ ಹಾಗೂ ಬ್ರಾಹ್ಮಣರಿಗಾಗಿ ಪ್ರಾಣ ಬಿಡುವವನು (ಶಬ್ದಶಃ ಯಾವನು ಬಿಡುವನೋ ಅವನು) ಸೂರ್ಯಮಂಡಲವನ್ನು ಭೇದಿಸಿ ಶ್ರೇಷ್ಠ ಸ್ಥಾನ ಪಡೆಯುವನು. (೩).

ಹೀಗೆ ಆಲೋಚಿಸಿ, 'ಬೇಡರೇ, ಹೀಗಿದ್ದರೆ ನನ್ನನ್ನು ಮೊದಲು ಕೊಂದು ನೋಡಿರಿ' ಎಂದು ಅಂದನು. ಬಳಿಕ ಹಾಗೆ ಮಾಡಲಾಗಿ, ಅವರು ಅವನಲ್ಲಿ ಹಣವಿಲ್ಲದುದನ್ನು ಕಂಡು ಉಳಿದ ನಾಲ್ವರನ್ನೂ ಬಿಟ್ಟು ಬಿಟ್ಟರು.

ಪಂಚತಂತ್ರದಲ್ಲಿ 'ಮಿತ್ರಭೇದ'ವೆಂಬಲ್ಲಿಯ(ಮೊದಲನೆಯ ತಂತ್ರ)೨೨ ನೆಯ ಕಥೆಯು.

**೩. ಟೀಕೆ-ಟಿಪ್ಪಣೆಗಳು:—**

**ಪುಟ ೫.** ವಿಪ್ರಾಃ— ಬ್ರಾಹ್ಮಣರು. ಹಿಂದಕ್ಕೆ ಬ್ರಾಹ್ಮಣರಲ್ಲಿ ಅಪಾರವಾದ ವಿದ್ಯೆ ಇದ್ದುದರಿಂದ ಅವರಿಗೆ 'ವಿಪ್ರ' ಎಂಬ ಸಂಜ್ಞೆ ಬಂದಿತು. ( ತು. ಮಾ:- ಜನ್ಮನಾ ಬ್ರಾಹ್ಮಣೋಜ್ಞೇಯಃ ಸಂಸ್ಕಾರೈರ್ದ್ವಿಜ ಉಚ್ಯತೇ। ವಿದ್ಯಯಾ ಯಾತಿ ವಿಪ್ರತ್ವಂ ತ್ರಿಭಿಃ ಶ್ರೋತ್ರಿಯ ಉಚ್ಯತೇ। ವಿದ್ಯಾಂ ಪ್ರಕಟಯತಿ ಇತಿ ವಿಪ್ರಃ। ) ಚೌರಃ— ಚೋರಃ. ಕಳ್ಳ. ಚೌರೇಣ ರಕ್ಷಿತಾಃ— ಕಳ್ಳನಿಂದ ರಕ್ಷಿಸಲ್ಪಟ್ಟರು. ಕಳ್ಳನು ರಕ್ಷಿಸಿದನು ಎಂಬರ್ಥ. ವಿಪ್ರಾಃ ಚೌರೇಣ ರಕ್ಷಿತಾಃ— ಇದು ಕರ್ಮಣಿ ಪ್ರಯೋಗವಿದೆ. 'ಚೌರಃ ವಿಪ್ರಾನ್ ರಕ್ಷಿತವಾನ್' ಎಂಬುದು ಇದರ ಕರ್ತರಿ ಪ್ರಯೋಗವು. ರಕ್ಷಿತ— ರಕ್ಷ್ (೧. ಪ ) ಧಾತುವಿನ ಕ. ಭೂ. ಧಾ. ವಿ. ಕರ್ಮಣಿ ಭೂ. ಧಾ. ವಿ. ಗಳಿಗೆ 'ವತ್' ಪ್ರತ್ಯಯ ಹಚ್ಚುವದರಿಂದ ಕರ್ತರಿ ಭೂ.ಧಾ.ವಿ.ಗಳು ಆಗುತ್ತವೆ. ಉದಾ:— ರಕ್ಷಿತವತ್, ಗತವತ್, ಶ್ರುತವತ್ ಮುಂ.

ಕಃ+ಅಪಿ = ಕೋಽಪಿ— ಒಬ್ಬಾನೊಬ್ಬ. ಕಿಂ ಸರ್ವನಾಮಕ್ಕೆ ಚಿತ್, ಚನ, ಅಪಿ ಜೋಡಿಸುವದರಿಂದ ಯಾವದೋ ಒಂದು (*Certain*) ಎಂಬ ಅರ್ಥವಾಗುತ್ತದೆ, ಉದಾ:— ಕಶ್ಚಿತ್, ಕಶ್ಚನ, ಕೋಽಪಿ, ಕಸ್ಮಿನ್ನಪಿ, ಕೇನಾಪಿ ಮುಂ. ಮಹಾವಿದ್ವಾನ್— ದೊಡ್ಡ ಪಂಡಿತ. ಮಹಾನ್ ವಿದ್ವಾನ್ (ಕ. ಸ.). ಮಹತ್ ಶಬ್ದವು ಕರ್ಮಧಾರಯ ಇಲ್ಲವೆ ಬಹುವ್ರೀಹಿ ಸಮಾಸದ ಪೂರ್ವ ಪದವಿದ್ದರೆ, ಮಹಾ ಎಂಬ ರೂಪ ತಾಳುತ್ತದೆ, ಉದಾ:— ಮಹಾರಥಃ, ಮಹಾಶೈಲಃ. ಆದರೆ ಮಹತ್ಸೇವಾ. ಪರಂ—

ಪರಂತು, ಆದರೆ. ಪೂರ್ವಜನ್ಮಯೋಗೇನ—(i) ಹಿಂದಿನ ಜನ್ಮದ ಸಂಬಂಧ ದಿಂದ. ಎಂದರೆ ಹಿಂದಿನ ಜನ್ಮದ ಪಾಪಕರ್ಮದ ಸಂಬಂಧದಿಂದ. ಜನ್ಮಾಂತರದಲ್ಲಿ ಮಾಡಿದ ಪಾಪಕರ್ಮದ ಫಲವನ್ನು ಅವನು ಈಗ ಅನುಭವಿಸಬೇಕಾಗಿತ್ತು. ಅಂತೆಯೇ ಅವನಿಗೆ ಕಳವು ಮಾಡುವ ದುಷ್ಕಟವು ಗಂಟುಬಿದ್ದಿತ್ತು. (ii) ಪೂರ್ವಜನ್ಮದ ಸಂಸ್ಕಾರದಿಂದ. ಎಂದರೆ, ಹಿಂದಿನ ಜನ್ಮದಲ್ಲಿ ಕಳ್ಳನಾಗಿದ್ದರಿಂದ ಕಳವಿನ ಸಂಸ್ಕಾರ ಅವನ ಮನಸ್ಸಿನಲ್ಲಿ ದೃಢವಾಗಿ ಮೂಡಿತ್ತು. ಅಂತೆಯೇ ಅವನು ಈಗಲೂ ಕಳವು ಮಾಡುತ್ತಿದ್ದನು. ಪೂರ್ವಂ ಜನ್ಮ ಪೂರ್ವಜನ್ಮ (ಕ.ಸ.) ತಸ್ಯ ಯೋಗಃ (ಕ.ನ.) ತೇನ. ಯೋಗಃ—ಸಂಬಂಧ. ಅನ್ಯದೇಶಾಗತಾನ್— ಬೇರೆ ದೇಶದಿಂದ ಬಂದ. ಚತುರಃ ವಿಪ್ರಾನ್ ನಾಲ್ಕು ಬ್ರಾಹ್ಮಣರನ್ನು. ಚತುರಃ— ನಾಲ್ಕು. ಚತುರ್ (ಪ್ರ) ಶಬ್ದದ ದ್ವಿ. ಬ. ವ. ವಿಕ್ರೀಣತಃ—ಮಾರುವ. ವಿ+ಕ್ರೀ (೯.ಪ.) ಧಾತುವಿನ ವ. ಧಾ. ವಿ. (ಪು) ದ್ವಿ. ಬ. ವ. ಕ್ರೀ (೯.) ಉಭಯಪದವಿದ್ದರೂ ಅದಕ್ಕೆ ವಿ ಉಪಸರ್ಗ ಜೋಡಿಸುವದರಿಂದ ಆತ್ಮನೇ ಪದವೇ ಆಗುತ್ತದೆ. ಇಲ್ಲಿ ಮಾತ್ರ ಪರಸ್ಮೈಪದದಲ್ಲಿ ಉಪಯೋಗಿಸಿದ್ದು ಅಪವಾದಾತ್ಮಕವಿದೆ. ಚಿಂತಿತವಾನ್ — ಆಲೋಚಿಸಿದನು. ಚಿಂತ್ (೧೦. ಉ) ಧಾತುವಿನ ಕರ್ತರಿ ಭೂ. ಧಾ. ವಿ. (ಪು) ಪ್ರ. ಏ. ವ. ಅಹೋ— ಎಲವೋ, ಇದರ ಉಪಯೋಗವನ್ನು ಮುಂದೆ ಕೊಡಲಾಗಿದೆ. (i) ಸಂಬೋಧಾತ್ಮಕ, ಅಹೋ ರಾಜಾನಃ। (ii) ಆಶ್ಚರ್ಯ ಸೂಚಕ. ಅಹೋ ಪ್ರಭಾವಃ ಮಹಾತ್ಮನಾಮ್। (iii) ಖೇದ ಸೂಚಕ. ಅಹೋ ಧರ್ಮಾಪೇಕ್ಷಿತಾ ಭರ್ತುಃ। ಅಹೋ ವಿನಷ್ಟಂ ನಃ ಕಾರ್ಯಮ್। ವಿಚಿಂತ್ಯ— ಆಲೋಚಿಸಿ. ವಿ+ಚಿಂತ್ (೧೦. ಉ) ಧಾತುವಿನ ಲ್ಯಬಂತಾವ್ಯಯವು. ಪುರಃ— ಎದುರಿಗೆ. ಇದು ಷಷ್ಠೀ ವಿಭಕ್ತಿ ತೆಗೆದುಕೊಳ್ಳುತ್ತದೆ. ಉದಾ:— ಯಕ್ಷಃ ಮೇಘಸ್ಯ ಪುರಃ ಕಥಮಪಿ ಸ್ಥಿತ್ವಾ ಚಿರಂ ದಧ್ಯೌ। ಶಾಸ್ತ್ರೋಕ್ತಾನಿ— ಶಾಸ್ತ್ರಗಳಲ್ಲಿ ಹೇಳಲ್ಪಟ್ಟ. ಸುಭಾಷಿತಾನಿ— ಒಳ್ಳೆನುಡಿಗಳು. ಶೋಭನಾನಿ ಭಾಷಿತಾನಿ (ಕ. ಸ.). ಸಂಸ್ಕೃತದಲ್ಲಿ ಅನೇಕ ಸುಭಾಷಿತಗಳಿವೆ. ಇವುಗಳಲ್ಲಿ ಉತ್ತಮ ನೀತಿತತ್ವಗಳೂ ಅರ್ಥಗರ್ಭಿತ ಮಾತುಗಳೂ ಬಹು ಸುಂದರವಾಗಿ ಹೇಳಲ್ಪಡುತ್ತವೆ. ಸುಭಾಷಿತವು ಭೂಮಿಯಲ್ಲಿರುವ ಒಂದು ರತ್ನ. ಅಂತೆಯೇ ಸುಭಾಷಿತಗಳ ಮಾಧುರ್ಯವನ್ನು ಕಂಡು ದ್ರಾಕ್ಷಿಯು ತನ್ನ ಮುಖವನ್ನು ಕೆಳಗೆ ಮಾಡಿತಂತೆ! ಸಕ್ಕರೆಯು ಕಲ್ಲಾಯಿತಂತೆ! ಅಮೃತವು ಅಂಜಿ ಸ್ವರ್ಗಕ್ಕೆ ಹೋಯಿತಂತೆ!

ತು. ಮಾ. ದ್ರಾಕ್ಷಾ ಮ್ಲಾನಮುಖೀ ಜಾತಾ ಶರ್ಕರಾ ಚಾಶ್ಮತಾಂ ಗತಾ । ಸುಭಾಷಿತರಸಸ್ಯಾಗ್ರೇ ಸುಧಾ ಭೀತಾ ದಿವಂ ಗತಾ । ಮಾದರಿಗಾಗಿ ಒಂದು ಸುಭಾಷಿತವನ್ನು ಕೆಳಗೆ ಕೊಡಲಾಗಿದೆ:— ಅತಿಪರಿಚಯಾದವಜ್ಞಾ ಸಂತತ ಗಮನಾದನಾದರೋ ಭವತಿ । ಮಲಯೇ ಭಿಲ್ಲಪುರಂಧ್ರೀ ಚಂದನತರುಕಾಷ್ಠ ಮಿಂಧನಂ ಕುರುತೇ॥ ಜಲ್ಪಿತಾ—ಮಾತಾಡುವ ಅವನಿಂದ. ಜಲ್ಪ್ (೧. ಪ) [ಮಾತನಾಡು, ಬಡಬಡಿಸು.] ಧಾತುವಿನ ನ. ಧಾ. ವಿ. (ಪು) ತೃ. ವಿ. ವ. ಉತ್ಪಾದ್ಯ— ಹುಟ್ಟಿಸಿ. ಉತ್+ಪದ್ (೪. ಆ) ಧಾತುವಿನ ಪ್ರಯೋಜಕ ರೂಪದ ಲ್ಯಬಂತಾವ್ಯಯ. ತೇನ ಸೇವಾ ಕರ್ತುಂ ಆರಬ್ಧಾ— ಅವನು ಸೇವೆಮಾಡಲಾರಂಭಿಸಿದನು. ಪದ್ಯ ಪುಸ್ತಕದಲ್ಲಿ ಸೇವಾಂ ಎಂದು ತಪ್ಪು ಬಿದ್ದಿದೆ. ಅದು ಸೇವಾ ಎಂದು ಇರಬೇಕು. ಮೂಲಪುಸ್ತಕದಲ್ಲಿ 'ಸೇವಾ' ಎಂಬುದಾಗಿಯೇ ಇದೆ. ಸಃ ಸೇವಾಂಕರ್ತುಂ ಆರಬ್ಧವಾನ್ ಎಂಬುದು ಇದರ ಕರ್ತರಿ ಪ್ರಯೋಗವು.

**ಶ್ಲೋಕ ೧.** ಅನ್ವಯ:— ಅಸತೀ (ಸ್ತ್ರೀ) ಸಲಜ್ಜಾ ಭವತಿ; ಕ್ಷಾರಂ ನೀರಂ ಶೀತಲಂ ಭವತಿ; ದಂಭೀ ವಿವೇಕೀ ಭವತಿ; ಧೂರ್ತಜನಃ ಪ್ರಿಯ ವಕ್ತಾ ಭವತಿ ।

ಅಸತೀ—ಅಶುದ್ಧಳಾದ. ನ ಸತೀ (ನ.ತ.ಸ.) ಎಂದರೆ ಶುದ್ಧನಡತೆ ಯಿಲ್ಲದ. *Unchaste.* ಸಲಜ್ಜಾ— ಲಜ್ಜಯಾ ಸಹ (ಸಹ ಒ. ಸ.) ನಾಚಿಕೆಯುಳ್ಳವಳು. ಅವಳು ಶುದ್ಧವಿಲ್ಲದಿದ್ದರೂ, ತಾನು ಒಳ್ಳೆಯ ನಡತೆ ಯವಳು ಎಂದು ಜನರಿಗೆ ತೋರಿಸುವದಕ್ಕಾಗಿ ಕುಲೀನ ಸ್ತ್ರೀಯಂತೆ ಲಜ್ಜೆ (ನಾಚಿಕೆ) ವ್ಯಕ್ತಪಡಿಸುತ್ತಾಳೆ. ಎಂದರೆ ಲಜ್ಜಾಗುಣವಿದ್ದಂತೆ ನಟಿಸುತ್ತಾಳೆ. ಕ್ಷಾರಂ ನೀರಂ— ಉಪ್ಪು ನೀರು. ಉಪ್ಪು ನೀರು ಯಾವಾಗಲೂ ತಂಪಿರುತ್ತದೆ. ದಂಭೀ—ದಾಂಭಿಕನು ಪರರನ್ನು ಮೋಸಗೊಳಿಸುವ ದಾಂಭಿಕನು, (*Hypocrite*) ಸದಸದ್ವಿವೇಕವುಳ್ಳವನಂತೆ ನಟಿಸುತ್ತಾನೆ. ಅದರಂತೆ ಠಕ್ಕನು (ಧೂರ್ತನು) ಸವಿಮಾತು ಆಡುವನು. ಪ್ರಿಯವಕ್ತಾ— ಪ್ರಿಯಃ ವಕ್ತಾ (ಕ.ಸ.) ಪ್ರಿಯವಾದುದನ್ನು ಮಾತಾಡುವವ. ಎಂದರೆ ಸವಿಮಾತುಗಾರ. ಧೂರ್ತ ಜನಃ—ಠಕ್ಕ ಮನುಷ್ಯ. ಧೂರ್ತಃ ಜನಃ (ಕ. ಸ.)

ತಸ್ಮಿನ್ ಸೇವಾಂ ಕುರ್ವತಿ— ಅವನು ಸೇವೆ (ಶುಶ್ರೂಷೆ) ಮಾಡುತ್ತಿ ದ್ದಾಗ. ಇದು **ಸತಿ ಸಪ್ತಮಿಯ** ಉದಾಹರಣೆ. ಒಂದರ ಮೇಲೊಂದು ಅವಲಂಬಿಸಿರುವ ಎರಡು ಕ್ರಿಯೆಗಳು ಸ್ಥೂಲವಾಗಿ ಏಕಕಾಲಕ್ಕೆ ನಡೆದು,

ಅವುಗಳ ಕರ್ತೃಪದ ಬೇರೆ ಬೇರೆ ಇದ್ದರೆ ಸತಿ ಸಪ್ತಮಿಯನ್ನು ಉಪಯೋಗಿಸಲಾಗುವದು. ಎಂದರೆ, ಗೌಣಕ್ರಿಯೆಯ ಕರ್ತೃಪದ ಹಾಗೂ ಕೃದಂತ (ಇಲ್ಲವೆ ಕ.ಭೂ.ಧಾ.ವಿ.) ಗಳನ್ನು ಸಪ್ತಮೀ ವಿಭಕ್ತಿಯಲ್ಲಿ ಉಪಯೋಗಿಸಲಾಗುವದು. ಅಂತೆಯೇ ಇದಕ್ಕೆ ಸತಿ ಸಪ್ತಮೀ ಎಂಬ ಹೆಸರು ಬಂದಿದೆ. ಪ್ರಸ್ತುತ ವಾಕ್ಯದಲ್ಲಿ, ಆ ಕಳ್ಳನು ಸೇವೆಮಾಡುವ ಕ್ರಿಯೆ ಹಾಗೂ ಆ ನಾಲ್ಕು ಬ್ರಾಹ್ಮಣರು ವಿವಿಧ ವಸ್ತುಗಳನ್ನು ಮಾರಿ ರತ್ನಗಳನ್ನು ಕೊಳ್ಳುವ ಕ್ರಿಯೆಗಳು ಏಕಕಾಲಕ್ಕೆ ನಡೆದಿವೆ. ಮೊದಲನೆಯದು ಗೌಣಕ್ರಿಯೆ. ಇದರ ಕರ್ತಾ ಕಳ್ಳಬ್ರಾಹ್ಮಣನು. ಎರಡನೆಯದು ಪ್ರಧಾನಕ್ರಿಯೆ. ಪ್ರಧಾನಕ್ರಿಯೆಯ ಕರ್ತೃಪದ ನಾಲ್ಕುಬ್ರಾಹ್ಮಣರು. ಅಂತೆಯೇ ಇಲ್ಲಿ ಸತಿ ಸಪ್ತಮಿ ಉಪಯೋಗಿಸಿದ್ದು ಯೋಗ್ಯವಾಗಿದೆ. ಸತಿ ಸಪ್ತಮಿ ಪ್ರಯೋಗವಿದ್ದರೂ, ಪ್ರಧಾನ ವಾಕ್ಯವು ಕರ್ಮಣಿಯಲ್ಲಿದೆ ಎಂಬುದನ್ನು ವಿದ್ಯಾರ್ಥಿಗಳು ಗಮನಿಸಬೇಕು. ಸತಿಸಪ್ತಮಿಯ ಕೆಲವು ಉದಾ:— ದಶರಥೇ ಪೃಥ್ವೀಂ ಶಾಸತಿ (ಸತಿ) ಪ್ರಜಾಃ ಸುಖಿನಃ ಆಸನ್ । ಸಮುತ್ಥಿತೇ ಭರ್ತರಿ ಸಾ ಪತಿವ್ರತಾ ಶಿರಂ ಉದಧರತ್ । ಆದರೆ ಏಕಕಾಲಕ್ಕೆ ನಡೆಯಬಾರದ ಎರಡು ಕ್ರಿಯೆಗಳು ಕೂಡಿಯೇ ಸಂಘಟಿಸಿದರೆ, ತುಚ್ಛತೆ ಅಥವಾ ಅನಾದರ ಸೂಚಿಸಲು ಸತಃ ಷಷ್ಠೀ ಪ್ರಯೋಗವನ್ನು ಉಪಯೋಗಿಸುವರು. ಆಗ ಗೌಣಕ್ರಿಯೆಯ ಕರ್ತೃಪದ ಹಾಗೂ ಕೃದಂತ (ಇಲ್ಲವೆ ಕ.ಭೂ.ಧಾ.ವಿ.) ಗಳನ್ನು ಷಷ್ಠೀ ವಿಭಕ್ತಿಯಲ್ಲಿ ಉಪಯೋಗಿಸುವರು. ಉದಾ:— ಪಶ್ಯತಃ ಅಪಿ ರಾವಣಸ್ಯ ರಾಮಃ ರಾಕ್ಷಸಾನ್ ಪರಾಜಯತ । ಪಶ್ಯತೋ ಗುರೋಃ ಶಿಷ್ಯೇಣ ಅವಿನಯಃ ಕೃತಃ । ಪಶ್ಯತೋ ರಾಕ್ಷಸಸ್ಯ ನವನಂದಾಃ ಪಶವಃ ಇವ ಹತಾಃ । ತೈಃ.....ಕ್ರೀತಾನಿ........ತೇ ವಿಪ್ರಾಃ ಸರ್ವವಸ್ತೂನಿ ವಿಕ್ರೀಯ ಬಹುಮೂಲ್ಯಾನಿ ರತ್ನಾನಿ ಕ್ರೀತವಂತಃ । (ಕರ್ತರಿ), ಜಂಘಾ — ತೊಡೆ. ಸಮಕ್ಷಂ — ಅಕ್ಷ್ಣೋಃ ಸಮೀಪಂ (ಅವ್ಯಯೀಭಾವ ಸ.) ಕಣ್ಣೆದುರಿಗೆ.

**ಪುಟ ೬.** ಉದ್ಯಮಃ — ಉದ್ಯೋಗ. ಉದ್ಯಮಃ ವಿಹಿತಃ — ಹೋಗುವ ಸಿದ್ಧತೆ ಮಾಡಿದರು. ಧೂರ್ತವಿಪ್ರಃ — ಧೂರ್ತಃ ವಿಪ್ರಃ (ಕ. ಸ.) ಠಕ್ಕಬ್ರಾಹ್ಮಣ. ಉದ್ಯತ — ಸಿದ್ಧವಾದ. ಚಿಂತಾವ್ಯಾಕುಲಿತಮನಾಃ — ಚಿಂತೆಯಿಂದ ಕಳವಳಗೊಂಡ ಮನಸ್ಸುಳ್ಳವನಾಗಿ. ಚಿಂತಯಾ ವ್ಯಾಕುಲಿತಂ ಮನಃ ಯಸ್ಯ ಸಃ । (ಬ. ಸ.). ಮಮ ಘಟಿತಂ — ನನ್ನೆಡೆಗೆ ಬಂದಿತು. *'Came into my hands'* — *Kale.* *'obtained by me'* — *Apte.*

‘ಜಟಿತಂ ಸಂಪನ್ನಂ’ ಇತಿ ಟೀಕಾ. ಜಟ್(೧.ಪ) ಧಾತುವಿನ ಕ. ಭೂ. ಧಾ. ವಿ. ಸಹ—ಜೊತೆಗೆ. ತೃತೀಯಾ ವಿಭಕ್ತಿ ತೆಗೆದುಕೊಳ್ಳುತ್ತದೆ. ರಾಮಃ ಸೀತಯಾ ಸಹ ವನಂ ಗತಃ। ಪಥಿ—ಪಥಿನ್ (ಪು) ಶಬ್ದದ ಸ. ಏ. ವ. ನಿಹತ್ಯ—ಕೊಂದು. ನಿ+ಹನ್ (೨.ಪ) ಧಾತುವಿನ ಲ್ಯಬಂತಾವ್ಯಯ. ಉಪಸರ್ಗಯುಕ್ತ ಧಾತುಗಳಿಗೆ ಯ ಹಚ್ಚುವದರಿಂದ ಲ್ಯಬಂತಾವ್ಯಯಗಳಾಗುತ್ತವೆ. ಉದಾ:— ಸೃ—ಸೃತ್ವಾ. ಆದರೆ ಅನುಸೃತ್ಯ. ಅನುಭೂಯ, ಉಪಗಮ್ಯ. ಸಕರುಣಂ—ದಯೆ ಹುಟ್ಟುವಂತೆ. ಕರುಣೇನ ಸಹಿತಂ (ಯಸ್ಮಿನ್ ಕರ್ಮಣಿ) ಯಥಾ ಸ್ಯಾತ್ ತಥಾ. (ಅವ್ಯಯೀಭಾವ ಸ.) ಕರುಣಃ—ದಯೆ. ಕರುಣಾ ಎಂಬುದಾಗಿಯೂ ಬೇರೊಂದು ಶಬ್ದವಿದೆ. ಆಹ—ಬ್ರೂ (೨. ಪ) ಧಾತುವಿನ ವರ್ತಮಾನ ಕಾಲ ತೃ. ಪು.ಏ. ವ. ಏಕಾಕಿನಂ ಮುಕ್ತ್ವಾ —ಒಬ್ಬನನ್ನೇ ಬಿಟ್ಟು. ಗಂತುಂ ಉದ್ಯತಾಃ—ಹೊರಡಲು ಸಿದ್ಧರಾಗಿರುವಿರಿ. ಸ್ನೇಹಪಾಶಃ—ಸ್ನೇಹದ ಬಂಧನ. ಸ್ನೇಹಸ್ಯ ಪಾಶಃ (ಷ.ತ ಸ.) ತೇನ. ಭವದ್ವಿರಹನಾಮ್ನೈವ—ತಮ್ಮ ಅಗಲುವಿಕೆಯ ಹೆಸರಿನಿಂದಲೇ. ಎಂದರೆ ತಮ್ಮ ವಿರಹದ ಉಚ್ಚಾರ ಮಾತ್ರದಿಂದಲೇ. ‘*At the very mention of separation from you*’ (*Apte*). ಭವಂತಾಂ ವಿರಹಃ ಭವದ್ವಿರಹಃ (ಷ. ತ. ಸ.). ತಸ್ಯ ನಾಮ (ಷ.ತ.ಸ.). ತೇನ ಭವದ್ವಿರಹನಾಮ್ನಾ+ಏವ. ಧೃತಿಃ— ಧೈರ್ಯ, ಸಂತೋಷ, ಪ್ರೀತಿ. ತಥಾ.......ನ ಧತ್ತೇ—ಎಲ್ಲಿಯೂ ಧೈರ್ಯ ತಾಳದಷ್ಟು ಕಳವಳಗೊಂಡಿದೆ. ಧತ್ತೇ—ಧಾ (೩.ಆ) ಧಾತುವಿನ ವ ತೃ.ಪು.ಏ ವ. ಸಹಾಯಭೂತಂ—ಗೆಳೆಯನಾದ. ಸಹಾಯಃ—ಗೆಳೆಯ. ಸಾಹಾಯ್ಯಂ ಎಂದರೆ ಸಹಾಯ (*help*). ಕರುಣಾರ್ದ್ರಚಿತ್ತಾಃ—ದಯೆಯಿಂದ ಕರಗಿದ ಅಂತಃಕರಣವುಳ್ಳ. ಕರುಣಯಾ ಆರ್ದ್ರಾಣಿ ಚಿತ್ತಾನಿ ಯೇಷಾಂ ತೇ (ಬ. ಸ.) ಪ್ರಸ್ಥಿತಾಃ—ಹೊರಟರು. ಪ್ರ+ಸ್ಥಾ (೧.ಆ) ಧಾತುವಿನ ಕ. ಭೂ. ಧಾ. ವಿ (ಪು) ಪ್ರ. ಬ. ವ.

ಅಧ್ವನಿ—ದಾರಿಯಲ್ಲಿ. ಅಧ್ವನ್ (ಪು) ಶಬ್ದದ ಸ. ಏ. ವ. ಪಲ್ಲೀಪುರಂ—ಒಂದು ಊರ ಹೆಸರು. ಬೇಡರು ಹೆಚ್ಚಾಗಿ ವಾಸಮಾಡಿಕೊಂಡಿದ್ದ ಒಂದು ಊರ ಹೆಸರು. ‘ಕಿರಾತನಿವಾಸಗ್ರಾಮಃ’ ಟೀಕಾ. ವ್ರಜ್(೧. ಪ) ಹೋಗು. ಧ್ವಾಂಕ್ಷಃ—ಕಾಗೆ. ತೇಷಾಂ ವ್ರಜತಾಂ— ಇದು ‘ಸತಃ ಷಷ್ಠೀ’

ಪ್ರಯೋಗದ ಉದಾಹರಣೆಯಾಗಿದೆ. ವಿವರಣೆಗಾಗಿ ಪಠ್ಯಪುಸ್ತಕದ ೫ ನೇ ಪುಟದಲ್ಲಿ ಬಂದ 'ತಸ್ಮಿನ್ ಸೇವಾಂ ಕುರ್ವತಿ' ಎಂಬುದರ ಮೇಲೆ ಇದ್ದ ಟಿಪ್ಪಣಿ ನೋಡಿರಿ. ಧ್ವಾಂಕ್ಷಾಃ ಕಥಯಿತುಮಾರಬ್ಧಾಃ— ಕಾಗೆಗಳು ಕೂಗಲಾರಂಭಿಸಿದವು. ಧ್ವಾಂಕ್ಷಾಃ ಕಥಯಿತುಮಾರಬ್ಧವಂತಃ. ಕಿರಾತಃ – ಬೇಡ, ಭಿಲ್ಲ, ಅನಾಗರಿಕ, ಕಾಡುನಿವಾಸಿ (*Savage, barbarian*). ' ಕಿರಂ ಪರ್ಯಂತಭೂಮಿಂ ಅತಂತಿ ಇತಿ ಕಿರಾತಾಃ'. ಅಡವಿಯ ಸಮೀಪದಲ್ಲಿದ್ದುಕೊಂಡು ಬೇಟೆ ಇಲ್ಲವೆ ಕಳವುಸುಲಿಗೆಗಳಿಂದ ಉಪಜೀವಿಸುವ ಕೀಳು ವರ್ಗದ ಜನರ ಗುಂಪು, ಸಪಾದಲಕ್ಷಧನಿನಃ—೧¼ ಲಕ್ಷ ಹಣವುಳ್ಳ. ಪಾದಃ—ಕಾಲು. ಪಾದೇನ ಸಹ ಸಪಾದಂ (ಸಹ ಬ. ಸ.) ಸಪಾದಂ ಲಕ್ಷಂ ಸಪಾದಲಕ್ಷಂ (ಕ.ಸ.). ಸಪಾದಲಕ್ಷಂ ಧನಂ ಏಷಾಂ ಅಸ್ತಿ ಇತಿ ಸಪಾದಲಕ್ಷಧನಿನಃ (ತದ್ಧಿತ). ಧಾವತ, ನಯತ,—ಇವು ಅನುಕ್ರಮವಾಗಿ ಧಾವ್ (೧.ಪ), ನೀ (೧.ಪ) ಧಾತುಗಳ ಆಜ್ಞಾರ್ಥ ದ್ವಿ. ಪು. ಬ. ವ. ಇವೆ. ಆಕರ್ಣ್ಯ—ಕೇಳಿ. ಆಕರ್ಣ್ (೧೦.ಪ) [ನಿಜವಾಗಿ ನಾಮಧಾತು]ದ ಲ್ಯಬಂತಾವ್ಯಯ. ಲಗುಡಪ್ರಹಾರೈಃ—ಬಡಿಗೆಗಳ ಹೊಡೆತಗಳಿಂದ ಡೊಣ್ಣೆಗಳ ಏಟುಗಳಿಂದ. ಲಗುಡಾನಾಂ ಪ್ರಹಾರಾಃ (ಷ. ತ. ಸ.) ತೈಃ. ಜರ್ಜರೀಕೃತ್ಯ—ಗಾಯಗೊಳಿಸಿ. ಜರ್ಜರೀಕೃ (೮.ಉ) ಎಂಬ ಚ್ವಿ ಧಾತುವಿನ ಲ್ಯಬಂತಾವ್ಯಯ. ವಿಲೋಕಿತಾಃ—ನೋಡಲ್ಪಟ್ಟರು, ಶೋಧಿಸಲ್ಪಟ್ಟರು. ವಿ+ಲೋಕ್ (೧.ಆ) ಅಥವಾ ವಿ+ಲೋಕ್ (೧ ಆ; ೧೦.ಉ) ಧಾತುವಿನ ಕ. ಭೂ. ಧಾ. ವಿ. (ಪು) ಪ್ರ. ಬ. ವ. ಅಭಿಹಿತಂ—ಅನ್ನಲ್ಪಟ್ಟಿತು. ಅಭಿ+ಧಾ (೩.ಪ) ಧಾತುವಿನ ಕ. ಭೂ. ಧಾ ವಿ (ನ) ಪ್ರ. ಏ. ವ. ತೈಃ ಅಭಿಹಿತಂ—ತೇ ಅಭಿಹಿತವಂತಃ, ಪುರಾ—ಹಿಂದೆ. ಅನೃತ—ಸುಳ್ಳು. ಅರ್ಪಯತ—ಕೊಡಿರಿ. ಋ (೧.ಪ) ಧಾತುವಿನ ಪ್ರಯೋಜಕರೂಪದ ಆಜ್ಞಾರ್ಥ ದ್ವಿ. ಪು. ಬ. ವ. ವಿದಾರ್ಯ—ಸುಲಿದು. ವಿದೃ (೯.ಪ, ೧೦.ಉ). ಧಾತುವಿನ ಲ್ಯಬಂತಾವ್ಯಯವು. ಪ್ರತ್ಯಂಗಂ—ಪ್ರತಿಯೊಂದು ಅವಯವ. ಅಂಗೇ ಅಂಗೇ, ಅಥವಾ ಅಂಗಂ ಅಂಗಂ ಇತಿ ಪ್ರತ್ಯಂಗಂ (ಅವ್ಯಯೀಭಾವ ಸ.) ನೇಷ್ಯಾಮಃ—ಒಯ್ಯುವೆವು. ನೀ (೧.ಪ) ಧಾತುವಿನ ದ್ವಿ.ಭ. ಪ್ರ.ಪು.ಬ.ವ. ಚೌರವಿಪ್ರೇಣ—ಕಳ್ಳಬಾಹ್ಮಣನಿಂದ. ಚೌರಃ ವಿಪ್ರಃ ಚೌರವಿಪ್ರ (ಕ. ಸ.) ತೇನ. ನೇಷ್ಯಂತಿ—ಒಯ್ಯುವರು. ನೀ (೧.ಪ) ಧಾತುವಿನ ದ್ವಿ. ಭ. ತೃ. ಪು. ಬ. ವ. ವಧಿಷ್ಯಂತಿ—ಕೊಲ್ಲುವರು. ವಧ್ (೧.ಪ) ಧಾತುವಿನ

ದ್ವಿ. ಭ. ತೃ. ಪು. ಬ. ವ. ಅರತ್ನಂ—ರತ್ನಗಳಿಲ್ಲದ(ನನ್ನನ್ನು). ಅವಿದ್ಯಮಾನಾನಿ ರತ್ನಾನಿ ಯಸ್ಯ ಸಃ ಅರತ್ನಃ (ಬ.ಸ.) ತಂ. ಸಹುರ್ಪ್ಯ—ಸವಪ್+ಖು (೧ ಪ) ಧಾತುವಿನ ಪ್ರಯೋಜಕರೂಪದ ಲ್ಯಬಂತಾವ್ಯಯ.

**ಶ್ಲೋಕ ೨. ಅನ್ವಯ:—** (ಹೇ) ಬಾಲ, ಮೃತ್ಯೋಃ ಬಿಭೇಷಿ ಕಿಂ। ಸಃ ಭೀತಂ ನ ವಿಮುಂಚತಿ। ಅದ್ಯ ವಾ ಅಬ್ದಶತಾಂತೇ ವಾ ಮೃತ್ಯುಃ ಪ್ರಾಣಿನಾಂ ಧ್ರುವಃ ವೈ।

ಬಾಲ—ಮಗುವೇ. ತಿಳಿಗೇಡಿಯೇ. ಮೂರ್ಖನೇ '(ಹೇ) ಮೂಢ' ಬಿಭೇಷಿ—ಭೀ (೩ ಪ) ಧಾತುವಿನ ವ. ದ್ವಿ. ಪು. ಏ. ವ. ಭೀ ಧಾತುವನ್ನು ಪಂಚಮೀ ವಿಭಕ್ತಿಯೊಡನೆ ಉಪಯೋಗಿಸುವರು. ಯಾರಿಂದ ಅಂಜಿಕೆ ಇದೆಯೋ ಆ ಶಬ್ದವನ್ನು ಪಂಚಮಿಯಲ್ಲಿ, ಮತ್ತು ಯಾರಿಗೆ ಅಂಜಿಕೆ ಇದೆಯೋ, ಆ ಶಬ್ದವನ್ನು ಷಷ್ಠೀವಿಭಕ್ತಿಯಲ್ಲಿ ಇಡಬೇಕು. ಉದಾ—ನ ಭೀತೋ ಮರಣಾದಸ್ಮಿ। ಮಮ ವ್ಯಾಘ್ರಾತ್ ಭಯಂ ಅಸ್ತಿ। ಅಬ್ದಂ—ವರ್ಷ. ಅಬ್ದಾನಾಂ ಶತಂ ಅಬ್ದಶತಂ (ಷ.ತ.ಸ.). ತಸ್ಯ ಅಂತಃ ಅಬ್ದಶತಾಂತಃ (ಷ.ತ.ಸ.). ತಸ್ಮಿನ್. ಧ್ರುವ—ನಿಜ, ಸತ್ಯ. ವೈ—ನಿಶ್ಚಯ ಸೂಚಕಅವ್ಯಯ. ಮರಣವು ಪ್ರಾಣಿಗಳಿಗೆ ಸತ್ಯವಾಗಿಯೂ ಬಂದೇ ಬರುತ್ತದೆ.

**ಪುಟ ೭. ಶ್ಲೋಕ ೩. ಅನ್ವಯ:—** ಯಃ ಗವಾರ್ಥೇ ಬ್ರಾಹ್ಮಣಾರ್ಥೇ ಚಪ್ರಾಣತ್ಯಾಗಂ ಕರೋತಿ ಸಃ ಸೂರ್ಯಸ್ಯ ಮಂಡಲಂ ಭಿತ್ವಾ ಪರಮಾಂ ಗತಿಂ ಯಾತಿ।

ಗವಾರ್ಥೇ—ಆಕಳುಗಳಿಗಾಗಿ. ಆಕಳು ಹಿಂದೂ ಜನರಿಗೆ ಪರಮ ಪೂಜ್ಯವಾಗಿದೆ. ಅವರು ಅದನ್ನು ದೇವತೆಯೆಂದು ಭಾವಿಸಿ ಅತ್ಯಂತ ಗೌರವದಿಂದ ಕಾಣುವರು. ಗೋಪ್ರದಕ್ಷಿಣೆಮಾಡಿದರೆ ಭೂಪ್ರದಕ್ಷಿಣೆಮಾಡಿದಂತಾಗುವದೆಂದು ಅವರ ದೃಢವಿಶ್ವಾಸ. ಗವೇ ಇದಂ ಗವಾರ್ಥಮ್ (ಚ.ತ.ಸ.) ತಸ್ಮಿನ್. ಗೋ ಶಬ್ದವು ಸಮಾಸದಲ್ಲಿ ಕೆಲವುಕಡೆ ಗವ ಎಂಬ ರೂಪವನ್ನು ತಾಳುತ್ತದೆ. ಬ್ರಾಹ್ಮಣಾರ್ಥೇ—ಬ್ರಾಹ್ಮಣರಿಗಾಗಿ. ಬ್ರಾಹ್ಮಣಾಯ ಇದಂ ಬ್ರಾಹ್ಮಣಾರ್ಥಮ್ (ಚ.ತ.ಸ.) ತಸ್ಮಿನ್। ಗೋ-ಬ್ರಾಹ್ಮಣರ ಸಲುವಾಗಿ. ಗೋಬ್ರಾಹ್ಮಣರ ಹಿತಕ್ಕಾಗಿ. ಒಂದು ಉದ್ದೇಶದಿಂದ ಕೆಲಸಮಾಡಿದಾಗ, ಆ ಉದ್ದೇಶಸೂಚಕಶಬ್ದವನ್ನು ಚತುರ್ಥೀ ಇಲ್ಲವೆ ಸಪ್ತಮೀ ವಿಭಕ್ತಿಯಲ್ಲಿ ಹಾಕುವರು. ಪ್ರಾಣತ್ಯಾಗಂ—ಪ್ರಾಣಬಿಡುವದು. ಪ್ರಾಣ ಎಂದು ಶಬ

ಪುಸ್ತಕದಲ್ಲಿ ತಪ್ಪಿ ಬಿದ್ದಿದೆ. ಅದು ಪ್ರಾಣ ಎಂಬುದಾಗಿರಬೇಕು. ಪ್ರಾಣಾನಾಂ ತ್ಯಾಗಃ ಪ್ರಾಣತ್ಯಾಗಃ (ಷ.ತ.ಸ.). ಪ್ರಾಣ ಶಬ್ದವು ಯಾವಾಗಲೂ ಬಹು ವಚನದಲ್ಲಿಯೇ ಉಪಯೋಗಿಸಲ್ಪಡುತ್ತದೆ. ಗತಿಃ—ಸ್ಥಾನ. ಪರಮ—ಶ್ರೇಷ್ಠ. ಗೋಬ್ರಾಹ್ಮಣರ ಹಿತಕ್ಕಾಗಿ ಪ್ರಾಣಪರಿತ್ಯಾಗಮಾಡುವವನು ಸೂರ್ಯ ಮಂಡಲವನ್ನು ಭೇದಿಸಿ ಅದಕ್ಕಿಂತಲೂ ಶ್ರೇಷ್ಠವಾದ ವೈಕುಂಠ ಮುಂತಾದ ಮುಕ್ತಿಸ್ಥಾನವನ್ನು ಪಡೆಯುತ್ತಾನೆ. ಗತಿಂ ಯಾತಿ—ಸ್ಥಾನಪಡೆಯುತ್ತಾನೆ.

ನಿಶ್ಚಿತ್ಯ—ನಿಶ್ಚಯಿಸಿ. ನಿಸ್+ಚಿ (೫. ಉ) ಧಾತುವಿನ ಲ್ಯಬಂತಾವ್ಯಯ. ವಿಲೋಕಯತ—ನೋಡಿರಿ. ವಿ+ಲೋಕ್ (೧೦.ಉ) ಧಾತುವಿನ ಆಜ್ಞಾರ್ಥ ದ್ವಿ.ಪು.ಬ.ವ. ತಥಾ ಅನುಷ್ಠಿತೇ—ಹಾಗೆ ಮಾಡಲ್ಪಡಲು. ಧನರಹಿತಃ—ಹಣವಿಲ್ಲದವ. ಧನೇನ ರಹಿತಃ (ತೃ.ತ.ಸ.). ಅಪರ—ಉಳಿದ, ಬೇರೆ. ಅಪರೇ ಚತ್ವಾರಃ ಅಪಿ ಮುಕ್ತಾಃ—ಉಳಿದ ನಾಲ್ವರೂ ಬಿಡಲ್ಪಟ್ಟರು.

## EXERCISES.

೫. ಅಭ್ಯಾಸಕ್ಕಾಗಿ ಪ್ರಶ್ನೆಗಳು:—

೧. **ಭಾಷಾಂತರಿಸಿರಿ.**— (ಅ) ಶ್ಲೋಕ ೧; ೩. (ಬ) ಅಥಾಪ್ಯಸಿ.... ....ಮುಂಚಾಮಿ। (ಪುಟ ೬. ಸಾಲು ೧೦ – ೨೦.)

೨. **ವಿಗ್ರಹಿಸಿ ಸಮಾಸಗಳ ಹೆಸರು ಹೇಳಿರಿ.**— ಸಮುತ್ಸುಕಃ; ಚಿಂತಾವ್ಯಾಕುಲಿತಮನಾಃ; ಸಕರುಣಂ; ಸಪಾದಲಕ್ಷಧನಃ; ಪ್ರತ್ಯಂಗಂ, ಅರತ್ನಂ; ಗವಾರ್ಥೇ; ಪ್ರಾಣತ್ಯಾಗಂ.

೩. **ರೂಪ ಗುರುತಿಸಿರಿ.**— ಚತುರಃ; ವಿಕ್ರೀಣತಃ; ಚಿಂತಿತವಾನ್; ಉತ್ಪಾದ್ಯ; ಪಥಿ; ಜರ್ಜರೀಕೃತ್ಯ; ಅಹ; ಅಧ್ವಸಿ; ಆಕರ್ಣ್ಯ; ಅರ್ಪಯೇತ್; ನೇಷ್ಯಾಮಃ

೪. **ಟಿಪ್ಪಣಿ ಬರೆಯಿರಿ.**— ಸುಭಾಷಿತಾನಿ; ಕರಾತಃ; ಪುತ್ರಃ; ವಿಕ್ರೀಣಿತಃ; ಸತಿ ಸಪ್ತಮೀ ಹಾಗೂ ಸತಃ ಷಷ್ಠೀ ಪ್ರಯೋಗ.

೫. **ವಾಕ್ಯಗಳಲ್ಲಿ ಉಪಯೋಗಿಸಿರಿ.**— ಪುರಃ; ಅಹೋ; ಭೀ; ಪ್ರ+ಸ್ಥಾ.

೬. ಪ್ರಯೋಗ ಬದಲಿಸಿರಿ.— (೧) ವಿಪ್ರಾಃ ಚೌರೇಣ ರಕ್ಷಿತಾಃ। (೨) ತೇನ ಸೇವಾ ಕರ್ತುಮಾರಬ್ಧಾ। (೩) ತೈಃ ಸರ್ವ ವಸ್ತೂನಿ ವಿಕ್ರೀಯ ಬಹುಮೂಲ್ಯಾನಿ ರತ್ನಾನಿ ಕ್ರೀತಾನಿ।

ಸಂಧಿನಿಯಮಗಳಿಗನುಗುಣವಾಗಿ ಕೂಡಿಸಿರಿ.— ಕೇನ+ ಉಪಾಯೇನ+ಏಷಾಂ; ಸಮುಪ್ಯ+ಏತಾನ್; ಮೃತ್ಯೋಃ+ಬಿಭೇಷಿ; ಯದಿ+ಏವಮ್।



## ೨. ಬಿಲಸ್ಯ ವಾಣೀ ನ ಶ್ರುತಾ

೧. **ಕವಿ ಹಾಗೂ ಕಾವ್ಯ:**— ೧ನೇ ಪಾಠ ನೋಡಿರಿ.

೨. **ಕಥಾಸಾರಾಂಶ:**— ಒಮ್ಮೆ ಹಸಿವೆಯಿಂದ ಬಳಲಿದ ಖರನಖರವೆಂಬ ಸಿಂಹಕ್ಕೆ ಒಂದೂ ಬೇಟೆಯು ಸಿಗಲಿಲ್ಲ. ಆದ್ದರಿಂದ ಅದು ನರಿಯು ಗವಿಯನ್ನು ಸೇರಿ ಯಾವದಾದರೊಂದು ಪ್ರಾಣಿ ಬರಬಹುದೆಂದು ಅಲ್ಲಿಯೇ ಅಡಗಿಕೊಂಡು ಕುಳಿತಿತು. ನರಿಯಾದರೋ ಇಷ್ಟರಲ್ಲಿಯೇ ಬಂದು ನೋಡಲು ಅದಕ್ಕೆ ಗವಿಯೆಡೆಗೆ ಹೋದ ಸಿಂಹದ ಹೆಜ್ಜೆಯ ಗುರುತುಗಳು ಕಂಡವು. ಆದರೆ ಗವಿಯಿಂದ ಹೊರಬಿದ್ದ ಒಂದಾದರೂ ಹೆಜ್ಜೆಯ ಗುರುತು ಕಾಣಿಸಲಿಲ್ಲ. ಆದ್ದರಿಂದ ಒಳಗೆ ಸಿಂಹ ಇರಬೇಕೆಂದು ಸಂಶಯಗೊಂಡು ಸಂಶಯ ನಿವಾರಿಸಿಕೊಳ್ಳಲು 'ಗವಿಯೇ! ಗವಿಯೇ! ದಿನವಂತೆ ನನ್ನ ಹೊರಗಿನ ಕೂಗಿಗೆ ನೀನು ಪ್ರತ್ಯುತ್ತರ ಕೊಡುವದಿಲ್ಲವೇಕೆ ? ನೀನು ದಿನದಂತೆ ನನ್ನನ್ನು ಕರೆಯದಿದ್ದರೆ ನಾನು ಇರಲಿಕ್ಕೆ ಬೇರೊಂದು ಗವಿಗೆ ಹೋಗುತ್ತೇನೆ ನೋಡು' ಎಂದು ನುಡಿಯಿತು. ಈ ಮಾತನ್ನು ಕೇಳಿ, ನರಿಯನ್ನು ಹಿಡಿದು ಕೊಲ್ಲಬೇಕೆಂಬ ಇಚ್ಛೆಯಿಂದ ಸಿಂಹವೇ ಆ ನರಿಯನ್ನು ಕರೆಯಿತು. ಕೂಡಲೇ ಆ ಗವಿಯೊಳಗಿಂದ (ಸಿಂಹ) ಗರ್ಜನೆಯು ಪ್ರತಿಧ್ವನಿ ಹೊರಟಿತು. ಆಗ ನರಿಯು 'ನಾನು ಈ ವರೆಗೆ ಗವಿಯು ಮಾತಾಡಿದ್ದನ್ನು ಕೇಳಿಲ್ಲ' ಎಂದು ಅನ್ನುತ್ತ ಓಡಿಹೋಯಿತು.

೩. **ಭಾಷಾಂತರ:**—

೨. ಗವಿಯ ಮಾತನ್ನು (ಎಂದರೆ ಗವಿ ಮಾತನಾಡುವದನ್ನು) [ನಾನು] ಕೇಳಿಲ್ಲ.

ಒಂದಾನೊಂದು ಅಡವಿಯ ಭಾಗದಲ್ಲಿ, ಖರನಖರವೆಂಬ (ಹದನವಾದ ಉಗುರುಳ್ಳದ್ದು), ಸಿಂಹವು ಇರುತ್ತಿತ್ತು. ಒಮ್ಮೆ, ಹಸಿವೆಯಿಂದ ಬಳಲಿದ

ಗಂಟಲವುಳ್ಳ ಹಾಗೂ ಅತ್ತಿತ್ತ ತಿರುಗುವ ಅದಕ್ಕೆ ಯಾವ ಪ್ರಾಣಿಯೂ (ತಿನ್ನಲು) ಸಿಗಲಿಲ್ಲ. ಬಳಿಕ ಸಾಯಂಕಾಲ ಅದಕ್ಕೆ ಪರ್ವತದ ಒಂದು ದೊಡ್ಡ ಗವಿ ದೊರೆಯಲು, ಅದರೊಳಗೆ ಹೊಕ್ಕು ಆಲೋಚಿಸಿತು. 'ರಾತ್ರಿ ಯಾವದಾದರೊಂದು ಪ್ರಾಣಿ ನಿಜವಾಗಿಯೂ ಈ ಗವಿಯೊಳಗೆ ಬರಬಹುದು. ಆದ್ದರಿಂದ ಹುದುಗಿಕೊಂಡು ಕೂಡುವೆನು!' ಇಷ್ಟರಲ್ಲಿಯೇ ಆ ಗವಿಯ ದೊರೆಯಾದ ದಧಿಪುಚ್ಛವೆಂಬ ನರಿ (ಅಲ್ಲಿಗೆ) ಬಂದಿತು. ಅದು ನೋಡಲಾಗಿ, ಸಿಂಹದ ಹೆಜ್ಜೆಯ ಗುರುತುಗಳು ಗವಿಯೆಡೆಗೆ (ಶಬ್ದಶಃ ಗವಿಯೊಳಗೆ) ಹೋಗಿದ್ದವು. (ಆದರೆ ಆ ಗವಿಯಿಂದ) ಹೊರಬಂದ ಹೆಜ್ಜೆಯ ಗುರುತುಗಳಿರಲಿಲ್ಲ. ಆಗ ಅದು 'ಅಯ್ಯೋ! ನಾನು ಹಾಳಾದೆನು. ನಿಜವಾಗಿಯೂ ಈ ಗವಿಯೊಳಗೆ ಸಿಂಹವಿರಬೇಕು. ಆದ್ದರಿಂದ ಏನು ಮಾಡಲಿ? ಹೇಗೆ ತಿಳಿದುಕೊಳ್ಳಲಿ?' ಎಂದು ವಿಚಾರಮಾಡಿತು. ಹೀಗೆ ಆಲೋಚಿಸಿ, (ಗವಿಯ) ಬಾಗಿಲಲ್ಲಿ ಕುಳಿತುಕೊಂಡು ಒದರಹತ್ತಿತು. 'ಗವಿಯೇ! ಗವಿಯೇ!' ಎಂದು ಒದರಿ (ಕೆಲಹೊತ್ತು) ಸುಮ್ಮನೆ ಕುಳಿತು ಮತ್ತೆ ಹಾಗೆಯೇ (ಗವಿಯೇ, ಗವಿಯೇ ಎಂದು) ಮರುಮಾತಾಡಿತು. 'ಎಲವೋ (ಗವಿಯೇ), ಹೊರಗಿನಿಂದ ಬಂದ ನಾನು ನಿನ್ನನ್ನು ಕರೆಯಬೇಕು; ಮತ್ತು ನೀನು ನನ್ನನ್ನು ಮರಳಿ ಕರೆಯಬೇಕು ಎಂದು ನಾನು ನಿನ್ನೊಡನೆ ಮಾಡಿಕೊಂಡ ಒಡಂಬಡಿಕೆ ನಿನಗೆ ನೆನಪಿಲ್ಲವೇ? ಆದ್ದರಿಂದ (ನೀನು) ನನ್ನನ್ನು ಕರೆಯದಿದ್ದರೆ ನಾನು ಬೇರೊಂದು ಗವಿಗೆ ಹೋಗುವೆನು!'

ಆಗ ಅದನ್ನು ಕೇಳಿ ಸಿಂಹವು ಆಲೋಚಿಸಿತು. 'ನಿಜವಾಗಿಯೂ ಈ ಗವಿಯು (ಹೊರಗಿನಿಂದ) ಬಂದ ನರಿಯನ್ನು ಯಾವಾಗಲೂ ಕರೆಯುತ್ತದೆ; ಆದರೆ ಇಂದು ನನ್ನ ಅಂಜಿಕೆಯಿಂದ (ಅದು) ಏನೂ ಮಾತನಾಡುವದಿಲ್ಲ. ಆದ್ದರಿಂದ ನಾನು ಇದನ್ನು ಕರೆಯುವೆನು. ಎಂದರೆ, (ನನ್ನ) ಕರೆಯುವಿಕೆಗೆ ಒಳಗೆ ಬಂದ ಅದು ನನಗೆ ತಿನ್ನಲು ಆಹಾರವಾಗುವದು.' ಹೀಗೆ ನಿಶ್ಚಯಿಸಿ ಸಿಂಹವು ಅದನ್ನು ಕರೆಯಿತು. ಆಗ, ಸಿಂಹಗರ್ಜನೆಯ ಮೂಲಕ, ಪ್ರತಿಧ್ವನಿಯಿಂದ ತುಂಬಿದ ಆ ಗವಿಯು ದೂರದಲ್ಲಿಯ ಪ್ರಾಣಿಗಳನ್ನು (ಕೂಡ) ಹೆದರಿಸಿತು. ನರಿಯಾದರೋ ಓಡುತ್ತ (ಓಡುತ್ತ) ಈ ಶ್ಲೋಕವನ್ನು ಓದಿತು. ಮುಂಬರುವ (ಸಂಕಟಗಳ) ಬಗ್ಗೆ (ಪ್ರತೀಕಾರೋಪಾಯವನ್ನು) ಕೈಕೊಳ್ಳುವವನು ಶೋಭಿಸುತ್ತಾನೆ. ಹಾಗೆ ಮಾಡದವನು ದುಃಖಿತನಾಗುತ್ತಾನೆ. ಇಲ್ಲಿ ಅಡವಿಯಲ್ಲಿ ವಾಸಮಾಡಿಕೊಂಡಿದ್ದ ನನಗೆ ಮುಪ್ಪು ಬಂದಿತು; (ಆದರೆ)

ಗವಿಯ ಮಾತನ್ನು (ಎಂದರೆ ಗವಿ ಮಾತನಾಡಿದುದನ್ನು) ನಾನು ಎಂದೂ ಕೇಳಿಲ್ಲ. (೧.)

ಪಂಚತಂತ್ರದಲ್ಲಿ 'ಕಾಕೋಲೂಕೀಯ' ಎಂಬ(೩ನೆಯ ತಂತ್ರದ)ಲ್ಲಿಯ ೧೪ನೆಯ ಕಥೆ.

## ೪. ಟೀಕೆ-ಟಿಪ್ಪಣಿಗಳು:—

**ಪುಟ ೮:**— ಬಿಲಸ್ಯವಾಣೀ—ಗವಿಯಮಾತು. ಎಂದರೆ ಗವಿ ಮಾತನಾಡಿದುದು. ಕಸ್ಮಿಂಶ್ಚಿತ್—ಕಸ್ಮಿನ್+ಚಿತ್ ಒಂದಾನೊಂದು. ಮನೋದ್ದೇಶಃ – ಅಡವಿಯ ಭಾಗ. ವನಸ್ಯ ಉದ್ದೇಶಃ (ಷ.ತ.ಸ.) ಖರನಖರಃ— ಇದು ಸಿಂಹದ ಹೆಸರು. ಹರಿತವಾದ ಉಗುರುಗಳುಳ್ಳದ್ದು ಎಂದು ಅದರ ಅರ್ಥ. ಖರಾಣಿ ನಖರಾಣಿ ಯಸ್ಯ ಸಃ (ಬ. ಸ.) ನಾಮ—ಹೆಸರುಳ್ಳ. ಈ ಅವ್ಯಯದ ಹಿಂದಿನ ಹಾಗೂ ಮುಂದಿನ ಶಬ್ದಗಳನ್ನು ಒಂದೇ ವಿಭಕ್ತಿಯಲ್ಲಿ ಉಪಯೋಗಿಸುವರು. ಉದಾ:— ಪುರಾ ಅಯೋಧ್ಯಾಯಾಂ ನಾಮ ನಗರ್ಯಾಂ ದಶರಥಸ್ಯ ನಾಮ ನೃಪಸ್ಯ ರಾಮಃ ನಾಮ ಪುತ್ರಃ ನ್ಯಾಯೇನ ರಾಜ್ಯಭಾರಂ ಅಕರೋತ್ । ಪ್ರತಿವಸತಿ ಸ್ಮ—ವಾಸಮಾಡಿಕೊಂಡಿತ್ತು. ಇರುತ್ತಿತ್ತು. ವರ್ತಮಾನಕಾಲದ ರೂಪಗಳ ಮುಂದೆ 'ಸ್ಮ' ಹಚ್ಚುವದರಿಂದ ಭೂತಕಾಲದ ಅರ್ಥ ಆಗುತ್ತದೆ. ಕದಾಚಿತ್—ಒಮ್ಮೆ. ಇತಸ್ತತಃ—ಅತ್ತಿತ್ತ. ಇತಃ ಚ ಇತಃ ಚ. ಕ್ಷುತ್ಕ್ಷಾಮಕಂಠಃ— ಹಸಿವೆಯಿಂದ ಬಳಲಿದ ಗಂಟಲುಳ್ಳವ. ಕ್ಷುಧಾ ಕ್ಷಾಮಃ ಕಂಠಃ ಯಸ್ಯ ಸಃ (ಬ.ಸ.) ಕ್ಷಾಮ—ಬಳಲಿದ. ಕ್ಷೈ (೧ ಪ) ಧಾತುವಿನ ಕರ್ಮಣಿ ಭೂ. ಧಾ. ವಿ. ಸತ್ತ್ವಂ—ಪ್ರಾಣಿ. ಆಸಸಾದ—ಆ+ಸದ್ (೧ ಪ) ಧಾತುವಿನ ಲಿಟ್. ಭೂ. ತೃ. ಪ್ರ. ಏ ವ. ಪಡೆಯಿತು. ಅಸ್ತಮನಸಮಯೇ—ಸಾಯಂಕಾಲದಲ್ಲಿ. ಸೂರ್ಯಾಸ್ತ ಸಮಯದಲ್ಲಿ. ಗಿರಿಗುಹಾಂ ಪ್ರವಿಷ್ಟಃ — ಪರ್ವತದ ಗವಿಯೊಳಗೆ ಹೊಕ್ಕ. ಗಿರೇಃ ಗುಹಾ ಗಿರಿಗುಹಾ (ಷ.ತ.ಸ.) ತಾಂ. ಚಿಂತಯಾಮಾಸ—ಆಲೋಚಿಸಿತು. ಚಿಂತ್ (೧೦ಉ.) ಧಾತುವಿನ ಆಮ್ ಯುಕ್ತ ಪರೋಕ್ಷ ಭೂತಕಾಲ ತೃ.ಪು.ಏ.ವ. ನೂನಂ—ನಿಜವಾಗಿಯೂ ಆಗಂತವ್ಯಂ—ಬರಬಹುದು. ಆ+ಗಮ್ (೧ಪ) ಧಾತುವಿನ ಕರ್ಮಣಿ ವಿಧ್ಯರ್ಥ ಧಾ. ಸಾ. ವಿ. (ನ) ಪ್ರ. ಏ. ವ. ಧಾತುಗಳಿಗೆ ತವ್ಯ, ಯ, ಅನೀಯ ಪ್ರತ್ಯಯಗಳನ್ನು ಹಚ್ಚುವದರಿಂದ ಕರ್ಮಣೀ ವಿಧ್ಯರ್ಥ ಧಾ. ಸಾ. ವಿ. ಗಳಾಗುತ್ತವೆ. ಉದಾ:- ಕರ್ತವ್ಯ, ಕಾರ್ಯ, ಕರಣೀಯ. ನಿಭೃತಃ ಭೂತ್ವಾ—ಹುದುಗಿಕೊಂಡು, ಅಡಗಿಕೊಂಡು.

ನಿಭೃತ–*Concealed hidden out of sight* ಅಡಗಿಕೊಂಡ. ಏತಸ್ಮಿನ್ನಂತರೇ—ಇಷ್ಟರಲ್ಲಿ. *In the meanwhile.* ತತ್ಸ್ವಾಮೀ—ಅದರ ಒಡೆಯ. ಗವಿಯ ಒಡೆಯ. ತಸ್ಯಾಃ ಸ್ವಾಮೀ (ಷ.ತ.ಸ.) ದಧಿಪುಚ್ಛಃ–ನರಿಯ ಹೆಸರು. ಯಾವತ್ ಪಶ್ಯತಿ ತಾವತ್—ನೋಡುವಷ್ಟರಲ್ಲಿ. ಯಾವತ್ ಶಬ್ದವು ಯಾವಾಗಲೂ ತಾವತ್ ಶಬ್ದದೊಡನೆ ಬರುತ್ತದೆ. ಇದರ ಕೆಲವೊಂದು ಉಪಯೋಗಗಳನ್ನು ಕೆಳಗೆ ಕೊಟ್ಟಿದೆ.

(i) ಯಾವತ್ ಉತ್ಥಾಯ ನಿರೀಕ್ಷತೇ ತಾವತ್ ಹಂಸಃ ವಿಲೋಕಿತಃ ।

(ii) ಯಾವತ್ ದತ್ತಂ ತಾವತ್ ಭುಕ್ತಂ ।

(iii) ಯಾವಾನ್ ಪುಣ್ಯಸಂಚಯಃ ತಾವಾನೇವ ಸ್ವರ್ಗೇ ವಾಸಃ ।

ಸಿಂಹಪದ ಪದ್ಧತಿಃ — ಸಿಂಹದ ಹೆಜ್ಜೆಯ ಗುರುತುಗಳು. '*The marks of a lion's foot-prints' Apte.* ಸಿಂಹಸ್ಯ ಪದಾನಿ ಸಿಂಹಪದಾನಿ (ಷ. ತ. ಸ.) ತೇಷಾಂ ಪದ್ಧತಿಃ (ಷ. ತ. ಸ.) ಪದಂ—ಹೆಜ್ಜೆ. ಪದ್ಧತಿಃ — ಕ್ರಮ. ಬಗೆ ಗುರುತು. ಸಿಂಹದ ಹೆಜ್ಜೆಯ ಗುರುತುಗಳು ಗವಿಯೆಡೆಗೆ ಇದ್ದವು. ಎಂದರೆ ಸಿಂಹವು ಗವಿಯೆಡೆಗೆ ಹೋದ ಒಗ್ಗ ಸಾಕಷ್ಟು ಹೆಜ್ಜೆಯ ಗುರುತುಗಳಿದ್ದವು; ಆದರೆ ಅದು ಗವಿಯಿಂದ ಹೊರಬಿದ್ದುದಕ್ಕೆ ಒಂದೂ ಗುರುತು ಇದ್ದಿರಲಿಲ್ಲ. ನಿಷ್ಕ್ರಮಣಂ—ಹೊರಬೀಳುವದು. ಅಹೋ—ಖೇದಸೂಚಕ ಅವ್ಯಯ. ಅಸ್ಯಾಂ ಅಂತರ್ಗತೇನ ಸಿಂಹೇನ ಭಾವ್ಯಂ—ಇದರೊಳಗೆ ಸಿಂಹವಿರಬೇಕು. ಭಾವ್ಯಂ—ಭೂ(ಗಪ) ಧಾತುವಿನ ಕರ್ಮಣಿ ವಿಧ್ಯರ್ಥ ಧಾ. ಸಾ. ವಿ. (ನ) ಪ್ರ. ಏ. ವ. ಇದು ಭಾವೇ ಪ್ರಯೋಗವಿದೆ. ಕರ್ತರಿ ಪ್ರಯೋಗ ಮಾಡಿದರೆ 'ಅಸ್ಯಾಂ ಅಂತರ್ಗತಃ ಸಿಂಹಃ ಭವೇತ್' ಎಂಬುದಾಗಿ ಆಗುವದು. ಜ್ಞಾಸ್ಯಾಮಿ—ಅರಿಯುವೆನು. ಜ್ಞಾ (೯ ಉ) ಧಾತುವಿನ ದ್ವಿ. ಭ. ಪ್ರ. ಪು. ಏ. ವ. ದ್ವಾರಸ್ಥಃ—ದ್ವಾರೇ ತಿಷ್ಠತಿ ಇತಿ (ಉಪಪದ ತ. ಸ.) ದ್ವಾರಪಾಲಕ, ಬಾಗಿಲಲ್ಲಿ ನಿಂತುಕೊಂಡವನು. ಫೂತ್ಕರ್ತುಂ — ಚೀರಲು. ಬಿಲಮ್ — ಗವಿ, ಗುಹೆ. ತೂಷ್ಣೀಂಭೂಯ — ಸುಮ್ಮನಾಗಿ. ಭೂಯಃ — ಮತ್ತೆ. ಸಮಯಃ — ಒಡಂಬಡಿಕೆ, ಕರಾರು. ಬಾಹ್ಯಾತ್ — ಹೊರಗಿನಿಂದ. ಸಮಾಗತಃ — ಬಂದವನು. ವಕ್ತವ್ಯಃ — ಕರೆಯಲ್ಪಡಬೇಕು. ವಚ್ (೨ಪ) ಧಾತುವಿನ ಕರ್ಮಣಿ ವಿಧ್ಯರ್ಥ ಧಾ. ಸಾ. ಪಿ. (ಪು) ಪ್ರ. ಏ. ವ. ಆಕಾರಣೀಯಃ

(ಮರಳಿ) ಕರೆಯಲ್ಪಡಬೇಕು. ಆ+ಹ್ವೆ (೮ ಉ). [ಕರೆ,] ಧಾತುವಿನ ಪ್ರಯೋಜಕ ರೂಪದ ಕರ್ಮಣಿ ವಿಧ್ಯರ್ಥ ಧಾ. ಸಾ. ವಿ. (ಪು) ಪ್ರ. ಏ.ವ. ಯಾಸ್ಯಾಮಿ—ಹೋಗುವೆನು. ಯಾ (೨ ಪ) ಧಾತುವಿನ ದ್ವಿ. ಭ. ಪ್ರ. ಪು. ಏ. ವ.

ಸಿಂಹಃ ಚಿಂತಿತವಾನ್—ಸಿಂಹವು ಆಲೋಚಿಸಿತು. ಕರ್ಮಣಿಗೆ ಪರಿವರ್ತಿಸಿದರೆ, ಸಿಂಹೇನ ಚಿಂತಿತಂ ಎಂಬುದಾಗಿ ಆಗುವದು. ಸಮಾಹ್ವಾನಂ ಕರೋತಿ—ಕರೆಯುತ್ತದೆ. ಮದ್ಭಯಾತ್—ನನ್ನ ಅಂಜಿಕೆಯಿಂದ ಮತ್ ಭಯಂ ಮದ್ಭಯಂ (ಷಂ. ತ. ಸ.) ತಸ್ಮಾತ್ । ತದನುಸಾರೇಣ—ಕರೆಗೆ ಅನುಸಾರವಾಗಿ, ಕರೆಯ ಮೇರೆಗೆ. ಮೇ ಭೋಜ್ಯತಾಂ ಯಾಸ್ಯತಿ—ನನಗೆ ಆಹಾರವಾಗುವದು. ಭೋಕ್ತುಂ ಯೋಗ್ಯಃ ಭೋಜ್ಯಃ । ಭೋಜ್ಯಸ್ಯ ಭಾವಃ ಭೋಜ್ಯತಾ (ತದ್ಧಿತ) ಸಂಪ್ರಧಾರ್ಯ—ನಿಶ್ಚಯಿಸಿ, ಸಮ್+ಪ್ರ+ಧೃ (೧೦ ಉ) ಧಾತುವಿನ ಲ್ಯಬಂತಾವ್ಯಯ. ಪ್ರತಿರವಸಂಪೂರ್ಣಾ ಗುಹಾ—ಪ್ರತಿಧ್ವನಿ ತುಂಬಿದ ಗವಿಯು, ಪ್ರತಿಗತಃ ರವಃ ಪ್ರತಿರವಃ (ಪ್ರಾದಿ ತ. ಸ.) ತೇನ ಸಂಪೂರ್ಣಾ (ತೃ. ತ.) ದೂರಸ್ಥಾನ್—ದೂರದಲ್ಲಿದ್ದ. ದೂರೇ ತಿಷ್ಠಂತಿ ಇತಿ ದೂರಸ್ಥಾಃ (ಉಪ. ತ.) ತಾನ್. ಅರಣ್ಯಜೀವಃ — ಅಡವಿಯ ಪ್ರಾಣಿ. ಜೀವಃ — ಪ್ರಾಣಿ. ಅರಣ್ಯಸ್ಯ ಜೀವಃ ಅರಣ್ಯಜೀವಃ (ಷ. ತ. ಸ.) ತ್ರಾಸಯಾಮಾಸ—ಬೆದರಿಸಿತು. ತ್ರಸ್ (೪ ಪ.) ಧಾತುವಿನ ಪ್ರಯೋಜಕದ ಆಮ್ ಯುಕ್ತ ಪರೋಕ್ಷ ಭೂತಕಾಲ ತೃ. ಪು. ಏ. ವ. ಪಲಾಯಮಾನಃ — ಓಡುತ್ತ. ಪರಾ+ಅಯ್ (೧ ಆ) ಧಾತುವಿನ ವ. ಧಾ. ಸಾ. ವಿ. (ಪು) ಪ್ರ. ಏ. ವ. ಪರಾ+ಅಯ್ ಇದರಲ್ಲಿಯ ರಾ ಹೋಗಿ ಲಾ ಆಗುತ್ತದೆ.

**ಶ್ಲೋಕ ೧. ಅನ್ವಯಃ**— ಯಃ ಅನಾಗತಂ ಕುರುತೇ ಸಃ ಶೋಭತೇ । ಯಃ ಅನಾಗತಂ ನ ಕುರುತೇ ಸಃ ಶೋಚ್ಯತೇ । ಅತ್ರವನೇ ಸಂಸ್ಥಸ್ಯ ಮೇ ಜರಾ ಸಮಾಗತಾ । (ಕಿಂತು) ಬಿಲಸ್ಯವಾಣೀ ಕದಾಪಿ ನ ಶ್ರುತಾ.

ಅನಾಗತಂ—ನ ಆಗತಂ (ನ. ತ.) ಬಾರದೆ ಇದ್ದುದು. ಅರ್ಥಾತ್ ಭವಿಷ್ಯತ್ಕಾಲ. ಅನಾಗತಂ ಯಃ ಕುರುತೇ ಸ ಶೋಭತೇ—ಮುಂಬರುವದಕ್ಕೆ (ಅರ್ಥಾತ್ ಮುಂಬರುವ ಸಂಕಟಕ್ಕೆ) ಯಾರು. ವ್ಯವಸ್ಥೆ (ಎಂದರೆ ಎದುರಿಸುವ ವ್ಯವಸ್ಥೆ). ಮಾಡಿಕೊಂಡಿರುವರೋ, ಅವರು ಶೋಭಿಸುತ್ತಾರೆ.

ಎಂದರೆ ಸಂಕಟಗಳು ಬರುವ ಮೊದಲೇ ಅವುಗಳೊಳಗಿಂದ ಪಾರಾಗುವ ಹಂಚಿಕೆಯನ್ನು ಮಾಡಿಟ್ಟಿರುವವನು ಶೋಭಿಸುತ್ತಾನೆ. '*He shines (thrives, prospers) who provides for the future*' —*Apte*. ಅರ್ಥಾತ್ ಇದಕ್ಕೆ ವಿರುದ್ಧವಾಗಿ, ಮುಂಬರುವ ಸಂಕಟಗಳನ್ನು ಎದುರಿಸುವ ಯೋಜನೆ ಇಟ್ಟುಕೊಳ್ಳದವನು ದುಃಖಕ್ಕೀಡಾಗುತ್ತಾನೆ. ಸಂಸ್ಥಸ್ಯ ಮೇ—ಇದ್ದ ನನಗೆ. ಜರಾ—ಮುಪ್ಪು. ಬಿಲಮ್—ಗವಿ. ವಾಣೀ—ಮಾತು, ಶಬ್ದ. ಮಯಾ ವಾಣೀ ನ ಶ್ರುತಾ—ಗವಿ ಮಾತನಾಡಿದುದು ನನ್ನಿಂದ ಕೇಳಲ್ಪಟ್ಟಿಲ್ಲ. ಕರ್ತರಿಗೆ ಬದಲಿಸಿದರೆ, ಅಹಂ ಬಿಲಸ್ಯ ವಾಣೀಂ ನ ಶ್ರುತವಾನ್ ಎಂಬುದಾಗಿ ಆಗುತ್ತದೆ.

## EXERCISES.

**೫. ಅಭ್ಯಾಸಕ್ಕಾಗಿ ಪ್ರಶ್ನೆಗಳು:—**

೧. **ಕನ್ನಡಿಸಿರಿ:**— ಅಥತತ್ ಪ್ರತ್ಯಾ........ ........ಮೇ ಶ್ರುತಾ. (ಪುಟ ೮. ಸಾಲು ೧೫—೨೪).

೨. **ವಿಗ್ರಹಿಸಿ ಸಮಾಸಗಳ ಹೆಸರು ಹೇಳಿರಿ:— ಕ್ಷುತ್ಕ್ಷಾಮ ಕಂಠಃ;** ದ್ವಾರಸ್ಥಃ; **ಪ್ರತಿಸ್ವರಃ;** ಅನಾಗತಮ್.

೩. **ರೂಪ ಗುರುತಿಸಿರಿ:**— ಆಸಸಾದ; ಜ್ಞಾಸ್ಯಾಮಿ; ಆಕಾರಣೀಯಃ; ಸಂಪ್ರಧಾರ್ಯ; ತ್ರಾಸಯಾಮಾಸ; **ಪಲಾಯಮಾನಃ**

೪. **ಟಿಪ್ಪಣಿ ಬರೆಯಿರಿ:**— ಖರನಖರಃ

೫. **ವಾಕ್ಯಗಳಲ್ಲಿ ಉಪಯೋಗಿಸಿರಿ:**— ನಾಮ; ಯಾವತ್.. ........ತಾವತ್.

೬. **ಪ್ರಯೋಗ ಬದಲಿಸಿರಿ:**— (೧) ಮಯಾ ಬಿಲಸ್ಯವಾಣೀ ನ ಕದಾಪಿ ಶ್ರುತಾ। (೨) ಅಸ್ಯಾಂ ಗುಹಾಯಾಂ ರಾತ್ರೌ ಕೇನಾಪಿ ಸತ್ವೇನ ಆಗಂತವ್ಯಂ (೩) ನೂನಮಸ್ಯಾಮಂತರ್ಗತೇನ ಸಿಂಹೇನ ಭಾವ್ಯಮ್।

೭. **ಸಂಧಿ ಬಿಡಿಸಿರಿ:**— ಕದಾಚಿದಿತಶ್ಚೇತಶ್ಚ; ಇತ್ಯುಕ್ತ್ವಾ; ತದಹಮಸ್ಯಾಹ್ವಾನಂ.





## ೩. ಗಾನ ಪ್ರಿಯೋ ರಾಸಭಃ

೧. **ಕವಿ ಹಾಗೂ ಕಾವ್ಯ** :— ೧ನೆಯ ಪಾಠ ನೋಡಿರಿ.

೨. **ಕಥಾಸಾರಾಂಶ:**—

ಒಬ್ಬ ಅಗಸನಲ್ಲಿದ್ದ ಉದ್ಧತವೆಂಬ ಕತ್ತೆಯು ಹಗಲೆಲ್ಲ ಒಡೆಯನ ಸಲುವಾಗಿ ದುಡಿದು ರಾತ್ರಿಯಲ್ಲಿ ಬೇಕಾದತ್ತ ತಿರುಗಲಿಕ್ಕೆ ಹೋಗುತ್ತಿತ್ತು. ಮತ್ತು ಯಾರಾದರೂ ಕಟ್ಟಿಹಾಕಬಹುದೆಂಬ ಅಂಜಿಕೆಯಿಂದ ಬೆಳಗಾಗುತ್ತಲೇ ಅದು ಮರಳಿ ಮನೆಗೆ ಬರುತ್ತಿತ್ತು. ಈ ರೀತಿ ದಿನಾಲು ತಿನ್ನಲು ಚೆನ್ನಾಗಿ ದೊರೆಯುತ್ತಿದ್ದುದರಿಂದ ಅದು ಕೊಬ್ಬಿತ್ತು. ಹೀಗಿರುವಾಗ ಅದಕ್ಕೆ ನರಿಯ ಗೆಳೆತನವಾಯಿತು. ಎರಡೂ ಕೂಡಿಯೇ ಹೊಲದಲ್ಲಿ ಸ್ವಚ್ಛಂದವಾಗಿ ಮೇಯುತ್ತಿದ್ದವು. ಒಂದುರಾತ್ರಿ ಪ್ರತಿ ನಿತ್ಯದಂತೆ ಹೊಲದಲ್ಲಿ ಮೇಯುತ್ತಿರುವಾಗ ಕತ್ತೆಗೆ ಹಾಡಬೇಕೆಂಬ ಹುರುಪು ಹುಟ್ಟಿತು. ನರಿ ಬೇಡವೆಂದರೂ ಅದು ಕೇಳಲಿಲ್ಲ. ಹಾಡಿಯೇ ಬಿಟ್ಟಿತು. ಆಗ ಹೊಲ ಕಾಯುವವನು ಬಂದು ಆ ಕತ್ತೆಯನ್ನು ಚೆನ್ನಾಗಿ ಥಳಿಸಿ, ಅದರ ಕೊರಳಲ್ಲಿ ಒಂದು ಒರಳು ಕಟ್ಟಿದನು. ಧೂರ್ತ ನರಿಯಾದರೋ— ಕತ್ತೆಯ ಗಾಯನ ಆರಂಭವಾಗುವ ಮೊದಲೇ ಓಡಿ ಹೋಗಿತ್ತು. ಮುಂದೆ ಕತ್ತೆಯು ಮೇಲಕ್ಕೆದ್ದು ಒರಳನ್ನು ಉರುಳಿಸುತ್ತ ಬೇಲಿಯನ್ನು ಮುರಿದು ಓಡುತ್ತಿರುವದನ್ನು ಕಂಡು, ನರಿ ಅನ್ನುತ್ತದೆ. 'ಭಲೆ, ಮಾವಾ! ನಾನು ಬೇಡವೆಂದರೂ ನೀವು ಹಾಡಿಯೇ ಬಿಟ್ಟಿರಿ. ಅಂತೆಯೇ ಈ ಒರಳೆಂಬ ಕೊರಳ ಪದಕವು ನಿಮಗೆ ಸಿಕ್ಕಿತು'.

೩. **ಭಾಷಾಂತರ:**—

### ೩. ಸಂಗೀತ ಪ್ರಿಯ ಕತ್ತೆ.

ಒಂದಾನೊಂದು ಊರಲ್ಲಿ ಉದ್ಧತವೆಂಬ ಕತ್ತೆ ಇರುತ್ತಿತ್ತು. ಅದು ಯಾವಾಗಲೂ (ಹಗಲು) ಅಗಸನ ಮನೆಯಲ್ಲಿ ಭಾರಹೊತ್ತು, ರಾತ್ರಿ ಸ್ವಚ್ಛಂದವಾಗಿ ತಿರುಗುತ್ತಿತ್ತು. ಬಳಿಕ ಬೆಳಿಗ್ಗೆ ಕಟ್ಟಿಹಾಕುವರೆಂಬ ಅಂಜಿಕೆಯಿಂದ ತಾನೇ ಅಗಸನ ಮನೆಗೆ ಬರುತ್ತಿತ್ತು. ಮತ್ತು ಅಗಸನು ಅದನ್ನು ಕಟ್ಟುತ್ತಿದ್ದನು. ಹೀಗೆ ಒಮ್ಮೆ ಅದು ರಾತ್ರಿ ಹೊಲಗಳಲ್ಲಿ ತಿರುಗುತ್ತಿರುವಾಗ ನರಿಯೊಡನೆ ಗೆಳೆತನವಾಯಿತು. ಕತ್ತೆ ಕೊಬ್ಬಿದ್ದರಿಂದ, ಬೇಲಿಯನ್ನು ಮುರಿದು ನರಿಯೊಡನೆ ಸವತೆಕಾಯಿಯ ಹೊಲ ಹೊಕ್ಕಿತು. ಹೀಗೆ ಅವೆರಡೂ ಮನಬಂದಂತೆ ಸವತೆಕಾಯಿ ತಿಂದು ದಿನಾಲು ಬೆಳಿಗ್ಗೆ ತಮ್ಮ ತಮ್ಮ ಮನೆಗೆ

ಹೋಗುತ್ತಿದ್ದವು. ಬಳಿಕ ಒಮ್ಮೆ, ಹೊಲದಲ್ಲಿದ್ದ ಮದೋನ್ಮತ್ತ ಕತ್ತೆಯು ನರಿಗೆ ಅಂದಿತು. 'ಅಳಿಯಾ! ನೋಡು ನೋಡು. ರಾತ್ರಿ ಬಹಳೇ ಸ್ವಚ್ಛವದೆ. ಆದ್ದರಿಂದ ನಾನು ಹಾಡು ಹಾಡುವೆನು. ಕಾರಣ ಯಾವ ರಾಗದಿಂದ ಹಾಡಬೇಕೆಂಬುದನ್ನು ಹೇಳು'. ನರಿ (ಮರು) ನುಡಿಯಿತು. 'ಮಾವಾ! ವ್ಯರ್ಥವಾಗಿ ಈ ನಿರರ್ಥಕ ಕೆಲಸದಲ್ಲಿ ಕೈಹಾಕುವವರಿಂದೇನು ಉಪಯೋಗ? ಏಕೆಂದರೆ ನಾವಿಬ್ಬರೂ ತುಡುಗಿನ ಕೆಲಸದಲ್ಲಿ ತೊಡಗಿದ್ದೇವೆ. ಕಾರಣ, ಇಲ್ಲಿ ತುಡುಗರು ಅಡಗಿಕೊಂಡಿರಬೇಕು. ಮೇಲಾಗಿ ನಿನ್ನ ಸಂಗೀತವು ಮಧುರ ಸ್ವರದ್ದಲ್ಲ. (ಶಂಖ ಶಬ್ದವನ್ನುಹೋಲುವ) ನಿನ್ನ ಸಂಗೀತವು ದೂರದಿಂದಲೂ ಕೇಳುತ್ತದೆ. ಇಲ್ಲಿ ಹೊಲದಲ್ಲಿಯೇ ಕಾವಲುಗಾರರು ಮಲಗಿದ್ದಾರೆ, ಅವರು ಎಚ್ಚತ್ತು (ನಮ್ಮನ್ನು) ಕೊಲ್ಲುವರು; ಇಲ್ಲವೆ ಕಟ್ಟಿ ಹಾಕುವರು. ಆದ್ದರಿಂದ ಅಮೃತ ತುಂಬಿದ ಸವತೆಕಾಯಿಗಳನ್ನು ತಿನ್ನು. ಇಲ್ಲಿ ನೀನು ಹಾಡುವ ಕೆಲಸದಲ್ಲಿ ತೊಡಗಬೇಡ'. ಅದನ್ನು ಕೇಳಿ ಕತ್ತೆ "ನೀನು ಅಡವಿಯಲ್ಲಿಯೇ ಇರುವದರಿಂದ ಸಂಗೀತ ರಸವು ನಿನಗೆ ಗೊತ್ತಿಲ್ಲ. ಅಂತೆಯೇ ಹೀಗೆ ನುಡಿಯುವೆ." ಎಂದು ಅಂದಿತು. ನರಿ ಅನ್ನುತ್ತದೆ:—'ಮಾವಾ! ಇದು (ನಿಜ) ಇದೆ; ಆದರೆ ನಿನಗೆ ಸಂಗೀತ ಗೊತ್ತಿಲ್ಲ. ಕೇವಲ ಗಟ್ಟಿಯಾಗಿ ಒದರುವೆ. ಆದ್ದರಿಂದ ಸ್ವಾರ್ಥವನ್ನು ಕಳೆದುಕೊಳ್ಳುವದರಿಂದ ಉಪಯೋಗ ವೇನು? ಕತ್ತೆಯು, 'ಮೂರ್ಖಾ! ಧಿಕ್ಕಾರವಿರಲಿ, ಧಿಕ್ಕಾರವಿರಲಿ, ನನಗೆ ಸಂಗೀತ ಗೊತ್ತಿಲ್ಲವೇ.?' ಎಂದು ಅಂದಿತು. ನರಿ (ಮರು) ನುಡಿಯಿತು. 'ಮಾವಾ! ಹೀಗಿದ್ದರೆ ನಾನು ಬೇಲಿಯ ಬಾಗಿಲಲ್ಲಿ ಕುಳಿತುಕೊಂಡು ಹೊಲ ಕಾಯುವವನನ್ನು ನೋಡುತ್ತೇನೆ. ನೀನಾದರೋ ಯಥೇಚ್ಛವಾಗಿ ಹಾಡು.'

ಹಾಗೆ ಮಾಡಲಾಗಿ ಹೊಲ ಕಾಯುವವನು ಕತ್ತೆಯ ಕಿರಚು ಕೇಳಿ ಸಿಟ್ಟಿನಿಂದ ಹಲ್ಲುಕಡಿಯುತ್ತ ಓಡಿ ಬಂದನು. ಕತ್ತೆ ಕಾಣಲಾಗಿ ಅದನ್ನು ಬಡಿಗೆಗಳ ಏಟುಗಳಿಂದ ಬಡಿದನು; ಚೆನ್ನಾಗಿ ಥಳಿಸಲ್ಪಟ್ಟ ಕತ್ತೆ ನೆಲದ ಮೇಲೆ ಉರುಳಿತು. (ಶಬ್ದಶಃ, ನೆಲದಮೇಲೆ ಉರುಳುವಂತೆ ಬಡಿಗೆಗಳ ಏಟುಗಳಿಂದ ಥಳಿಸಿದನು.) ಬಳಿಕ ತೂತುಳ್ಳ ಒಂದು ಒರಳನ್ನು ಅದರ ಕೊರಳೊಳಗೆ ಕಟ್ಟಿ ಆ ಹೊಲ ಕಾಯುವವನು ಮಲಗಿಕೊಂಡನು. ಕತ್ತೆ ಯಾದರೋ ತನ್ನ ಜಾತಿಯ ಸ್ವಭಾವದ ಮೇರೆಗೆ ಕ್ಷಣಕಾಲದಲ್ಲಿಯೇ (ಏಟು ಗಳ) ನೋವಿನಿಂದ ಮುಕ್ತವಾಗಿ ಮೇಲಕ್ಕೆದ್ದಿತು. (ಹೀಗೆ) ಹೇಳಲಾಗಿದೆ.

ನಾಯಿ, ಕುದುರೆ ಮತ್ತು (ಅದರಲ್ಲಿಯೂ) ವಿಶೇಷವಾಗಿ ಕತ್ತೆ ಇವುಗಳಿಗೆ ಒಂದು ಕ್ಷಣಕಾಲದ ನಂತರ ಏಟುಗಳಿಂದುಂಟಾದ ನೋವು ಇರುವದಿಲ್ಲ. (೧).

ಬಳಿಕ (ಕತ್ತೆಯು) ಅದೇ ಒರಳನ್ನು ತೆಗೆದುಕೊಂಡು ಬೇಲಿಯನ್ನು ಮುರಿದು ಓಡಲಾರಂಭಿಸಿತು.

ಇಷ್ಟರಲ್ಲಿ ನರಿಯಾದರೋ ದೂರದಿಂದಲೇ ಆ ಕತ್ತೆಯನ್ನು ನೋಡಿ ಮುಗುಳ್ನಗೆಯಿಂದ ಅಂದಿತು.

'ಮಾವಾ! ಚೆನ್ನಾಗಿ ಹಾಡಿದೆ, ನಾನು (ಬೇಡವೆಂದು) ಹೇಳಿದರೂ ನೀನು (ಸುಮ್ಮನೆ) ಇರಲಿಲ್ಲ. (ಅಂತೆಯೇ) ಹೊಸದಾದ ಈ ರತ್ನವು ಕೊರಳೊಳಗೆ ಕಟ್ಟಲ್ಪಟ್ಟಿದೆ. ಸಂಗೀತದ ಇನಾಮು ಚೆನ್ನಾಗಿ ದೊರೆಯಿತು. (೬).

**ಪಂಚತಂತ್ರದಲ್ಲಿ 'ಅಪರೀಕ್ಷಿತ ಕಾರಕ' ಎಂಬ(ಐನೆಯ ತಂತ್ರದ)ಲ್ಲಿಯ ೩ನೇ ಕಥೆಯು.**

## ೪. ಟೀಕೆ-ಟಿಪ್ಪಣೆಗಳು :—

**ಪುಟ ೯.** ಗಾನಪ್ರಿಯಃ—ಗಾನಂ ಪ್ರಿಯಂ ಯಸ್ಯ ಸಃ (ಬ. ಸ.) ಸಂಗೀತ ಪ್ರಿಯವಾದ. ರಾಸಭಃ — ಕತ್ತೆ. ಉದ್ಧತಃ — ಕತ್ತೆಯ ಹೆಸರು ಸೊಕ್ಕುಳ್ಳದ್ದು ಎಂದು ಆ ಹೆಸರಿಗೆ ಅರ್ಥವಾಗುತ್ತದೆ. ಗರ್ದಭಃ — ಕತ್ತೆ. ರಜಕ ಗೃಹೆ—ರಜಕಸ್ಯ ಗೃಹಂ (ಷ. ತ. ಸ.) ತಸ್ಮಿನ್. ಅಗಸನ ಮನೆಯಲ್ಲಿ. ಭಾರೋದ್ವಹನಂ — ಭಾರಸ್ಯ ಉದ್ವಹನಂ (ಷ. ತ. ಸ.) ಒಜ್ಜೆ ಹೊರುವದು. ಸೇಚ್ಛಯಾ — ಸ್ವಚ್ಛಂದವಾಗಿ. ಪ್ರತ್ಯೂಷೇ—ಬೆಳಿಗ್ಗೆ, ಮುಂಜಾವಿನಲ್ಲಿ. ಬಂಧನ ಭಯಾತ್—ಕಟ್ಟಿಹಾಕುವ ಅಂಜಿಕೆಯಿಂದ. ತನ್ನನ್ನು ಹೊಲದೊಡೆಯರು ಕಟ್ಟಬಹುದೆಂಬ ಭೀತಿಯಿಂದ. ಬಂಧನಾತ್ ಭಯಮ್ ಬಂಧನಭಯಮ್ (ಪಂ. ತ.) ತಸ್ಮಾತ್ — ಬಂಧನೇನ ನಿಯುನಕ್ತಿ—ಕಟ್ಟುತ್ತಿದ್ದನು. ನಿ+ಯುಜ್ (೭. ಉ) ಧಾತು ಸಾಮಾನ್ಯವಾಗಿ ಸಪ್ತಮೀ ವಿಭಕ್ತಿ ತೆಗೆದುಕೊಳ್ಳುತ್ತದೆ. ಉದಾ:—ಸಃ ಪೌರವೇಣ ಧರ್ಮಾಧಿಕಾರೇ ನಿಯುಕ್ತಃ । ಆದರೆ ಇಲ್ಲಿ ಮಾತ್ರ ತೃತೀಯಾ ವಿಭಕ್ತಿಯೊಡನೆ ಉಪಯೋಗಿಸಿದ್ದು ಅಪವಾದಾತ್ಮಕ. ತಸ್ಯ ಪರ್ಯಟತಃ—ಅದು ತಿರುಗುತ್ತಿರುವಾಗ. ಸತಿ ಷಷ್ಠಿ ಪ್ರಯೋಗದ ಉದಾಹರಣೆ. ಶೃಗಾಲಃ—ನರಿ. ಮೈತ್ರೀ—ಗೆಳೆತನ. ಪೀವರತ್ವಾತ್ — ಪುಷ್ಟವಿದ್ದುದರಿಂದ, ವೃತಿಭಂಗಂ ಕೃತ್ವಾ—ಬೇಲಿಯನ್ನು ಮುರಿದು, ವೃತಿಃ — ಬೇಲಿ. ವೃತೇಃ ಭಂಗಃ (ಷ. ತ. ಸ.) ತಮ್. ಕರ್ಕಟಿಕಾ ಕ್ಷೇತ್ರಂ—ಸವತೇಕಾಯಿಯ ಹೊಲ. ಕರ್ಕಟಿಕಾಯಾಃ ಕ್ಷೇತ್ರಂ

(ಷ. ತ. ಸ.) ಶೃಗಾಲಸಹಿತಃ, ಶೃಗಾಲೇನ ಸಹಿತಃ (ತೃ. ತ.) ಚಿರ್ಭ ಟಿಕಾ–ಸವತೆಕಾಯಿ. ಪ್ರತ್ಯಹಂ–ಅಹನಿ ಅಹನಿ (ಅವ್ಯ. ಸ.) ದಿನಾಲು. ಭಗಿನೀಸುತ — ಭಗಿನ್ಯಾಃ ಸುತಃ ಭಗಿನೀ ಸುತಃ (ಷ. ತ. ಸ.) (ತಸ್ಯ ಸಂಬುದ್ಧಿಃ) ತಂಗಿಯ (ಅಕ್ಕನ) ಮಗನೇ. ಸೋದರಳಿಯನೇ. ನಿರ್ಮಲ– ನಿರ್ಮಲವಾದ, ಸ್ವಚ್ಛವಾದ. ಮೋಡಗಳಿಲ್ಲದ. ರಜನೀ—ರಾತ್ರಿ. ಗೀತಂ– ಹಾಡು. ಕತಮ—ಯಾವ ಮೂರು ಇಲ್ಲವೇ ಹೆಚ್ಚು ವಸ್ತುಗಳಲ್ಲಿ ಒಂದರ ಬಗ್ಗೆ ಮಾತನಾಡುವಾಗ ಇದನ್ನು ಉಪಯೋಗಿಸುವರು. ರಂಗೇಣ—ರಾಗ ದಿಂದ. ರಾಗವೆಂದರೆ. ಒಂದು ಸಂಗೀತ ಕ್ರಮ. ಅಥವಾ ಸ್ವರಗಳ ಜೋಡಣೆ. ಸಂಗೀತ ಹಾಗೂ ನಾಟ್ಯ ಶಾಸ್ತ್ರಗಳ ಮೂಲ ಪುರುಷನಾದ ಭರತನ ಮತದಂತೆ. ಭೈರವ, ಕೌಶಿಕ, ಹಿಂದೋಲ, ದೀಪಕ, ಶ್ರೀರಾಗ ಮತ್ತು ಮೇಘರಾಗವೆಂಬ ಆರು ಮುಖ್ಯ ರಾಗಗಳಿವೆ. ಬೇರೆ ಬೇರೆ ಲೇಖ ಕರು ಬೇರೆ ಬೇರೆ ಹೆಸರು ಕೊಟ್ಟಿರುವರು. ಪ್ರತಿಯೊಂದು ರಾಗಕ್ಕೂ ಆರು ರಾಗಿಣಿಗಳಿವೆ. ರಾಗಿಣಿ ರಾಗದ ಹೆಂಡತಿಯೆಂಬ ಕಲ್ಪನೆಯಿದೆ. ಹೀಗೆ ರಾಗ–ರಾಗಿಣಿಗಳ ವಿವಿಧ ಬಗೆಯ ಮೇಲನದಿಂದ ಬೇರೆ ಬೇರೆ ರಾಗಗಳು ಉಂಟಾಗುತ್ತವೆ. ಅಂತೆಯೇ ಮೂವತ್ತಾರು (೩೬) ರಾಗಗಳಿರುವದಾಗಿ ಕೆಲವರ ಅಭಿಪ್ರಾಯವಿದೆ. ಹಾಮ—ಹಾವಾ ! ಕಿಮನೇನ—ಇದರಿಂದ ಉಪಯೋಗವೇನು ? ಈ ಅರ್ಥದಲ್ಲಿ ತೃತೀಯಾ ವಿಭಕ್ತಿಯೊಡನೆ ಉಪ- ಯೋಗಿಸಲ್ಪಡುತ್ತದೆ. ಉದಾ:— ಸುಕವಿತಾಯದ್ಯಸ್ತಿ ರಾಜ್ಯೇನ ಕಿಮ್ । ಕಿಮ್ ತಯಾ ಕ್ರಿಯತೇ ಧೇನ್ವಾ ಯಾನಸೂತೇ ನ ದುಗ್ಧದಾ ॥ ವೃಥಾ— ವ್ಯರ್ಥವಾಗಿ. ಅನರ್ಥ ಪ್ರಚಾಲನೇನ–ನಿರರ್ಥಕ ಕೆಲಸದಲ್ಲಿ ಕೈಹಾಕುವದು. '*By moving or mooting a vain subject*' ನ ಅರ್ಥಃ ಅನರ್ಥಃ (ನ-ತ) ತಸ್ಯ ಪ್ರಚಾಲನಂ (ಷ. ತ. ಸ.) ತೇನ । ಯತಃ - ಏಕೆಂದರೆ. ಚೌರಕರ್ಮ ಪ್ರವೃತ್ತಾ ಕಳ್ಳನ ಕೆಲಸದಲ್ಲಿ ಅಂದರೆ ಕಳವಿನಲ್ಲಿ ತೊಡಗಿ ದವರು. ಚೌರಸ್ಯ ಕರ್ಮ, ಚೌರಕರ್ಮ (ಷ. ತ. ಸ.) ತಸ್ಮಿನ್ ಪ್ರವೃತ್ತಾ (ಸ. ತ.ಸ.) । ಚೌರಕರ್ಮ—ಕಳವು. ನಿಭೃತ—ಅಡಗಿಕೊಂಡ. ಕಳ್ಳರು ಅಡಗಿಕೊಂಡಿರಬೇಕೆಂದು ಕಳ್ಳ ನರಿ, ಕಳ್ಳ ಕತ್ತೆಗೆ ಸಲಹೆ ಕೊಡುತ್ತದೆ. ನಿ..............ಸ್ಥಾತವ್ಯಮ್ — ಇದು ಭಾವೇ ಪ್ರಯೋಗ. ಕರ್ತರಿಗೆ ಬದಲಿಸಿದರೆ ಚೌರಾಃ ನಿಭೃತಾಃ ತಿಷ್ಠೇಯುಃ ಎಂದು ಆಗುವದು.

(ಗ. ಪ) ಧಾತುವಿನ

ವಿ. (ನ) ಪ್ರ. ಏ. ವ. ಅಪರಂ. ಚ—ಮತ್ತೊಂದು ಮೇಲಾಗಿ; ನಮಧುರ ಸ್ವರಮ್—ಇಂಪಾದ ಸ್ವರವುಳ್ಳದ್ದಲ್ಲ, ಮಧುರಃ ಸ್ವರಃ ಯಸ್ಯ ತತ್ (ಬ. ಸ.) ಶಂಖಶಬ್ದಾನುಕಾರಮ್–ಶಂಖ ಶಬ್ದವನ್ನು ಹೋಲುವ. ಶಂಖಸ್ಯ ಶಬ್ದಃ ಶಂಖಶಬ್ದಃ ( ಷ.ತ.ಸ. ) ತಸ್ಯ ಅನುಕರೋತಿ ಇತಿ ( ಉಪ.ತ. ) ಶ್ರೂಯತೇ–ಕೇಳಲ್ಪಡುತ್ತದೆ.ಶ್ರು. ಧಾತು (೫.ಉ) ಧಾತುವಿನ ವರ್ತಮಾನ ಕಾಲ ಕರ್ಮಣಿ ತೃ.ಪು.ಏ.ವ. ರಕ್ಷಾಪುರುಷಃ — ಕಾವಲುಗಾರ ರಕ್ಷಾಯೈ ಪುರುಷಃ (ಚ. ತ. ಸ.) ರಕ್ಷಾ—ರಕ್ಷಣೆ, ತ ಉತ್ಥಾಯ—ಅವರು ಎದ್ದು. ತೇ+ ಉತ್ಥಾಯ=ತಯ್+ಉತ್ಥಾಯ=ತಯುತ್ಥಾಯ ಅಥವಾ ತ ಉತ್ಥಾಯ। ಉದ್+ಸ್ಥಾ (೧. ಪ। ಧಾತುವಿನ ಲ್ಯಬಂತಾವ್ಯಯ. ಅಮೃತ ಮಯೀಃ — ಅಮೃತ ತುಂಬಿದ, ಹೆಚ್ಚಾಗಿ ಅಮೃತವುಳ್ಳ, ಎಂದರೆ ಅಮೃತದಂತೆ ಸಿಹಿಯಾದ ಚಿರ್ಭಟೀ—ಸವತೇಕಾಯಿ ಮಾ — ಆಜ್ಞಾರ್ಥದಲ್ಲಿ ಉಪಯೋಗಿಸುವ ನಿಷೇಧಾತ್ಮಕ ಅವ್ಯಯ. ಗೀತ ವ್ಯಾಪಾರ ಪರಃ — ಹಾಡುವ ಕೆಲಸದಲ್ಲಿ ತೊಡಗಿದ. ಗೀತಸ್ಯ ವ್ಯಾಪಾರಃ ಗೀತವ್ಯಾಪಾರಃ (ಷ. ತ. ಸ.)। ತಸ್ಮಿನ್ ಪರಃ (ಸ. ತ. ಸ.)। ವನಾಶ್ರಯತ್ವಾತ್–ಯಾವಾಗಲೂ ಅಡವಿಯಲ್ಲಿ ವಾಸ ಮಾಡಿಕೊಂಡಿರುವದರಿಂದ. ನವೇತ್ಸಿ—ನೀನು ಅರಿಯೆ. ರಸಃ — ಅಭಿರುಚಿ (*taste*) ಅಥವಾ ರಸ. (*sentiment*) ರಸದಿಂದಲೇ ಸಂಗೀತಕ್ಕೆ ಕಳೆ ಬರುತ್ತದೆ. ರಸವೇ ಕಾವ್ಯದ ಮೂಲಾಧಾರ. ರಸವಿಲ್ಲದ ಕಾವ್ಯ ಇಲ್ಲವೆ ಸಂಗೀತ ಕಸಕ್ಕೆ ಸಮಾನವಾದುದು. ಶೃಂಗಾರ, ಹಾಸ್ಯ, ಕರುಣ, ರೌದ್ರ, ವೀರ, ಭಯಾನಕ, ಬೀಭತ್ಸ, ಅದ್ಭುತ, ಶಾಂತ, ಎಂಬ ೯ ಮುಖ್ಯ ರಸಗಳಿವೆ. ಕೆಲವರು ವಾತ್ಸಲ್ಯಎಂಬ ೧೦ನೆಯ ರಸವನ್ನು ಒಪ್ಪುವರು. ಉದ್+ನದ್ (೧. ಪ)—ಕಿರುಚು—ಒದರು. ಕಿಂ,...............ಕೇನ–ಸ್ವಾರ್ಥ ಅಥವಾ ಸ್ವಹಿತ ಕಳೆದುಕೊಳ್ಳುವವರಿಂದೇನು ಉಪಯೋಗ. ಭ್ರಂಶ್ (೧. ಆ)—ಉದುರಿ ಬೀಳು, ಕಳೆದುಕೊಳ್ಳು. ಸ್ವಸ್ಯ ಅರ್ಥಃ ಸ್ವಾರ್ಥಃ (ಷ. ತ. ಸ.)। ತಸ್ಯ ಭ್ರಂಶಕಃ (ನಾಮ ಭ್ರಂಶಃ ಪಾತಃ) ಸ್ವಾ...........ಕಃ (ಷ. ತ. ಸ.)। ತೇನ। ಧಿಕ್—ಧಿಕ್ಕಾರವಿರಲಿ, ಇದು ಪ್ರಥಮಾ, ದ್ವಿತೀಯಾ, ಇಲ್ಲವೆ ಸಂಬೋಧನ ವಿಭಕ್ತಿ ತೆಗೆದುಕೊಳ್ಳುತ್ತದೆ. ಉದಾ:— I. ಧಿಗಿಯಂ ದಾರಿದ್ರತಾ. II. ಧಿಕ್ ತಾಂ ಚ, ತಂ. ಚ, ಮದನಂ ಚ, ಇಮಾಂಚ ಮಾಂ ಚ. III. ಧಿಕ್. ಮೂರ್ಖ.।

ದ್ವಾರಸ್ಥಿತಃ — ಬಾಗಿಲಲ್ಲಿದ್ದುಕೊಂಡು. ದ್ವಾರೇಸ್ಥಿತಃ (ಸ. ತ.)। ತಥಾನುಷ್ಠಿತೇ—ಹಾಗೆ ಮಾಡಲಾಗಿ. ರಾಸಭರಟನಮ್—ಕತ್ತೆಯ

ಕಿರುಚು. ರಾಸಭಸ್ಯ ರಟನಮ್ (ಷ. ತ. ಸ.)। ಕ್ಷೇತ್ರಸಃ — ಹೊಲ ಕಾಯುವವ. ಕ್ಷೇತ್ರಂ, ಪಾತಿ, ಇತಿ. (ಉಪ.ತ.ಸ)। ದಂತಾನ್ ಘರ್ಷಯತ್— ಹಲ್ಲು ಕಟಿಯುತ್ತ. ಘರ್ಷಯನ್—ಘೃಷ್(೧೨.ಪ)ಧಾತುವಿನ ಪ್ರಯೋಜಕದ ವ.ಧಾ.ಸಾ.ವಿ.(ಪು)ಪ್ರ.ಏ.ವ. ಯಾವತ್ ದೃಷ್ಟಃ—ಕತ್ತೆಯು ಕಂಡೊಡನೆ, ಕತ್ತೆಯನ್ನು ನೋಡಿದೊಡನೆ. ಲಗುಡ ಪ್ರಹಾರೈಃ — ಬಡಿಗೆಗಳ ಹೊಡೆತ ಗಳಿಂದ, ಡೊಣ್ಣೆಗಳ ಏಟುಗಳಿಂದ, ಲಗುಡಾನಾಂ ಪ್ರಹಾರಾಃ — ಲಗುಡ ಪ್ರಹಾರಾಃ (ಷ. ತ. ಸ.) ತೈಃ। ತಥಾ ಹತಃ ಯಥಾ—ನೆಲದಮೇಲೆ ಉರುಳುವಂತೆ ಬಡಿಗೆಗಳ ಏಟುಗಳಿಂದ ಥಳಿಸಿದನು

**ಪುಟ ೧೦.** ಸಚ್ಛಿದ್ರಮ್ — ಛಿದ್ರೇಣ ಸಹ (ಸಹ. ಬ. ಸ.)। ತೂತುಳ್ಳದ್ದು. ಉಲೂಖಲಂ — ಒರಳು. ಕ್ಷೇತ್ರಪಾಲಃ — ಹೊಲ ಕಾಯುವವ. ಕ್ಷೇತ್ರಂ ಪಾಲಯತಿ ಇತಿ (ಉಪ. ತ.)। ಸ್ವಜಾತಿ ಸ್ವಭಾವಾತ್ — ಸ್ವಸ್ಯಜಾತಿಃ ಸ್ವಜಾತಿಃ (ಷ. ತ. ಸ.) ಸ್ವಜಾತೇಃ ಸ್ವಭಾವಃ ಸ್ವ........ವಃ (ಷ. ತ. ಸ.)। ತಸ್ಮಾತ್। ಗತವೇದನಃ — ಗತಾ ವೇದನಾ ಯಸ್ಯ ಸಃ (ಬ. ಸ.)। ನೋವು ಹೋದವ—ನೋವು ಇಲ್ಲದಂತಾದವನು.

**ಶ್ಲೋಕ ೧. ಅನ್ವಯ:—** ಸಾರಮೇಯಸ್ಯ ಅಶ್ವಸ್ಯ ವಿಶೇಷತಃ ರಾಸಭಸ್ಯ ಚ ಮೂಹೂರ್ತಾತ್ಪರತಃ ಪ್ರಹಾರ ಜನಿತಾ ವ್ಯಥಾ ನ ಸ್ಯಾತ್।

ಸಾರಮೇಯಃ — ನಾಯಿ. ಮೂಹೂರ್ತಮ್ — ಕ್ಷಣಕಾಲ ಅಥವಾ ೪೮ ಮಿನಿಟು. ಮೂಹೂರ್ತಾತ್ಪರತಃ — ೪೮ ಮಿನಿಟುಗಳ ನಂತರ ಅಥವಾ ತುಸು ಹೊತ್ತಿನಮೇಲೆ, ಪ್ರಹಾರೈಃ ಜನಿತಾ. ಪ್ರಹಾರಜನಿತಾ. (ತೃ. ತ. ಸ.) ಹೊಡೆತಳಿಗಂದುಂಟಾದ. ನಾಯಿ, ಕುದುರೆ ಹಾಗೂ ಕತ್ತೆಗಳಿಗೆ ಮೇಲಿಂದಮೇಲೆ ಪೆಟ್ಟು ಬೀಳುವದರಿಂದ ಅವುಗಳಿಗೆ ತುಸುಹೊತ್ತಿನ ನಂತರ ಏಟಿನ ನೋವು ಉಂಟಾಗದಂತೆ ಸೃಷ್ಟಿಕರ್ತನಾದ ಆ ಪರಮಾತ್ಮನ ವ್ಯವಸ್ಥೆ ಇದೆ. ವೃತಿಂ ಚೂರ್ಣಯಿತ್ವಾ—ಬೇಲಿಮುರಿದು, ಬೇಲಿ ಚೂರುಚೂರಾಗಿ ಮಾಡಿ. ಚೂರ್ಣಯಿತ್ವಾ—ಚೂರ್ಣ (೧೦.ಉ.) ಧಾತುವಿನ ಲ್ಯಬಂತಾವ್ಯಯ. ಪಲಾಯಿತುಮ್ —ಪರಾ + ಅಯ್ (೧. ಆ) ಧಾತುವಿನ ತುಮಂತಾವ್ಯಯ 'ರಾ' ಹೋಗಿ 'ಲಾ' ಆಗುತ್ತದೆ. ಸಸ್ಮಿತಮ್—ಮುಗಳ್ನಗೆಯಿಂದ ಸ್ಮಿತೇನ ಸಹಿತಂ ಯಥಾ ಸ್ಯಾತ್ ತಥಾ (ಅವ್ಯ. ಸ.)

**ಶ್ಲೋಕ ೨. ಅನ್ವಯ:—**ಮಾತುಲ ಗೀತೇನ ಸಾಧು। ಮಯಾ ಪ್ರೋಕ್ತಃ ಅಪಿ ನ ಸ್ಥಿತಃ। ಅಯಂ ಅಪೂರ್ವಃ ಮಣಿಃ ಬದ್ಧಃ। ಗೀತ ಲಕ್ಷಣಂ ಸಂಪ್ರಾಪ್ತಂ।

ಮಾತುಲಃ — ತಾಯಿಯ ತಮ್ಮ ಅಥವಾ ಅಣ್ಣ. ಮಾವ. ಸಾಧು ಗೀತೇನ— ಚನ್ನಾಗಿ ಹಾಡಿದೆ. ಪ್ರೋಕ್ತ—ಪ್ರ + ವಚ್ (೨. ಪ) ಧಾತುವಿನ ಕ. ಭೂ. ಧಾ. ವಿ. ಮಯಾ........ಪಿ—ನಾನು ಹೇಳಿದರೂ. ಅಪೂರ್ವ— ಹೊಸ. ಮಣಿಃ—ರತ್ನ. ನಾನು ಬೇಡವೆಂದು ಹೇಳಿದರೂ ನೀನು ಕೇಳಲಿಲ್ಲ. ಹಾಡಿಯೇಬಿಟ್ಟೆ. ಆದ್ದರಿಂದಲೇ ಈ ಹೊಸ ರತ್ನವು (ಒರಳು) ನಿನ್ನ ಕೊರಳಿಗೆ ಕಟ್ಟಲ್ಪಟ್ಟಿದೆ. ಎಂದು ಆ ನರಿಯ ಅಭಿಪ್ರಾಯ. ಗೀತ ಲಕ್ಷಣಮ್— ಗೀತಸ್ಯ ಲಕ್ಷಣಮ್ (ಷ. ತ. ಸ.) ಸಂಗೀತದ ಇನಾಮು. ಲಕ್ಷಣಮ್— ಇನಾಮು (Medal).

## EXERCISES.

೫. ಅಭ್ಯಾಸಕ್ಕಾಗಿ ಪ್ರಶ್ನೆಗಳು:—

(೧) **ಭಾಷಾಂತರಿಸಿರಿ:**— (ಅ) ಕಸ್ಮಿಂಶ್ಚಿತ್............ಽಭಿಹಿತಃ (ಪುಟ೯. ಸಾಲು ೧–೮) (ಬ) ಶ್ಲೋಕ ೧–೨ (ಪುಟ ೧೦.)

(೨) **ವಿಗ್ರಹಿಸಿ ಸಮಾಸಗಳ ಹೆಸರು ಹೇಳಿರಿ:**— ಗಾನಪ್ರಿಯಃ । ಬಂಧನಭಯಮ್ । ಪ್ರತ್ಯಹಮ್ । ರಕ್ಷಾಪುರುಷಃ । ಕ್ಷೇತ್ರಪಃ । ಸಚ್ಛಿದ್ರಮ್ । ಗತವೇದನಃ । ಸಸ್ಮಿತಮ್ ।

(೩) **ರೂಪಗುರುತಿಸಿರಿ**— ಉತ್ಥಾಯ। ಸ್ಥಾತವ್ಯಮ್। ಶ್ರೂಯತೇ। ಘರ್ಷಯನ್ । ಪಲಾಯಿತುಮ್ ।

(೪) **ಲಘುಟಿಪ್ಪಣಿ ಬರೆಯಿರಿ:**— ರಾಗಃ। ರಸಃ। ಮುಹೂರ್ತಃ।

(೫) **ವಾಕ್ಯಗಳಲ್ಲಿ ಉಪಯೋಗಿಸಿರಿ:**— ನಿಯುಜ್ । ಕಿಮ್ । ಧಿಕ್ ।

**ಪ್ರಯೋಗ ಬದಲಿಸಿರಿ:**— ರಜಕಃ ರಾಸಭಂ ಬಂಧನೇನ ನಿಯುನಕ್ತಿ । ಕಿಂ ನಜಾನಾಮಿ ಗೀತಮ್ ।

(೬) **ಸಂಧಿ ಬಿಡಿಸಿರಿ:**— ಯತಶ್ಚೌರಕರ್ಮ ಪ್ರವೃತ್ತಾವಾವಾಮ್। ತ ಉತ್ಥಾಯ ।

# ೪. ಮನೋರಥಪ್ರಿಯಃ ಬ್ರಾಹ್ಮಣಃ

೧. **ಕವಿ ಹಾಗೂ ಕಾವ್ಯ:**— ೧ನೇ ಪಾಠ ನೋಡಿರಿ.

೨. **ಪಾಠದ ಸಾರಾಂಶ:**— ಸ್ವಭಾವ ಕೃಪಣನೆಂಬ ಒಬ್ಬ ಜಿಪುಣ ಬ್ರಾಹ್ಮಣನು ಬಿಕ್ಕೆಬೇಡಿ, ತಿಂದುಳಿದ ಹಿಟ್ಟನ್ನು ಒಂದು ಗಡಿಗೆಯಲ್ಲಿ ಹಾಕಿ, ಆ ಗಡಿಗೆಯನ್ನು ಗೂಟಕ್ಕೆ ತೂಗಹಾಕಿ, ಅದರ ಕೆಳಗೆ ಮಂಚದಮೇಲೆ ಮಲಗಿಕೊಂಡು ಮನದಲ್ಲಿ ಹೀಗೆ ಆಲೋಚಿಸಿದನು:— ಬರಗಾಲ ಬಿದ್ದರೆ ಈ ಹಿಟ್ಟು ಮಾರಿ ಬಂದ ಬಹಳ ಹಣದಿಂದ ೨ ಆಡುಗಳನ್ನು ಕೊಳ್ಳುವೆನು. ಮುಂದೆ ಅವು ೬ ತಿಂಗಳಿಗೊಮ್ಮೆ ಈಯುವದರಿಂದ ಅವುಗಳ ಒಂದು ಹಿಂಡೇ ಆಗುವದು. ಆಗ ಆ ಹಿಂಡು ಮಾರಿ ಆಕಳುಗಳನ್ನೂ, ಆಕಳುಗಳಿಂದ ಎಮ್ಮೆಗಳನ್ನೂ, ಎಮ್ಮೆಗಳಿಂದ ಹೆಣ್ಣು ಕುದುರೆಗಳನ್ನೂ ಕೊಳ್ಳುವೆನು. ಹೆಣ್ಣು ಕುದುರೆಗಳು ಈಯುವದರಿಂದ ಬಹಳ ಕುದುರೆಗಳಾಗುವವು. ನಂತರ ಅವನ್ನು ಮಾರಿ ಬಂದ ಹಣದಿಂದ ದೊಡ್ಡ ಮನೆ ಕಟ್ಟಿಸುವೆ. ಬಳಿಕ ಶ್ರೀಮಂತರ ಕನ್ಯೆ ಮದುವೆ ಮಾಡಿಕೊಂಡು ಅವಳಲ್ಲಿ ಹುಟ್ಟುವ ಮಗನಿಗೆ ಸೋಮಶರ್ಮ ಎಂದು ಹೆಸರಿಡುವೆ. ಆ ಸೋಮಶರ್ಮನು ಅಂಬೇಗಾಲಿಡುತ್ತ ಅಶ್ವಶಾಲೆಯಲ್ಲಿದ್ದ ನನ್ನೆಡೆಗೆ ಬರುವನು. ಆಗ ನಾನು 'ಹುಡುಗನನ್ನು ಕರೆದುಕೋ' ಎನ್ನುವ ಮಾತನ್ನು ನನ್ನ ಹೆಂಡತಿಯು ಮನೆಗೆಲಸದಲ್ಲಿ ತೊಡಗಿರುವದರಿಂದ, ಕೇಳುವದಿಲ್ಲ. ಬಳಿಕ ಅವಳನ್ನು ಕಾಲಿನಿಂದ "ಹೀಗೆ ಒದೆಯುವೆನು." ಎಂದು ಆಲೋಚಿಸಿ ನಿಜವಾಗಿಯೂ ಕಾಲನ್ನೆತ್ತಿ ಒದೆದನು. ಅದರಿಂದ ಗಡಿಗೆ ಒಡೆಯಿತು. ಹಿಟ್ಟು ಮೈಮೇಲೆ ಬಿದ್ದುದರಿಂದ ಮೈಯೆಲ್ಲ ಬೆಳ್ಳಗಾಯಿತು.

೩. **ಭಾಷಾಂತರ:**—

## ೪. ಇಚ್ಛಾಪ್ರಿಯ ಬ್ರಾಹ್ಮಣ.

ಒಂದು (ಒಂದಾನೊಂದು) ಊರಲ್ಲಿ ಸ್ವಭಾವ ಕೃಪಣನೆಂಬ ಒಬ್ಬ ಬ್ರಾಹ್ಮಣನು ಇರುತ್ತಿದ್ದನು. ಅವನು ಬಿಕ್ಕೆಬೇಡಿ ಗಳಿಸಿದ ಹಾಗೂ ತಿಂದುಳಿದ ಹಿಟ್ಟಿನಿಂದ ಒಂದು ಗಡಿಗೆಯು ತುಂಬಿತು. ಆ ಗಡಿಗೆಯನ್ನು ಗೂಟಕ್ಕೆ ತೂಗಿಹಾಕಿ ಅದರ ಕೆಳಗೆ ಒಂದು ಮಂಚವನ್ನು ಹಾಕಿ, ಯಾವಾಗಲೂ ಒಂದೇ ದೃಷ್ಟಿಯಿಂದ ಅದನ್ನು ನೋಡುತ್ತಿದ್ದನು. ಬಳಿಕ ಒಮ್ಮೆ ಒಂದು ರಾತ್ರಿಯಲ್ಲಿ ಮಲಗಿದ ಅವನು ಹೀಗೆ ಆಲೋಚಿಸಿದನು:— ಈ ಗಡಿಗೆ

ಯಾವರೋ ಹಿಟ್ಟಿನಿಂದ ಪೂರ್ಣ ತುಂಬಿದೆ. ಆದ್ದರಿಂದ ಬರಗಾಲ ಬಿದ್ದರೆ, ಇದರಿಂದ ನೂರು ರೂಪಾಯಿಗಳು ದೊರೆಯುವವು. ಆಗ ಅದರಿಂದ ಎರಡು ಆಡು ಕೊಳ್ಳುವೆನು. ನಂತರ (ಅವು) ಆರು ತಿಂಗಳಿಗೊಮ್ಮೆ ಈಯುವದರಿಂದ, ಅವುಗಳಿಂದ ಒಂದು ಹಿಂಡು ಆಗುವದು. ಬಳಿಕ ಆಡುಗಳಿಂದ ಬಹಳ ಆಕಳುಗಳನ್ನೂ, ಆಕಳುಗಳಿಂದ ಎಮ್ಮೆಗಳನ್ನೂ, ಎಮ್ಮೆಗಳಿಂದ ಹೆಣ್ಣು ಕುದುರೆಗಳನ್ನೂ ಕೊಳ್ಳುವೆನು. ಹೆಣ್ಣು ಕುದುರೆಗಳು ಈಯುವದರಿಂದ ಬಹಳ ಕುದುರೆಗಳಾಗುವವು. ಅವುಗಳ ಮಾರಾಟದಿಂದ ಬಹಳ ಬಂಗಾರವು ಬರುವದು. ಬಂಗಾರದಿಂದ ನಾಲ್ಕು ಶಾಲೆ (ದೊಡ್ಡ ಕೋಣೆ)ಗಳುಳ್ಳ (ಅರ)ಮನೆ ಆಗುವದು. ಬಳಿಕ ಒಬ್ಬ ಬ್ರಾಹ್ಮಣನು ನನ್ನ ಮನೆಗೆ ಬಂದು (ಮದುವೆಯ) ವಯಸ್ಸಿಗೆ ಬಂದ ಸುಂದರ ಕನ್ಯೆಯನ್ನು ಕೊಡುವನು. ಅವಳಿಂದ ನನಗೆ ಒಬ್ಬ ಮಗನಾಗುವನು. ಅವನಿಗೆ ಸೋಮಶರ್ಮ ಎಂದು ಹೆಸರಿಡುವೆನು. ಬಳಿಕ ಅವನು ಅಂಬೆಗಾಲಿಡಲು ತಕ್ಕವನಾಗಲು, ನಾನು ಪುಸ್ತಕವನ್ನು ತೆಗೆದುಕೊಂಡು; 'ಅಶ್ವ'ಶಾಲೆಯ ಹಿಂಭಾಗದಲ್ಲಿ ಕುಳಿತುಕೊಂಡು ಅದನ್ನು (ಎಂದರೆ ಪುಸ್ತಕ ಓದುವದನ್ನು) ಆಲೋಚಿಸುವೆನು. ಇಷ್ಟರಲ್ಲಿ ಸೋಮಶರ್ಮನು ನನ್ನನ್ನು ಕಂಡು, ತಾಯಿಯ ತೊಡೆಯಿಂದ (ಕೆಳಗಿಳಿದು) ಅಂಬೇಗಾಲಿಡುತ್ತ ಕುದುರೆಯ ಖುರಗಳ ಸಮೀಪದಲ್ಲಿ ಸಾಗುತ್ತ, ನನ್ನೆಡೆಗೆ ಬರುವನು. ಆಗ ಸಿಟ್ಟು ತುಂಬಿದ ನಾನು 'ಹುಡುಗನನ್ನು ಕರೆದುಕೋ' ಎಂದು ಹೆಂಡತಿಗೆ ಅನ್ನುವೆನು. ಮನೆಗೆಲಸದಲ್ಲಿ (ತುಂಬಾ ಮಗ್ನಳಾದುದರಿಂದ ಅವಳು ನನ್ನ ಮಾತು ಕೇಳುವದಿಲ್ಲ. ಆಗ ನಾನು ಎದ್ದು ಅವಳಿಗೆ ಕಾಲಿನಿಂದ 'ಒದೆಯುವೆನು' ಹೀಗೆ ಆಲೋಚನೆಯಲ್ಲಿದ್ದ ಅವನು ಗಡಿಗೆ ಒಡೆಯುವಂತೆ ಒದ್ದನು; (ಮತ್ತು) ಹಿಟ್ಟಿನಿಂದ ಬೆಳ್ಳಗಾದನು.

**ಪಂಚತಂತ್ರದಲ್ಲಿ 'ಅಪರೀಕ್ಷಿತ ಕಾರಕ' ಎಂಬ (೫ನೆಯ ತಂತ್ರವು) ಲ್ಲಿಯ ೮ನೆಯ ಕಥೆ.**

**೪. ಟೀಕೆ ಟಿಪ್ಪಣೆಗಳು:—**

ಮನೋರಥಪ್ರಿಯಃ—ಮನೋರಥಾಃ ಪ್ರಿಯಾಃ ಯಸ್ಯ ಸಃ (ಬ. ಸ.) ಇಚ್ಛಾಪ್ರಿಯನು. ಸ್ವಭಾವ ಕೃಪಣಃ—ಸ್ವಭಾವೇನ ಕೃಪಣಃ (ತೃ.ತ.)ಇದು ಆ ಬ್ರಾಹ್ಮಣನ ಹೆಸರು. ಹುಟ್ಟಾ ಜಿಪುಣ ಎಂದು ಆ ಹೆಸರಿನ ಅರ್ಥ. ಭಿಕ್ಷಾರ್ಜಿತೈಃ—ಭಿಕ್ಷಯಾ ಅರ್ಜಿತಾಃ ಭಿಕ್ಷಾರ್ಜಿತಾಃ (ತೃ.ತ.)। ತೈಃ ।ಬಿಕ್ಕೆಯಿಂದ ಗಳಿಸಿದ, ಬಿಕ್ಷೆ ಬೇಡಿ ಗಳಿಸಿದ, ಸಕ್ತುಭಿಃ—ಹಿಟ್ಟಿನಿಂದ. ಸಕ್ತು–(ಪು.ಬ ವ.) ಹುರಿದ ಗೋದಿಯ ಹಿಟ್ಟು. ಗೋದಿಯ ಹಿಟ್ಟು. '*The flour of*

*barley, first fried and then ground; barleymeal –Apte.* ಭುಕ್ತಶೇಷೈಃ–ಭುಕ್ತಸ್ಯ ಶೇಷಾಃ, ಭುಕ್ತಶೇಷಾಃ, (ಷ.ತ.ಸ.)ತೈಃ ತಿಂದು ಉಳಿದ. ಕಲಶಃ—ಕೊಡ, ಗಡಿಗೆ. ಸಂಪೂರಿತಃ—ಸಮ್+ಪೃ (೩.ಪ) ಧಾತುವಿನ ಪ್ರಯೋಜಕದ ಕರ್ಮಣಿ ಭೂ. ಧಾ. ವಿ. (ಪು). ಪ್ರ. ಏ.ವ. ತುಂಬಿಸಲ್ಪಟ್ಟ, ತುಂಬಿದ. ನಾಗದಂತಃ–ಗೂಟ. ನೆಲವು ಸಾಗೋಂವಿಗೆ. ಅವಲಂಬ್ಯ–ತೂಗಿಹಾಕಿ, ಅವ+ಲಂಬ್(೧.ಆ)ಧಾ. ಪ್ರಯೋಜಕದ ಲ್ಯಬಂತಾವ್ಯಯ. ಈ ಧಾತು ಸಪ್ತಮೀ ವಿಭಕ್ತಿ ತೆಗೆದುಕೊಳ್ಳುತ್ತದೆ. ಅಧಸ್ತಾತ್— ಕೆಳಗೆ. ಖಟ್ವಾ— ಮಂಚ, ಹೊರಸು. ನಿಧಾಯ—ನಿ+ಧಾ (೩. ಉ) ಧಾತುವಿನ ಲ್ಯಬಂತಾವ್ಯಯ. ಚಿಂತಯಾಮಾಸ — ಚಿಂತ್ (೧೦. ಪ) 'ಆಮ್' ಯುಕ್ತ ಪರೋಕ್ಷ ಭೂತಕಾಲದ ತೃ.ಪು.ಏ.ವ. ಆಲೋಚಿಸಿದನು. ಪರಿಪೂರ್ಣ—ಪರಿ+ಪೃ (೩.ಪ) ಧಾತುವಿನ ಕರ್ಮಣಿ ಭೂ. ಧಾ. ವಿ. ತುಂಬಿದ ಯದಿ—*If.* ರೂಪಕಾಣಾಂ ಶತಂ—ನೂರು ರೂಪಾಯಿಗಳು. ಗ್ರಹೀತವ್ಯಂ— ಗ್ರಹ್ (೯.ಉ) ಧಾತುವಿನ ಕರ್ಮಣಿ ವಿಧ್ಯರ್ಥ ಧಾ. ಸಾ. ವಿ. (ನ). ಪ್ರ. ಏ. ವ. ಷಾಣ್ಮಾಸಿಕ ಪ್ರಸವ ವಶಾತ್:—ಆರು ತಿಂಗಳಿಗೊಮ್ಮೆ ಈಯುವದರಿಂದ. ಷಟ್ ಮಾಸಾಃ ಷಣ್ಮಾಸಾಃ (ದ್ವಿಗು.ಸ.) ತೇಷಾಂ ಅಯಂ ಷಾಣ್ಮಾಸಿಕಃ। ಷಾ..........ಕಃ ಪ್ರಸವಃ, ಷಾಣ್ಮಾಸಿಕ ಪ್ರಸವಃ (ಕ. ಸ.)। ತಸ್ಯ ವಶಃ (ಷ. ತ. ಸ.)। ತಸ್ಮಾತ್। ಯೂಥಂ— ಹಿಂಡು. ಅಜಾಭಿಃ ಗಾಃ ಗ್ರಹೀಷ್ಯಾಮಿ–ಆಡುಗಳನ್ನು ಕೊಟ್ಟು ಆಕಳುಗಳನ್ನು(ಕೊಂಡು) ತೆಗೆದುಕೊಳ್ಳುವೆನು. ಬೆಲೆಯನ್ನು ತೋರಿಸುವ ಶಬ್ದವನ್ನು ತೃತೀಯಾ ವಿಭಕ್ತಿಯಲ್ಲಿ ಉಪಯೋಗಿಸುತ್ತಾರೆ. ಮಹಿಷೀ—ಎಮ್ಮೆ. ವಡವಾ—ಹೆಣ್ಣು ಕುದುರೆ. ಪ್ರಸವತಃ—ಈಯುವದರಿಂದ. ಶಬ್ದಕ್ಕೆ ತಸ್ ಪ್ರತ್ಯಯ ಹಚ್ಚುವದರಿಂದ ಪಂಚಮೀ ವಿಭಕ್ತಿಯ ಅರ್ಥವಾಗುತ್ತದೆ. ವಿಕ್ರಯಃ — ಮಾರಾಟ. ಚತುಃ ಶಾಲಮ್—ಚತಸ್ರಃ ಶಾಲಾಃ ಯಸ್ಯ ತತ್ (ಬ. ಸ.) ನಡುವೆ ಒಳ ಅಂಗಳವಿದ್ದು, ಸುತ್ತಲೂ (ನಾಲ್ಕೂ ಕಡೆಗೆ) ಕೋಣೆಗಳುಳ್ಳ ಮನೆ. ಪ್ರಾಪ್ತ ವಯಸ್ಕಾಮ್—ಪ್ರಾಪ್ತಂ ವಯಃ ಯಯಾ ಸಾ—ಪ್ರಾಪ್ತವಯಸ್ಕಾ(ಬ.ಸ.)। ತಾಮ್। ವಯಸ್ಸಿಗೆ ಬಂದ. ರೂಪಾಢ್ಯಾಂ—(ಸುಂದರ) ರೂಪವುಳ್ಳ, ರೂಪೇಣ ಆಢ್ಯಾ, ರೂಪಾಢ್ಯಾ (ತೃ. ತ.)। ತಾಮ್। ಒಳ್ಳೆಯ ರೂಪವುಳ್ಳ, ಸುಂದರಿಯಾದ. ದಾಸ್ಯತಿ—ದಾ (೧. ಪ. ೩. ಉ.) ಧಾತುವಿನ ದ್ವಿ. ಭ. ಕಾ. ತೃ. ಪು. ಏ. ವ. ತತ್ಸಕಾಶಾತ್ — ಅವನಿಂದ. ತಸ್ಮಾ।, ಸಕಾಶ।,

ತತ್ಸಕಾಶಃ (ಷ. ತ. ಸ.)। ತಸ್ಮಾತ್। ಜಾನುಚಲನಯೆ ಋಗ್ಯೇ ಸಂಜಾತೇ– ಅಂಬೆಗಾಲಿಡಲು ಸಮರ್ಥನಾಗಲು; ಜಾನುಭ್ಯಾಂ ಚಲನಂ, ಜಾನುಚಲನಂ. (ತೃ. ತ.)। ತಸ್ಯ ಯೋಗ್ಯಃ (ಷ. ತ. ಸ.)। ತಸ್ಮಿನ್। ಅಶ್ವಶಾಲಾ— ಕುದುರೆಕಟ್ಟುವ ಕೋಣೆ. ಅಶ್ವಾನಾಂ ಶಾಲಾ (ಷ. ತ. ಸ.) ಉಪವಿಷ್ಟಃ– ಕುಳಿತುಕೊಂಡು. ಉಪ+ವಿಶ್ (೬. ಪ) ಈ ಧಾತು ಸಪ್ತಮೀ ವಿಭಕ್ತಿ ತೆಗೆದುಕೊಳ್ಳುತ್ತದೆ. ಉದಾ:— ಅಹಂ ಆಸನೇ ಉಪವಿಶಾಮಿ। ಅವಧಾರಯಿಷ್ಯಾಮಿ ಅವ+ಧೃ (೧೦. ಉ) ಧಾತುವಿನ ದ್ವಿ. ಭ. ಪ್ರ. ಪು. ಏ. ವ. ವಿಚಾರ ಮಾಡುವೆನು. ಪುಸ್ತಕ ಓದುತ್ತ ಓದಿದ ಭಾಗದ ಬಗ್ಗೆ ಆಲೋಚಿಸುತ್ತ ಕೂಡುವೆನು. ಅತ್ರಾಂತರೇ — ಇಷ್ಟರಲ್ಲಿ. *In the meanwhile* ಜನನ್ಯುತ್ಸಂಗಾತ್–ತಾಯಿಯ ತೊಡೆಯಿಂದ. ಜನನ್ಯಾಃ ಉತ್ಸಂಗಃ (ಷ. ತ. ಸ.) ತಸ್ಮಾತ್। ಜಾನುಪ್ರಚಲನಪರಃ—ಜಾನುಭ್ಯಾಂ ಪ್ರಚಲನಂ, ಜಾನುಪ್ರಚಲನಮ್ (ತೃ. ತ.) ತಸ್ಮಿನ್ ಪರಃ (ಸ. ತ.) ಅಂಬೆಗಾಲಿಡುವದರಲ್ಲಿ ಮಗ್ನನಾದ. ಅಶ್ವಖುರಾಸನ್ನವರ್ತೀ—ಕುದುರೆಯ ಕಾಲ ಬಳಿಯಲ್ಲಿದ್ದ. ಅಶ್ವಸ್ಯಖುರಾಃ, ಅಶ್ವಖುರಾಃ (ಷ. ತ. ಸ.) ಅಶ್ವಖುರಾಣಾಂ ಆಸನ್ನೇ ಪ್ರದೇಶೇ ವರ್ತತೇ ಇತಿ (ಉಪ. ತ.)। ಕೋಪಾವಿಷ್ಟಃ—ಸಿಟ್ಟಿಗೆದ್ದವನು. ಸಿಟ್ಟಿನಿಂದ ತುಂಬಿದವನು. ಕೋಪೇನ ಆವಿಷ್ಟಃ (ತೃ. ತ.)। ಬ್ರಾಹ್ಮಣೀ— ಬ್ರಾಹ್ಮಣ ಸ್ತ್ರೀ ಅರ್ಥಾತ್ ಸ್ವಭಾವ ಕೃಪಣನ ಹೆಂಡತಿ. ಅಭ್ಯಿಧಾಸ್ಯಾಮಿ— ನುಡಿಯುವೆನು. ಹೇಳುವೆನು. ಅಭಿ+ಧಾ (೩. ಪ) ಧಾತುವಿನ ದ್ವಿ. ಭ. ಪ್ರ. ಪು. ಏ. ವ. ಗೃಹಾಣ—ತೆಗೆದುಕೋ. ಗ್ರಹ್ (೯. ಉ) ಧಾತವಿನ ಆಜ್ಞಾರ್ಥ ದ್ವಿ. ಪು. ಏಕವಚನ. ಗೃಹಕರ್ಮವ್ಯಗ್ರತಯಾ—ಮನೆಕೆಲಸದಲ್ಲಿ ಮಗ್ನಳಾದುದರಿಂದ ಗೃಹಸ್ಯ ಕರ್ಮ, ಗೃಹಕರ್ಮ (ಷ.ತ.ಸ.) ತಸ್ಮಿನ್ ವ್ಯಗ್ರತಾ(ಸ. ತ.)ತಯಾ। ಧ್ಯಾನಸ್ಥಿತೇನ — ಧ್ಯಾನದಲ್ಲಿದ್ದ ಅವನಿಂದ. ಧ್ಯಾನೇ ಸ್ಥಿತಃ (ಸ.ತ.ಸ.)। ತೇನ। ತಥಾ........ಭಗ್ನಃ — ಗಡಿಗೆ ಒಡೆಯುವಂತೆ ಒದ್ದನು ಇಂಥ ಒದಿಕೆಯನ್ನು ಕೊಟ್ಟನಲ್ಲಾ, ಅದರಿಂದ ಆ ಗಡಿಗೆ ಒಡೆಯಿತು. ಕಾರಣ ದರ್ಶಕ ವಾಕ್ಯದಲ್ಲಿ ತಥಾ ಉಪಯೋಗಿಸುತ್ತಾರೆ. ಮತ್ತು ಪರಿಣಾಮ ವಾಚಕ ವಾಕ್ಯದಲ್ಲ ಯಥಾ ಉಪಯೋಗಿಸುತ್ತಾರೆ. ಉದಾ:— ಸ ರಾಸಭಃ ಲಗುಡಪ್ರಹಾರೈಃ ತಥಾ ಹತಃ, ಯಥಾ ಪ್ರತಾಡಿತೋ ಭೂಪೃಷ್ಠೇ ಪತಿತಃ ಭಗ್ನಃ — ಭಂಜ್ (೭. ಪ) ಧಾತುವಿನ ಕರ್ಮಣಿ ಭೂ. ಧಾ. ವಿ. ಪು. ಪ್ರ ಏಕ ವಚನ. ಪಾಂಡುರತಾಂ ಗತಃ — ಬೆಳ್ಳಗಾದನು.

ಈ ಪಾಠದಲ್ಲಿ, ದ್ವಿ. ಭವಿಷ್ಯತ್ಕಾಲದ ಅನೇಕ ರೂಪಗಳು ಬಂದಿವೆ. ಅವನ್ನು ಸಂಗ್ರಹಿಸಿ ಕೆಳಗೆ ಕೊಡಲಾಗಿದೆ. ಕಂಸಗಳಲ್ಲಿ ಮೂಲ ಧಾತು ಕೊಟ್ಟಿದೆ. ದ್ವಿ. ಭ. ಪ್ರ. ಪು. ಏ ವ. — ಗ್ರಹೀಷ್ಯಾಮಿ. (ಗ್ರಹ್ ೯.ಪ) ಕರಿಷ್ಯಾಮಿ. (ಕೃ. ೮ ಪ) ಅವಧಾರಯಿಷ್ಯಾಮಿ. ( ಅವ+ಧೃ. ೧೦.ಪ ) ಅಭಿಧಾಸ್ಯಾಮಿ. (ಅಭಿ+ಧಾ. ೩. ಪ) ತಾಡಯಿಷ್ಯಾಮಿ. (ತಡ್ ೧೦.ಪ) ದ್ವಿ.ಭ.ತೃ.ಪು.ಏ.ವ.—ಭವಿಷ್ಯತಿ (ಭೂ. ೧.ಪ) ದಾಸ್ಯತಿ (ದಾ. ೧.ಪ ೩.ಪ) ಆಗಮಿಷ್ಯತಿ. (ಆ+ಗಮ್ ೧.ಪ) ಶ್ರೋಷ್ಯತಿ. (ಶ್ರು ೫.ಪ) ದ್ವಿ.ಭ.ತೃ.ಪು. ಬ. ವ. — ಭವಿಷ್ಯಂತಿ. (ಭೂ. ೧.ಪ).

## EXERCISES

೫. ಅಭ್ಯಾಸಕ್ಕಾಗಿ ಪ್ರಶ್ನೆಗಳು:—

೧. **ಭಾಷಾಂತರಿಸಿರಿ:** — ಅತ್ರಾಂತರೇ ಸೋಮಶರ್ಮಾ.........ಗತಃ (ಪುಟ ೧೧ ಸಾಲು ೧೫—೨೦)

೨. **ವಿಗ್ರಹಿಸಿ ಸಮಾಸಗಳ ಹೆಸರು ಹೇಳಿರಿ.** — ಭಿಕ್ಷಾರ್ಜಿತೈಃ । ಚತುಃಶಾಲಮ್ । ಪ್ರಾಪ್ತವಯಸ್ಕಾಮ್ । ಜಾನುಪ್ರಚಲನಪರಃ। ಜನನ್ಯುತ್ಸಂಗಾತ್ ।

೩. **ರೂಪ ಗುರುತಿಸಿ:**— ಸಂಪೂರಿತಃ। ಪರಿಪೂರ್ಣಃ ಗ್ರಹೀಷ್ಯಾಮ್ಯಹಂ । ಅಭಿಧಾಸ್ಯಾಮಿ । ಗೃಹಾಣ । ಸಮುತ್ಥಾಯ ।

೪. **ಪ್ರಯೋಗ ಬದಲಿಸಿರಿ** —

I. ಮಯಾ ಅಜಾದ್ವಯಂ ಗ್ರಹೀತವ್ಯಂ ।

II. ಅಜಾಭಿಃ ಗಾಃ ಗ್ರಹೀಷ್ಯಾಮಿ ।

೫. **ವಾಕ್ಯಗಳಲ್ಲಿ ಉಪಯೋಗಿಸಿರಿ:**—

ಉಪವಿಶ್ । ತಥಾ............ಯಥಾ ।

೬. **ಸಂಧಿ ಬಿಡಿಸಿರಿ:**—ಘಟಸ್ತಾವತ್ಸಕ್ತುಭಿರ್ವರ್ತತೇ। ತತಸ್ತಸ್ಮಿ ಜಾನುಚಲನಯೋಗ್ಯೇ । ಜನನ್ಯುತ್ಸಂಗಾ ............ ತೀರ್ಣ ।



## ೫. ಭರತಸ್ಯ ಭಂಧುಪ್ರೇಮ

**೧. ಕವಿ ಹಾಗೂ ಕಾವ್ಯ:**—ಈ ಪಾಠವನ್ನು **ಭಾಸನ ಪ್ರತಿಮಾ ನಾಟಕ**ದಿಂದ ಆಯ್ದುಕೊಳ್ಳಲಾಗಿದೆ. ಭಾಸನು ಪ್ರಾಚೀನ ಕವಿ. ಅಂತೆಯೇ ಬಾಣ, ಕಾಲಿದಾಸ ಮುಂತಾದವರು ತಮ್ಮ ಗ್ರಂಥಗಳಲ್ಲಿ ಇವನಿಗೆ ಪ್ರಣಾಮ ಸಲ್ಲಿಸಿದ್ದಾರೆ. ಆದರೆ ಇವನ ಗ್ರಂಥಗಳು ಮಾತ್ರ ೧೯೧೦ ರ ವರೆಗೆ ಉಪಲಬ್ಧವಿರಲಿಲ್ಲ. ಅವನ ೧೩ ನಾಟಕಗಳನ್ನು ಸಂಶೋಧಿಸಿ ಬೆಳಕಿಗೆ ತಂದ ಶ್ರೇಯಸ್ಸು ಮಹಾಮಹೋಪಾಧ್ಯಾಯ ಟಿ ಗಣಪತಿ ಶಾಸ್ತ್ರೀಯವರಿಗೆ ಸಲ್ಲುತ್ತದೆ. (ಕೆಲವೊಂದು ಪಂಡಿತರು ಇವು ಭಾಸಕೃತಿಗಳಲ್ಲವೆಂದು ಅಭಿಪ್ರಾಯ ಪಡುವರು).

ಭಾಸನಕಾಲ ಬಹಳ ವಾದಗ್ರಸ್ತವಾಗಿದೆ. ಕ್ರಿ.ಪೂ. ೫ನೇ ಶತಕದಿಂದ ಕ್ರಿ. ಶ. ೫ನೇ ಶತಕದವರೆಗೆ ಇವನ ಕಾಲವನ್ನು ಎಳೆದಾಡುತ್ತಾರೆ. ಆದರೆ ಬಹುಜನ ಸಮ್ಮತವಾದ **ಕ್ರಿ.ಶ. ೩ನೇ ಶತಕದಲ್ಲಿ** ಇವನು ಇದ್ದನೆಂದು ನಾವು ಇಟ್ಟುಕೊಳ್ಳಬಹುದು.

ಭಾಸನು ದಕ್ಷಿಣದೇಶದ ವೈಷ್ಣವ ಬ್ರಾಹ್ಮಣನು. ಅಚಲವಾದ ವಿಷ್ಣುದೀಕ್ಷೆಯುಳ್ಳವನು; ಅಪ್ರತಿಮ ವಿಷ್ಣುಭಕ್ತನು. ಸಕಲ ಶಾಸ್ತ್ರಗಳನ್ನು ಅಭ್ಯಾಸಮಾಡಿ, ‘ದಕ್ಷಿಣದ ಅರಸನ ಆಸ್ಥಾನದಲ್ಲಿ ಮನ್ನಣೆಪಡೆದು ಕಷ್ಟ ಕಾರ್ಪಣ್ಯವಿಲ್ಲದೆ ಸುಖಿಯಾಗಿ ಬಾಳಿದನು.

ಈತನು ಅನೇಕ ನಾಟಕಗಳನ್ನು ಬರೆದಿದ್ದಾನೆ. ಅವುಗಳಲ್ಲಿ ಈಗ ೧೩ ದೊರೆತಿವೆ. ಸ್ವಪ್ನವಾಸವದತ್ತ, ಪ್ರತಿಜ್ಞಾಯೌಗಂಧರಾಯಣ, ಅವಿಮಾರಕ, ಚಾರುದತ್ತ; ಅಭಿಷೇಕ; ಪ್ರತಿಮಾ; ಬಾಲಚರಿತ್ರೆ; ಪಂಚರಾತ್ರ, ಮಧ್ಯಮವ್ಯಾಯೋಗ, ದೂತವಾಕ್ಯ, ದೂತಘಟೋತ್ಕಚ, ಕರ್ಣಭಾರ ಮತ್ತು ಊರುಭಂಗ. ಇವುಗಳಲ್ಲಿ ಸ್ವಪ್ನವಾಸವದತ್ತ, ಪ್ರತಿಮಾ, ಚಾರುದತ್ತ, ಹಾಗೂ ಪಂಚರಾತ್ರಗಳು ಶ್ರೇಷ್ಠವಾದವು. ಈ ೧೩ ನಾಟಕಗಳಲ್ಲಿ ಕೆಲವು ಏಕಾಂಕ ನಾಟಕಗಳು ಇವೆ ಎಂಬುದು ಅಭಿಮಾನದ ವಿಷಯ.

ಭಾಸನು ಅತ್ಯಂತ ಶ್ರೇಷ್ಠ ನಾಟಕಕಾರನು; ‘ಸಿದ್ಧಿಹೊಂದಿದ ನಾಟಕ ಕಲೆಯ ಉಪಾಸಕನು. ಇವನ ನಾಟಕಗಳಲ್ಲಿ ವೈವಿಧ್ಯತೆ ಇದೆ. ನಾಟಕಗಳ ವಸ್ತು(*Plot*)ವನ್ನು ರಾಮಾಯಣ, ಮಹಾಭಾರತ, ಭಾಗವತ, ಬೃಹತ್ಕಥೆ ಮುಂತಾದವುಗಳಿಂದ ಆಯ್ದುಕೊಂಡರೂ ಯೋಗ್ಯ ಬದಲಾವಣೆ ಮಾಡಿ-

ಕೊಂಡಿದ್ದಾನೆ. ಹೊಸ ಸನ್ನಿವೇಶ ಕಲ್ಪಿಸಿದ್ದಾನೆ. ವಿವಿಧ ದೃಶ್ಯಗಳನ್ನು ಸುಂದರವಾಗಿ ಹೆಣೆದಿದ್ದಾನೆ. ಕಥೆಯ ಓಟಕ್ಕೆ ತಡೆಒಡ್ಡುವ ಸಮಾಸ ಜಟಿಲವಾದ ವರ್ಣನೆಗಳೂ ಪದ್ಯಗಳೂ ಕಡಿಮೆ. ಕಥೆ ಭರದಿಂದ ಸಾಗುತ್ತದೆ. ಪಾತ್ರಗಳು ಆಗ ಬಳಕೆಯಲ್ಲಿದ್ದ ಸುಲಭ ಸಂಸ್ಕೃತದಲ್ಲಿ ಮಾತನಾಡುತ್ತಾರೆ. ಅಂತೆಯೇ ಕೃತ್ರಿಮವಾದ ಉದ್ದುದ್ದ ಸಮಾಸಗಳು ಕಡಿಮೆ. ಪಾತ್ರಪರಿಪೋಷಣೆಯನ್ನು ಸರಿಯಾಗಿ ಮಾಡಿದ್ದಾನೆ. ದುರಂತ ದೃಶ್ಯಗಳನ್ನೂ ಕೂಡ ಜಾಣ್ಮೆಯಿಂದ ಚಿತ್ರಿಸಬಲ್ಲನು. ಹಾಸ್ಯರಸವನ್ನು ಚಿತ್ರಿಸುವದರಲ್ಲಿಯಂತೂ ಭಾಸನದು ಪಳಗಿದ ಕೈ, ಅಂತೆಯೇ ಇವನು ಸರಸ್ವತಿಯ 'ಹಾಸ' ಎಂಬ ಪ್ರಸಿದ್ಧನಾಗಿದ್ದಾನೆ. भासो हास:

## ೨. ಪ್ರತಿಮಾ ನಾಟಕದ ಸಾರಾಂಶ:--

ಶ್ರೀರಾಮನ ಪಟ್ಟಾಭಿಷೇಕಕ್ಕಾಗಿ ಸಿದ್ಧತೆ ಭರದಿಂದ ಸಾಗಿದೆ. ದಶರಥನು ಕೈಯಲ್ಲಿ ಕಿರೀಟವನ್ನು ಹಿಡಿದುಕೊಂಡು ನಿಂತಿದ್ದಾನೆ. ಇನ್ನು ಅಭಿಷೇಕ ಮಾಡುವ ಸಮಯ. ಆಗ ಕೈಕೇಯಿ ಬಂದು ಅಭಿಷೇಕಕ್ಕೆ ತಡೆ ಒಡ್ಡುತ್ತಾಳೆ. ಭರತನಿಗೆ ಪಟ್ಟ ದೊರೆಯಬೇಕೆಂದೂ, ರಾಮನು ೧೪ ವರ್ಷ ವನವಾಸಕ್ಕೆ ಹೋಗಬೇಕೆಂದೂ ಕೇಳಿಕೊಳ್ಳುತ್ತಾಳೆ. ತಂದೆಯ ವಚನವನ್ನು ಪರಿಪಾಲಿಸುವದಕ್ಕಾಗಿ ರಾಮನು ಅಡವಿಗೆ ಹೊರಡುವನು. ಅವನೊಂದಿಗೆ ಸೀತೆ ಹಾಗೂ ಲಕ್ಷ್ಮಣರೂ ಹೋಗುವರು. ಇತ್ತ ಪುತ್ರಶೋಕದಿಂದ ದಶರಥನು ಮರಣಹೊಂದುತ್ತಾನೆ. ಆಗ ರಾಜಧಾನಿಯಲ್ಲಿ ಭರತನು ಇದ್ದಿರಲಿಲ್ಲ. ಆದ್ದರಿಂದ ಅವನನ್ನು ಕರೆಕಳುಹಿಸುತ್ತಾರೆ. ಬರುವಾಗ ದಾರಿಯಲ್ಲಿ 'ಪ್ರತಿಮಾಗೃಹ'ವನ್ನು ಪ್ರವೇಶಿಸಿ ಅಲ್ಲಿದ್ದ ದಶರಥನ ಪ್ರತಿಮೆಯನ್ನು ಕಂಡು, ತಮ್ಮ ತಂದೆಯು ಮೃತಪಟ್ಟ ಅಂಶವನ್ನು ಊಹಿಸುತ್ತಾನೆ. ಅವನ ಊಹೆ ಸರಿಯೆಂಬ ಪೂಜಾರಿ ಹೇಳುತ್ತಾನೆ. ಆಗ ಭರತನು ಶೋಕದಿಂದ ಮೂರ್ಛೆ ಹೊಂದುತ್ತಾನೆ. ಮುಂದೆ ಎಚ್ಚತ್ತಬಳಿಕ ರಾಮನನ್ನು ಕರೆತರಲು ಅಡವಿಗೆ ಹೋಗುತ್ತಾನೆ. ಆದರೆ ರಾಮನು ಒಪ್ಪುವದಿಲ್ಲ. ೧೪ ವರ್ಷಗಳ ನಂತರ ಅಯೋಧ್ಯೆಗೆ ಬರುವದಾಗಿ ಹೇಳುತ್ತಾನೆ. ಈ ೧೪ ವರ್ಷಗಳ ವರೆಗೆ ರಾಮನ ಹೆಸರಿನಿಂದ ರಾಜ್ಯಭಾರ ಮಾಡುವದಾಗಿ ಹೇಳಿ, ಅವನ ಪಾದುಕೆಗಳೊಂದಿಗೆ ಭರತನು ಅಯೋಧ್ಯೆಗೆ ಬರುತ್ತಾನೆ. ಹಾಗೂ ರಾಮನ ಪಾದುಕೆಗಳನ್ನು ಸಿಂಹಾಸನದ ಮೇಲಿಟ್ಟು ರಾಜ್ಯಭಾರ ನಡೆಸುತ್ತಾನೆ. ಅತ್ತ ಅಡವಿಯಲ್ಲಿ ದಶರಥನ ಶ್ರಾದ್ಧದದಿನ. ಬ್ರಾಹ್ಮಣನ ವೇಷದಿಂದ ರಾವಣನು ಸೀತೆಯನ್ನು

ಅಪಹರಿಸಿ ಒಯ್ಯುತ್ತಾನೆ. ಅವಳನ್ನು ಹುಡುಕಲು ರಾಮನು ಸುಗ್ರೀವನ ಗೆಳೆತನ ಮಾಡುತ್ತಾನೆ ಆಗ ಅವನ ದೂತರು ಸೀತೆಯನ್ನು ಹುಡುಕಲಾರಂಭಿಸಿದರು. ಇತ್ತ ಸೀತಾಪಹರಣದ ವೃತ್ತಾಂತ ಕೇಳಿದ ಭರತನು ಸಿಟ್ಟಿಗೆದ್ದು ಕೈಕೇಯಿಯನ್ನು ಮೂದಲಿಸುತ್ತಾನೆ. 'ರಾಮನಿಗೆ ಒದಗಲಿದ್ದ ಹೆಚ್ಚಿನ ಅನರ್ಥ (ಮರಣ) ಕಡಿಮೆ ಮಾಡುವುದಕ್ಕಾಗಿ ಆ ರೀತಿ ೨ ವರಗಳನ್ನು ಕೇಳಿದೆನು.' ಎಂದು ಕೈಕೇಯಿ ಉತ್ತರ ಕೊಡುತ್ತಾಳೆ. ಬಳಿಕ ರಾಮನಿಗೆ ಸಹಾಯ ಮಾಡಲು ಭರತನು ಸೈನ್ಯ ತೆಗೆದುಕೊಂಡು ಮಂತ್ರಿ ಹಾಗೂ ತಾಯಂದಿರೊಂದಿಗೆ ಲಂಕೆಗೆ ಹೊರಡುತ್ತಾನೆ. ಇಷ್ಟರಲ್ಲಿಯೇ ರಾಮನು ರಾವಣನನ್ನು ಕೊಂದು ವಿಭೀಷಣನನ್ನು ಪಟ್ಟಕ್ಕೆ ಕೂಡಿಸಿ ಹಿಂತಿರುಗುತ್ತಾನೆ. ಜನಸ್ಥಾನದಲ್ಲಿ ಪರಸ್ಪರರ ಭೆಟ್ಟಿಯಾಗುತ್ತದೆ. ಆಶ್ರಮದಲ್ಲಿಯೇ ರಾಮನಿಗೆ ಪಟ್ಟಗಟ್ಟುತ್ತಾರೆ. ಬಳಿಕ ಈ ಪಟ್ಟಾಭಿಷೇಕ ಮಹೋತ್ಸವವನ್ನು ವಿಜೃಂಭಣೆಯಿಂದ ನಡೆಯಿಸುವದಕ್ಕಾಗಿ ಎಲ್ಲರೂ ಪುಷ್ಪಕ ವಿಮಾನದಲ್ಲಿ ಕುಳಿತುಕೊಂಡು ಅಯೋಧ್ಯೆಗೆ ತೆರಳುವರು.

ಹೀಗೆ, ರಘುಕುಲದ ಅರಸರಲ್ಲಿ ಮೃತರ ಶಿಲಾಪ್ರತಿಮೆಗಳನ್ನು ಪ್ರತಿಷ್ಠಿಸುತ್ತಿದ್ದ ಪ್ರತಿಮಾಗೃಹದಲ್ಲಿ ದಶರಥನ ಪ್ರತಿಮೆಯನ್ನು "ಕಂಡು ತಮ್ಮ ತಂದೆಯು ಮೃತಪಟ್ಟಿದ್ದ ಅಂಶವನ್ನು ಭರತನು ಅದರಿಂದ ಊಹಿಸಿದನೆಂಬ ಸನ್ನಿವೇಶವನ್ನು ಕಲ್ಪಿಸಿ ಭಾಸ ಮಹಾಕವಿಯು ಈ ರೂಪಕಕ್ಕೆ ಪ್ರತಿಮಾನಾಟಕವೆಂದು ಹೆಸರಿಟ್ಟಿದ್ದಾನೆ."

## ೩. ಕಥಾಸಾರಾಂಶ ಹಾಗೂ ಪಾಠದ ಸಾರಾಂಶ:—

ದಶರಥನ ಮರಣ ಹಾಗೂ ರಾಮನ ವನವಾಸ ಹೀಗೆ ಎರಡು ಅನರ್ಥಗಳಿಂದ ಭರತನು ಮೂರ್ಛೆ ಹೊಂದುತ್ತಾನೆ. ಮೂರ್ಛೆಯಿಂದ ಎಚ್ಚತ್ತ ಬಳಿಕ ರಾಮನನ್ನು ಅಯೋಧ್ಯೆಗೆ ಮರಳಿ ತರಲು ಅಡವಿಗೆ ಹೋಗುತ್ತಾನೆ. ಅರಣ್ಯಕ್ಕೆ ಹೋಗಿ ಶ್ರೀರಾಮನನ್ನು ಕಂಡು, ಅವನ ಪಾದುಕೆಗಳಿಗೆ ಪಟ್ಟಾಭಿಷೇಕ ಮಾಡಲು ಅನುಮತಿಯನ್ನು ಪಡೆದು ಪಾದುಕೆಗಳೊಡನೆ ಅಯೋಧ್ಯೆಗೆ ಹಿಂತಿರುಗುವನು.

೪. ಭಾಷಾಂತರ:—

೫. ಭರತನಿಗೆ ಅಣ್ಣನ ಮೇಲಿಪ್ಪ ಮಮತೆ

(ಭರತನ ಭ್ರಾತೃವಾತ್ಸಲ್ಯ)

**ಭರತ:**— (ರಾಮನ ಬಳಿಗೆ ಹೋಗಿ) ಪೂಜ್ಯನೇ, ನಮಸ್ಕಾರ ಮಾಡು ತ್ತೇನೆ. ನಾನು ಭರತನು.

**ರಾಮ:**— (ಸಂತೋಷದಿಂದ) ಇಕ್ಷ್ವಾಕುವಂಶದ ರಾಜಕುಮಾರನೇ, ಬಾ, ಬಾ. ನಿನಗೆ ಕಲ್ಯಾಣವಾಗಲಿ. ಆಯುಷ್ಮಂತನಾಗು.

ಬಾಗಿಲದ ಫಳಿಯಂತಿದ್ದ (ನಿನ್ನ) ಎದೆಯನ್ನು ಚಾಚು; ಹೆಚ್ಚಾಗಿ ಉದ ವಾದ ಎರಡೂ ಬಾಹುಗಳಿಂದ ನನ್ನನ್ನು ಆಲಿಂಗಿಸು; ಶರತ್ಕಾಲದ ಚಂದ್ರ- ನಂತಿದ್ದ ಈ (ನಿನ್ನ) ಮುಖವನ್ನು ಮೇಲಕ್ಕೆತ್ತು; ದುಃಖದಿಂದ ಒಳಲಿ ಬೆಂದಾದ (ಶಬ್ದಶಃ,ಸುಡಲ್ಪಟ್ಟ)(ನನ್ನ) ಈ ದೇಹಕ್ಕೆ ಸಂತೋಷವನ್ನುಂಟು ಮಾಡು.(೧.)

**ಭರತ:**— ಅನುಗ್ರಹಿಸಲ್ಪಟ್ಟೆನು.

**ಸುಮಂತ್ರ:**— (ಸಮೀಪಕ್ಕೆ ಹೋಗಿ) ಆಯುಷ್ಮಂತನಿಗೆ ಜಯ ವಾಗಲಿ.

**ರಾಮ:**— ಅಯ್ಯೋ, ತಂದೆಯೇ !

ಹಿಂದಕ್ಕೆ ದೇವದಾನವರ ಯುದ್ಧದಲ್ಲಿ (ದೇವತೆಗಳ) ಸಹಾಯಕ್ಕಾಗಿ, (ದೇವತೆಗಳ ವಿಮಾನಗಳನ್ನು) ಹೋಲುವ ವಿಮಾನಗಳಲ್ಲಿ ತನ್ನ ಸೈನ್ಯ ದೊಂದಿಗೆ ಆಕಾಶಕ್ಕೆ ಹೋಗಿ, 'ಅವನು ಅವನು' ಎಂದು ಅನೇಕಸಲ ಪ್ರಸಿದ್ಧ ನಾದ, (ಭೌತಿಕ) ದೇಹವನ್ನು ಬಿಟ್ಟ ಹಾಗೂ (ಈಗ) ಸ್ವರ್ಗದಲ್ಲಿರುವ ಆ ಸಿರಿವಂತ ದಶರಥರಾಜನು ಪ್ರೀತಿಯ ಗೆಳೆಯನಾದ ನೀನಿಲ್ಲದೆ, ಈಗ ಪೂರ್ವಜ ರಾಜರೊಡನೆ ಕೂಡಿಕೊಂಡು (ಎಂದರೆ ಅವರ ಸಹವಾಸದಿಂದ) ಸಂತೋಷ ಪಡುವನೋ ? (೨.)

**ಸುಮಂತ್ರ:**— (ದುಃಖದಿಂದ)

ರಾಜನ ಮರಣ, ನಿನ್ನ ವನವಾಸ, ಭರತನ ಶೋಕ, (ರಾಜ) ಮನೆ ತನದ ಅಸಹಾಯತೆ—(ಹೀಗೆ) ಬಹುಬಗೆಯ, ಸಹಿಸಲು ಕಠಿಣವಾದ (ಅನಿಷ್ಟಗಳನ್ನು) ಅನುಭವಿಸಿದ, ನನ್ನ ಆಯುಸ್ಸು ಲಾಭದಾಯಕವಾಗಿ ತೋರುವ ದೀರ್ಘಾಯುಷ್ಯಕ್ಕೆ ಅಪರಾಧಗೈದಿದೆ. ೩.

**ಸೀತಾ:**— ತಂದೆಯವರು ಅಳುವ ನನ್ನ ಪತಿಯನ್ನು (ಹೆಚ್ಚು) ಅಳಿಸುತ್ತಾರೆ.

ರಾಮ:— ಸೀತೆಯೇ, ಇಗೋ, ನಾನು ನನ್ನನ್ನು ಸಂತೈಸಿಗೊಳ್ಳುವೆ. ಕಂದಾ ಲಕ್ಷ್ಮಣಾ, ದಯಮಾಡಿ ನೀರು (ತಾ).

ಲಕ್ಷ್ಮಣ:— ಹಿರಿಯರು ಅಪ್ಪಣೆ ಕೊಟ್ಟಂತೆ (ಮಾಡುವೆನು).

ಭರತ:— ಪೂಜ್ಯನೇ, (ಇದು) ನಿಜವಾಗಿಯೂ ಯೋಗ್ಯವಲ್ಲ. (ವಯಸ್ಸಿನ) ಕ್ರಮಕ್ಕನುಸಾರವಾಗಿ ನಾನು ಸೇವೆ ಮಾಡುವೆ. ನಾನೇ ಹೋಗುವೆ. (ಕೊಡವನ್ನು ತೆಗೆದುಕೊಂಡು ಹೋಗಿ, [ಮತ್ತೆ] ಒಳಗೆ ಬಂದು) (ಇಗೋ,) ಇಲ್ಲಿ ನೀರಿದೆ.

ರಾಮ:— (ಆಚಮನ ಮಾಡಿ) ಸೀತೆಯೇ, ಲಕ್ಷ್ಮಣನಿಗೆ (ಈಗ) ಕೆಲಸ ತಪ್ಪಿತು.

ಸೀತಾ:— ಪತಿಯೇ, ತಾವು ಇವನಿಂದಲೂ ಸೇವೆ ಪಡೆಯಲರ್ಹರು.

ರಾಮ:— ಲಕ್ಷ್ಮಣನು ಇಲ್ಲಿ ಸೇವೆ ಮಾಡುವದೊಳಿತು. ಭರತನು ಅಲ್ಲಿದ್ದುಕೊಂಡು (ಎಂದರೆ ಅಯೋಧ್ಯೆಯಲ್ಲಿದ್ದು) ಸೇವೆ ಮಾಡಲಿ.

ಭರತ:— ಪೂಜ್ಯರು ಅನುಗ್ರಹಿಸಬೇಕು.

ಇಲ್ಲಿ ದೇಹದಿಂದ ಇರುವೆ; ಅಲ್ಲಿ ಕೆಲಸದಿಂದ ಇರುವೆ (ಎಂದರೆ ರಾಜ್ಯ ಪರಿಪಾಲನೆ ಮಾಡುವೆ; ಹೇಗೆಂದರೆ), ನಿಮ್ಮ ಹೆಸರೇ ರಾಜ್ಯವನ್ನು ರಕ್ಷಿಸುವದು. (ಶಬ್ದಶಃ, ನಿಮ್ಮ ಹೆಸರಿನಿಂದಲೇ ರಾಜ್ಯವು ರಕ್ಷಿಸಲ್ಪಡುವದು) (೪.)

ರಾಮ:— ಕಂದಾ, ಕೈಕೇಯೀಮಗನೇ, ಹಾಗೆ (ನುಡಿಯ) ಬೇಡ.

ಕಂದಾ, ತಂದೆಯ ಅಪ್ಪಣೆಯ ಮೇರೆಗೆ ನಾನು ಅಡವಿಗೆ ಬಂದಿದ್ದೇನೆ; ಗರ್ವದಿಂದಲ್ಲ; ಅಂಜಿಕೆಯಿಂದಲ್ಲ; ತಪ್ಪು ತಿಳುವಳಿಕೆಯಿಂದಲ್ಲ; ನಮ್ಮ ಮನೆತನಕ್ಕೆ ಸತ್ಯವೇ ಹಣವಾಗಿದೆ ಎಂದು ನಿನಗೆ ಹೇಳುತ್ತೇನೆ. (ಎಂದಮೇಲೆ) ನೀನು ಕೀಳು ಜನರ ದಾರಿ ಹೇಗೆ ಅನುಸರಿಸುವಿ ? (೫.)

ಸುಮಂತ್ರ:— ಈಗ, ಅಭಿಷೇಕದ ಸಲುವಾಗಿದ್ದ ನೀರು ಎಲ್ಲಿರಬೇಕು ?

• ರಾಮ:— ನನ್ನ ತಾಯಿ ಎಲ್ಲಿ (ಇರಬೇಕೆಂದು) ಹೇಳಿರುವಳೋ ಅಲ್ಲಿಯೇ ಇರಲಿ.

ಭರತ:— ಪೂಜ್ಯನು ಅನುಗ್ರಹಿಸಬೇಕು. ಅಯ್ಯೊ, ಗಾಯದಮೇಲೆ ಹೊಡೆಯುವದು ಸಾಕು.

ಸದ್ಗುಣಸಂಪನ್ನನೇ, ನಿನ್ನ ಉತ್ಪತ್ತಿಯ ಬೀಜವು ನನ್ನ ಉತ್ಪತ್ತಿಯ ಬೀಜವೂ ಆಗಿದೆ. ನಿನ್ನ ದಯಾಲು ಹಾಗೂ ಬುದ್ಧಿವಂತ. ತಂದೆ ನನ್ನ

ತಂದೆಯೂ ಆಗಿರುವನು. ಸತ್ಪುರುಷನೇ, ತಾಯಿಯ ದೋಷವು ಪುರುಷರಿಗೆ ದೋಷವಲ್ಲ; ವರ ಕೊಡುವವನೇ, ದುಃಖಕ್ಕೊಳಗಾದ ಭರತನನ್ನು ಸನ್ನುಸ್ಸಿತ ಇರುವಂತೆ ನೋಡು (೬.)

**ಸೀತಾ:—** ಪತಿಯೇ, ಭರತನು ಪಯ ಹುಟ್ಟುವಂತೆ ಮಾತನಾಡು ತ್ತಾನೆ. ತಾವು ಈಗ ಏನು ಆಲೋಚಿಸುತ್ತಿರುವಿರಿ ?

**ರಾಮ:—** ಸೀತೆಯೇ,

ಮಗನಲ್ಲಿದ್ದ ಶ್ರೇಷ್ಠ ಗುಣವನ್ನು ನೋಡದೆ ಇದ್ದ, (ಈಗ) ಸ್ವರ್ಗ ಲೋಕಕ್ಕೆ ಹೋದ ಆ ದಶರಥರಾಜನ ವಿಷಯವಾಗಿ ಯೋಚಿಸುತ್ತಿರುವೆ. ಗುಣಗಳ ಆಗರವಾದ ಇಂತಹ (ಮಗನನ್ನು) ಪಡೆದ ಶ್ರೇಷ್ಠ ಪುರುಷನ ಮೇಲೆಯೂ ಸಹ ಜಗತ್ತಿನಲ್ಲಿ ದೈವದ ಆಟ ನಡೆದರೆ (ಶಕ್ತಿ ಸಾಗಿದರೆ) (ದೈವಕ್ಕೆ) ಧಿಕ್ಕಾರವಿರಲಿ. (೭.)

ತಮ್ಮಾ, ಕೈಕೇಯಿ ಮಗನೇ, (ಶಬ್ದಶಃ ಕೈಕೇಯಿ ತಾಯಿಯಾಗಿ ಯುಳ್ಳವನೇ).

ನಾನು ನಿಜವಾಗಿಯೂ ನಿನ್ನಿಂದ ಸಂತೋಷಗೊಳಿಸಲ್ಪಟ್ಟಿದ್ದೇನೆ. ನೀನು ದೋಷರಹಿತನು. (ಆದ್ದರಿಂದ) ನಿನ್ನ ಮಾತಿಗೆ ವಶನಾಗಿರುವೆ; ನಿನ್ನ ಪ್ರಸಿದ್ಧ ಗುಣಗಳಿಂದ ಜಯಿಸಲ್ಪಟ್ಟಿದ್ದೇನೆ. ಆದರೆ ನೀನು ದಶರಥರಾಜನ ಮಾತನ್ನು ಸುಳ್ಳುಗೊಳಿಸುವದು ಯೋಗ್ಯವಲ್ಲ. ಹೇಗಾಗಿ, ನಿನ್ನಂತಹ (ಮಗನನ್ನು) ಪಡೆದ ನಿನ್ನ ತಂದೆ ಸುಳ್ಳು ಮಾತಾಡುವವನು ಆಗಬೇಕೋ?(೮)

**ಭರತ:** ‐ ರಾಜನೇ, ನಿನ್ನ ವ್ರತವು ಮುಗಿಯುವವರೆಗೆ ನಾನು ಇಲ್ಲಿಯೇ ನಿನ್ನ ಪಾದಸನ್ನಿಧಿಯಲ್ಲಿರುವೆ.

**ರಾಮ:—** ಹಾಗೆ (ನುಡಿಯ) ಬೇಡ, ದಶರಥರಾಜನು ತನ್ನ ಒಳ್ಳೆಯ ಕೆಲಸಗಳಿಂದ ಸಿದ್ಧಿ (ಮೋಕ್ಷ) ಪಡೆಯಲಿ. ನೀನು ನಿನ್ನ ರಾಜ್ಯವನ್ನು ರಕ್ಷಿ ಸದೆ ಇದ್ದರೆ, ನಾನು ಶಾಪ ಕೊಡುವೆ. (೯.)

**ಭರತ:—** ಅಯ್ಯೋ! (ನಾನು) ಉತ್ತರಕೊಡದಂತೆ ನೀನು ನುಡಿದೆ; ಆಗಲಿ; (ಆದರೆ) ಒಂದು ಕರಾರದಿಂದ (ನಿನ್ನ) ರಾಜ್ಯವನ್ನು ರಕ್ಷಿಸುವೆ.

**ರಾಮ:—** ತಮ್ಮಾ, ಯಾವ ಕರಾರವು ?

**ಭರತ:—** ನನ್ನ ಕೈಯಲ್ಲಿ ಒಪ್ಪಿಸಿದ ನಿನ್ನ ರಾಜ್ಯವನ್ನು ೧೪ ವರ್ಷಗಳ ನಂತರ ನೀನು ಮರಳಿ ಪಡೆಯಬೇಕೆಂದು ನಾನು ಅಪೇಕ್ಷಿಸುತ್ತೇನೆ.

**ರಾಮ:—** ಹಾಗೆ ಆಗಲಿ.

**ಭರತ:**— ಅಯ್ಯಾ, ಕೇಳಿದಿಯಾ ? ಅಮ್ಮಾ, ಕೇಳಿದಿಯಾ? ತಾತಾ, ಕೇಳಿದಿಯಾ ?

**ಎಲ್ಲರು:**— ನಾವೆಲ್ಲರೂ ಕೇಳಿದ್ದೇವೆ.

**ಭರತ:**— ಅಣ್ಣಾ, ಇನ್ನೊಂದು ವರ ಪಡೆಯಲಿಚ್ಛಿಸುತ್ತೇನೆ.

**ರಾಮ:**— ತಮ್ಮಾ, ಏನು ಇಚ್ಛಿಸುವೆ ? ನಾನು ಏನು ಕೊಡಲಿ, ಏನು ಮಾಡಲಿ ?

**ಭರತ:** – ತಲೆಬಾಗಿದ ನನಗೆ, ನಿನ್ನ ಪಾದಗಳಿಂದ ಉಪಯೋಗಿ-ಸಲ್ಪಟ್ಟ ಈ ಎರಡು ಪಾದುಕೆಗಳನ್ನು ಕೊಡು. ನೀನು ಕೈಕೊಂಡ ಕೆಲಸ ಮುಗಿಸುವವರೆಗೆ ನಾನು ಈ ಪಾದುಕೆಗಳಿಗೆ ವಿಧೇಯನಾಗಿರುವೆನು. (೧೦.)

**ರಾಮ:**— (ತನ್ನಲ್ಲಿ) ಎಲವೋ, ಬಹುಕಾಲದ ನಂತರ ನಾನು ಗಳಿಸಿದ ಅಲ್ಪ ಕೀರ್ತಿಯನ್ನು ಭರತನು ಬಹುಬೇಗನೆ ಇಂದು ಪಡೆದಿದ್ದಾನೆ (೧೧.)

**ಸೀತಾ:**— ಪತಿಯೇ, ಭರತನಿಗೆ ಅವನ ಮೊದಲನೆಯ ಬಿನ್ನಹವು ಕೊಡಲ್ಪಡುವವಾಗಿ ಆಶಿಸುವೆ.

**ರಾಮ:**— ಹಾಗೆ ಆಗಲಿ. ತಮ್ಮಾ ತೆಗೆದುಕೋ. (ಎರಡು ಪಾದುಕೆಗಳನ್ನು ಕೊಡುತ್ತಾನೆ).

**ಭರತ:**— ಅನುಗ್ರಹಿಸಲ್ಪಟ್ಟೆನು. (ತೆಗೆದುಕೊಂಡು), ಅಣ್ಣಾ, ಇಲ್ಲಿ ನಾನು (ಪಾದುಕೆಗಳ ಮೇಲೆ) ಅಭಿಷೇಕದ ನೀರನ್ನು ಧಾರೆ ಎರೆಯಲು ಇಚ್ಛಿಸುತ್ತೇನೆ.

**ರಾಮ:**— ತಾತಾ, ಭರತನಿಗೆ ಬೇಕಾದುದನ್ನೆಲ್ಲ ಮಾಡು.

**ಸುಮಂತ್ರ:**— ದೀರ್ಘಾಯುಗಳು ಅಪ್ಪಣೆಕೊಟ್ಟಂತೆ (ಮಾಡುವೆ).

**ಭರತ:**— (ತನ್ನಲ್ಲಿ) ಅಹಹಾ ! (ನಾನು ಈಗ) ಬಂಧುವರ್ಗಕ್ಕೆ ವಿಶ್ವಾಸಾರ್ಹನೂ, ಪ್ರಜೆಗಳಿಗೆ ಬೇಕಾದವನೂ, ಜನರಿಗೆ ನೋಡಲರ್ಹನೂ, ಸ್ವರ್ಗದಲ್ಲಿಯ ಆ ದಶರಥರಾಜನಿಗೆ ಸಮ್ಮತನಾದ, ಸದ್ವರ್ತನೆಯುಳ್ಳ ಮಗನೂ, ಗುಣವಂತರಾದ ಸಹೋದರರಿಗೆ ಹೆಚ್ಚಾಗಿ ಬೇಕಾದವನೂ, ಕೀರ್ತಿಗೆ ದೊಡ್ಡ ಆಶ್ರಯ ಸ್ಥಾನವೂ, ಸುಜನರ ಸಂಭಾಷಣೆಯಲ್ಲಿ ಮಾತಿಗೆ ವಿಷಯನೂ. ಅಪೇಕ್ಷಿತ ಪದಾರ್ಥಗಳನ್ನು ಪಡೆದವರಿಗೆ (ಸಹ) ಪ್ರಿಯನೂ ಆಗಿದ್ದೇನೆ. (೧೨.)

**ರಾಮ:**– ತಮ್ಮಾ, ಕೈಕೇಯೀಮಗನೇ, ರಾಜ್ಯವನ್ನು ನಿಜವಾಗಿಯೂ ಕ್ಷಣಕಾಲಕೂಡ ದುರ್ಲಕ್ಷಿಸುವಂತಿಲ್ಲ. ಆದುದರಿಂದ ವಿಜಯ ಪಡೆಯಲು ರಾಜಕುಮಾರನು ಹಿಂತಿರುಗಲಿ.

**ಸೀತಾ:**— ಹಮ್, ರಾಜಕುಮಾರ ಭರತನು ಇಂದೇ ಹೋಗುವನೋ?

**ರಾಮ:**— ಬಹಳ ಪ್ರೀತಿ ಸಾಕು. ರಾಜಕುಮಾರನು ವಿಜಯ ಪಡೆಯಲು ಇಂದೇ ಹಿಂತಿರುಗಲಿ.

**ಭರತ:**— ಅಣ್ಣಾ, ನಾನು ಇಂದೇ ಹೋಗುವೆನು.

(ನೀನುಬರುವ) ಇಚ್ಛೆಯುಳ್ಳ ಪಟ್ಟಣಿಗರು ನಿನ್ನನ್ನು ನೋಡುವ ಇಚ್ಛೆಯಿಂದ ಪಟ್ಟಣದಲ್ಲಿ ನಿಲ್ಲುವರು. ನಿನ್ನ ಅನುಗ್ರಹವನ್ನು (ಪಾದುಕೆಗಳನ್ನು) ತೋರಿಸಿ ಅವರನ್ನು ಸಂತೋಷಗೊಳಿಸುವೆ.

**ಸುಮಂತ್ರ:**— ಆಯುಷ್ಯವಂತನೇ, ನಾನು ಈಗ ಏನು ಮಾಡಬೇಕು?

**ರಾಮ:**— ಮಹಾರಾಜ ದಶರಥನಂತೆ ರಾಜಕುಮಾರ ಭರತನನ್ನು ಸಂರಕ್ಷಿಸಬೇಕು.

**ಸುಮಂತ್ರ:**— ನಾನು ಬದುಕಿದರೆ ಪ್ರಯತ್ನಮಾಡುವೆ.

**ರಾಮ:**— ತಮ್ಮಾ, ನನ್ನ ಎದುರಿಗೆ ರಥವನ್ನೇರು.

**ಭರತ:**— ಹಿರಿಯರು ಅಪ್ಪಣೆ ಕೊಟ್ಟಂತೆ ಮಾಡುವೆ.

**ರಾಮ:**— ಸೀತೆಯೇ, ಇತ್ತಕಡೆ (ಬಾ). ತಮ್ಮಾ ಲಕ್ಷ್ಮಣಾ, ಇತ್ತಕಡೆ (ಬಾ). ಆಶ್ರಮದ ಬಾಗಿಲದ ವರೆಗೆ ಭರತನನ್ನು ಹಿಂಬಾಲಿಸೋಣ. (ಎಲ್ಲರೂ ಹೊರಡುವರು.) —ಪ್ರತಿಮಾನಾಟಕದಲ್ಲಿ ನಾಲ್ಕನೆಯ ಅಂಕದಲ್ಲಿ.

**೪. ಟೀಕೆ–ಟಿಪ್ಪಣೆಗಳು:—**

**ಪುಟ ೧೨:**— ಬಂಧುಪ್ರೇಮ — ಬಂಧೌ ಪ್ರೇಮ (ಸ ತ. ಸ.) ಅಣ್ಣನಾದ ರಾಮನ ಮೇಲಿದ್ದ ಮಮತೆ. ಯಾರ ಮೇಲೆ ಪ್ರೀತಿಯಿದೆಯೋ ಆ ಶಬ್ದವನ್ನು ಸಪ್ತಮೀ ವಿಭಕ್ತಿಯಲ್ಲಿ ಉಪಯೋಗಿಸುವರು. ಉದಾ:— ಸ್ವಯೋಷಿತಿ ರತಿಃ। ದೇವೇ ಚಂದ್ರಗುಪ್ತೇ ಬದ್ಧಾನುರಕ್ತಾಃ ಪ್ರಕೃತಯಃ।

ಉಪಗಮ್ಯ —' ಉಪ + ಗಮ್ (೧.ಪ) ಧಾತುವಿನ ಲ್ಯಬಂತಾವ್ಯಯ. ಸಮೀಪಕ್ಕೆ ಹೋಗಿ, ಆರ್ಯ — ಅಯ್ಯಾ, ಅಣ್ಣಾ, ಪೂಜ್ಯನೇ. ಈ ಶಬ್ದವು ಋ (೧.ಪ) ಹೋಗು ಎಂಬ ಧಾತುವಿನಿಂದ ಬಂದಿದೆ. ತು. ಮಾ. ಅರ್ತುಂ। ಪ್ರಕೃತಂ, ಸದ್ಭಾ ಆಚರಿತುಂ ಯೋಗ್ಯಃ— ಈ ಶಬ್ದವು ಮೊದಲು ಹಿಂದೂ ಸಮಾಜದ ಬ್ರಾಹ್ಮಣ, ಕ್ಷತ್ರಿಯ, ವೈಶ್ಯರ ವಿಷಯವಾಗಿ ಮಾತ್ರ ಉಪಯೋ

ಗಿಸಲ್ಪಡುತ್ತಿತ್ತು. ಆದರೆ ಬರಬರುತ್ತ ಸಭ್ಯಪುರುಷ ಎಂಬ ಅರ್ಥವಲ್ಲಿ ಎಲ್ಲರಿಗೂ ಅನ್ವಯಿಸತೊಡಗಿತು. ಸಂಬೋಧನಾರ್ಥದಲ್ಲಿ ಅಯ್ಯಾ (*Sir*) ಎಂಬ ಅರ್ಥವಾಗುತ್ತದೆ ಈ ಶಬ್ದವನ್ನು ಅಂಕಿತನಾಮಕ್ಕೆ ಜೋಡಿಸಿದರೆ, ಶ್ರೀಮಾನ್ ಅಥವಾ ಇಂಗ್ಲೀಷಿನಲ್ಲಿ *Mr*. ಎಂಬ ಅರ್ಥವಾಗುತ್ತದೆ, ಉದಾ:- ಆರ್ಯಲಕ್ಷ್ಮಣಃ। ಆರ್ಯರೇವಾ। ಅಭಿವಾದಯೇ -- ಅಭಿ + ವದ್. (೧.ಉ) ಧಾತುವಿನ ಪ್ರಯೋಜಕರೂಪದ ಪ್ರ. ಪು ಏ. ವ. ನಮಸ್ಕರಿಸುತ್ತೇನೆ. ವದ್ ಧಾತು ಪರಸ್ಮೈಪದವಿದ್ದರೂ 'ಅಭಿ' ಉಪಸರ್ಗ ಜೋಡಿಸುವದರಿಂದ ಉಭಯಪದ ಆಗುತ್ತದೆ. ಸಹರ್ಷಮ್ — ಹರ್ಷೇಣ ಸಹಿತಂ. ಯಥಾ ಸ್ಯಾತ್ ತಥಾ (ಅವ್ಯಯೀ ಭಾವ ಸ.) ಸಂತೋಷದಿಂದ. ಏಹಿ – ಆ + ಇ (೨ ಪ) ಧಾತುವಿನ ಆಜ್ಞಾರ್ಥ. ದ್ವಿ. ಪು. ಏ ವ. ಇಕ್ಷ್ವಾಕುಕುಮಾರ— ಇಕ್ಷ್ವಾಕೋಃ ಕುಮಾರಃ (ಷ.ತ.ಸ) ತಸ್ಯ ಸಂಬೋಧನಮ್ ಇಕ್ಷ್ವಾಕು ರಾಜನು ಸೂರ್ಯ ವಂಶದ ಪ್ರಸಿದ್ಧ ರಾಜನು. ಇವನಿಂದಲೇ ಇಕ್ಷ್ವಾಕು ವಂಶ ಎಂದು ಆ ಮನೆತನಕ್ಕೆ ಹೆಸರು ಬಂದಿತು. ಮನುವಿನ ಶೀನಿನಿಂದ (ಕ್ಷವ) ಹುಟ್ಟಿದುದರಿಂದ ಅವನಿಗೆ ಇಕ್ಷ್ವಾಕು ಎಂಬುದಾಗಿ ಹೆಸರು ಬಂದಿತು. (ತು. ವಾ.) ಕ್ಷವತಸ್ತು ಮನೋರ್ಜಜ್ಞ ಇಕ್ಷ್ವಾಕುರ್ಘ್ರಾಣತಃಸುತಃ। ಸ್ವಸ್ತಿ — ಕಲ್ಯಾಣವಾಗಲಿ. ಈ ಶಬ್ದವು ಯಾವಾಗಲೂ ಚತುರ್ಥೀ ವಿಭಕ್ತಿಯೊಂದಿಗೆ ಉಪಯೋಗಿಸಲ್ಪಡುತ್ತದೆ. ಉದಾ: — ಸ್ವಸ್ತಿ ಭವತೇ।

**ಶ್ಲೋಕ ೧** ಅನ್ವಯ:—ಕವಾಟ ಪುಟ ಪ್ರಮಾಣಂ ವಕ್ಷಃ ಪ್ರಸಾರಯ। ಸುವಿಪುಲೇನ ಭುಜದ್ವಯೇನ ಮಾಂ ಆಲಿಂಗ। ಆನತಂ ಶರದಿಂದು ಕಲ್ಪಂ ಇದಂ ಆನನಂ ಉನ್ನಾಮಯ। ವ್ಯಸನದಗ್ಧಮ್ ಇದಂ ಶರೀರಂ ಪ್ರಹ್ಲಾದಯ।

ಹರವಾದ ಎದೆಯನ್ನು ಚಾಚಿ, ಎರಡೂ ಬಾಹುಗಳಿಂದ ತನ್ನನ್ನು ಆಲಿಂಗಿಸಬೇಕೆಂದೂ, ಬಾಗಿದ ಮುಖವನ್ನು ಮೇಲಕ್ಕೆತ್ತಿ ತನ್ನನ್ನು ಸಂತೋಷ ಗೊಳಿಸಬೇಕೆಂದೂ ರಾಮನು ಭರತನಿಗೆ ಹೇಳುವನು.

ವಕ್ಷಸ್ (ನ) ಎದೆ. ಕವಾಟಪುಟ ಪ್ರಮಾಣಮ್ — ಕವಾಟಸ್ಯ ಪುಟಂ (ಷ. ತ. ಸ.)। ತಸ್ಯ ಪ್ರಮಾಣಂ ಇವ ಪ್ರಮಾಣಂ ಯಸ್ಯ. ತತ್ (ಬ.ಸ.)। ಕವಾಟದ ಫಳಿಯಂತೆ ಅಳತೆಯುಳ್ಳ ಎಂದರೆ ಹರವಾದ *broad like the panel of a door*; ಕವಾಟ — ಬಾಗಿಲ, ಬಾಗಿಲದ ಫಳಿ. ಸುವಿಪುಲೇನ— ಬಹಳ ಹರವಾದ. ಉನ್ನಾಮಯ — ಎಬ್ಬಿಸು, ಎತ್ತು.

ಉತ್+ನಮ್ (೧.ಪ) ಧಾತುವಿನ ಪ್ರಯೋಜಕ ರೂಪದ ಆಜ್ಞಾರ್ಥ ದ್ವಿ.ಪ್ರ. ಏ.ವ. ಆನತ—ಬಾಗಿದ, ಶರದಿಂದುಕಲ್ಪಂ—ಶರದಃ (ಶರದಿವಾ) ಇಂದುಃ (ಷ. ಸ. ತ.)। ತೇನ ಸದೃಶಂ। 'ಕಲ್ಪ' ಈ ಪ್ರತ್ಯಯವನ್ನು ಸಾದೃಶ್ಯವಾಚಕ ಅರ್ಥದಲ್ಲಿ ನಾಮ, ಹಾಗೂ ಸರ್ವನಾಮಗಳಿಗೆ ಹಚ್ಚುತ್ತಾರೆ. ಪ್ರಹ್ಲಾದಯ—ಸಂತೋಷಗೊಳಿಸು, ಪ್ರ+ಹ್ಲಾದ್ (೧.ಆ) ಧಾತುವಿನ ಪ್ರಯೋಜಕ ರೂಪದ ಆಜ್ಞಾರ್ಥ ದ್ವಿ. ಪು. ಏ. ವ. ವ್ಯಸನವರ್ಗ್ಘಮ್—ಸಂಕಟಗಳಿಂದ, ಅಥವಾ ದುಃಖಗಳಿಂದ ಸುಟ್ಟ ಎಂದರೆ ಬಳಲಿ ಬೆಂಡಾದ. ವ್ಯಸನೈಃ ದಗ್ಧಃ (ತೃ. ತ.)। ತತ್ ।

ಉಪೇತ್ಯ — ಉಪ+ಇ (೨. ಪ) ಧಾತುವಿನ ಲ್ಯಬಂತಾವ್ಯಯ. ಸಮೀಪಕ್ಕೆ ಹೋಗಿ. ಆಯುಷ್ಮಾನ್—ಆಯುಷ್ಯವುಳ್ಳವನು. ದೀರ್ಘಾಯುಷ್ಯವುಳ್ಳವನು. ಆಯುಃ ಅಸ್ಯ ಅಸ್ತಿ ಇತಿ (ತದ್ಧಿತ)। ಹಾ—ಖೇದಸೂಚಕ ಅವ್ಯಯ. ಉದಾ:—ಹಾ ಹತೋಽಸ್ಮಿ ಮಂದಭಾಗ್ಯಃ। ತಾತ—ತಂದೆಯೇ, ಹಿರಿಯನೇ. ಸುಮಂತ್ರನು ದಶರಥರಾಜನ ಸಾರಥಿಯು ದಶರಥನ ಮರಣಾದ ನಂತರ ಸಹ ಅಯೋಧ್ಯೆಯಲ್ಲಿಯೇ ಇದ್ದುಕೊಂಡು ಭರತನ ಸೇವೆ ಮಾಡುತ್ತಿದ್ದನು. ಇವನು ವಯಸ್ಸಿನಲ್ಲಿ ಬಹಳ ಹಿರಿಯನಿದ್ದುದರಿಂದ ಎಲ್ಲರೂ ಇವನಿಗೆ 'ತಾತ' ಎಂದು ಕರೆಯುತ್ತಿದ್ದರು.

**ಶ್ಲೋಕ ೨. ಅನ್ವಯ**:—ಯಃ ಪೂರ್ವಂ ಸಾಸುರಾಣಾಂ ಸುರಾಣಾಂ ವಿಮರ್ದೇ ಅಭಿಸರಿ ಸಮಯೇ ಸಮಾನೈಃ ವಿಮಾನೈಃ, ಸ್ವ ಸೈನ್ಯೈಃ ಸಹ ಖಂ ಗತ್ವಾ, ಸಃ ಸಃ ಇತಿ ಬಹುಶಃ ವಿಖ್ಯಾತಃ, ಶ್ರೀಮಾನ್ ತ್ಯಕ್ತ ದೇಹಃ ಸಃ ನರೇಂದ್ರಃ ದಯಿತಂ ಭವಂತಂ ಅಪಿ ವಿನಾ, ಸ್ವರ್ಗಸ್ಥಃ ಸನ್, ಸಾಂಪ್ರತಂ, ಪಿತೃಭಿಃ ಸ್ವೈಃ ನರೇಂದ್ರೈಃ ರಮಯತಿ ಕಿಮ್ ।

ಪ್ರೀತಿಯ ಗೆಳೆಯನಾದ ಸುಮಂತ್ರನು ಬಳಿಯಲ್ಲಿ ಇಲ್ಲದೆ ಇದ್ದುದರಿಂದ ಮೃತನಾದ ದಶರಥರಾಜನಿಗೆ ಪೂರ್ವಜ ರಾಜರ ಸಹವಾಸದಲ್ಲಿ ಸಂತೋಷ ಉಂಟಾಗಲಿಕ್ಕಿಲ್ಲೆಂದು ರಾಮನ ಊಹೆ ಇದೆ.

ಈ ಶ್ಲೋಕದ ಮೊದಲಿನ ಎರಡು ಸಾಲುಗಳಲ್ಲಿ ದಶರಥನು ದೇವ ದಾನವ ಯುದ್ಧದಲ್ಲಿ ತೋರಿಸಿದ ಅತುಲ ಪರಾಕ್ರಮದ ವರ್ಣನೆ ಇದೆ. ದೇವತೆಗಳು ರಾಕ್ಷಸರೊಡನೆ ಯುದ್ಧ ಮಾಡುವಾಗ ದಶರಥರಾಜನು ದೇವತೆಗಳ ಪಕ್ಷವಹಿಸಿ, ವಿಮಾನದಲ್ಲಿ ಕುಳಿತುಕೊಂಡು ಸ್ವರ್ಗಕ್ಕೆ ಹೋದನು. ಆಗ ಯುದ್ಧದಲ್ಲಿ ಅವನು ತೋರಿಸಿದ ಪರಾಕ್ರಮಕ್ಕೆ ಅಚ್ಚರಿ

ಪಟ್ಟ ಅನೇಕರು ದೂರದಲ್ಲಿ ಕಾಣುವ ಅವನು ಪರಾಕ್ರಮಶಾಲಿಯಾದ ದಶರಥರಾಜನು, ಎಂದು ಅವನೆಡೆಗೆ ಬೊಟ್ಟು ಮಾಡಿ ತೋರಿಸುತ್ತಿದ್ದರು.

ಪೂರ್ವಂ -- ಮೊದಲು, ಪುರಾ. ಸಾಸುರಾಣಾಂ — ದೈತ್ಯರ. ಅಸುರೈಃ ಸಹ ಸಾಸುರಾಃ (ಸಹ. ಬ. ಸ.) । ತೇಷಾಂ । ಸುರಾಣಾಂ — ದೇವತೆಗಳ. ವಿಮರ್ದಃ—ಯುದ್ಧ. ಅಭಿಸರಿಸಮಯೆ — ದೇವತೆಗಳಿಗೆ ಸಹಾಯ ಮಾಡುವ ಸಮಯದಲ್ಲಿ. ಅಭಿಸರಿಃ — ಸಹಾಯ. ಈ ಶಬ್ದವು ಕ್ವಚಿತ್ತಾಗಿ ಉಪಯೋಗಿಸಲ್ಪಡುತ್ತದೆ. ಸಾಹಾಯ್ಯಮ್ ಈ ಶಬ್ದದ ಬಳಿಕೆಯೇ ಹೆಚ್ಚು. ಸಮಾನ್ಯೈಃ — ಸಮಾನವಾದ. ಎಂದರೆ ದೇವತೆಗಳ ವಿಮಾನಗಳಿಗೆ ಸಮಾನವಾದ. ವಿಮಾನಂ — ವಿಮಾನ. ಪಕ್ಷಿಯ ಹೋಲಿಕೆಯುಳ್ಳದ್ದು. ವೇಃ ಮಾನಂ ಯಸ್ಯ ತತ್ । ಖಮ್ — ಆಕಾಶ. ಸಃ ಸಃ — ಅವನು, ಅವನು. ಅತುಲಪರಾಕ್ರಮ ತೋರಿಸುತ್ತಿರುವ ಹಾಗೂ ದೂರದಲ್ಲಿ ಕಾಣುತ್ತಿರುವ ಅವನೇ ದಶರಥರಾಜನು. (ಯೋ ದೂರೇ ಯುಧ್ಯಮಾನಃ ದೃಶ್ಯತೇ ಸ ದಶರಥೋ ನಾಮ ರಾಜಾ। ಟೀಕಾ) ಬಹುಶಃ— ಅನೇಕಸಲ ಅಥವಾ ಅನೇಕರಿಂದ. ತ್ಯಕ್ತದೇಹ — ಪಂಚ ಭೌತಿಕ ದೇಹ ಬಿಟ್ಟ, ಮೃತನಾದ. ತ್ಯಕ್ತಂ ದೇಹಂಯೇನ ಸಃ (ಬ. ಸ.) । ದಯಿತ— ಪ್ರಿಯನಾದ. ವಿನಾ — ಇಲ್ಲದೆ. ನೀನಿಲ್ಲದೆ; ಈ ಶಬ್ದವು ದ್ವಿತೀಯಾ, ತೃತೀಯಾ, ಇಲ್ಲವೆ ಪಂಚಮೀ ವಿಭಕ್ತಿಯೊಡನೆ ಉಪಯೋಗಿಸಲ್ಪಡುತ್ತದೆ. ಉದಾ:—ಅಯೋಧ್ಯಾ ರಾಮಂ (ರಾಮೇಣ, ರಾಮಾತ್, ವಾ) ವಿನಾ ನ ಶೋಭತೇ । ನರಃ ಅನ್ನಂ (ಅನ್ನೇನ, ಅನ್ನಾತ್, ವಾ) ವಿನಾ ನ ಜೀವತಿ । ಸ್ವರ್ಗಸ್ಥಃ — ಸ್ವರ್ಗದಲ್ಲಿದ್ದವ. ಸ್ವರ್ಗೇ ತಿಷ್ಠತಿ ಇತಿ (ಉಪ. ತ). ಸಾಂಪ್ರತಂ — ಈಗ. ನರೇಂದ್ರಃ—ಇತ್ಯಾದಿ—ಅತ್ಯಂತ ಪ್ರೀತ್ಯಾಸ್ಪದನಾದ ನೀನಿಲ್ಲದೆ ಆ ದಶರಥರಾಜನು ತನ್ನ ಪೂರ್ವಜ ಅರಸರ ಸಹವಾಸದಲ್ಲಿ ನಲಿಯಬಹುದೋ ? ನಲಿಯಲಿಕ್ಕಿಲ್ಲ. ಸಂತೋಷಪಡಲಾರನು. ಎಂಬ ಅಭಿಪ್ರಾಯವಿದೆ. ಸ ಶೋಕಮ್ – ದುಃಖಪೂರ್ವಕವಾಗಿ. ಶೋಕೇನ ಸಹಿತಂ ಯಥಾ+ಸ್ಯಾತ್ ತಥಾ (ಅವ್ಯಯೀ ಭಾವ. ಸ.) ।

**ಶ್ಲೋ ೬. ಅನ್ವಯ:**– ನರಪತಿ ನಿಧನಂ, ಭವತ್‌ಪ್ರವಾಸಂ, ಭರತ ವಿಷಾದಂ, ಕುಲಸ್ಯ ಅನಾಥತಾಂ. – (ಏವಂ) ಬಹು ವಿಧಂ ದುಷ್ಟ

ಸಹ್ಯಂ ಅನುಭೂಯ ಮೇ ಆಯುಷಾ ಗುಣೇ ಇವ. (ಭೂತೇ ದೀರ್ಘಾಯುಷಿ) ಅಪರಾದ್ಧಂ।

ಬಹುಕಾಲಬಾಳಿದುದರಿಂದ ಅನೇಕ ಬಗೆಯ ಕಷ್ಟ ನಷ್ಟಗಳನ್ನು ಅನು-ಭವಿಸುವ ಪ್ರಸಂಗ ಬಂದಿತೆಂದೂ, ಅಂತೆಯೇ ತನ್ನ ದೀರ್ಘ ಆಯುಷ್ಯವು ಅಪರಾಧಗೈದಿದೆಯೆಂದೂ ಸುಮಂತ್ರನ ಅಭಿಪ್ರಾಯ.

ನರಪತಿ ನಿಧನಂ – ನರಪತೇಃ (ನರಾಣಾಂ ಪತಿಃ, ತಸ್ಯ) ನಿಧನಂ (ಷ. ತ.). ಅರಸನ ಮರಣ. ಭವತ್ತ್ವವಾಸಃ—ನಿನ್ನ ವನವಾಸ. ಪ್ರವಾಸಃ— ಮನೆಯಿಂದ ದೂರ ಇರುವದು. ಅರ್ಥಾತ್ ಇಲ್ಲಿ ವನವಾಸ. ವಿಷಾದಃ— ದುಃಖ. ರಾಮನು ಕಾಡಿಗೆ ಹೋದುದರಿಂದ ಭರತನು ಬಹಳ ದುಃಖಕ್ಕೀ ಡಾಗಿದ್ದನು. ಅನಾಥತಾ — ಮನೆತನದ ಯಜಮಾನನಾದ ದಶರಥನು ಸತ್ತಿದ್ದನು. ಅವನ ಸ್ಥಾನವಹಿಸಬೇಕಾದ ರಾಮನೂ ಕಾಡಿಗೆ ಹೋಗಿದ್ದನು. ಹೀಗಾಗಿ ರಾಜ ಮನೆತನವು ಅಸಹಾಯ ಸ್ಥಿತಿಯಲ್ಲಿತ್ತು. ದುಷ್ಪ್ರಸಹ್ಯಮ್ – ಸಹಿಸಲು ಕಠಿಣವಾದ. ದುಃಖೇನ ಪ್ರಸಹಿತುಂ ( ಪ್ರಸೋಢುಂ, ವಾ ) ಯೋಗ್ಯಮ್ । ಪ್ರಸಹ್ಯ — ಪ್ರ+ಸಹ್ (೧. ಆ) ಧಾತುವಿನ ಕರ್ಮಣಿ ವಿಧ್ಯರ್ಥ ಧಾ. ಸಾ. ವಿ. ಮೇ ಆಯುಷಾ ಗುಣೇ ಅಪರಾದ್ಧಮ್ — ನನ್ನ ಆಯುಷ್ಯವು ಲಾಭದಾಯಕವಾಗಿ ತೋರುವ ಬಹುಕಾಲದ ಬಾಳ್ವೆಗೆ ಅಪರಾಧ ಗೈದಿದೆ. ಆಯಷ್ಯದ ಲಾಭ ಎಂದರೆ ಬಹುಕಾಲ ಬಾಳುವದು. ಆದರೆ ಸುಮಂತ್ರನ ಆಯುಷ್ಯದಿಂದ ಲಾಭವಾಗಿರದೆ, ಲಾಭಕರವಾಗಿ ತೋರುವ ದೀರ್ಘಾಯುಷ್ಯದ ವಿಷಯವಾಗಿ ಅಪರಾಧ ಮಾಡಲ್ಪಟ್ಟಿದೆ. ಅರ್ಥಾತ್ ಅವನು ಬಹುಕಾಲ ಬದುಕಿದುದರಿಂದ ಉಪಯೋಗವಾಗದೆ ಅನೇಕ ಅನರ್ಥ ಗಳನ್ನು ನೋಡುವ ದುಷ್ಪ್ರಸಂಗ ಬಂದಿದೆ ಎಂದು ಸುಮಂತ್ರನ ವಿಚಾರ ಸರಣಿ ಇದೆ. ಅಪ+ರಾಧ್ (೪,೫. ಪ) ಧಾತು ಸಪ್ತಮೀ ವಿಭಕ್ತಿ ತೆಗೆದುಕೊಳ್ಳು ವದರಿಂದ ಗುಣೇ ಎಂದು ಪ್ರಯೋಗವಿದೆ. ಉದಾ:–ಕಸ್ಮಿನ್ನಪಿ ಪೂಜಾರ್ಹೇ ಅಪರಾದ್ಧಾ ಶಕುಂತಲಾ। ಕೆಲವೊಂದು ಸಲ ಷಷ್ಠೀ ವಿಭಕ್ತಿಯೂ ಬರುತ್ತದೆ. ಉದಾ: — ಅಪರಾದ್ಧೋಽಸ್ಮಿ ತತ್ರಭವತಃ ಕಣ್ವಸ್ಯ । ಆರ್ಯ ಪುತ್ರ – ಗಂಡ, ಪತಿ, ನಾಟಕದಲ್ಲಿ ಸ್ತ್ರೀಯರು ಗಂಡನನ್ನು ಆರ್ಯಪುತ್ರ ಎಂದು ಸಂಬೋಧಿಸು ವರು. ರೋದಯತಿ — ರುದ್ (೨. ಪ) ಧಾತುವಿನ ಪ್ರಯೋಜಕ ರೂಪದ ವ. ಕಾ. ಪ್ರ. ಏ. ವ. ಅಳಿಸುತ್ತಾನೆ. ಮೈಥಿಲೀ – ಮಿಥಿಲಾಯಾಃ ಇಯಮ್। ಮಿಥಿಲಾ ಪಟ್ಟಣದವಳು. ವಿದೇಹ ದೇಶದ ಅರಸನಾದ ಜನಕ

ರಾಜನ ರಾಜಧಾನಿ ಮಿಥಿಲಾ. ( ಈಗಿನ ನೇಪಾಳ ದೇಶದ ಜನಕಪುರ) ಪಟ್ಟಣವಾಗಿತ್ತು. ಆದ್ದರಿಂದ ಜನಕರಾಜನ ಮಗಳಿಗೆ ಮೈಥಿಲೀ ಎಂಬ ಹೆಸರು. ಪರ್ಯವಸ್ಥಾಪಯಾಮಿ – ಪರಿ+ಅವ+ಸ್ಥಾ (೧. ಪ) ಧಾತುವಿನ ಪ್ರಯೋಜಕ ರೂಪದ ವ. ಕಾ. ಪ್ರ. ಪು. ಏ. ವ. ಸಂತೈಸಿಕೊಳ್ಳುವೆ. ಆಪಃ – ನೀರು. ಅಪ್ (ನಿತ್ಯ ಬ. ವ.) (ಸ್ತ್ರೀ) ಶಬ್ದದ ಪ್ರ. ದ್ವಿ. ಬ. ವ. ಸ್ವಲ್ಪನೀರು ಎಂದರೆ ಸ್ವಲ್ಪನೀರು ತೆಗೆದುಕೊಂಡು ಬಾ ಎಂದು ಅಭಿಪ್ರಾಯ.

**ಪುಟ ೧೩** ಆಜ್ಞಾಪಯತಿ – ಆ+ಜ್ಞಾ (೯.ಪ) ಧಾತುವಿನ ಪ್ರಯೋಜಕ ರೂಪದ ವ. ಕಾ. ತೃ. ಪು. ಏ. ವ. ಅಪ್ಪಣೆಕೊಟ್ಟಂತೆ ಮಾಡುವೆನು. ನ್ಯಾಯ್ಯ – ನ್ಯಾಯ ಸಮ್ಮತವಾದ, ಯೋಗ್ಯ. ಶುಶ್ರೂಷಯಿಷ್ಯೇ–ಶುಶ್ರೂಷ್ (ಶ್ರು ೫. ಉ. ಧಾತುವಿನ ಇಚ್ಛಾರ್ಥಕ) ಧಾತುವಿನ ದ್ವಿ. ಭವಿಷ್ಯತ್ಕಾಲದ ಪ್ರ.ಪು.ಏ.ವ. ಶುಶ್ರೂಷ್ ಧಾತು ೧ನೇ ಗಣದ ಆತ್ಮನೇಪದದಲ್ಲಿ ಉಪಯೋಗಿಸಲ್ಪಡುತ್ತದೆ, ಆದರೆ ಇಲ್ಲಿ ೧ಂನೇ ಗಣದಂತೆ ಉಪಯೋಗಿಸಲ್ಪಟ್ಟದ್ದು ಪಾಣಿನಿಯ ವ್ಯಾಕರಣಕ್ಕೆ ವಿರುದ್ಧವಾಗಿದೆ. ಈ ರೀತಿ ಅನೇಕ ವ್ಯಾಕರಣ ದೋಷಗಳು ಭಾಸನ ಕೃತಿಗಳಲ್ಲಿ ಕಂಡು ಬರುತ್ತವೆ. ಆದರೂ ಸನ್ನಿವೇಶರಚನೆ, ಹಾಗೂ ಪಾತ್ರ ಪರಿಪೋಷಣೆಯಲ್ಲಿ ಇವನು ಹೆಚ್ಚಿನಜಾಣ್ಮೆ ತೋರಿಸಿದ್ದಾನೆ. ಅಂತೆಯೇ ಇವನು ಸಿದ್ಧಿ ಹೊಂದಿದ ನಾಟಕಕಾರನೆಂದು ಗಣ್ಯನಾಗಿದ್ದಾನೆ. ಕಲಶಃ–ಕೊಡ. ಗೃಹೀತ್ವಾ, ನಿಷ್ಕ್ರಮ್ಯ, ಪ್ರವಿಶ್ಯ—ಇವು ಅನುಕ್ರಮವಾಗಿ ಗ್ರಹ್,(೯.ಪ) ನಿಸ್+ಕ್ರಮ್ (೪.ಪ) ಹಾಗೂ ಪ್ರ+ವಿಶ್ (೬.ಪ)ಧಾತುಗಳ ಲ್ಯಬಂತಾವ್ಯಯಗಳು. ಆಚಮ್ಯ–ಆಚಮನ ಮಾಡಿ, ನೀರುಸೇವಿಸಿ, ಧಾರ್ಮಿಕ ವಿಧಿಯ ಆರಂಭ, ಮಧ್ಯ ಹಾಗೂ ಕೊನೆ ಮತ್ತು ಊಟದ ಆರಂಭ ಹಾಗೂ ಕೊನೆಗೆ ಅಂಗೈಯಿಂದ ನೀರು ಸೇವಿಸುವದಕ್ಕೆ 'ಆಚಮನ' ಎನ್ನುವರು. ವಿಶೀರ್ಯತೇ – ವಿ+ಶೄ (೯.ಪ) ಧಾತುವಿನ ಕರ್ಮಣಿ ವ. ಕಾ. ತೃ. ಪು. ಏ. ವ. ಲಕ್ಷ್ಮಣನ ಕೆಲಸವು ಕಡಿಮೆಯಾಯಿತೆಂದು ರಾಮನು ಚೇಷ್ಟೆಮಾಡುತ್ತಾನೆ. ಶುಶ್ರೂಷಯಿತವ್ಯಃ – ಶುಶ್ರೂಷ್ (ಶು ೫. ಉ. ಪ. ಧಾತುವಿನ ಇಚ್ಛಾರ್ಥಕ) ಧಾತುವಿನ ಕರ್ಮಣಿ ವಿಧ್ಯರ್ಥ ಧಾ.ಸಾ ವಿ. (ಪು) ಪ್ರ. ಏ, ವ. ನೀನು ಭರತನಿಂದಲೂ ಸೇವೆ ಹೊಂದಲು ಯೋಗ್ಯನು ಎಂಬು ಸೀತೆಯ ಮತ. ಶುಶ್ರೂಷಯತು – ಶುಶ್ರೂಷ್ (ಶ್ರು ಧಾತುವಿನ ಇಚ್ಛಾರ್ಥಕ ರೂಪ) ಧಾತುವಿನ ಆಜ್ಞಾರ್ಥ ತೃ.ಪು.ಏ.ವ. ೧ಂನೇ ಗಣದಲ್ಲಿ ಉಪ

ಯೋಗಿಸಲ್ಪಟ್ಟಿವ್ವು ಅಪವಾದಾತ್ಮಕವಿವೆ. ಸೇವೆ ಮಾಡಲಿ. ಪ್ರಸೀದತು— ಪ್ರ. ಸದ್ (೧.ಪ) ಧಾತುವಿನ ಆಜ್ಞಾರ್ಥ ತೃ. ಪ್ರ. ಪ. ವ.

**ಶ್ಲೋಕ ೪. ಅನ್ವಯ:**- ಇಹವೇಹೇಸಸ್ಥಾಸ್ಯಾಮಿ, ತತ್ರಕರ್ಮಣಾ ಸ್ಥಾಸ್ಯಾಮಿ। ಭವತಃ ನಾಮ್ನಾ ಏವರಾಜ್ಯಂ ಕೃತರಕ್ಷಂ, ಭವಿಷ್ಯತಿ.

ಅಡವಿಯಲ್ಲಿದ್ದುಕೊಂಡು ರಾಮನನ್ನು ಸೇವಿಸುವವನಾಗಿಯೂ, ಅಯೋಧ್ಯೆಯಲ್ಲಿಯ ರಾಜ್ಯಭಾರದ ಕೆಲಸವನ್ನು ಅಡವಿಯಲ್ಲಿದ್ದುಕೊಂಡೇ ನಿರ್ವಹಿಸುವವನಾಗಿಯೂ ಭರತನು ಹೇಳುತ್ತಾನೆ. ರಾಮನ ನಾಮೋಚ್ಚಾರಣೆಯಿಂದಲೇ ರಾಜ್ಯಭಾರ ಸರಿಯಾಗಿ ನಡೆಯುವದರಿಂದ ಹೀಗೆ ಮಾಡಲು ಸಾಧ್ಯವಿದೆ ಯೆಂದು ಭರತನ ಅಭಿಪ್ರಾಯ.

ಇಹ – ಇಲ್ಲಿ. ಅಡವಿಯಲ್ಲಿ. ತತ್ರ – ಅಲ್ಲಿ. ಅಯೋಧ್ಯೆಯಲ್ಲಿ. ಸ್ಥಾಸ್ಯಾಮಿ — ಸ್ಥಾ (೧. ಪ) ಧಾತುವಿನ ದ್ವಿ. ಭ. ಪ್ರ. ಪು. ಏ. ವ. ಕರ್ಮಣಾ – ಅಯೋಧ್ಯೆಯಲ್ಲಿಯ ಕೆಲಸವೆಂದರೆ ರಾಜ್ಯ ಪರಿಪಾಲನೆ. ಆ ಕೆಲಸವನ್ನು ಅಡವಿಯಲ್ಲಿದ್ದುಕೊಂಡು ಮಾಡಲು ಶಕ್ಯವಿದೆ. ಎಂದು ಭರತನ ಹೇಳಿಕೆ. ಇದಕ್ಕೆ ಕಾರಣವನ್ನು ೨ ನೇ ಸಾಲಿನಲ್ಲಿ ಕೊಡಲಾಗಿದೆ. ಕೃತರಕ್ಷಮ್ —ಕೃತಾ ರಕ್ಷಾ ಯಸ್ಯ ತತ್ (ಬ. ಸ.)। ರಾಜ್ಯದ ರಕ್ಷಣೆ ರಾಮನ ಹೆಸರನ್ನು ಉಚ್ಚರಿಸುವ ಮಾತ್ರದಿಂದ ಸಾಗುತ್ತದೆ. ಭವಿಷ್ಯತಿ — ಆಗುವದು. ಭೂ (೧.ಪ) ಧಾತುವಿನ ದ್ವಿ. ಭ. ಕಾ. ತೃ. ಪು. ಏ. ವ ಕೈಕೇಯೀ ಮಾತಃ — ಕೈಕೇಯೀ ಮಾತಾ ಯಸ್ಯ ಸಃ (ಬ. ಸ.)। ತಸ್ಯ ಸಂಬೋಧನಂ। ಕೈಕೇಯಿ ತಾಯಿಯಾಗಿ ಉಳ್ಳವನೇ, ಕೈಕೇಯಿಯ ಮಗನೇ, ಮಾ — ಆಜ್ಞಾರ್ಥದಲ್ಲಿ ಉಪಯೋಗಿಸಲ್ಪಡುವ ನಿಷೇಧಾತ್ಮಕ ಅವ್ಯಯ.

**ಶ್ಲೋಕ ೫. ಅನ್ವಯ:**—ವತ್ಸ, ಪಿತುಃ ನಿಯೋಗಾತ್ ಅಹಂ ವನಂ ಆಗತಃ,(ಕಿಂತು) ದರ್ಪಾತ್, ನ, ಭಯಾತ್ ನ ವಿಭ್ರಮಾತ್. ನ. (ಆಗತಃ)। ಕುಲಮ್ ನಃ ಸತ್ಯಧನಂ, (ಇತಿ) ತೇ ಬ್ರವೀಮಿ। ಭವಾನ್ ನೀಚಪಥೇ ಕಥಂ ಪ್ರವರ್ತತೇ।

ತಾನು ಅಡವಿಗೆ ಬಂದುದು ತಂದೆಯಆಜ್ಞೆಯನ್ನು ಪಾಲಿಸುದವಕ್ಕಾಗಿ ಯೆಂದೂ, ಸತ್ಯಪ್ರತಿಜ್ಞೆಗಾಗಿ ಸುಪ್ರಸಿದ್ಧವಾದ ಮನೆತನದಲ್ಲಿ ಹುಟ್ಟಿದ ಭರತನು ಕೀಳುದಾರಿ ಹಿಡಿಯಬಾರದೆಂದೂ ರಾಮನು ಹೇಳುತ್ತಾನೆ.

ನಿಯೋಗಃ— ಆಜ್ಞೆ, ಅಪ್ಪಣೆ. ದರ್ಪಃ - ಗರ್ವ. ವಿಭ್ರಮಃ— ಮೂರ್ಛೆ, ತಪ್ಪುತಿಳುವಳಿಕೆ. ಸತ್ಯಧನವಮ್— ಸತ್ಯಂ ಧನಂ ಯಸ್ಯ ತತ್ (ಬ. ಸ.) ಸತ್ಯ ನುಡಿಯುವದೇ ಹಣವೆಂದು ಭಾವಿಸಿದ ಮನೆತನ. ನೀಚ ಪಥೇ—ನೀಚಾನಾಂ ಪಂಥಾಃ ನೀಚಪಥಃ (ಷ. ತ. ಸ.)। ತಸ್ಮಿನ್ । ಅಥವಾ ನೀಚಃ ಪಂಥಾಃ ನೀಚ ಪಥಃ (ಕ. ಸ.) । ತಸ್ಮಿನ್ । ಪಥಿನ್ ಶಬ್ದವು ಸಮಾಸದ ಕೊನೆಗೆ ಪಥ ಎಂಬ ರೂಪ ತಾಳುತ್ತದೆ. ದುಷ್ಟರ ದಾರಿಯಲ್ಲಿ ಅಥವಾ ದುಷ್ಟದಾರಿಯಲ್ಲಿ. ಅಭಿಷೇಕೋದಕಂ—ಅಭಿಷೇಕಾಯ ಉದಕಂ (ಚ. ತ. ಸ.) ರಾಜ್ಯಾಭಿಷೇಕಕ್ಕಾಗಿ ಇದ್ದ ನೀರು. ರಾಮನ ರಾಜ್ಯಾಭಿಷೇಕದ ಎಲ್ಲ ಸಿದ್ಧತೆಯಾಗಿತ್ತು. ಪವಿತ್ರ ತೀರ್ಥಗಳಿಂದ ಪವಿತ್ರ ನೀರನ್ನೂ ಅಭಿಷೇಕ ಕ್ಕಾಗಿ ತರಿಸಲಾಗಿತ್ತು. ಆದರೆ ಮಧ್ಯದಲ್ಲಿ ವಿಘ್ನ ಬಂದುದರಿಂದ ಅದು ಅಲ್ಲಿಗೇ ನಿಂತಿತು. ಭರತನಿಗೂ ಪಟ್ಟಾಭಿಷೇಕವಾಗಿರಲಿಲ್ಲವಾದ್ದರಿಂದ ಆ ಪವಿತ್ರ ನೀರು ಹಾಗೆಯೇ ಉಳಿದಿತ್ತು. ಅದನ್ನು ಈಗ ಭರತನು ತನ್ನೊಡನೆ ತಂದಿದ್ದನು. ರಾಮನಿಗೆ ಆ ನೀರಿನಿಂದ ಧಾರೆಯೆರೆಯಬೇಕೆಂದು ಅವನ ಹಂಬಲ. ಅಲಮ್—ಸಾಕು. ಈ ಅರ್ಥದಲ್ಲಿ ಇದು ತೃತೀಯಾ ಇಲ್ಲವೆ ಲ್ಯಬಂತ ದೊಡನೆ ಉಪಯೋಗಿಸಲ್ಪಡುತ್ತದೆ. ಉದಾ:— ಅಲಂ ಅನೇನ ಅಸಂಗತೇನ ಪ್ರಲಾಪೇನ । ಅಲಂ ಅನ್ಯಥಾ ಗೃಹೀತ್ವಾ । ಆದರೆ ಇಲ್ಲಿ ತುಮಂತದೊಡನೆ ಉಪಯೋಗಿಸಿದ್ದು ಪಾಣಿನಿಯ ವ್ಯಾಕರಣಕ್ಕೆ ವಿರುದ್ಧವಿದೆ. ತುಮಂತದೊಡನೆ ಉಪಯೋಗಿಸಿದರೆ 'ಸಮರ್ಥವಿರು' ಎಂಬ ಅರ್ಥವಿರುತ್ತದೆ. ಉದಾ:— ರಾಮಃ ರಾವಣಂ ಹಂತುಂ ಅಲಮ್ । ವ್ರಣಃ, ವ್ರಣಂ—ಗಾಯ. ಕೈಕೇ- ಯಿಯು ಹೇಳಿದ ಸ್ಥಳದಲ್ಲಿ, ಎಂದರೆ ಭರತನ ತಲೆಯಮೇಲೆ, ಆ ಅಭಿಷೇಕೋ- ದಕವನ್ನು ಸಿಂಪಡಿಸಬೇಕೆಂದು ರಾಮನು ಸುಮಂತ್ರನಿಗೆ ಹೇಳಿದುದನ್ನು ಕೇಳಿದ ಭರತನು, ಹಾಗೆ ಮಾಡಬಾರದೆಂದೂ, ಈ ರೀತಿಯಾಗಿ ಗಾಯದ ಮೇಲೆ ಬರೆ ಎಳೆಯ ಬಾರದೆಂದೂ ಬಿನ್ನೈಸುವನು.

**ಶ್ಲೋಕ ೬. ಅನ್ವಯ:**— ಸುಗುಣ, ತ್ವತ್ಪ್ರಸೂತಿಃ ಮಮಾಪಿ. ಪ್ರಸೂತಿಃ; ಸಃ ನಿಭೃತ ಧೀಮಾನ್ ತೇ. ಪಿತಾ ಮೇ ಪಿತಾ ಖಲು; ಹೇ. ಸುಪುರುಷ, ಪುರುಷಾಣಾಂ ಮಾತೃದೋಷಃ ನ ದೋಷಃ॥ ಹೇ ವರದ, ಆರ್ತಂ ಭರತಂ ಯಥಾವತ್ ತಾವತ್ ಪಶ್ಯ ।

ರಾಮನಂತೆ ತಾನಾದರೂ ದಶರಥರಾಜನ ಮಗನಿರುವದಾಗಿಯೂ, ಪುರುಷರಿಗೆ ಮಾತೃದೋಷವು ತಟ್ಟುವದಿಲ್ಲೆಂದೂ, ಅದಕ್ಕಾಗಿ ತನ್ನನ್ನು ಯಥಾಸ್ಥಿತವಾಗಿ ನೋಡಬೇಕೆಂದೂ ಭರತನು ರಾಮನಿಗೆ ಹೇಳುತ್ತಾನೆ.

ಸುಗುಣ—ಶೋಭನಾಃ ಗುಣಾಃ ಯಸ್ಯ ಸಃ, ಸುಗುಣಃ (ಬ. ಸ.) ತಸ್ಯ ಸಂಬೋಧನಂ। ಒಳ್ಳೆಯ ಗುಣಗಳುಳ್ಳವ. ಪ್ರಸೂತಿಃ—ಉತ್ಪತ್ತಿಯ ಬೀಜ "*Source of birth*" ನಿಭೃತ—ದಯಾಳುವಾದ. *Kind.* ಧೀಮಾನ್—ಬುದ್ಧಿವಂತ. (ಧೀಃ ಅಸ್ಯ ಅಸ್ತಿ ಇತಿ, ತದ್ಧಿತ.) ಸುಪುರುಷ—ಸುಜನನೇ. ಶೋಭನಃ ಪುರುಷಃ ಸುಪುರುಷಃ (ಕ.ಸ.) ತಸ್ಯ ಸಂಭೋಧನಂ, ವರದ—ವರಕೊಡುವವನೇ, ಅನುಗ್ರಹ ಮಾಡುವವನೇ, ವರಂ ದದಾತಿ ಇತಿ ವರದಃ। ತಸ್ಯ ಸಂಬೋಧನಂ। ಯಥಾವತ್—ಸರಿಯಾಗಿ, ಇದ್ದಕ್ಕಿದ್ದಂತೆ ಕೈಕೇಯಿಯು ತಪ್ಪುಮಾಡಿದ್ದು ನಿಜ. ಆದರೆ ಅದಕ್ಕೆ ನಾನು ಎಳ್ಳಷ್ಟು ಹೊಣೆಗಾರನಿಲ್ಲವೆಂಬುದನ್ನು ಅನುಲಕ್ಷಿಸಿ, ನನ್ನಮೇಲೆ ದಯೆತೋರು. ತಾಯಿಯ ದೋಷವು ಪುರುಷರಿಗೆ ತಟ್ಟುವದಿಲ್ಲ. ನಾನಂತೂ ನಿರಪರಾಧಿ ಇರುವೆ. ಆದ್ದರಿಂದ ನಿರ್ದೋಷಿಯಾದ ನನ್ನನ್ನು ನಿಜವಾದ ವಸ್ತುಸ್ಥಿತಿಯಿದ್ದಂತೆ, ದಯಾದೃಷ್ಟಿಯಿಂದ ನೋಡಿರಿ. ಎಂದು ಭರತನ ಅಭಿಪ್ರಾಯವಿದೆ.

**ಪುಟ ೧೪.** ಅತಿಕರುಣಂ—ಬಹಳ ಕರುಣೆ ಹುಟ್ಟುವಂತೆ. ಅತಿಶಯೇನ ಕರುಣಾ ಯಥಾ ಸ್ಯಾತ್ ತಥಾ (ಅವ್ಯಯೀಭಾವ)। ಮತ್ರಂಯತೇ—ಮಾತನಾಡುತ್ತಾನೆ.

**ಶ್ಲೋಕ ೭. ಅನ್ವಯಃ—** ಯೇನ ಅಯಂ ಆತ್ಮಜ ವಿಶಿಷ್ಟ ಗುಣಃ (ಭರತಃ) ನ ದೃಷ್ಟಃ। ತಂ ಸುರಲೋಕಯಾತಂ ನೃಪತಿಂ ಚಿಂತಯಾಮಿ। ಯದಿ ಲೋಕೇ ಈ ದೃಗ್ವಿಧಂ ಗುಣನಿಧಿಂ ಸಮವಾಪ್ಯ (ಸ್ಥಿತೇಷು) ಪುರುಷೋತ್ತಮೇಷು ವಿಧೇಃ ಬಲಂ (ಅಸ್ತಿ, ತರ್ಹಿ) ಭೋ ಧಿಕ್ (ವಿಧಿಮ್)। ದೈವದಶಕ್ತಿ ದಶರಥನಂತಹ ಶ್ರೇಷ್ಠ ಪುರುಷರಮೇಲೆಯೂ ಸಾಗುತ್ತದೆಂದ ಮೇಲೆ, ಆ ದೈವಕ್ಕೆ ಧಿಕ್ಕಾರವಿರಲಿ. ಎಂದು ರಾಮನು ಉದ್ಗಾರ ತೆಗೆಯುತ್ತಾನೆ.

ಸುರಲೋಕಯಾತಂ—ಮೋಕ್ಷಕ್ಕೆ (ದೇವತೆಗಳಲೋಕ) ಹೋದ. ಸುರಾಣಾಂ ಲೋಕಃ ಸುರಲೋಕಃ (ಷ. ತ. ಸ.)। ತಂ ಯಾತಃ (ದ್ವಿ.ತ.) ತಂ। ಆತ್ಮಜವಿಶಿಷ್ಟಗುಣಃ—I. ಆತ್ಮಜಸ್ಯ ವಿಶಿಷ್ಟಃ ಗುಣಃ (ಷ.ತ.ಸ.),

ಭರತನಲ್ಲಿದ್ದ ಶ್ರೇಷ್ಠ ಗುಣ. II. ವಿಶಿಷ್ಟಃ ಗುಣಃ ಯಸ್ಯ ಸಃ ವಿಶಿಷ್ಟ ಗುಣಃ (ಬ. ಸ.) ಆತ್ಮಜೇಷು — (ಆತ್ಮನಃ ಜಾಯತೇ ಇತಿ ಆತ್ಮಜಃ, ಉಪ-ತ.) ವಿಶಿಷ್ಟ ಗುಣಃ (ಸ. ತ.) ಮಕ್ಕಳಲ್ಲಿ ಹೆಚ್ಚಾಗಿ ಸದ್ಗುಣಗಳುಳ್ಳ ಭರತನು. ಪುರುಷೋತ್ತಮೇಷು–ಪುರುಷೇಷು ಉತ್ತಮಾಃ ಪುರುಷೋತ್ತಮಾಃ (ಸ. ತ.) ತೇಷು। ಶ್ರೇಷ್ಠ ಪುರುಷರಲ್ಲಿ. ಧಿಕ್—ದೈವದ ಆಟವು ದಶರಥ! ನಂತಹ ಪುರುಷಶ್ರೇಷ್ಠರ ಮೇಲೆಯೂ ಸಾಗುವದೆಂದ ಮೇಲೆ ಆ ದೈವಕ್ಕೆ ಧಿಕ್ಕಾರವಿರಲಿ. ಧಿಕ್ ಶಬ್ದವು ಪ್ರಥಮಾ, ಸಂಬೋಧನ ಇಲ್ಲವೆ ದ್ವಿತೀಯಾ ವಿಭಕ್ತಿ ತೆಗೆದುಕೊಳ್ಳುತ್ತದೆ. ಉದಾ:— I. ಧಿಗಿಯಂ ದರಿದ್ರತಾ। II. ಧಿಕ್‌ಚೋರ. III. ಧಿಕ್ ಚೋರಾನ್ ।

**ಶ್ಲೋಕ ೮. ಅನ್ವಯ:**— ಯತ್, ಭವತಾ ಸತ್ಯಂ ಪರಿತೋಷಿತಃ ಅಸ್ಮಿ। ಭವಾನ್ ನಿಷ್ಕಲ್ಮಷಾತ್ಮಾ। ತ್ವದ್ವಾಕ್ಯಸ್ಯ ವಶಾನುಗಃ ಅಸ್ಮಿ। ಭವತಃ ಖ್ಯಾತೈಃ ಗುಣೈಃ ನಿರ್ಜಿತಃ। ಕಿಂತು ತ್ವಯಾ ನೃಪತೇಃ ಏತತ್ ವಚಃ ಅನೃತಂ ಕರ್ತುಂ ನ ಯುಕ್ತಮ್। ಕಿಂ ಚ, ಭವದ್ವಿಧಂ ಉತ್ಪಾದ್ಯ ತೇ ಪಿತಾ ಮಿಥ್ಯಾಭಿಧಾಯೀ ಭವತು (ಕಿಮ್)

'ನಾನು ನಿನಗೆ ಒಲಿದಿರುವದು ನಿಜ. ಆದರೆ ದಶರಥನ ಮಾತು ಸುಳ್ಳು ಮಾಡುವದು ನಿನಗೆ ಉಚಿತವಲ್ಲ. ಎಂದು ರಾಮನು ಭರತನಿಗೆ ಹೇಳುತ್ತಾನೆ.

ಪರಿತೋಷಿತ—ಸಂತೋಷಗೊಳಿಸಲ್ಪಟ್ಟ. ಪರಿ+ತುಷ್ (೪. ಪ) ಧಾತುವಿನ ಪ್ರಯೋಜಕ ರೂಪದ ಕರ್ಮಣಿ ಭೂ. ಧಾ. ವಿ. ನಿಷ್ಕಲ್ಮಷಾತ್ಮಾ—ನಿರ್ಗತಃ ಕಲ್ಮಷಃ ಯಸ್ಮಾತ್ ಸಃ ನಿಷ್ಕಲ್ಮಷಃ (ಬ. ಸ.) ನಿಷ್ಕಲ್ಮಷಃ ಆತ್ಮಾ ಯಸ್ಯ ಸಃ (ಬ. ಸ.)। ದೋಷ ರಹಿತನು. ವಶಾನುಗಃ ವಶಂ ಯಥಾ ಸ್ಯಾತ್ ತಥಾ ಅನುಗಚ್ಛತಿ ಇತಿ (ಉಪ.ತ.ಸ.) ವಿಧೇಯನು, ಅನುಸರಿಸುವವನು. ಅನೃತಂ—ಸುಳ್ಳು. (ನ. ಋತಂ ನ. ತ.)। ಕಿಂಚ— ಮತ್ತು. ಉತ್ಪಾದ್ಯ—ಉತ್+ಪದ್ (೪. ಅ) ಧಾತುವಿನ ಪ್ರಯೋಜಕದ ಲ್ಯಬಂತಾವ್ಯಯ, ಹುಟ್ಟಿಸಿ. ಭವದ್ವಿಧಂ—ನಿನ್ನಂತಹ. ಮಿಥ್ಯಾಭಿಧಾಯೀ— ಸುಳ್ಳು ಮಾತಾಡುವವ. ಮಿಥ್ಯಾ ಅಭಿ ದಧಾತಿ ಇತಿ। (ಉಪ. ತ.)।

**ಶ್ಲೋಕ ೯. ಅನ್ವಯ:**— ಹೇ ನೃಪ, ಯಾವತ್ ಭವನ್ನಿಯಮಾವಸಾನಂ ಭವೇತ್ ತಾವತ್ ಇಹ ತೇ ಪಾದಮೂಲೇ ಭವೇಯಮ್ ಏವಂ ಮಾ(ಬ್ರೂಹಿ) ನೃಪಃ ಸ್ವ ಸುಕೃತೈಃ ಸಿದ್ಧಿಂ ಅನುಯಾತು। ಸ್ವರಾಜ್ಯಂ ನ ಪರಿರಕ್ಷಸಿ ಚೇತ್ ಮೇ ಶಾಪಿತಃ॥

ಈ ಶ್ಲೋಕದ ಮೊದಲಿನ ೨ ಸಾಲುಗಳನ್ನು ಭರತನೂ, ಕೊನೆಯ ೨ ಸಾಲುಗಳನ್ನು ರಾಮನೂ ಹೇಳುವರು.

ಯಾವತ್........ತಾವತ್—ಎಲ್ಲಿಯವರೆಗೋ, ಅಲ್ಲಿಯವರೆಗೆ, ನಿನ್ನ ವ್ರತ ಮುಗಿಯುವವರೆಗೆ. ಉದಾ:—ಯಾವದಹಂ ಆಗಚ್ಛೇಯಂ ತಾವತ್ ಮಾಂ ಇಹೈವ ಪ್ರತೀಕ್ಷಸ್ವ । ಭವನ್ನಿಯಮಾವಸಾನಂ—ನಿಮ್ಮ ವ್ರತ ಮುಗಿಯುವವರೆಗೆ, ಭವತಃ ನಿಯಮಸ್ಯ ಅವಸಾನಂ । ಪಾದಮೂಲೇ ಭವೇ-ಯಮ್—ಪಾದ ಸನ್ನಿಧಿಯಲ್ಲಿರುವೆನು. ಮಾ—ಬೇಡ, ಹಾಗೆ ನುಡಿಯ ಬೇಡ. ಸಿದ್ಧಿಂ ಯಾತು—ಸಿದ್ಧಿ ಎಂದರೆ ಮೋಕ್ಷ ಪಡೆಯಲಿ. ಮೇ— ವಾಕ್ಯದ ಆರಂಭದಲ್ಲಿ ಸರ್ವನಾಮಗಳ ವೈಕಲ್ಪಿಕ ರೂಪಗಳು ಬರುವದಿಲ್ಲ. ಇಲ್ಲಿ ಬಂದುದು ವ್ಯಾಕರಣ ವಿರುದ್ಧವು, ನನ್ನಿಂದ ಎಂಬ ಅರ್ಥದಲ್ಲಿ ಉಪ-ಯೋಗಿಸಲ್ಪಟ್ಟಿದೆ. ಶಾಪಿತಃ—ಶಪ್ (೧. ಉ) ಧಾತುವಿನ ಪ್ರಯೋಜಕ ರೂಪದ ಕರ್ಮಣಿ ಭೂ. ಧಾ. ವಿ. (ಪು). ಪ್ರ. ಏ. ವ. ಶಪಿಸಲ್ಪಟ್ಟ.

ಹಂತ— ಇಲ್ಲಿ ದುಃಖ ಸೂಚಕಾರ್ಥದಲ್ಲಿ ಉಪಯೋಗಿಸಲ್ಪಟ್ಟಿದೆ. ಇದರ ವಿವಿಧ ಉಪಯೋಗಗಳು. I. ಹರ್ಷವಾಚಕ— ಹಂತ, ರಕ್ಷಿತಃ ಅಹಂ ತ್ವಯಾ । ಹಂತ ಪ್ರವೃತ್ತಂ ಸಂಗೀತಕಮ್. II. ದಯಾಸೂಚಕ:— ಪುತ್ರಕ ಹಂತ ತೇ ಧಾನಾಕಾಃ. III. ವಿಷಾದ—ಹಂತ ಧಿಕ್ ಮಾಂ ಅಧನ್ಯಮ್. IV. ವಾಕ್ಯಾರಂಭ—ಹಂತ ತೇ ಕಥಯಿಷ್ಯಾಮಿ [ ಹನ್ತ ಹರ್ಷೇಽನುಕಂಪಾಯಾಂ ವಾಕ್ಯಾರಂಭ ವಿಷಾದಯೋಃ । ]

ಅನುತ್ತರಮ್—ಅವಿದ್ಯಮಾನಂ ಉತ್ತರಂ ಯಸ್ಮಿನ್ ಕರ್ಮಣಿ ಯಥಾ ಸ್ಯಾತ್ ತಥಾ (ಅವ್ಯಯೀ ಭಾವಸಮಾಸ) । ಉತ್ತರವಿಲ್ಲದ ಹಾಗೆ ಎಂದರೆ ಉತ್ತರ ಕೊಡದಂತೆ. ಅಭಿಹಿತಮ್ —ನುಡಿಯಲ್ಪಟ್ಟಿತು. ಅಭಿ+ಧಾ (೩.ಉ) ಧಾತುವಿನ ಕರ್ಮಣಿ ಭೂ. ಧಾ. ಸಾ. ವಿ. (ನ.) ಪ್ರ. ಏ. ವ. ಸಮಯತಃ ಕರಾರದಿಂದ. ನಿಕ್ಷಿಪ್ತಮ್—ಒಪ್ಪಿಸಲ್ಪಟ್ಟ. ಪ್ರತಿ ಗ್ರಹೀತುಮ್ — ನೀನು ಸ್ವೀಕರಿಸಲು, ನೀನು ಸ್ವೀಕರಿಸಬೇಕೆಂದು.

**ಪುಟ ೧೫.** ಶ್ರುತಮ್—೧೪ ವರ್ಷಗಳ ನಂತರ ರಾಜ್ಯವನ್ನು ಮರಳಿ ಪಡೆಯುವದಾಗಿ ರಾಮನು ಹೇಳಿದ್ದನು. ಆ ಮಾತನ್ನು ಗಟ್ಟಿಮಾಡುವದಕ್ಕೋಸ್ಕರ ಭರತನು ಎಲ್ಲರಿಗೂ "ಕೇಳಿದಿರಾ?" ಎಂದು ಪ್ರಶ್ನೆ ಮಾಡುತ್ತಾನೆ.

ಹರ್ತುಂ— ಪಡೆಯಲು. ಹೃ (೧. ಪ) ಧಾತುವಿನ ತುಮಂತಾವ್ಯಯ. ಅನುಷ್ಠಾಸ್ಯಾಮಿ— ಅನು+ಸ್ಥಾ (೧. ಪ) ಧಾತುವಿನ ದ್ವಿ. ಭ. ಪ್ರ. ಪು. ಏ. ವ. ಮಾಡುವೆ.

**ಶ್ಲೋಕ ೧೦. ಅನ್ವಯ:**— ಪಾದೋಪಭುಕ್ತೇ ತವ ಏತೇ ಪಾದುಕೇ ಮೂರ್ಧ್ನಾ ಪ್ರಣತಾಯ ಮೇ ಪ್ರಯಚ್ಛ। ಯಾವತ್ ಭವಾನ್ ಕಾರ್ಯಸಿದ್ಧಿಂ ಏಷ್ಯತಿ ತಾವತ್ ಅನಯೋಃ ವಿಧೇಯಃ ಭವಿಷ್ಯಾಮಿ।

ರಾಮನು ಕೈಕೊಂಡ ಕೆಲಸ ಮುಗಿಸುವವರೆಗೆ ತಾನು ರಾಮನ ಪಾದುಕೆಗಳ ಸೇವಕನಾಗಿರುವದಾಗಿ ಭರತನು ಹೇಳುತ್ತಾನೆ.

ಪಾದೋಪಭುಕ್ತೇ—ಪಾದಾಭ್ಯಾಂ ಉಪಭುಕ್ತೇ। ಎರಡೂ ಕಾಲುಗಳಿಂದ ಉಪಯೋಗಿಸಿದ. ಪಾದುಕೆ—ಪಾದುಕೆಗಳು. ಕಟ್ಟಿಗೆಯ ಕಡಾವಿಗಳು. ಮೂರ್ಧ್ನಾ—ಮೂರ್ಧನ್ (ಪು) ಶಬ್ದದ ತೃ. ಏ. ವ. ತಲೆಯಿಂದ, ಶಿರಸಾಷ್ಟಾಂಗ ನಮಸ್ಕಾರ ಮಾಡಿದ. ಭವಾನ್—ಈ ಶಬ್ದದ ಅರ್ಥವು 'ನೀವು' ಎಂದು ಆದರೂ, ಇದಕ್ಕೆ ಸಂಬಂಧಪಟ್ಟ ಕ್ರಿಯಾಪದವು ತೃ.ಪು.ಏ.ವ.ದಲ್ಲಿರುತ್ತದೆ. ಉದಾ:—ಭವಾನ್ ಅತ್ರ ಆಗಚ್ಛತು. ಇದಂ ಆಸನಂ, ಚ ಅಲಂಕರೋತು। ಏಷ್ಯತಿ-ಇ (೨. ಪ) ಧಾತುವಿನ ದ್ವಿ. ಭ. ತೃ.ಪು.ಏ.ವ. ವಿಧೇಯಃ—ವಿಧೇಯನು *Obedient* ವಿ+ಧಾ (೩.ಉ) ಧಾತುವಿನ ಕರ್ಮಣಿ ವಿಧ್ಯರ್ಥ ಧಾ. ಸಾ. ವಿ. (ಪು) ಪ್ರ. ಏ. ವ.

ಸ್ವಗತಂ—ತನ್ನಲ್ಲಿ, ಸ್ವಗತ ಭಾಷಣವು ಪ್ರೇಕ್ಷಕ ವರ್ಗಕ್ಕೆ ಕೇಳಿಸಿದರೂ ರಂಗಭೂಮಿಯ ಮೇಲೆ ಇರುವ ಇತರ ಪಾತ್ರಗಳಿಗೆ ಕೇಳಿ ಬರುವದಿಲ್ಲೆಂಬ ಸಂಕೇತವಿದೆ.

**ಶ್ಲೋಕ ೧೧. ಅನ್ವಯ:**— ಮಯಾ ಸುಚಿರೇಣ ಅಪಿ ಕಾಲೇನ ಕಿಂಚಿತ್ ಯಶಃ ಅರ್ಜಿತಮ್। ಅದ್ಯ ಭರತೇನ ಅಚಿರೇಣ ಏವ ಕಾಲೇನ (ಮಹತ್ ಯಶಃ) ಸಂಚಿತಮ್।

ತಾನು ಬಹುಕಾಲದ ನಂತರ ತೀರ ಅಲ್ಪ ಕೀರ್ತಿ ಗಳಿಸಿರುವದಾಗಿಯೂ, ಭರತನು ಅಲ್ಪ ಕಾಲದಲ್ಲಿಯೇ ಬಹಳ ಕೀರ್ತಿ ಗಳಿಸಿದನೆಂದೂ ರಾಮನು ಉದ್ಗಾರ ತೆಗೆಯುತ್ತಾನೆ.

ಸುಚಿರೇಣ—ಅವ್ಯಯ. ಬಹುಕಾಲದ ನಂತರ. ಅಚಿರೇಣ—ಅವ್ಯಯ. ಬೇಗನೇ, ನನು...... ಭರತಾಯ—ಇದು ಕರ್ಮಣಿ ಪ್ರಯೋ

ಗವು. ಕರ್ತರಿ ಪ್ರಯೋಗವು ಮುಂದೆ ಕೊಟ್ಟಿದೆ ಅನುವಾದ. ನನು ಡೇಹಿ (ಯಚ್ಛ ವಾ) ಖಲು ಪ್ರಥಮಯಾಚನಾಂ [illegible] ಮೊದಲನೆಯ. ಪೂರ್ಣಲಾಭ ದೊರೆಯಬೇಕಾಗಿ ಮಾಡಿಕೊಂಡ ಮೊದಲ ನೆಯ ಬಿನ್ನಹ. ಅಥವಾ ಅಯೋಧ್ಯೆಗೆ ಬರಬೇಕೆಂದು ಭರತನು ಬಿನ್ನವಿಸಿಕೊಂಡನು. ಆದರೆ ರಾಮನು ಅದನ್ನು ಪ್ರಾಣ ಬಿಟ್ಟರೂ ಒಪ್ಪಲಿಲ್ಲ ಒಪ್ಪಿದನು. ಆದ್ದರಿಂದ ಪಾದುಕೆಗಳನ್ನು ಕೊಡಬೇಕೆಂದು ಕೇಳುವುದೇ ಭರತನ ಮೊದಲನೆಯ ಬಿನ್ನಹವಾಗಿದೆ.

ಅರ್ಪಯತಿ—ಋ (೧. ೩. ಪ.) ಧಾತುವಿನ ಪ್ರಯೋಗ

ತೃ. ಪು. ಏ. ವ. ಆವರ್ಜಯಿತುಮ್—ಆ+ವೃಜ್ (೧೦. ಉ.) ಧಾತುವಿನ ಪ್ರಯೋಜಕ ರೂಪದ ತುಮಂತಾವ್ಯಯ. ಸುರಿಯಲು, ಚೆಲ್ಲಲು 'To pour out' ಅಭಿಷೇಕೋದಕದಿಂದ ರಾಮನ ಪಾದುಕೆಗಳಿಗೆ ಅಭಿಷೇಕಮಾಡಲು ಭರತನು ಇಚ್ಛಿಸುತ್ತಾನೆ.

**ಶ್ಲೋಕ ೧೨. ಅನ್ವಯ:**— ಅಹಂ ಸ್ವಜನಸ್ಯ ಶ್ರದ್ಧೇಯಃ, ಪೌರ ರುಚಿತಃ, ಲೋಕಸ್ಯ ದೃಷ್ಟಿಕ್ಷಮಃ, ಸ್ವರ್ಗಸ್ಥಸ್ಯ ನರಾಧಿಪಸ್ಯ [illegible] ದಯಿತಃ ಸುತಃ ಗುಣಶಾಲಿನಾಂ ಭ್ರಾತೄಣಾಂ ಬಹುಮತಃ ಕೀರ್ತೇಃ ಮಹತ್ ಭಾಜನಂ, ಗುಣವತಾಂ ಸಂವಾದೇಷು ಕಥಾಶ್ರಯಃ, ಬಹು ಪ್ರಿಯಾಣಾಂ ಪ್ರಿಯಃ (ಚ. ಸಂವೃತ್ತಃ) । ರಾಮನ ಪಾದುಕೆಗಳನ್ನು ಪಡೆದುದರಿಂದ ತಾನು ಸಾಧಿಸಿದ ಸಂಗತಿಗಳನ್ನು ಭರತನು ಈ ಶ್ಲೋಕದಲ್ಲಿ ನಿರೂಪಿಸುತ್ತಾನೆ. ಇದು ಹೆಚ್ಚಾಗಿ ಆತ್ಮಪ್ರಶಂಸೆಯಿದೆ. ಆದ್ದರಿಂದಲೇ ಭರತನು ಪ್ರಕಾಶವಾಗಿ ಮಾತನಾಡದೆ, ತನ್ನಲ್ಲಿ ತಾನೇ ಆಲೋಚಿಸುತ್ತಾನೆ.

ಶ್ರದ್ಧೇಯ—ವಿಶ್ವಾಸಾರ್ಹ. ಶ್ರತ್+ಧಾ (೩. ಉ.) ಧಾತುವಿನ ಕರ್ಮಣೀ ವಿಧ್ಯರ್ಥ ಧಾ. ಸಾ. ವಿ. ಪೌರ ರುಚಿತಃ—ಪ್ರಜೆಗಳಿಗೆ ಬೇಕಾ ದವ. ಪೌರಾಣಾಂ ರುಚಿತಃ (ಷ. ತ. ಸ.) । ದೃಷ್ಟಿಕ್ಷಮಃ—ನೋಡಲರ್ಹ. ರಾಮನು ವನವಾಸಕ್ಕೆ ಹೋದುದರಿಂದ ಭರತನ ದರ್ಶನ ಪ್ರಜೆಗಳಿಗೆ ಅಷ್ಟೊಂದು ಸಂತೋಷಕರವಾಗಿರಲಿಲ್ಲ. ಆದರೆ ಅವನು ಈಗ ರಾಮನ ಪಾದುಕೆ ಗಳನ್ನು ತಂದು, ಅವುಗಳಿಗೆ ವಿಧೇಯನಾಗಿ ನಡೆಯಲಿರುವುದರಿಂದ ಪ್ರಜೆ ಗಳು ತನ್ನನ್ನು ತಿರಸ್ಕರಿಸದೆ, ಪ್ರೇಮ ದೃಷ್ಟಿಯಿಂದ ನೋಡಬಹುದೆಂದು ಭರತನಿಗೆ ವಿಶ್ವಾಸವಿದೆ. ದಯಿತ—ಸಮ್ಮತ, ಇಷ್ಟ, ಬೇಕಾದ. ದಯ್

(೧. ಆ) ಧಾತುವಿನ ಕರ್ಮಣಿ, ಭೂ. ಧಾ. ವಿ. ಶೀಲಾನ್ವಿತಃ — ಶೀಲೇನ ಅನ್ವಿತಃ (ತೃ. ತ.)। ಸತ್ ಶೀಲವುಳ್ಳ, ಸದ್ವರ್ತನೆಯುಳ್ಳ, ಭಾಜನಂ— ಆಶ್ರಯ. ಕಥಾಶ್ರಯಃ—ಮಾತಿನವಿಷಯ. ಮಾತನಾಡಲು ವಿಷಯ. '*Subject of topic*'-*Purohit N.B.* ಸಂವಾದಃ—ಸಂಭಾಷಣೆ, ಮಾತು. '*Conversation*' ಲಬ್ಧಪ್ರಿಯಾಣಾಂ—ಇಚ್ಛಿತ ವಸ್ತುಗಳನ್ನು ಪಡೆದವರ 'ಅವಾಪ್ತ ಕಾಮಾನಾಂ ಪ್ರೇಮ ವಿಷಯಃ' ಟೀಕಾ।

**ಪುಟ ೧೬.** ರಾಜ್ಯಂ ನಾಮ—ಇದೊಂದು ಮಾರ್ಮಿಕ ಸುಭಾಷಿತ ವಾಗಿದೆ. ರಾಜ್ಯವು ನಿಜವಾಗಿ ಮುಳ್ಳಿನ ಹಾಸಿಗೆ. ಅದನ್ನು ಕ್ಷಣಕಾಲಕೂಡ ಉಪೇಕ್ಷಿಸುವಂತಿಲ್ಲ. ಉಪೇಕ್ಷಣೀಯ—ದುರ್ಲಕ್ಷಿಸತಕ್ಕ. ಉಪ+ಈಕ್ಷ್ (೧. ಆ) ಧಾತುವಿನ ಕರ್ಮಣಿ ವಿಧ್ಯರ್ಥ ಧಾ. ಸಾ. ವಿ. ಪ್ರತಿನಿವರ್ತ ತಾಮ್—ಹಿಂತಿರುಗಬೇಕು. ಪ್ರತಿ+ನಿ+ವೃತ್ (೧. ಆ.) ಧಾತುವಿನ ಆಜ್ಞಾರ್ಥ. ತೃ.ಪು.ಏ.ವ. ಯಶಸ್ವಿಯಾಗಿ ರಾಜ್ಯಭಾರನಡಿಸಲು ಹಿಂತಿರುಗು.

**ಶ್ಲೋಕ ೧೬. ಅನ್ವಯಃ—** ಪುರೇ ಆಶಾವಂತಃ ಪೌರಾಃ ತ್ವದ್ದಿದೃಕ್ಷಯಾ ಸ್ಥಾಸ್ಯಂತಿ। ತ್ವತ್ಪ್ರಸಾದಸ್ಯ ದರ್ಶನಾತ್ ತೇಷಾಂ ಪ್ರೀತಿಂ ಕರಿಷ್ಯಾಮಿ।

ರಾಮನನ್ನು ನೋಡಬೇಕೆಂಬ ಕುತೂಹಲದಿಂದ ಮಾರ್ಗ ನಿರೀಕ್ಷಣೆ ಮಾಡುತ್ತಿದ್ದ, ಅಯೋಧ್ಯೆಯ ಪ್ರಜೆಗಳಿಗೆ, ರಾಮನ ಪಾದುಕೆಗಳನ್ನು ತೋರಿಸಿ, ಸಂತೋಷಗೊಳಿಸುವದಾಗಿ ಭರತನು ನುಡಿಯುತ್ತಾನೆ.

ಆಶಾ—ಇಚ್ಛೆ. ದಿದೃಕ್ಷಯಾ—ದೃಶ್ (೧. ಪ) ಧಾತುವಿನ ಇಚ್ಛಾರ್ಥಕ ನಾಮಪದವಾದ ದಿದೃಕ್ಷಾ ಶಬ್ದದ ತೃ. ಏ. ವ. ನೋಡಬೇಕೆಂಬ ಇಚ್ಛೆಯಿಂದ. ಸ್ಥಾಸ್ಯಂತಿ—ನಿಲ್ಲುವರು. ಸ್ಥಾ (೧. ಪ) ಧಾತುವಿನ ದ್ವಿ. ಭ. ತೃ. ಪು. ಬ. ವ.

ತ್ವತ್ಪ್ರಸಾದಸ್ಯ ದರ್ಶನಾತ್—ನಿನ್ನ ಅನುಗ್ರಹ ರೂಪವಾದ ಪಾದುಕೆಗಳನ್ನು ತೋರಿಸುವದರಿಂದ. ತವಪ್ರಸಾದಃ ತ್ವತ್ಪ್ರಸಾದಃ (ಷ. ತ. ಸ.)। ತಸ್ಯ ದರ್ಶನಂ (ಷ. ತ. ಸ.)। ತಸ್ಮಾತ್।

ಕರ್ತವ್ಯಮ್—ಮಾಡಲ್ಪಡತಕ್ಕದ್ದು, ಮಾಡಲರ್ಹವಾದುದು. ಕೃ. (೮.ಉ) ಧಾತುವಿನ ಕರ್ಮಣಿ ವಿಧ್ಯರ್ಥ ಧಾ. ಸಾ. ವಿ. (ನ) ಪ್ರ. ಏ. ವ. ಕಾರ್ಯ, ಕರಣೀಯ ಎಂಬವು ಇದರ ಇತರ ರೂಪಗಳು. ಧಾತುವಿಗೆ

ತವ್ಯ, ಯ, ಅನೀಯ. ಹಚ್ಚುವದರಿಂದ ಕರ್ಮಣಿ ವಿಧ್ಯರ್ಥ ಭೂ. ಸಾ. ವಿ. ಗಳು ಸಿದ್ಧವಾಗುತ್ತವೆ.

ಮಹಾರಾಜವತ್—ದಶರಥ ಮಹಾರಾಜನಂತೆ. ಮಹಾನ್ ರಾಜಾ. ಮಹಾರಾಜಃ (ಕ. ಸ.)। ದಶರಥನಿಗೆ ತೋರಿಸಿದ ಪ್ರೀತಿ, ಹಾಗೂ ಕೊಟ್ಟ ಸಲಹೆಯಂತೆ, ಎಂದರೆ ದಶರಥನೊಂದಿಗೆ ನಡೆದುಕೊಂಡಂತೆ ಇವನೊಂದಿಗೂ ನಡೆದುಕೋ ಎಂದು ರಾಮನು ಸುಮಂತ್ರನಿಗೆ ಹೇಳುತ್ತಾನೆ.

ಪರಿಪಾಲ್ಯತಾವರ್—ಪರಿ+ಪಾ (೨.ಉ) ಧಾ. ಪ್ರಯೋಜಕದ ಕರ್ಮಣಿ ಆಜ್ಞಾರ್ಥ ತೃ. ಪು. ಏ. ವ. ರಕ್ಷಿಸಲ್ಪಡಲಿ. ಪ್ರಯತಿಷ್ಯೇ–ಪ್ರಯತ್ನಿಸುವೆ. ಪ್ರ+ಯತ್ (೧.ಆ) ಧಾತುವಿನ ದ್ವಿ. ಭ. ಪ್ರ. ಪು. ಏ. ವ. ನಾನು ಜೀವಂತ ವಿದ್ದರೆ, ಪ್ರಯತ್ನ ಮಾಡುವೆ. ಆರುಹ್ಯತಾವರ್—ಏರಲ್ಪಡಲಿ. ಆ+ರುಹ್ (೧. ಪ) ಧಾತುವಿನ ಕರ್ಮಣಿ ಆಜ್ಞಾರ್ಥ ತೃತೀಯ ಪು. ಏ. ವ. ಇತಃ ತಾವತ್ – ಇತ್ತ ಕಡೆಗೆ, ಎಂದರೆ ಇತ್ತ ಕಡೆಗೆ ಬಾ. ಆಶ್ರಮಪದದ್ವಾರ ಮಾತ್ರಮ್ – ಆಶ್ರಮದ ಬಾಗಿಲ ವರೆಗೆ. ಗತ್ಯರ್ಥಕದ ಅರ್ಥವಿದ್ದುದರಿಂದ ದ್ವಿತೀಯಾ ವಿಭಕ್ತಿ ಬಂದಿದೆ. ಆಶ್ರಮಸ್ಯ ಪದಂ ಆಶ್ರಮಪದಮ್ (ಷ. ತ.) ತಸ್ಯದ್ವಾರಂ, ಆ......ರಂ. (ಷ. ತ.) ಆಶ್ರಯ ಪದದ್ವಾರಂ ಏವ. ಆಶ್ರಮ ಪದದ್ವಾರಮಾತ್ರಮ್ (ನಿತ್ಯ ಸಮಾಸ)। ಅನುಯಾತ್ರಮ್ — ಯಾತ್ರಾಂ ಅನುಸೃತ್ಯ (ಅವ್ಯಯೀಭಾವ ಸಮಾಸ) ದಾರಿಗುಂಟ ಅವನನ್ನು ಓಂಬಾಲಿಸುವಾ ಎಂದು ರಾಮನ ಹೇಳಿಕೆ.

ಭವಿಷ್ಯಾಮ ಎಂದು ಪಠ್ಯಪುಸ್ತಕದಲ್ಲಿ ತಪ್ಪಿ ಬಿದ್ದಿದೆ. ಅದು ಭವಿಷ್ಯಾಮಃ ಎಂಬುದಾಗಿ ಇರಬೇಕು. ಮೂಲ ಪುಸ್ತಕದಲ್ಲಿ ಹಾಗೆಯೇ ಇದೆ. ಆದ್ದರಿಂದ ವಿದ್ಯಾರ್ಥಿಗಳು ಅವಶ್ಯವಿದ್ದ ಬದಲಾವಣೆ ಮಾಡಿಕೊಳ್ಳಬೇಕು. ನಿಷ್ಕ್ರಾಂತಾಃ — ಹೊರಟರು. ನಿಸ್ + ಕ್ರಮ್ (೧.ಉ) ಧಾತುವಿನ ಕರ್ಮಣಿ ಭೂ. ಧಾ. ವಿ. (ಪು) ಪ್ರ. ಬ. ವ.

# EXERCISES.

## ೫. ಅಭ್ಯಾಸಕ್ಕಾಗಿ ಪ್ರಶ್ನೆಗಳು:—

೧. ಭಾಷಾಂತರಿಸಿರಿ:—(I) ರಾಮಃ (ಸಪರ್ಷವ್)....ನರೇಂದ್ರ। (ಪುಟ ೧೨. ಸಾಲು ೩–೧೫). (II) ಶ್ಲೋಕ ೭–೮–೧೨.

೨. **ವಿಗ್ರಹಿಸಿ ಸಮಾಸಗಳ ಹೆಸರು ಹೇಳಿರಿ**:—ಬಂಧುಪ್ರೇಮ ಸಹರ್ಷಮ್ । ಸ್ವರ್ಗಸ್ಥಃ । ಕೃತರಕ್ಷಮ್ । **ಕೈಕೇಯೀವಾತಃ । ನೀಚವಥೇ । ಅಭಿಷೇಕೋದಕಮ್।** ಅತಿ ಕರುಣಮ್। ನಿಷ್ಕಲ್ಮಷಾತ್ಮಾ। **ಅನುತ್ತರಮ್ ।**

೩. **ರೂಪ ಗುರುತಿಸಿರಿ :— ಏಹಿ । ಉನ್ಮಾದಯ ।** ಪ್ರಹ್ಲಾದಯ । ಅನುಭೂಯ । ರೋದಯತಿ । ವಿಶೀರ್ಯತೇ । **ಶುಶ್ರೂಷಯತು ।** ಮೂರ್ಧ್ನಾ । ದಿದೃಕ್ಷಯಾ । **ಪರಿಪಾಲ್ಯತಾಮ್ ।**

೪. **ಲಘು ಟಿಪ್ಪಣಿ ಬರೆಯಿರಿ**:— ಇಕ್ಷ್ವಾಕುಃ । ಮೈಥಿಲೀ । ಆರ್ಯಪುತ್ರ । ಆರ್ಯ । **ಆಚಮನಮ್ ।**

೫. **ವಾಕ್ಯಗಳಲ್ಲಿ ಉಪಯೋಗಿಸಿರಿ**:— ಸ್ವಸ್ತಿ । ವಿನಾ । ಅಪರಾಧ । ಅಲಮ್ । ಯಾವತ್........ತಾವತ್ । ಹನ್ತ । ಧಿಕ್ ।

೬. **ಪ್ರಯೋಗ ಬದಲಿಸಿರಿ**.—(I) ನನು ದೀಯತೇ ಖಲು ಪ್ರಥಮಯಾಚನಂ ಭರತಾಯ । (II) ಯದಿಷ್ಟಂ ಭರತಸ್ಯ ತತ್ಸರ್ವಂ ಕ್ರಿಯತಾಮ್ । (III) ತಂ ಚಿಂತಯಾಮಿ ಸ್ವಪತಿಂ ಸುರಲೋಕಯಾತಮ್ ।

೭. **ಸಂಧಿ ಬಿಡಿಸಿರಿ**:— ಯದಾಜ್ಞಾಪಯತ್ಯಾಯುಷ್ಮಾನ್ । ಸ್ವಸುಕೃತೈರನುಯಾತು ।

## ೬. ಗಣದಾಸಃ

೧ **ಕವಿ ಹಾಗೂ ಕಾವ್ಯ**:— ಈ ಪಾಠವನ್ನು ಕಾಲಿದಾಸನ ಮೊದಲನೆಯ ಕೃತಿಯಾದ ಮಾಲವಿಕಾಗ್ನಿಮಿತ್ರ ಎಂಬ ನಾಟಕದಿಂದ ಆಯ್ದುಕೊಳ್ಳಲಾಗಿದೆ.

ಕವಿಯು ತನ್ನ ಜೀವನ ಚರಿತ್ರೆಯ ಬಗ್ಗೆ ಎಲ್ಲಿಯೂ ಪ್ರಸ್ತಾಪಿಸಿಲ್ಲ. ಅಲ್ಲದೆ, ನಂಬಲರ್ಹವಾದ ಬೇರೆ ಆಧಾರಗಳೂ ಇಲ್ಲ. ಹೀಗಾಗಿ ಇವನ ವಿಷಯವಾಗಿ ಇದ್ದ ಎಲ್ಲ ಮಾಹಿತಿಯೂ ಊಹೆಯೇ. ಈತನ ಬಗ್ಗೆ ಇದ್ದ ಕಥೆಗಳಲ್ಲಿ ೩ ಮುಖ್ಯವಾಗಿವೆ.

(i) ಕಾಲಿದಾಸನು ಮೊದಲು ಕುರುಬನಾಗಿದ್ದು ಮುಂದೆ ಕಾಳೀದೇವಿಯ ಅನುಗ್ರಹದಿಂದ ಶ್ರೇಷ್ಠ ಕವಿಯಾದನು. ಕಾರಣ, ಈತನಿಗೆ ಕಾಲಿದಾಸನೆಂಬ ಹೆಸರು. (ii) ಕಾಲೀದಾಸನು ಧಾರಾನಗರದ ಅರಸನಾದ ಭೋಜರಾಜನ ಆಸ್ಥಾನದಲ್ಲಿದ್ದನು. ಆಸ್ಥಾನದಲ್ಲಿ ಸಮಸ್ಯೆಗಳನ್ನು ಪೂರ್ಣಗೊಳಿಸುವದು ಈತನ ಕಾರ್ಯವಾಗಿತ್ತು. (iii) ಕಾಲಿದಾಸನು ಉಜ್ಜಯಿನಿಯ ವಿಕ್ರಮಾದಿತ್ಯನ ನವರತ್ನಗಳಲ್ಲಿ ಒಬ್ಬನಾಗಿದ್ದನು. ಈ ಕಥೆಯೇ ನಿಜವೆಂದು ಅನ್ನಬಹುದು. ಈತನ ಕಾವ್ಯಗಳಲ್ಲಿ ಇವನಿಗೆ ಉಜ್ಜಯಿನಿಯ ಬಗ್ಗೆ ಇದ್ದ ಅಭಿಮಾನವು ಎದ್ದು ಕಾಣುತ್ತದೆ. ಉಜ್ಜಯಿನಿಯನ್ನು ವರ್ಣಿಸಲು ತೊಡಗಿದರೆ ಎಲ್ಲವನ್ನೂ ಮರೆತು ವರ್ಣಿಸತೊಡಗುವದು ಇದಕ್ಕೆ ಪುಷ್ಟಿಯನ್ನು ಕೊಡುತ್ತದೆ.

ಆಸ್ಥಾನದಲ್ಲಿದ್ದು ಗ್ರಂಥರಚನೆ ಮಾಡಿರುವದರಿಂದ ಲಕ್ಷ್ಮಿಯ ಅವಕೃಪೆಗೆ ಪಾತ್ರನಾದಂತೆ ತೋರುವದಿಲ್ಲ. ಈತನ ಕೃತಿಗಳನ್ನು ಪರಿಶೀಲಿಸುವವರಿಗೆ ನ್ಯಾಯ, ವ್ಯಾಕರಣ, ವೇದಾಂತ ಮುಂತಾದ ಶಾಸ್ತ್ರಗಳಲ್ಲಿ ಕವಿಗೆ ಇದ್ದ **ಆಳವಾದ ಜ್ಞಾನದ** ಪರಿಚಯವಾಗದೆ ಇರದು. ಅಲ್ಲದೆ, ಈತನ ಗ್ರಂಥಗಳು ಇವನ ಜೀವಮಾನದಲ್ಲಿಯೇ ಪ್ರಸಿದ್ಧಿಗೆ ಬಂದು ಲೋಕಪ್ರಿಯವಾದವೆಂದು ತೋರುತ್ತದೆ.

ಈತನು ಮಾಲವಿಕಾಗ್ನಿಮಿತ್ರ, ವಿಕ್ರಮೋರ್ವಶೀಯ, ಶಾಕುಂತಲ ಎಂಬ **೩ ನಾಟಕಗಳನ್ನೂ**, ಕುಮಾರಸಂಭವ, ರಘುವಂಶ ಎಂಬ **ಮಹಾಕಾವ್ಯಗಳನ್ನೂ**, ಋತುಸಂಹಾರ ಮೇಘದೂತಗಳೆಂಬ **ಖಂಡಕಾವ್ಯಗಳನ್ನೂ** ಬರೆದಿದ್ದಾನೆ. ಇವಲ್ಲದೆ, ಈತನು ಅಂಬಾಸ್ತವ, ಕಾಳೀಸ್ತವ ಮುಂತಾದ ಕೃತಿಗಳನ್ನೂ ರಚಿಸಿದ್ದಾನೆ ಎಂದು ಕೆಲವರ ಮತ.

ಕಾಲಿದಾಸನು ವಿಕ್ರಮಾದಿತ್ಯನ ಆಸ್ಥಾನದಲ್ಲಿದ್ದನೆಂಬುದು ಸರ್ವಜನಸಮ್ಮತವಾಗಿದೆ. ಆದರೆ ಯಾವ ವಿಕ್ರಮಾದಿತ್ಯನೆಂಬುದು ಮಾತ್ರ ಸಂಶಯಾಸ್ಪದವಾಗಿದೆ. ವಿಕ್ರಮ ಶಕೆಯ ಸ್ಥಾಪಕನಾದ ಕ್ರಿ. ಶ. ಪೂ. ೧ನೇ ಶತಕದ ವಿಕ್ರಮಾದಿತ್ಯನೋ, ೬ನೆಯ ಶತಕದ ವಿಕ್ರಮಾದಿತ್ಯನೆಂಬ ಬಿರುದುಳ್ಳ ಯಶೋಧರ್ಮನೋ, ಅಥವಾ ವಿಕ್ರಮಾದಿತ್ಯನೆಂಬ ಬಿರುದುಳ್ಳ ಗುಪ್ತವಂಶದ ೨ನೆಯ ಚಂದ್ರಗುಪ್ತನೋ (ಕ್ರಿ. ಶ. ೪ನೇ ಶತಕದ ಕೊನೆಯಭಾಗ ಅಥವಾ ೫ನೇ ಶತಕದ ಆದಿಭಾಗ) ಎಂಬುದು ಇನ್ನೂ ಅನಿಶ್ಚಿತವಾಗಿದೆ. ಆದರೂ

ಕೂಡ, ೬ನೇ ಶತಕದ ವಿಕ್ರಮಾದಿತ್ಯನೆಂಬ ಬಿರುದುಳ್ಳ ಯಶೋಧರ್ಮನ ಆಸ್ಥಾನದಲ್ಲಿ ಇವನಿದ್ದನೆಂದು ನಾವು ಇಟ್ಟುಕೊಳ್ಳಬಹುದು.

**ಕವಿ ಸಮ್ರಾಟ್, ಕವಿಕುಲಗುರು** ಎಂದು ಪ್ರಸಿದ್ಧನಾದ ಕಾಲಿದಾಸನ ಕೃತಿಗಳು ಶ್ರೇಷ್ಠವಾಗಿವೆ. ಪ್ರಪಂಚದ ಎಲ್ಲ ಪಂಡಿತರಿಂದಲೂ ಮೆಚ್ಚುಗೆ ಪಡೆದಿವೆ. ಎಲ್ಲ ಮುಖ್ಯ ಭಾಷೆಗಳಲ್ಲಿ ಭಾಷಾಂತರಿಸಲ್ಪಟ್ಟಿವೆ. ಬಾಣ, ಜಯದೇವ ಮುಂತಾದ ಕವಿಗಳು ತಮ್ಮ ತಮ್ಮ ಗ್ರಂಥಗಳಲ್ಲಿ ಇವನಿಗೆ ಪ್ರಣಾಮ ಸಲ್ಲಿಸಿದ್ದಾರೆ. ಜರ್ಮನ್ ಕವಿ ಗಟೆಯಂತೂ ಕಾಲಿದಾಸನ ಅಭಿಜ್ಞಾನ ಶಾಕುಂತಲವನ್ನು ಓದಿ ಆನಂದಾತಿರೇಕದಿಂದ ಕುಣಿದನಂತೆ! ಹೀಗಾಗಿ ಕವಿ–ಸಮ್ರಾಟ್, ಕವಿಕುಲಗುರು ಎಂಬ ಬಿರುದುಗಳು ಇವನಿಗೆ ಅನ್ವರ್ಥಕವಾಗಿವೆ.

ಕಾಲಿದಾಸನದು **ವೈದರ್ಭೀಶೈಲಿ.** ಉದ್ದ ಸಮಾಸಗಳೂ, ಜಟಿಲವಾದ ವಾಕ್ಯಸರಣಿಯೂ ಇವನಲ್ಲಿ ಇಲ್ಲ. ವಾಚ್ಯಾರ್ಥಕ್ಕಿಂತ ವ್ಯಂಗ್ಯಾರ್ಥಕ್ಕೆ ಪ್ರಾಧಾನ್ಯ ಕೊಟ್ಟಿದ್ದಾನೆ. ಅಲ್ಲದೆ ಸುಲಭವಾದ ಸರಸ ಸುಂದರ ಭಾಷೆಯನ್ನೇ ಬಳಸಿದ್ದಾನೆ. ಸುಭಾಷಿತಗಳಂತಿರುವ ಚಿಕ್ಕವೂ ಚೊಕ್ಕಟವೂ ಅರ್ಥಗರ್ಭಿತವೂ ಆದ ಮಾತುಗಳು ಕಾಲಿದಾಸನ ಕೃತಿಗಳಲ್ಲಿ ಬಹಳ. ಸುಂದರವಾದ ಉಪಮೆಗಳು ಕಾಲಿದಾಸನ ವೈಶಿಷ್ಟ್ಯವಾಗಿದೆ. ಆದಕ್ಕಾಗಿಯೇ 'ಉಪಮಾ ಕಾಲಿದಾಸಸ್ಯ' ಎಂಬ ಉಕ್ತಿ ಅರ್ಥಪೂರ್ಣವಾಗಿವೆ. ವೈವಿಧ್ಯಪೂರ್ಣವಾದ ಸುಂದರ ವರ್ಣನೆಗಳೂ, ಕಥಾಸಂವಿಧಾನದ ಚಮತ್ಕೃತಿಯೂ, ಜೀವಕಳೆಯಿಂದ ತುಂಬಿದ ಪಾತ್ರಗಳೂ ಕಾಲಿದಾಸನ ಇತರ ವೈಶಿಷ್ಟ್ಯಗಳು. ಈತನ ಕಲ್ಪನೆಗಳುಕೂಡ ಉಚ್ಚವೂ ಉದಾತ್ತವೂ ಆಗಿವೆ. ಶೃಂಗಾರರಸವನ್ನಂತೂ ಇವನು ಬಹು ಮನೋಹರವಾಗಿ ಚಿತ್ರಿಸುತ್ತಾನೆ. ಒಟ್ಟಿನಮೇಲೆ ಕಾಲಿದಾಸನು ಕವಿಕುಲಕ್ಕೆ ತಿಲಕಪ್ರಾಯನಾಗಿದ್ದಾನೆ.

**'ಮಾಲವಿಕಾಗ್ನಿಮಿತ್ರ' ನಾಟಕದ ಕಥೆ:—** ವಿದಿಶಾಪಟ್ಟಣದ ಅರಸನಾದ ಅಗ್ನಿಮಿತ್ರನು ತನ್ನ ಅಂತಃಪುರದಲ್ಲಿ, ಮಾಲವಿಕೆಯನ್ನು ಚಿತ್ರದಲ್ಲಿ ಕಂಡು ಅವಳ ರೂಪದಿಂದ ಮುಗ್ಧನಾದನು. ಅಂದಿನಿಂದ ಅವನ ಮನಸ್ಸಿನಲ್ಲಿ ಅವಳನ್ನು ಕಣ್ಣಾರೆ ಕಾಣಬೇಕೆಂಬ ಉತ್ಕಟ ಇಚ್ಛೆ ಹುಟ್ಟಿತು. ಅದಕ್ಕಾಗಿ ವಿದೂಷಕನು ಒಂದು ತಂತ್ರ ಯೋಚಿಸಿದನು. ಆಸ್ಥಾನದ ನಾಟ್ಯಾಚಾರ್ಯರಾದ ಗಣದಾಸ ಹರದತ್ತರಿಗೆ ತಮ್ಮ ತಮ್ಮ ಕಲಾಕೌಶಲ್ಯಗಳಲ್ಲಿ ಜಗಳ ಹುಟ್ಟುವಂತೆ ಮಾಡಿದನು. ಅವರ ಕಲಹ ತೀರಿಸಲು, ಅವರವರ ಶಿಷ್ಯೆಯರ ಅಭಿನಯದ ಪ್ರದರ್ಶನವನ್ನು ರಾಜನೆದುರು ನೋಡಬೇಕೆಂದು ಗೊತ್ತಾ

ಯಿತು. ಈ ಯೋಜನೆಯಿಂದ ರಾಜನಿಗೆ ಮಾಲವಿಕೆಯ ದರ್ಶನವಾಯಿತು. 'ರಾಜನಿಗೆ ಕಣ್ಣು ತಣಿಸಿತು; ಮನಸ್ಸೂ ಕಲುಕಿತು.' ಆದರೆ ಮಾಲವಿಕಾಗ್ನಿ ಮಿತ್ರರ ಸಂಗಮಕ್ಕೆ ಆತನ ರಾಣಿಯರು ಹಲವು ತೊಂದರೆಗಳನ್ನು ಒಡ್ಡು ತ್ತಾರೆ. ಆದರೆ ವಿದೂಷಕನ ತಂತ್ರದಿಂದ ಇದು ಒಂದು ಸಲ ಸಾಧ್ಯವಾಗು ತ್ತದೆ. ರಾಜೋದ್ಯಾನದಲ್ಲಿಯ ಅಶೋಕವೃಕ್ಷಕ್ಕೆ ದೋಹದ ಮಾಡಿ ಅದಕ್ಕೆ ಹೂಬಿಡಿಸುವ ಸುಸಂಧಿ ಒಮ್ಮೆ ಮಾಲವಿಕೆಗೆ ಒದಗುತ್ತದೆ. ಈ ಸಮಯ ನಿರೀಕ್ಷಿಸುತ್ತಿದ್ದ ರಾಜನು ಮುಂದೆ ಬಂದು 'ಮಾಲವಿಕೆಯೊಡನೆ ಉಪಚಾರದ ಮಾತುಗಳನ್ನಾಡುತ್ತಿರುವಾಗ, ಆ ಉದ್ಯಾನಕ್ಕೆ ಉಯ್ಯಾಲೆಯ ಆಟಕ್ಕೆಂದು ಬಂದು ಇದೆಲ್ಲವನ್ನೂ ಹೊಂಚಿನೋಡುತ್ತಿದ್ದ ಇರಾವತಿ (ರಾಣಿ) ಶಿವಪೂಜೆಯಲ್ಲಿ ಕರಡಿಬಿಟ್ಟಂತೆ ಕಾಣಿಸಿಕೊಳ್ಳುವಳು; ಎಲ್ಲವೂ ವಿರಸವಾಗು ವದು. ರಾಣಿಯ, ಅಪ್ಪಣೆಯಂತೆ ಮಾಲವಿಕೆಗೂ ಅವಳ ಸಖಿಗೂ ಬಂಧನ ವಾಗುವದು' ಆದರೆ 'ವಿದೂಷಕನು ಮಾಲವಿಕೆಯನ್ನು ಬಿಡಿಸಿ ರಾಜನಿಗೂ ಅವಳಿಗೂ ಸರಸಸಲ್ಲಾಪಗಳಿಗೆ ಅವಕಾಶಮಾಡಿಕೊಟ್ಟು ತಾನು ಕೋಟಡಿಯ ಬಾಗಿಲಲ್ಲಿ ಕಾವಲು ಕೂತುಕೊಂಡಿದ್ದು ಹಾಗೇ ನಿದ್ದೆ ಹೋಗಿಬಿಡುವನು.' ಆದರೆ ಈ ಸಂಗತಿ ಇರಾವತಿಗೆ ಗೊತ್ತಾದುದರಿಂದ ಮತ್ತೆ ವಿಘ್ನ ಒದಗುತ್ತದೆ. ನಾಟಕಕಾರನು ಕೌಶಲ್ಯದಿಂದ ರಾಜನನ್ನು, ಸಂಕಟದಿಂದ ಪಾರುಮಾಡುವನು. ಮಾಲವಿಕೆ 'ದೋಹದ' ಮಾಡಿದ ಅಶೋಕವೃಕ್ಷವು ಹೂಬಿಟ್ಟ ಸಂಗತಿ ತಿಳಿದುಬರುತ್ತದೆ. ಇದಕ್ಕಾಗಿ, ಧರಿಣೀದೇವಿಯು (ರಾಣಿ) ಮಾಲವಿಕೆಯ ಅಭಿಲಾಷೆಯನ್ನು ಪೂರ್ತಿಮಾಡುವ ಆಶಾಕಿರಣ ತಲೆದೋರುತ್ತದೆ. ಇತ್ತ, ಸೇನಾಪತಿಯಾದ ವೀರಸೇನನು ತಾನು ವಿದರ್ಭದೇಶದ ದೊರೆಯನ್ನು ಸೋಲಿಸಿ ಬಂದ ವಿಜಯ ವೃತ್ತಾಂತವನ್ನು ಹೇಳಿಕಳಿಸಿ, ಕಾಣಿಕೆಯೆಂದು ಕೆಲವು ವಸ್ತುಗಳನ್ನು ಅರ್ಪಿಸುತ್ತಾನೆ. ಆಗ ಕಾಣಿಕೆಯೆಂದು ಬಂದ ವಿದರ್ಭದೇಶದ ದಾಸಿಯರು ಮಾಲವಿಕೆಯನ್ನು ಗುರುತಿಸುತ್ತಾರೆ ಹಾಗೂ ಅವರ ಮುಖದಿಂದ ಅವಳು ರಾಜಕನ್ಯೆ ಎಂಬ ಸಂಗತಿ ಗೊತ್ತಾಗುತ್ತದೆ. ಇದೇ ಸಮಯಕ್ಕೆ ಅಗ್ನಿಮಿತ್ರನ ತಂದೆಯಾದ ಪುಷ್ಪಮಿತ್ರನ ಯಜ್ಞದ ಕುದುರೆ ವಿಜಯಶಾಲಿಯಾಗಿ ಹಿಂತಿರುಗಿತೆಂದೂ, ಆತನು ಯಜ್ಞದೀಕ್ಷಾ ಬದ್ಧನಾಗಿದ್ದು ಎಲ್ಲರನ್ನೂ ಎದುರು ನೋಡುತ್ತಿರುವನೆಂದೂ ವರ್ತಮಾನ ಬರುವದು. ಧರಣೀದೇವಿಗೆ ಸಂತೋಷವಾಗಿ, ಆ ಸಂತೋಷಕ್ಕೆ ಸೂಚಕವಾಗಿಯೂ, ಮಾಲವಿಕೆಗೆ ತಾನು ಕೊಟ್ಟ ಮಾತನ್ನು ನಡಸಿಕೊಡಲೂ, ಅವಳನ್ನು (ಮಾಲ ವಿಕೆ) ಅಗ್ನಿಮಿತ್ರನಿಗೆ ಒಪ್ಪಿಸಿ ಕೊಡುವಳು.

## ೨. ಕಥಾಸಂದರ್ಭ ಹಾಗೂ ಪಾಠದ ಸಾರಾಂಶ:—

ನಾಂದೀಶ್ಲೋಕ ಪಠಿಸಲ್ಪಟ್ಟನಂತರ, ಸೂತ್ರಧಾರನು ರಂಗಭೂಮಿಯನ್ನು ಪ್ರವೇಶಿಸಿ, ಕಾಲಿದಾಸ ಕವಿಯಿಂದ ರಚಿಸಲ್ಪಟ್ಟ ಮಾಲವಿಕಾಗ್ನಿಮಿತ್ರ ನಾಟಕವನ್ನು, ಗುಣೈಕಪಕ್ಷಪಾತಿಯಾದ ಪಂಡಿತರ ಆಜ್ಞೆಯ ಮೇರೆಗೆ ಅಂದು ಅಭಿನಯಿಸಿ ತೋರಿಸುವದಿದೆ ಎಂದು ಹೇಳುವನು. ಬಳಿಕ ಬಕುಲಾವಲಿಕಾ ಮತ್ತು ಕೌಮುದಿಕಾ ಎಂಬ ಇಬ್ಬರು ದಾಸಿಯರು ರಂಗಭೂಮಿಯ ಮೇಲೆ ಬರುತ್ತಾರೆ. ಅವರ ಸಂಭಾಷಣೆಯಿಂದ, ಅಗ್ನಿಮಿತ್ರರಾಜನು ಮಾಲವಿಕೆಯನ್ನು ಚಿತ್ರದಲ್ಲಿ ಕಂಡು ಮುಗ್ಧನಾದನೆಂದೂ, ಮುಂದೆ ಮಾಲವಿಕೆ ರಾಜನದೃಷ್ಟಿಗೆ ಬೀಳದಂತೆ ರಾಣಿ ಧರಿಣೀದೇವಿ ವ್ಯವಸ್ಥೆ ಮಾಡಿರುವದಾಗಿಯೂ ತಿಳಿದುಬರುತ್ತದೆ. ಇದೇ ಸಮಯಕ್ಕೆ ನಾಟ್ಯಾಚಾರ್ಯನಾದ ಗಣದಾಸನು ತನ್ನ ಕುಲವಿದ್ಯೆಯಾದ ನಾಟಕದ ಮಹತಿಯ ಬಗ್ಗೆ ಉದ್ಗಾರ ತೆಗೆಯುತ್ತ ರಂಗಭೂಮಿಯನ್ನು ಪ್ರವೇಶಿಸುತ್ತಾನೆ. ಬಕುಲಾವಲಿಕೆ ಅವನನ್ನು ಕಂಡು ರಾಣಿಯ ಅಪೇಕ್ಷೆಯ ಮೇರೆಗೆ, ಮಾಲವಿಕೆಯ ಅಭಿನಯದ ಪ್ರಗತಿಯ ಬಗ್ಗೆ ವಿಚಾರಿಸುವಳು. ಮಾಲವಿಕೆಯು ಅತ್ಯಂತ ಜಾಣೆಯೆಂದೂ, ಕಲಿಸಿದ ವಿಷಯವನ್ನು ಚೆನ್ನಾಗಿ ಅಭಿನಯಿಸಿ, ತನ್ಮೂಲಕ ಗುರುಗಳಿಗೆ ಮರಳಿ ಕಲಿಸುವಳೋ ಎಂಬುದಾಗಿ ತೋರುತ್ತಾಳೆಂದೂ ಗಣದಾಸನು ಹೇಳುವನು. ಈ ರೀತಿ ಗುರುಗಳಿಗಾದ ಸಂತೋಷವನ್ನು ಮಾಲವಿಕೆಗೆ ತಿಳಿಸಿ, ಅವಳ ಉತ್ಸಾಹವನ್ನು ಹೆಚ್ಚಿಸುವದಕ್ಕಾಗಿ ಬಕುಲಾವಲಿಕೆ ಹೊರಡುವಳು.

## ೩. ಭಾಷಾಂತರ. –

### ೬. ಗಣದಾಸನು.

**ಗಣದಾಸ:—** ಆನುವಂಶಿಕ (ವಂಶಪರಂಪರಾಗತ) ವಿದ್ಯೆಯು ಎಲ್ಲರಿಗೂ ಬಹಳ ಇಷ್ಟವಾದುದೆಂಬುದು ನಿಜ. ಆದರೆ ನಾಟ್ಯಕಲೆಯ ವಿಷಯವಾಗಿ ನಮಗಿರುವ ಅಭಿಮಾನವು ವ್ಯರ್ಥವಾದುದಲ್ಲ. ಏಕೆಂದರೆ,

ಇದು ದೇವತೆಗಳಿಗೆ ಮಾಡಿದ, ಕಣ್ಣುಗಳಿಗೆ ತೋರುವ, ಅಂದವಾದ ಯಜ್ಞವೆಂದು ಮುನಿಗಳು ತಿಳಿಯುತ್ತಾರೆ. ಪಾರ್ವತಿಯ ಸಂಬಂಧವುಳ್ಳ ತನ್ನ (ಅರ್ಧನಾರೀನಟೇಶ್ವರವೆಂಬ) ದೇಹದಲ್ಲಿ ಶಿವನು ಇದನ್ನು ಇಬ್ಭಾಗವಾಗಿ ಮಾಡಿದ್ದಾನೆ. (ಸತ್ವ, ರಜಸ್, ತಮಸ್ ಎಂಬ) ಮೂರು ಗುಣಗಳಿಂದ

ಉತ್ಪ್ರವಿಸುವ (ಹುಟ್ಟುವ) ಹಾಗೂ ಅನೇಕ ರಸಗಳುಳ್ಳ ಜನರ ಜೀವನ ಚರಿತೆಯು ಇಲ್ಲಿ ಕಂಡು ಬರುತ್ತದೆ. (ಹೀಗೆ) ನಾಟಕವು ಬೇರೆ ಬೇರೆ ಅಭಿರುಚಿಯುಳ್ಳ ಜನರಿಗೆ ಅನೇಕ ಬಗೆಯಿಂದ ತಣಿಸುವ ಏಕಮಾತ್ರ ಸಾಧನ ವಾಗಿದೆ. (೧.)

**ಬಕುಲಾವಲಿಕಾ:—** (ಸಮೀಪಕ್ಕೆ ಹೋಗಿ) ಸ್ವಾಮಿ, ನಮಸ್ಕಾರ ಮಾಡುತ್ತೇನೆ.

**ಗಣದಾಸ:—** ಸುಮಂಗಲೆಯೇ, ಬಹುಕಾಲ ಬಾಳು.

**ಬಕುಲಾವಲಿಕಾ:—** ಸ್ವಾಮೀ, 'ನಿಮ್ಮ ಶಿಷ್ಯಳಾದ ಮಾಲವಿಕೆಯು ಪಾಠ ಕಲಿಯುವಾಗ (ಶಬ್ದಶಃ, ಉಪದೇಶ ತೆಗೆದುಕೊಳ್ಳುವಾಗ) ನಿಮಗೆ ಬಹಳ ತೊಂದರೆಕೊಡುವಳೋ ?' ಎಂದು ಮಹಾರಾಣಿಯವರು ಕೇಳು ತ್ತಾರೆ.

**ಗಣದಾಸ:—** ಅವಳು ಬಹಳ ಜಾಣೆಯೂ, ಬುದ್ಧಿವಂತೆಯೂ ಇರುವದಾಗಿ ರಾಣಿಯವರಿಗೆ ವಿನಯಪೂರ್ವಕವಾಗಿ ತಿಳಿಸು. ಬಹಳ ಹೇಳುವದೇನು ?

ಅಭಿನಯ ಪ್ರಪಂಚದಲ್ಲಿ ನಾನು ಅವಳಿಗೆ ಕಲಿಸುವ ಎಲ್ಲ ಭಾವಗಳನ್ನು ಆ ಬಾಲಿಕೆ ಹೆಚ್ಚು ಚೆನ್ನಾಗಿ ಮಾಡುವದರಿಂದ ನನಗೆ ಮರಳಿ ಕಲಿಸುವಳೋ (ಎಂಬುದಾಗಿ ಕಾಣುತ್ತಾಳೆ.) (೨.)

**ಬಕುಲಾವಲಿಕಾ:—** (ತನ್ನಲ್ಲಿ) ಇವಳು ಇರಾವತಿಯನ್ನು ಮೀರುವ ದಾಗಿ ನನಗೆ ತೋರುತ್ತದೆ. (ಪ್ರಕಾಶವಾಗಿ) ಹೀಗೆ ಗುರುಗಳು ಮೆಚ್ಚಿದ ನಿಮ್ಮ ಶಿಷ್ಯಳು (ನಿಜವಾಗಿಯೂ) ಧನ್ಯಳು.

**ಗಣದಾಸ:—** ಅವಳಂತಹ ಜನರು (ದೊರಕುವದು) ವಿರಳ; ಆದುದ ರಿಂದ ಕೇಳುತ್ತೇನೆ. ರಾಣಿಯವರೆಡೆಗೆ ಅವಳು ಎಲ್ಲಿಂದ ತರಲ್ಪಟ್ಟಳು ?

**ಬಕುಲಾವಲಿಕಾ:—** ಮಹಾರಾಣಿಗೆ ವೀರಸೇನನೆಂಬ ಕೀಳುವರ್ಣದ ತಮ್ಮನಿದ್ದಾನೆ. ಆತನನ್ನು ದೊರೆಗಳು ನರ್ಮದಾ ನದಿಯ ದಂಡೆಯಲ್ಲಿ, ಗಡಿ ಕೋಟೆಯನ್ನು ರಕ್ಷಿಸಲಿಕ್ಕೆ ಇಟ್ಟಿದ್ದಾರೆ. ಲಲಿತಕಲೆಗಳನ್ನು ಕಲಿಯಲು ಇವಳು ಯೋಗ್ಯಳೆಂದು ತಿಳಿದು ವೀರಸೇನನು ಇವಳನ್ನು ಅಕ್ಕನಿಗೆ ಕಾಣಿಕೆ ಯೆಂದು ಕಳಿಸಿದನು.

**ಗಣದಾಸ:—** (ಮನದೊಳಗೆ) ಇವಳ ಹೆಚ್ಚಾದ ಸೌಂದರ್ಯದ (ಸುಂದರ ರೂಪದ) ಮೂಲಕ ಇವಳು ಕೀಳುವರ್ಣದವಳಲ್ಲವೆಂದು ನಾನು

ಊಹಿಸುತ್ತೇನೆ. (ಪ್ರಕಟವಾಗಿ) ಸುಮಂಗಲಿಯೇ, ನಾನಾದರೋ (ಇವ ಳಿಂದ) ಬಹಳ ಕೀರ್ತಿಗಳಿಸುವೆ, ನೋಡು.

ಸಮುದ್ರದ ಸಿಂಪಿನೊಳಗೆ ಬಿದ್ದ ಮಳೆಯನೀರು ಮುತ್ತಾಗುವಂತೆ, ಶ್ರೇಷ್ಠ ವಿದ್ಯಾರ್ಥಿಗೆ ಉಪದೇಶಿಸಿದ ಗುರುಗಳ ಕಲಾಕೌಶಲ್ಯವು ಹೆಚ್ಚು ಉನ್ನತಿ ಪಡೆಯುತ್ತದೆ. (೩.)

**ಬಕುಲಾವಲಿಕಾ:—** ಈಗ ತಮ್ಮ ಶಿಷ್ಯಳು ಎಲ್ಲಿದ್ದಾಳೆ ಸ್ವಾಮೀ?

**ಗಣದಾಸ:—** ನಾನು ಇದೀಗ ಅವಳಿಗೆ ೫ ಪ್ರಕಾರದ ಅಭಿನಯ ಗಳನ್ನು ಉಪದೇಶಿಸಿ, ಇನ್ನು (ತುಸು) ವಿಶ್ರಾಂತಿ ತೆಗೆದುಕೊಳ್ಳೆಂದು ಹೇಳಿದ್ದ ರಿಂದ ಅವಳು, ಸರೋವರ ಕಾಣುವ ಕಿಡಿಕಿಯ ಬಳಿಗೆ ಹೋಗಿ ತಂಗಾಳಿ ಯನ್ನು (ಹೆಚ್ಚಾದ ಗಾಳಿಯನ್ನು) ಸೇವಿಸುತ್ತ ನಿಂತಿದ್ದಾಳೆ.

**ಬಕುಲಾವಲಿಕಾ:—** ಹಾಗಾದರೆ ಗುರುಗಳು ನನಗೆ ಅಪ್ಪಣೆ ಕೊಡ ಬೇಕು. ಏಕೆಂದರೆ, ನಾನು ಗುರುಗಳ ಸಂತೋಷವನ್ನು (ಅವಳಿಗೆ) ತಿಳಿಸಿ, ಅವಳ ಉತ್ಸಾಹವನ್ನು ಹೆಚ್ಚಿಸುವೆನು.

**ಗಣದಾಸ:—** ಗೆಳತಿಯನ್ನು ನೋಡು. ಬಿಡುವು ದೊರೆತ ನಾನಾದರೋ ನನ್ನ ಮನೆಗೆ ಹೋಗುತ್ತೇನೆ. (ಇಬ್ಬರೂ ಹೊರಟುಹೋಗುತ್ತಾರೆ).

— ಮಾಲವಿಕಾಗ್ನಿಮಿತ್ರದಲ್ಲಿ ಮೊದಲನೆಯ ಅಂಕದಲ್ಲಿ (ಇದೆ).

**೪. ಟೀಕೆ–ಟಿಪ್ಪಣಿಗಳು:—**

**ಪುಟ ೧೭.** ಗಣದಾಸಃ — ಇವನು ನರ್ತನ ಶಿಕ್ಷಕ. ಮಾಲವಿಕೆಯ ಗುರು ಕಾಮಂ— ಈ ಮಾತು ನಿಜ, ಇದಕ್ಕೆ ಒಪ್ಪಿಗೆ ಇದೆ, ಆದರೆ, ತು. ಮಾ. (ಅ) ಕಾಮಂ ತಾಂ ಪರಿಣೀತಾಂ ನ ಸ್ಮರಾಮಿ। ತಥಾಪಿ ತಾಂ ದೃಷ್ಟ್ವಾತೀವ ಪರ್ಯಾಕುಲಂ ಮಮ ಮನಃ। (ಬ) ಕಾಮಂ ಭವಾನ್ಸರ್ವ ಗುಣೋಪಪನ್ನಃ। ತಥಾಪಿ ಅಹಂ ಉಪದಿಶಾಮಿ। (ಕ) ಕಾಮಂ ನೃಪಾಃ ಸಂತು ಸಹಸ್ರಶೋऽನ್ಯೇ ರಾಜನ್ವತೀಮಾಹುರನೇನ ಪೃಥ್ವೀಮ್ !

ಕುಲವಿದ್ಯಾ — ಕುಲಸ್ಯವಿದ್ಯಾ (ಷ. ತ. ಸ.)। ವಂಶಪರಂಪರಾಗತ ಅಥವಾ ಆನುವಂಶಿಕ ವಿದ್ಯೆ. ಪ್ರತಿಯೊಬ್ಬರಿಗೂ ತಮ್ಮ ಮನೆತನದ ವಿದ್ಯೆ ಯಲ್ಲಿ ತುಸು ಗತಿ ಇರುವದರಿಂದ ಅದರ ಬಗ್ಗೆ ಅಭಿಮಾನವಿರುವದು ಸ್ವಾಭಾವಿಕ. ಪ್ರಾಚೀನ ಭಾರತದಲ್ಲಿ ಉದ್ಯೋಗ ವ್ಯವಸಾಯಗಳು ಆನು- ವಂಶಿಕವಿದ್ದವು. ಮಗನು ತಂದೆಯ ವೃತ್ತಿಯನ್ನೇ ಕೈಕೊಳ್ಳುವ ರೂಢಿ ಇತ್ತು. ಮಿಥ್ಯಾಗೌರವಮ್ — ಮಿಥ್ಯಾ ಗೌರವಮ್ (ಕ. ಸ.) ವ್ಯರ್ಥ

ಆದರ ಅಥವಾ ಅಭಿಮಾನ. ಪ್ರತಿಯೊಬ್ಬನಿಗೂ ಕುಲವಿದ್ಯೆಯ ಬಗ್ಗೆ ಅಭಿಮಾನವಿರುವದು ಸಹಜ; ಆದರೆ ಗಣದಾಸನಿಗೆ ನಾಟ್ಯಕಲೆಯ ಬಗ್ಗೆ ಇದ್ದ ಅಭಿಮಾನ ಇಂತಹದಲ್ಲ. ಅವನು ನಿಜವಾಗಿಯೂ ನಾಟ್ಯಕಲೆಯಲ್ಲಿ ನಿಷ್ಣಾತನಾಗಿದ್ದನು,

**ಶ್ಲೋಕ ೧. ಅನ್ವಯ**:—ಮುನಯಃ ಇದಂ (ನಾಟ್ಯ) ದೇವಾನಾಂ ಕಾಂತಂ ಚಾಕ್ಷುಷಮ್ ಕ್ರತುಮ್ ಆಮನಂತಿ। ರುದ್ರೇಣ ಇದಂ ಉಮಾ-ಕೃತವ್ಯತಿಕರೇ ಸ್ವಾಂಗೇ ದ್ವಿಧಾ ವಿಭಕ್ತಮ್ । ಅತ್ರ ತ್ರೈಗುಣ್ಯೋದ್ಭವಂ ನಾನಾರಸಂ ಲೋಕಚರಿತಂ ದೃಶ್ಯತೇ । ನಾಟ್ಯಂ ಭಿನ್ನರುಚೇಃ ಜನಸ್ಯ ಬಹುಧಾ ಏಕಂ ಸಮಾರಾಧನಮ್ ।

ನಾಟ್ಯಕಲಾವಿದ ಗಣದಾಸನು ನಾಟ್ಯಶಾಸ್ತ್ರದ ಮಹಿಮೆಯನ್ನು ಈ ಶ್ಲೋಕದಲ್ಲಿ ಬಣ್ಣಿಸಿದಾನೆ.

ಕ್ರತುಃ—ಶಕ್ತಿ, ಸಾಮರ್ಥ್ಯ, ಶಕ್ತಿಕೊಡುವ ಯಜ್ಞ, ಕಾಳಿದಾಸನ ಕಾಲದಲ್ಲಿ ಯಜ್ಞಕ್ಕೆ ಬಹಳ ಮಹತ್ವವಿದ್ದುದರಿಂದ ಅವನು ನಾಟಕವನ್ನು ಯಜ್ಞಕ್ಕೆ ಹೋಲಿಸಿದ್ದಾನೆ. ನಾಟಕವೆಂದರೆ ದೇವತೆಗಳನ್ನುದ್ದೇಶಿಸಿ, ಮಾಡಿದ ಒಂದು ಯಜ್ಞ. ಆದರೆ ಇತರ ಯಜ್ಞಗಳಿಗಿಂತ ಇದು ಎರಡು ಅಂಶಗಳಲ್ಲಿ ಭಿನ್ನವಿದೆ. (i) ಇದರ ಒಂದು ವೈಶಿಷ್ಟ್ಯವೆಂದರೆ ಇದು ಬಹಳ ಅಂದವಾಗಿದೆ. (ಕಾಂತಮ್)। ಧಾರ್ಮಿಕ ಯಜ್ಞದಲ್ಲಿ ಕೇವಲ ಧಾರ್ಮಿಕ ಭಾವನೆ ಇರುತ್ತದೆ. ಮೇಲಾಗಿ ಪಶುವಧೆಯಾಗುತ್ತದೆ. ಆದರೆ ನಾಟಕವು ಮಾನವನ ಹೃದಯಾಂತರಾಳಕ್ಕೆ ಹೋಗಿ ಮುಟ್ಟಿ ವಿವಿಧ ಬಗೆಯ ಆನಂದ ಭಾವನೆಗಳನ್ನು ಹುಟ್ಟಿಸುತ್ತದೆ. (ii) ಇದರ ಇನ್ನೊಂದು ವೈಶಿಷ್ಟ್ಯವೆಂದರೆ ಇದು ಪ್ರತ್ಯಕ್ಷ ಕಣ್ಣಿಗೆ ಕಾಣುತ್ತದೆ. (ಚಾಕ್ಷುಷಮ್) ಮೇಲಾಗಿ ಅತ್ಯಂತ ಪ್ರೇಕ್ಷಣೀಯವೂ ಆಗಿರುತ್ತದೆ. ಸಾಮಾನ್ಯ ಯಜ್ಞದಲ್ಲಿ ಯಜ್ಞದ ಹೊಗೆಯು ಎಲ್ಲೆಡೆಗೆ ಪಸರಿಸುವದರಿಂದ ಸಂಪೂರ್ಣ ಯಜ್ಞವನ್ನು ನೋಡಲಾಗುವದಿಲ್ಲ. ಕಣ್ಣಿಗೆ ಬಹಳ ತೊಂದರೆಯಾಗುತ್ತದೆ. ಪಶುವಧೆಯನ್ನು ಕಣ್ಮುಟ್ಟಿ ನೋಡುವದಂತೂ ಬಹಳ ಪ್ರಯಾಸಕರವಾದುದು. ಅಲ್ಲದೆ ಯಜ್ಞದ ಫಲವೂ ಕೂಡ ಕೂಡಲೇ ದೊರೆಯುವದಿಲ್ಲ. ಸ್ವರ್ಗವಾಸ ಮುಂತಾದ ಯಜ್ಞದ ಫಲವು ಅಪ್ರತ್ಯಕ್ಷವಾಗಿದೆ. ಆದರೆ ಇದಕ್ಕೆ ವಿರುದ್ಧವಾಗಿ ನಾಟಕವೆಂಬ ಯಜ್ಞವು ಅತ್ಯಂತ ಪ್ರೇಕ್ಷಣೀಯವಾಗಿದೆ. ನಾಟಕವೆಂದರೆ ನಿಜವಾಗಿಯೂ ಕಣ್ಣುಗಳಿಗೆ ಹಬ್ಬ.

ನಾಟಕವು ಐನೆಯ ವೇದವೆಂದು ಪ್ರಸಿದ್ಧಿ ಹೊಂದಿದೆ. ನಾಲ್ಕು ವೇದಗಳಲ್ಲಿಯ ಆವಶ್ಯಕ ಭಾಗಗಳನ್ನು ಆರಿಸಿಕೊಂಡು ನಾಟ್ಯಶಾಸ್ತ್ರವೆಂಬ ಐನೆಯ ವೇದವು ರಚಿತವಾಯಿತಂತೆ. ವೇದಗಳು ಯಜ್ಞ ವಿಧಿಸುವದಕ್ಕಾಗಿಯೇ ಹೊರಟಿವೆ. ( ಯಜ್ಞಾರ್ಥಂ ಹಿ ವೇದಾನಾಂ ಪ್ರವೃತ್ತಿಃ । ) ಆದ್ದರಿಂದ ನಾಟ್ಯಶಾಸ್ತ್ರವೆಂಬ ಐನೆಯ ವೇದವಾದರೂ ನಾಟಕವೆಂಬ ಯಜ್ಞವನ್ನು ವಿಧಿಸುತ್ತದೆ. ಆದರೆ ಇತರ ಯಜ್ಞಗಳಿಗಿಂತ ನೋಡಲು ಮನೋಹರವೂ, ಕಣ್ಣುಗಳಿಗೆ ಆಹ್ಲಾದಕರವೂ ಆಗಿದೆ. ಆಮನಂತಿ — ತಿಳಿಯುತ್ತಾರೆ. ಮುನಯಃ — ಮುನಿಗಳು, ಭರತ, ಮತಂಗ ಮುಂತಾದ ಮುನಿಗಳು. ದೇವಾನಾಂ.......... .... ಚಾಕ್ಷುಷಮ್ — ಇದು ಕರ್ತರಿ ಪ್ರಯೋಗವಿದೆ. ಕರ್ಮಣಿಗೆ ಪರಿವರ್ತಿಸಿದರೆ, ಮುನಿಭಿಃ ಅಯಂ ದೇವಾನಾಂ ಕಾಂತಃ ಚಾಕ್ಷುಷಃ ಕ್ರತುಃ ಇತಿ ಆಮನ್ಯತೇ ।

ರುದ್ರೇ........ದ್ವಿಧಾ—ಶಿವನಿಗೆ ನಾಟ್ಯಶಾಸ್ತ್ರದ ವಿಷಯವಾಗಿ ಬಹಳ ಗೌರವವಿದೆ ಎಂಬ ಮಾತು ಈ ಸಾಲಿನಲ್ಲಿ ಸೂಚಿತವಾಗಿದೆ. ಶಿವನು ಸುಪ್ರಸಿದ್ಧ ನರ್ತಕ. ಅವನೇ ನೃತ್ಯದಲ್ಲಿ ವಿಭಾಗ ಮಾಡಿದ್ದಾನೆ. ಆ ಎರಡು ಭಾಗಗಳು ಅವನ ಅರ್ಧನಾರೀನಟೇಶ್ವರವೆಂಬ ರೂಪದಲ್ಲಿ ಸ್ಪಷ್ಟಕಾಣುತ್ತವೆ. (i) 'ಲಾಸ್ಯ' ನೃತ್ಯವು ಸುಮನೋಹರವಾದುದು. ಅದು ಹೆಣ್ಣುಮಕ್ಕಳಿಗೆ ಹೆಚ್ಚಾಗಿ ಉಚಿತವಾದುದು. ಸಂಗೀತದೊಂದಿಗೆ ಮೆಲ್ಲಮೆಲ್ಲನೆ ಹೆಜ್ಜೆಗಳನ್ನು ಹಾಕುವದರಿಂದ ಶೃಂಗಾರ ರಸವು ಸೂಚಿತವಾಗುತ್ತದೆ. ಈ 'ಲಾಸ್ಯ' ಭಾಗವನ್ನು ಶಿವನ 'ನಾರೀ' ರೂಪದಲ್ಲಿ ಕಾಣಬಹುದು. (ii) ತಾಂಡವ ನೃತ್ಯವು ಪುರುಷರಿಗೆ ಯೋಗ್ಯವಾಗಿರುತ್ತದೆ. ಬಹಳ ಸಪ್ಪಳವಾಗುವ ವಾದ್ಯಗಳೊಂದಿಗೆ ದೇಹವನ್ನು ಬಹು ರಭಸದಿಂದ ಕುಣಿಸುವದರಿಂದ ಆಶ್ಚರ್ಯ ಹಾಗೂ ಭೀತಿ ಹುಟ್ಟುತ್ತವೆ, ಶಿವನ ಅರ್ಧನಾರೀಶ್ವರ ರೂಪದಲ್ಲಿಯ ಪುರುಷಭಾಗದಲ್ಲಿ ಈ ತಾಂಡವ ನೃತ್ಯವು ಕಂಡುಬರುತ್ತದೆ.

**ಉಮಾಕೃತವ್ಯತಿಕರೇ ಸ್ವಾಂಗೇ**—ಪಾರ್ವತಿಯೊಡನೆ ಸಂಬಂಧವಿದ್ದ ತನ್ನ ದೇಹದಲ್ಲಿ, ಅರ್ಥಾತ್ ಅರ್ಧನಾರೀಶ್ವರ ರೂಪದಲ್ಲಿ, ಅರ್ಧಭಾಗ ಸ್ತ್ರೀ ಹಾಗೂ ಅರ್ಧಭಾಗ ಪುರುಷ ಹೀಗೆ ಇರುವ ಶಿವನ ರೂಪದಲ್ಲಿ.

ಉಮಯಾ ಕೃತಃ ವ್ಯತಿಕರಃ ಯಸ್ಯ ತತ್ ( ಬ. ಸ. ) ತಸ್ಮಿನ್ । ಉಮಾ—ಪಾರ್ವತಿ. ವ್ಯತಿಕರಃ—ಸಂಬಂಧ. ಸ್ವಾಂಗಂ—ಸ್ವಸ್ಯ ಅಂಗಂ (ಷ. ತ. ಸ.) ತನ್ನದೇಹ. ಅರ್ಧನಾರೀನಟೇಶ್ವರ ರೂಪದಲ್ಲಿಯ ಅರ್ಧ

ಭಾಗವಾದ "ನಾರೀ" ರೂಪವು ಲಾಸ್ಯ ನೃತ್ಯವನ್ನೂ, ಉಳಿದ ಅರ್ಧ ರೂಪವು ತಾಂಡವ ನೃತ್ಯವನ್ನೂ ಸೂಚಿಸುತ್ತವೆ.

ದ್ವಿಧಾ ವಿಭಕ್ತಮ್—ಇಬ್ಭಾಗಮಾಡಲ್ಪಟ್ಟಿದೆ. ದ್ವಿಧಾ ವಿಭಕ್ತವಾನ್ (ಕರ್ತರಿ). ತ್ರೈಗುಣ್ಯೋ.......ದೃಶ್ಯತೇ— ಜನಜೀವನವನ್ನು ಚಿತ್ರಿಸುವದೇ ನಾಟಕದ ಮುಖ್ಯಕಾರ್ಯ. ಅದು ಜೀವನದ ವಿವಿಧ ರಂಗಗಳನ್ನು ಚಿತ್ರಿಸುವ ಕನ್ನಡಿ ಇದ್ದಂತೆ. ಅಂತೆಯೇ ನಾಟಕದಲ್ಲಿ ಸುಖ-ದುಃಖಗಳೂ, ಯಶಾಪ-ಯಶಗಳೂ, ಗುಣಾವಗುಣಗಳೂ ಚಿತ್ರಿಸಲ್ಪಡುತ್ತವೆ. ಜೀವನದಲ್ಲಿಯ ಬೇಕಾದ ಭಾಗವೂ ನಾಟಕದ ವಸ್ತುವಾಗಬಹುದು. ಲೋಕಚರಿತಮ್— ಲೋಕಾನಾಂ ಚರಿತಂ (ಷ. ತ. ಸ.) ಜನರ ಜೀವನ, ಜನರ ನಡಾವಳಿ.

**ತ್ರೈಗುಣ್ಯೋದ್ಭವಮ್:**— ಸತ್ವ, ರಜಸ್, ತಮಸ್ ಎಂಬ ಮೂರು ಗುಣಗಳಿಂದುಂಟಾದ. ತ್ರಯಾಣಾಂ ಗುಣಾನಾಂ ಸಮಾಹಾರಃ ತ್ರಿಗುಣಂ (ದ್ವಿಗು.)। ತ್ರಿಗುಣಮೇವ ತ್ರೈಗುಣ್ಯಂ। ತಸ್ಮಾತ್ ಉದ್ಭವಃ ಯಸ್ಯ ತತ್ (ಬ. ಸ.) ಸಮಸ್ತ ಜಗತ್ತು ಸತ್ವ-ರಜಸ್-ತಮಸ್ ಎಂಬ ಮೂರು ಗುಣಗಳ ಮಿಶ್ರಣದಿಂದುಂಟಾದ 'ಪ್ರಧಾನ' ಎಂಬ ಪದಾರ್ಥದಿಂದ ಹುಟ್ಟಿದೆ ಎಂದು ಸಾಂಖ್ಯ ತತ್ವಜ್ಞಾನಿಗಳ ಮತ. ಅದರಂತೆ ಜನರ ಕೃತಿಗಳಿಗಾದರೂ ಈ ಮೂರು ಗುಣಗಳೇ ಕಾರಣವಾಗಿವೆ. ಸತ್ವಗುಣದಿಂದ ಒಳ್ಳೆಯ ಕಾರ್ಯವೂ, ತಮೋ ಗುಣದಿಂದ ಕೆಟ್ಟ ಕೆಲಸವೂ, ರಜೋ ಗುಣದಿಂದ ಮಿಶ್ರಕೆಲಸವೂ ಆಗುತ್ತದೆ. ಆದರೆ ಈ ಮೂರು ಗುಣಗಳು ಯಾರಲ್ಲಿಯೂ ಶುದ್ಧ ರೂಪದಿಂದ ಇರುವದಿಲ್ಲ. ಒಂದರ ಜೊತೆಗೆ ಇತರ ಎರಡು ಗುಣಗಳೂ ಕೂಡ ಬೇರೆ ಬೇರೆ ಅಂಶಗಳಿಂದ ಬೆರೆತು ಕೊಂಡಿರುತ್ತವೆ. ಆದ್ದರಿಂದ ಜನರ ವಿವಿಧ ಕೃತಿಗಳಿಗೆ ಈ ತ್ರಿಗುಣಗಳೇ ಕಾರಣ. ಆದ್ದರಿಂದ ಜನರ ಜೀವನ ಚರಿತೆಯು ಇವುಗಳನ್ನೇ ಅವಲಂಬಿಸಿದೆ.

ನಾನಾರಸಂ— ಅನೇಕ ರಸಗಳುಳ್ಳ. ಜನರ ಜೀವನ ಚರಿತೆಯಲ್ಲಿ ಅನೇಕ ಬಗೆಯ ರಸಗಳನ್ನು ಕಾಣಬಹುದು. ನಾನಾರಸಾಃ ಯಸ್ಮಿನ್ ತತ್ (ಬ. ಸ.)। ರಸಃ—ರಸ. ವಸ್ತುವಿನಿಂದ ಹುಟ್ಟುವ ಮನೋಭಾವನೆ. ಶೃಂಗಾರ, ಹಾಸ್ಯ, ಕರುಣ, ರೌದ್ರ, ವೀರ, ಭಯಾನಕ, ಬೀಭತ್ಸ, ಅದ್ಭುತ, ಶಾಂತ ಎಂಬ ೯. ಮುಖ್ಯ ರಸಗಳಿವೆ. ಇವುಗಳಲ್ಲಿ ಒಂದು ಇಲ್ಲವೆ ಹಲವು ರಸಗಳನ್ನು ಜನರ ಜೀವನ ಇಲ್ಲವೆ ನಡಾವಳಿ *(Conduct of men)* ಗಳಲ್ಲಿ ಕಾಣಬಹುದು.

ನಾಟ್ಯಂ......................ಧನಮ್— ಇದು ಕಾಲಿದಾಸನ ಅಮರ ವಾಣಿ. ನಾಟಕವು ಸಾಧಿಸುವ ಕಾರ್ಯವನ್ನು ಕಾಲಿದಾಸನು ಬಹು ಸುಂದರ ವಾಗಿ ಇಲ್ಲಿ ಹೇಳಿದ್ದಾನೆ. ಈ ಜಗತ್ತಿನಲ್ಲಿ ಬೇರೆ ಬೇರೆ ಅಭಿರುಚಿಯುಳ್ಳ ಜನರಿರುವರು. ಕೆಲವರು ಸಂಗೀತ ಪ್ರಿಯರು. ಕೆಲವರಿಗೆ ಕಥೆ ಹೆಚ್ಚಾಗಿ ಸೇರುತ್ತದೆ. ಕೆಲವರ ಲಕ್ಷ್ಯ ನೃತ್ಯದ ಕಡೆಗೆ ಇರುತ್ತದೆ. ಬೇರೆ ಕೆಲವರು ಸುಂದರ ದೃಶ್ಯಗಳನ್ನು ನೋಡಲಪೇಕ್ಷಿಸುತ್ತಾರೆ. ಆದರೆ ನಾಟಕವು ಈ ಭಿನ್ನ ಭಿನ್ನ ರುಚಿಯ ಜನರನ್ನೆಲ್ಲ ತಣಿಸುತ್ತದೆ. ಅವರೆಲ್ಲರ ಇಚ್ಛೆಗಳನ್ನೂ ಪೂರ್ಣಗೊಳಿಸುತ್ತದೆ. ಸುಂದರಕಥೆ, ರಮಣೀಯ ದೃಶ್ಯ, ಅಂದವಾದ ಉಡಿಗೆ ತೊಡಿಗೆಗಳು. ಒಳ್ಳೆಯ ಮಾತುಕಥೆ, ಸುಶ್ರಾವ್ಯ ಸಂಗೀತ, ಕಣ್ಣುಗಳಿಗೆ ಹಬ್ಬ ವನ್ನುಂಟುಮಾಡುವ ನೃತ್ಯ, ಒಳ್ಳೆಯ ನೀತಿಯ ಮಾತುಗಳು, ಸದುಪದೇಶ ಮುಂತಾದವುಗಳ ಮೂಲಕ ಬೇರೆ ಬೇರೆ ಅಭಿರುಚಿಯುಳ್ಳ ಜನರನ್ನು ಕೂಡ ಏಕಕಾಲಕ್ಕೆ ತಣಿಸುವ ಏಕಮೇವ ಸಾಧನವೆಂದರೆ ನಾಟಕವು.

ನಾಟ್ಯಂ – ನಾಟ್ಯಶಾಸ್ತ್ರ, ನಾಟಕ, ಭಿನ್ನರುಚೇಃ ಅಪಿ ಜನಸ್ಯ—ಬೇರೆ ಬೇರೆ ಅಭಿರುಚಿಯುಳ್ಳ ಜನರಿಗೂ ಕೂಡ, ಭಿನ್ನಾಃ ರುಚಯಃ ಯಸ್ಯ ಸಃ ಭಿನ್ನರುಚಿಃ (ಬ ಸ.) । ತಸ್ಯ । ಬಹುಧಾ ವಿವಿಧ ಬಗೆಯಿಂದ *In various ways* ಸಮಾರಾಧನಮ್–ಮನರಂಜನೆಯ ಸಾಧನ. *Means of gratification, delight, recreation*. ಏಕಂ—ಮುಖ್ಯ, ಏಕಮೇವ.

ಬಕುಲಾವಲಿಕಾ—ಮಹಾರಾಣಿ ಧರಿಣೀದೇವಿಯ ದಾಸಿ, ಮಾಲ ವಿಕೆಯ ಗೆಳತಿ. ಭದ್ರೇ—ಸುಮಂಗಲೆಯೇ. ಚಿರಂ—ಬಹುಕಾಲ. ದೇವೀ ಪೃಚ್ಛತಿ – ಮಹಾರಾಣಿಯವರು (ಧರಿಣೀದೇವಿ) ಕೇಳುತ್ತಾರೆ. ಅಪಿ – ಏನು. ವಾಕ್ಯಾರಂಭದಲ್ಲಿ ಉಪಯೋಗಿಸಲ್ಪಟ್ಟಿದ್ದರಿಂದ 'ಕಿಮ್' ಶಬ್ದದ ಅರ್ಥವಿದೆ.

ವಿವಿಧ ಉಪಯೋಗಗಳು:— (i) ಅಪಿ ಅಹಂ ಆಗಚ್ಛೇಯಮ್ । ಅಪಿ ಏತತ್ ಜಲಂ ಮಧುರಮ್ । (ii) ಧ್ರುವಃ ಬಾಲೋಽಪಿ ತಪಃ ತೇಪೇ । (iii) ಸೀತಾಪಿ ರಾಮೇಣ ಸಹ ವನಂ ಗತಾ ।

ಉಪದೇಶ ಗ್ರಹಣೇ—ಉಪದೇಶಸ್ಯ ಗ್ರಹಣಂ (ಷ. ತ. ಸ.)। ತಸ್ಮಿನ್। ಉಪದೇಶವನ್ನು ಎಂದರೆ ಕಲಿಸಿದ ವಿಷಯವನ್ನು ತಿಳಿದುಕೊಳ್ಳುವದರಲ್ಲಿ ಅತಿಕ್ಲೇಶಯತಿ — ಅತಿ + ಕ್ಲಿಶ್ (೪. ಪ) ಧಾತುವಿನ ಪ್ರಯೋಜಕರೂಪದ ವ. ತೃ. ಪು. ಏ. ವ. ದುಃಖ ಕೊಡುತ್ತಾಳೆ. ತೊಂದರೆಗೊಳಿಸುತ್ತಾಳೆ.

ವಿಜ್ಞಾಪ್ಯತಾವಮ್ — ಅರುಹಲ್ಪಡಲಿ, ತಿಳಿಸಲ್ಪಡಲಿ. ವಿ+ಜ್ಞಾ (೯. ಪ) ಧಾತುವಿನ ಪ್ರಯೋಜಕರೂಪದ ಕರ್ಮಣಿ ಆಜ್ಞಾರ್ಥ. ಕೃ. ಪ್ರ. ಏ. ವ. 'ದೇವೀಂ ವಿಜ್ಞಾಪಯ' ಎಂಬುದು ಕರ್ತರಿಪ್ರಯೋಗ. ನೀಚ ಪಾತ್ರಗಳು ಉಚ್ಚ ಪಾತ್ರಗಳೊಡನೆ ಮಾತನಾಡುವಾಗ ವಿಜ್ಞಾಪನಾ (ವಿನ್ನಪ) ಶಬ್ದವನ್ನೂ, ಉಚ್ಚ ಪಾತ್ರಗಳು ನೀಚ ಪಾತ್ರಗಳೊಡನೆ ಮಾತನಾಡುವಾಗ 'ಆಜ್ಞಾಪಯ' (ಅಪ್ಪಣೆ) ಶಬ್ದವನ್ನೂ ಉಪಯೋಗಿಸುವ ರೂಢಿ ಇದೆ. ನಿಪುಣಾ—ಪ್ರತ್ಯಕ್ಷ ನರ್ತನ ಕ್ರಿಯೆಯಲ್ಲಿ ಜಾಣೆ. ಮೇಧಾವಿನೀ—ಮೇಧಾ ಅಸ್ಯಾಃ ಅಸ್ತಿ ಇತಿ (ತದ್ಧಿತ). ತಾತ್ವಿಕ ಭಾಗ ತಿಳಿಯುಕೊಳ್ಳುವದರಲ್ಲಿ ಬುದ್ಧಿವಂತೆ.

**ಶ್ಲೋಕ ೨. ಅನ್ವಯ:**— ಪ್ರಯೋಗ ವಿಷಯೇ ಮಾಯಾ ತಸ್ಮೈ ಯತ್ ಯತ್ ಭಾವಿಕಂ ಉಪದಿಶ್ಯತೇ ತತ್ ತತ್ ಬಾಲಾ ವಿಶೇಷಕರಣಾತ್ ಮೇ ಪ್ರತ್ಯುಪದಿಶತಿ ಇವ।

ಈ ಶ್ಲೋಕದಲ್ಲಿ ಅಭಿನಯ ಕಲೆಯಲ್ಲಿ ಮಾಲವಿಕೆಗಿದ್ದ ಜಾಣ್ಮೆಯ ವರ್ಣನೆ ಇದೆ.

ಪ್ರಯೋಗವಿಷಯೇ — ಪ್ರಯೋಗಃ ಏವ ವಿಷಯಃ (ಕ. ಸ.)। ತಸ್ಮಿನ್ । ಅಭಿನಯ ವಿಷಯದಲ್ಲಿ, ಅಭಿನಯ ಕಲೆಯಲ್ಲಿ. ಭಾವಿಕಮ್ — ಭಾವಾಯ ಹಿತಮ್—ಆಂತರಿಕ ಮನೋಭಾವವನ್ನು ವ್ಯಕ್ತಗೊಳಿಸುವ ಹಾವ ಭಾವಗಳು. ವಿಶೇಷಕರಣಾತ್ — ಹೆಚ್ಚು ಜಾಣತನದಿಂದ ಮಾಡುವದ ರಿಂದ. ವಿಶೇಷೇಣ ಕರಣಂ ವಿಶೇಷಕರಣಂ। ತಸ್ಮಾತ್। ಪ್ರತ್ಯುಪದಿಶತಿ ಇವ— ಮರಳಿ ಉಪದೇಶಿಸುವಳೋ ಎನ್ನುವಂತೆ. ಗಣದಾಸನು ಹೇಳಿಕೊಟ್ಟ ಅಭಿನಯವನ್ನು ಮಾಲವಿಕೆಯು ಹೆಚ್ಚು ಜಾಣ್ಮೆಯಿಂದ ಮಾಡಿತೋರಿಸಿ, ಮರಳಿ ಗಣದಾಸನಿಗೇನೇ ಆ ಅಭಿನಯದ ಮೂಲಕ ಕಲಿಸುವಳೋ ಎನ್ನು ವಂತೆ ತೋರುತ್ತಾಳೆ. ಅಹಂ ಬಾಲಯಾ ಪ್ರತ್ಯುಪದಿಶ್ಯೇ ಇವ— (ಕರ್ಮಣಿ ಪ್ರಯೋಗ).

ಇರಾವತೀ — ಅಗ್ನಿಮಿತ್ರನ ಎರಡನೆಯ ಹೆಂಡತಿ. ತನ್ನ ಸೌಂದರ್ಯ ಹಾಗೂ ಲಲಿತ ಕಲೆಗಳಲ್ಲಿಯ ಪಾಂಡಿತ್ಯದಿಂದ ಅರಸನ ಮನಸ್ಸನ್ನು ಪೂರ್ಣ ಸೆಳೆದಿದ್ದಳು. ಇವಳ ನರ್ತನಶಿಕ್ಷಕ ಹರದತ್ತನೆಂಬವನು.

ಅತಿಕ್ರಾಮಂತೀಂ — ಅತಿ+ಕ್ರಮ್ (೧. ಪ) ಧಾತುವಿನ ವ. ಕಾ. ಕೃ. (ಸ್ತ್ರೀ) ದ್ವಿ ಏ. ವ. ಮಿಕ್ಕುವ, ಮೀರುವ. ಇರಾವತೀ ರಾಣಿಯು ಕಲೆಯಲ್ಲಿ

ಬಹಳ ನಿಪುಣೆಯೆಂದು ಪ್ರಸಿದ್ಧಳಾಗಿದ್ದಳು. ಆದರೆ ಮಾಲವಿಕೆಯು ಅವಳನ್ನು ಮೀರುವದಾಗಿ ತೋರಿದುದರಿಂದ ಬಕುಲಾವಲಿಕೆಗೆ ಬಹಳಸಂತೋಷವಾಗಿದೆ.

ಕೃತಾರ್ಥಾ—ಧನ್ಯಳು. ಕೃತಕೃತ್ಯಳು. ಸುದೈವಿಯು. ಗುರುಗಳು ಈ ರೀತಿಯಾಗಿ ಹೊಗಳಿದುದರಿಂದ ಮಾಲವಿಕೆಯು ತನ್ನ ಕಾರ್ಯ ಸಾಧಿಸಿದ ಳೆಂದು ಬಕುಲಾವಲಿಕೆಯು ಪ್ರಕಟವಾಗಿ ಹೇಳುತ್ತಾಳೆ. ಕೃತಃ ಅರ್ಥಃ ಯಯಾ ಸಾ (ಬ. ಸ.) ತದ್ವಿಧಾನಾಂ—ಅವಳಂತಹ ಜನರು, ಅವಳಂತಹ ಲಲಿತಕಲಾ ನಿಪುಣರು. ಕುತೋ........ತಮ್—ಕುತಃ+ದೇವ್ಯಾಃ+ತತ್+ ಪ್ರಾಪ್ತಮ್+ಅನೀತಮ್—ರಾಣಿಯವರ ಕಡೆಗೆ ಆ ಮಾಲವಿಕೆಯು ಎಲ್ಲಿಂದ ತರಲ್ಪಟ್ಟಳು; ದೇವ್ಯಾ ತತ್ಪಾತ್ರಮಾನೀತಂ ಎಂಬುದಾಗಿಯೂ ಒಂದು ಪಾಠ ವಿದೆ. ಆ ಸಂದರ್ಭದಲ್ಲಿ ರಾಣಿ ಇವಳನ್ನು ಎಲ್ಲಿಂದ ತಂದಳು. ಎಂಬ ಅರ್ಥವಾಗುವದು.

ಪಾತ್ರಂ—ಯೋಗ್ಯಮನುಷ್ಯ, ಉತ್ತಮ ನರ್ತಕಿ, ತು. ವಾ. ನರ್ತಕೀ ಪಾತ್ರಮಿತ್ಯಾಹುರ್ಗುಣಾಧಾರತಯಾ ಬುಧಾಃ । ಅವಳಂತಹ ಉತ್ತಮ ನರ್ತಕಿ ದೊರೆಯುವದು ಕಠಿಣವಿದ್ದುದರಿಂದ, ಅವಳು ಎಲ್ಲಿಂದ ದೊರೆತಳೆಂದು ಗಣದಾಸನ ಕುತೂಹಲದ ಪ್ರಶ್ನೆ.

**ಪುಟ ೧೮.** ವರ್ಣಾವರಃ—ವರ್ಣೇನ ಅವರಃ (ತೃ. ತ.)। ವರ್ಣ ದಿಂದ ಕೀಳ ಅರ್ಥಾತ್ ವೈಶ್ಯ, ಇಲ್ಲವೆ ಶೂದ್ರ ಸ್ತ್ರೀಯಲ್ಲಿ ಹುಟ್ಟಿದವ. ಪುರುಷನಿಗೆ ಕೀಳುವರ್ಣದ ಸ್ತ್ರೀಯನ್ನು ಲಗ್ನಮಾಡಿಕೊಳ್ಳಲು ಬರುತ್ತಿತ್ತು. ಆದರೆ ಉಚ್ಚವರ್ಣದ ಸ್ತ್ರೀಯನ್ನು ಮಾತ್ರ ಲಗ್ನಮಾಡಿಕೊಳ್ಳಲು ಬರುತ್ತಿರಲಿಲ್ಲ ಎಂದರೆ ಅನುಲೋಮ ವಿವಾಹಪದ್ಧತಿ ಬಳಿಕೆಯಲ್ಲಿತ್ತು. ಅಂತಪಾಲದುರ್ಗೇ—ಗಡಿಕೋಟೆಯಲ್ಲಿ. ನರ್ಮದಾಕೂಲೆ—ನರ್ಮದೆಯ ದಂಡೆಯಮೇಲೆ, ನರ್ಮದಾ ನದಿಯೇ ಅಗ್ನಿಮಿತ್ರನ ರಾಜ್ಯದ ದಕ್ಷಿಣದಿಕ್ಕಿನ ಸೀಮಾ ರೇಷೆಯಾಗಿತ್ತು. ಅದರ ಆಚೆಗೆ ಬಲಿಷ್ಠರಾದ ವಿದರ್ಭರೂ, ಅಂಧ್ರರೂ ಇರುತ್ತಿದ್ದರು. ಆದ್ದ ರಿಂದ ಗಡಿಕೋಟೆಯನ್ನು ಸಂರಕ್ಷಿಸಲು, ಪ್ರಾಮಾಣಿಕನೂ, ವಿಶ್ವಾಸಾರ್ಹನೂ ಆದ ವೀರಸೇನನು ನಿಯಮಿಸಲ್ಪಟ್ಟಿದ್ದನು. ಸ್ಥಾಪಿತಃ—ಸ್ಥಾ (೧. ಪ) ಧಾತುವಿನ ಪ್ರಯೋಜಕರೂಪದ ಕರ್ಮಣಿ ಭೂ. ಧಾ. ವಿ. (ಪು). ಪ್ರ. ಏ. ವ. ಶಿಲ್ಪಾಧಿಕಾರೇ ಯೋಗ್ಯಾ—ಲಲಿತ ಕಲೆಗಳಲ್ಲಿ ಶಿಕ್ಷಣಪಡೆಯಲು ಯೋಗ್ಯಳು. ಉಪಾಯನಂ—ಕಾಣಿಕೆ. ಗುಲಾಮರನ್ನು ಒಳ್ಳೆಯ ರೀತಿಯಲ್ಲಿ ನಡಿಸಿಕೊಳ್ಳ

ಲಾಗುತ್ತಿತು. ಅವರಿಗೆ ಅವರವರ ಯೋಗ್ಯತೆಗೆ ತಕ್ಕ ಶಿಕ್ಷಣವನ್ನು ಕೊಡಲಾಗುತ್ತಿತ್ತು. ಆಕೃತಿ.......ಯಾತ್ — ಇವಳ ಅಲೌಕಿಕ ರೂಪದ ಮೂಲಕ ನನಗಾದ ಮನವರಿಕೆಯಿಂದ. ಸುಂದರ ರೂಪವಿದ್ದಲ್ಲಿ ಉತ್ತಮ ಗುಣಗಳೂ ಇರುವದಾಗಿ ಸಂಸ್ಕೃತ ಕವಿಗಳ ನಂಬಿಕೆ. ಅಂತೆಯೇ ಇವಳು ಉಚ್ಚ ಕುಲದವಳೆಂದು ಗಣದಾಸನ ಊಹೆ. ತು. ನೋ. ಯತ್ರ ಆಕೃತಿಃ ತತ್ರ ಗುಣಾಃ ಸಂತಿ। ನ ತಾದೃಶಾ ಆಕೃತಿವಿಶೇಷಾ ಗುಣವಿರೋಧಿನೋ ಭವಂತಿ (ಶಾಕುಂತಲ) ಅನೂನವಸ್ತುಕಾ — ಕೀಳು ಅಲ್ಲದ, ಎಂದರೆ ಉಚ್ಚಕುಲದಲ್ಲಿ ಹುಟ್ಟಿದವಳು. ನ ನೂನಮ್ ಅನೂನಂ (ನ.ತ)। ಅನೂನಂ ವಸ್ತು ಯಸ್ಯಾಃ ಸಾ ಅ.......ಕಾ (ಬ. ಸ.)। ತಾಂ। ಅನೂನ — ಉಚ್ಚ, ಕೀಳು ಅಲ್ಲದ. ವಸ್ತು — ಜನ್ಮ, ಕುಲ. ಸಂಭಾವಯಾಮಿ — ಊಹಿಸುತ್ತೇನೆ. ಸಮ್ + ಭೂ (೧. ಪ) ಧಾತುವಿನ ಪ್ರಯೋಜಕ ರೂಪದ ವ. ಪ್ರ. ಪ್ರ. ಏ. ವ. ಮಯಾ.........ಭವಿತವ್ಯಮ್ — ನಾನಾದರೂ ಪ್ರಸಿದ್ಧನಾಗುವೆ. ನನ್ನ ಶಿಷ್ಯಳಾದ ಮಾಲವಿಕೆಯಿಂದ ನಾನು ಪ್ರಸಿದ್ಧಿ ಹೊಂದುವೆ. ಶಿಷ್ಯರ ಪಾಂಡಿತ್ಯದಿಂದ ಗುರುಗಳು ಪ್ರಸಿದ್ಧರಾಗುವದು ನಿಜವಾಗಿಯೂ ಗುರುಗಳಿಗೆ ಅಭಿಮಾನದ ವಿಷಯ. ಅಹಂ ಯಶಸ್ವೀ ಭವೇಯಂ ಎಂಬುದು ಇದರ ಕರ್ತರಿ ಪ್ರಯೋಗ.

**ಶ್ಲೋಕ ೩. ಅನ್ವಯಃ**— ಪಯೋದಸ್ಯ ಸಮುದ್ರಶುಕ್ತೌ ನ್ಯಸ್ತಂ ಜಲಂ ಮುಕ್ತಾ ಫಲತಾಂ ಇವ ಆಧಾತುಃ ಪಾತ್ರವಿಶೇಷೇ ನ್ಯಸ್ತಂ ಶಿಲ್ಪಂ ಗುಣಾಂತರಂ ವ್ರಜತಿ।

ಸತ್ಪಾತ್ರದಲ್ಲಿ ಉಪದೇಶ ಮಾಡಿದ ವಿದ್ಯೆಯು ಫಲದಾಯಕವಾಗುವದೆಂದು ಈ ಶ್ಲೋಕದ ಅಭಿಪ್ರಾಯ,

ಪಯೋದಃ — ಮೋಡ, ಪಯಃ ದದಾತಿ ಇತಿ (ಉಪ. ತ.)। ಶುಕ್ತಿಃ— ಶಿಂಪು. ಸಮುದ್ರಸ್ಯ ಶುಕ್ತಿಃ ಸ.......ಕ್ತಿಃ (ಷ. ತ. ಸ.)। ತಸ್ಯಾಂ। ನ್ಯಸ್ತ— (ನಿಹಿತ) ಬಿದ್ದ, ಚೆಲ್ಲಿದ, ಇಡಲ್ಪಟ್ಟ, ನಿ+ಅಸ್ (೪.ಪ) ಧಾತುವಿನ ಕರ್ಮಣಿ ಭೂ. ಧಾ. ಸಾ. ವಿ. ಮುಕ್ತಾಫಲಂ — ಮುತ್ತು. ಸೂರ್ಯನು ಸ್ವಾತೀ ನಕ್ಷತ್ರದಲ್ಲಿರುವಾಗ ಸಮುದ್ರದ ಶಿಂಪಿನೊಳಗೆ ಬಿದ್ದ ಮಳೆಯ ಹನಿಯು ಮುತ್ತಾಗುವದೆಂದು ಪ್ರಾಚೀನ ನಂಬಿಕೆ. ತು. ನೋ. ಸ್ವಾತ್ಯಾಂ ಸಾಗರಶುಕ್ತಿಮಧ್ಯಪತಿತಂ ಸನ್ಮೌಕ್ತಿಕಂ ಜಾಯತೇ। ಆಧಾತುಃ — ಗುರು

ಗಳ, ಶಿಕ್ಷಕನ. ಶಿಲ್ಪಂ—ಕಲೆ, ಜಾಣ್ಮೆ. ಪಾತ್ರವಿಶೇಷೇ– (i) ಯೋಗ್ಯ ವಿದ್ಯಾರ್ಥಿಯಲ್ಲಿ. (ii) ಯೋಗ್ಯ ಸಿಂಪಿನಲ್ಲಿ. ಗುಣಾಂತರಂ— (i) ಗುಣ ವಿಶೇಷ, ಗುಣಾಧಿಕ್ಯ. (ii) ಬೇರೆ ಬೇರೆ ಗುಣಗಳು. ಅನ್ಯಃ ಗುಣಃ ಗುಣಾಂತರವ್ । (ಕ. ಸ.)

ಸೂರ್ಯನು ಸ್ವಾತೀ ನಕ್ಷತ್ರದಲ್ಲಿರುವಾಗ ಸಮುದ್ರದ ಬರಿದಾದ ಸಿಂಪಿನಲ್ಲಿ ಬಿದ್ದ ಮಳೆಯ ನೀರು ಮುತ್ತಾಗುವಂತೆ, ಯೋಗ್ಯ ವಿದ್ಯಾರ್ಥಿಗೆ ಕೊಟ್ಟ ಉಪದೇಶವು ಹೆಚ್ಚು ಉನ್ನತಿ ಪಡೆಯುತ್ತದೆ. ಎಂದರೆ ಕಲಿಸುವ ವಿದ್ಯೆ ಫಲದಾಯಕವಾಗುವದು ವಿದ್ಯಾರ್ಥಿಯನ್ನೇ ಕೂಡಿದೆ. ಏಕೆಂದರೆ ಗುರುಗಳು ಜಾಣ ವಿದ್ಯಾರ್ಥಿಗೆ ಕಲಿಸುವಂತೆಯೇ ಧಡ್ಡ ವಿದ್ಯಾರ್ಥಿಗೂ ಕಲಿಸುವರು. ಆದರೆ ಪರಿಣಾಮದಲ್ಲಿ ಮಾತ್ರ ಮಹದಂತರ ಕಂಡು ಬರುವದು. ಏಕೆಂದರೆ ಸ್ವಚ್ಛವಾದ ರತ್ನವು ಪ್ರತಿಬಿಂಬವನ್ನು ಗ್ರಹಿಸಬಲ್ಲದು. ಮಣ್ಣಿನ ಮುದ್ದೆ ಮಾತ್ರ ಪ್ರತಿಬಿಂಬ ಧರಿಸಲಾರದು. ಇದೇ ಮಾತನ್ನು ಭವಭೂತಿ ಕವಿ ತನ್ನ 'ಉತ್ತರ ರಾಮ ಚರಿತ'ವೆಂಬ ನಾಟಕದಲ್ಲಿ ಬಹು ಸುಂದರವಾಗಿ ಹೇಳಿದ್ದಾನೆ.

ವಿತರತಿ ಗುರುಃ ಪ್ರಾಜ್ಞೇ ವಿದ್ಯಾಂ ಯಥೈವ ತಥಾ ಜಡೇ ।
ನ ಚ ಖಲು ತಯೋರ್ಜ್ಞಾನೇ ಶಕ್ತಿಂ ಕರೋತ್ಯಪಹಂತಿ ವಾ ।
ಭವತಿ ಚ ಪುನರ್ಭೂಯಾನ್ಭೇದಃ ಫಲಂಪ್ರತಿ ತದ್ಯಥಾ ।
ಪ್ರಭವತಿ ಶುಚಿರ್ಬಿಂಬಗ್ರಾಹೇ ಮಣಿರ್ನಮೃದಾಂ ಚಯಃ ॥

**ಪಂಚಾಂಗಾಭಿನಯಃ**—ಪಂಚ ಅಂಗಾನಿ ಯಸ್ಯ ತತ್ ಪಂಚಾಂಗವ್ (ಬ.ಸ.)। ತಸ್ಯ ಅಭಿನಯಃ, ಐದು ಅವಯಗಳಿಂದ ಹಾವಭಾವಗಳು. (i) ಎರಡು ಕೈ, ಎರಡು ಕಾಲು, ಮತ್ತು ತಲೆಯಿಂದ ಮಾಡುವ ಹಾವ ಭಾವಗಳು. (ii) ಚಿತ್ತ (ಮನಸ್ಸು), ಕಣ್ಣು, ಹುಬ್ಬು, ಕೈ ಮತ್ತು ಕಾಲುಗಳಿಂದ ಮಾಡುವ ಹಾವ ಭಾವಗಳು. ನಟ ಇಲ್ಲವೆ ನಟಿ ತಾನು ವಹಿಸಿದ ಪಾತ್ರದೊಡನೆ ಸಂಪೂರ್ಣ ಬೆರೆತುಕೊಂಡು, ಅದರೊಂದಿಗೆ ಸಮರಸವಾಗಿ ಯೋಗ್ಯ ಹಾವ ಭಾವಗಳೊಡನೆ ಅಭಿನಯಸಾಗಿಸಬೇಕು.

ಅಭಿನಯದಲ್ಲಿ ಆಂಗಿಕ, ವಾಚಿಕ, ಆಹಾರ್ಯ, ಸಾತ್ವಿಕ ಎಂಬ ನಾಲ್ಕು ಪ್ರಕಾರಗಳಿವೆ.

ದೀ........ಮತಾ—ಸರೋವರ ಕಾಣುವ ಕಿಡಿಕಿಯ ಬಳಿಗೆ ಹೋಗಿ, ದೀರ್ಘಿಕಾ-ಕೆರೆ, ಸರೋವರ, ಭಾವಿ. ಹೆಚ್ಚಾಗಿ ಅರಮನೆಯ ಬಳಿಯಲ್ಲಿ

ರುವ ಕಮಲಗಳುಳ್ಳ ಸರೋವರ ಇಲ್ಲವೆ ಕೆರೆ. ಗವಾಕ್ಷಃ—ಗೋಃ ಅಕ್ಷಿ ಇವ ಅಕ್ಷಿ ಯಸ್ಯ ಸಃ (ಬ. ಸ.)। ಕಿಡಿಕಿ. ದೀ.......ಕ್ಷಃ—ಸರೋವರ ಕಾಣುವ ಕಿಡಿಕಿ. ದೀರ್ಘಿಕಾ ಅವಲೋಕ್ಯತೇ ಅನೇನ ಇತಿ ದೀ........ನಃ. ದಿ....ನಃ ಗವಾಕ್ಷಃ, ದೀ....ಕ್ಷಃ (ಕ.ಸ.). ತಂ ಗತಾ (ತತ್ಪುರುಷ ಸಮಾಸ)। ಪ್ರವಾತಮ್ — ಹೆಚ್ಚಾದ ಗಾಳಿಯನ್ನು ಅರ್ಥಾತ್ ಶ್ರಮಪರಿಹಾರಕವಾದ ತಂಗಾಳಿಯನ್ನು. ಪ್ರಕೃಷ್ಟಃ ವಾತಃ ಪ್ರವಾತಃ (ಪ್ರಾದಿ ತತ್ಪುರುಷ)। ತಂ। 'ಪಂಚಾಂಗಾಭಿನಯ' ದಿಂದ ದಣಿದ ಮಾಲವಿಕೆ ಸರೋವರದ ಎದುರು ಸಲ್ಲಿಯೇ ಇರುವ ಕಿಡಕೆಯ ಬಳಿಗೆಹೋಗಿ, ದಣುವಾರಿಸಿಕೊಳ್ಳಲು ಅಂದರೆ ವಿಶ್ರಾಂತಿಪಡೆಯಲು ಹೆಚ್ಚಾಗಿ ಬೀಸುತ್ತಿದ್ದ ತಂಗಾಳಿಯನ್ನು ಸೇವಿಸುತ್ತಿದ್ದಾಳೆ ಎಂದು ಗಣದಾಸನು ಹೇಳುತ್ತಾನೆ.

ಆಸೇವಮಾನಾ—ಆ+ಸೇವ್ (೧.ಆ) ಧಾತುವಿನ ವ. ಕೃ. ಪ. (ಸ್ತ್ರೀ) ಪ್ರ. ಏ. ವ. ಅನುಜಾನಾತು—ಅನು+ಜ್ಞಾ (೯. ಪ) ಧಾತುವಿನ ಆಜ್ಞಾರ್ಥ ತೃ. ಪು. ಏ. ವ. ಆಚಾರ್ಯಃ—ಗುರುಗಳು ಯಾವತ್....... ವರ್ಧಯಾಮಿ— ಗುರುಗಳು ನೀನು ಕಲಿತ ವಿದ್ಯೆಗೆ ಮೆಚ್ಚಿದ್ದಾರೆಂದು, ಮಾಲವಿಕೆಗೆ ಹೇಳಿ, ಅವಳ ಉತ್ಸಾಹ ಹಾಗೂ ಹುರುಪನ್ನು ಹೆಚ್ಚಿಸುವೆ ಎಂದು ಬಕುಲಾವಲಿಕೆ ನುಡಿಯುತ್ತಾಳೆ.

ವರ್ಧಯಾಮಿ—ವೃಧ್ (೧. ಆ) ಧಾತುವಿನ ಪ್ರಯೋಜಕರೂಪದ ವ. ಪ್ರ. ಪು. ಏ. ವ. ದೃಶ್ಯತಾಂ ಸಖೀ—ಗೆಳತಿ ನೋಡಲ್ಪಡಲಿ. ಗೆಳತಿ ಯನ್ನು ನೋಡು. ಸಖೀಂ ಪಶ್ಯ ಎಂಬದು ಇದರ ಕರ್ತರಿ ಪ್ರಯೋಗ. ಲಬ್ಧಕ್ಷಣಃ—ಲಬ್ಧಃ ಕ್ಷಣಃ ಯೇನ ಸಃ (ಬ. ಸ.)। ಬಿಡುವು ದೊರೆತವ. ಅವಕಾಶ ದೊರೆತವ. ಕ್ಷಣಃ—ಬಿಡುವು, ಅವಕಾಶ. ಪುರಸೊತ್ತು. *Leisure* 'ನಿರ್ವ್ಯಾಪಾರ ಸ್ಥಿತಿಃ' ಇತಿ ಟೀಕಾ। ಅಹಮಪಿ........ಗಚ್ಛಾಮಿ— ಗಣದಾಸನು ತನ್ನ ಬಹಳಷ್ಟು ವೇಳೆಯನ್ನು ಮಾಲವಿಕೆಗೆ ಶಿಕ್ಷಣ ಕೊಡು ವದಕ್ಕಾಗಿಯೇ ವಿನಿಯೋಗಿಸುತ್ತಿದ್ದನೆಂಬ ಸಂಗತಿ ಈ ವಾಕ್ಯದಿಂದ ತಿಳಿದು ಬರುತ್ತದೆ. ಮಾಲವಿಕೆಯ ಪ್ರಗತಿಯಲ್ಲಿಯೇ ಅವನು ಸಂತೋಷ ಪಡುತ್ತಿ ದ್ದನು. ಕಾರಣ ಮನೆಗೆ ಹೋಗಲು ಅವನಿಗೆ ಬಿಡುವು ದೊರೆತಿರಲಿಲ್ಲ. ಈಗ ಅನಾಯಾಸವಾಗಿ ಬಿಡುವು ದೊರೆತದ್ದರಿಂದ ಮನೆಗೆ ಹೋಗಲು ಇಚ್ಛಿಸು ತ್ತಾನೆ.

## EXERCISES.

೫. ಅಭ್ಯಾಸಕ್ಕಾಗಿ ಪ್ರಶ್ನೆಗಳು:—

(೧) ಭಾಷಾಂತರಿಸಿರಿ:— (i) ಕಾಮಂ ಖಲು............ಮೋಃ ಬಾಲಾ । ಪುಟ ೧೭. ಶ್ಲೋಕ ೧–೧೪. (ii) ಶ್ಲೋಕ ೩.

(೨) ವಿಗ್ರಹಿಸಿ ಸಮಾಸಗಳ ಹೆಸರು ಹೇಳಿರಿ:— ಮಿಥ್ಯಾಗೌರವಮ್ । ಭಿನ್ನರುಚೇಃ । ಅನೂನವಸ್ತುಕಾಮ್ । ಗುಣಾಂತರಮ್ । ದೀರ್ಘಿಕಾವಲೋಕನ ಗವಾಕ್ಷಗತಾ । ಪ್ರವಾತಮ್ ।

(೩) ರೂಪಗುರುತಿಸಿರಿ— ಅತಿಕ್ಲೇಶಯತಿ । ವಿಜ್ಞಾಪ್ಯತಾಮ್ । ಅತಿಕ್ರಾಮಂತೀಮ್ । ಛಲಿತವ್ಯಮ್ । ಅನುಜಾನಾತು । ವರ್ಧಯಾಮಿ ।

(೪) ಲಘುಟಿಪ್ಪಣಿ ಬರೆಯಿರಿ :— ಕುಲವಿದ್ಯಾ । ಕ್ರತುಃ । ನಾಟ್ಯಮ್ । ಉಮಾಕೃತ ವ್ಯತಿಕರಂ । ತ್ರೈಗುಣ್ಯಮ್ । ರಸಃ । ಛಲಿಕಮ್ । ಪಂಚಾಂಗಾಭಿನಯಃ ।

(೫) ಪ್ರಯೋಗ ಬದಲಿಸಿರಿ:— (i) ದೇವಾನಾಮಿದಮಾಮನಂತಿ ಮುನಯಃ ಕಾಂತಂ ಕ್ರತುಂ ಚಾಕ್ಷುಷಮ್ । (ii) ಮಯಾ ಯಶಸ್ವಿನಾ ಛಲಿತವ್ಯಮ್ ।

(೬) ವಾಕ್ಯಗಳಲ್ಲಿ ಉಪಯೋಗಿಸಿರಿ:— ಕಾಮಮ್ । ಅಪಿ । ತುಷ್ ।

(೭) ವಿಚಾರ ವಿಸ್ತರಿಸಿರಿ :— ನಾಟ್ಯಂ ಭಿನ್ನರುಚೇರ್ಜನಸ್ಯ ಬಹುಧಾಪ್ಯೇಕಂ ಸಮಾರಾಧನಮ್ ।

(೮) ಸಂಧಿ ಬಿಡಿಸಿರಿ:— ಕುತೋದೇವ್ಯಾಸ್ತತ್ಪಾತ್ರಮಾನೀತಮ್ । ಅಸ್ಯೋಪದೇಶಗ್ರಹಣೇ ।

# ೭. ಚಾಣಕ್ಯಚಂದನದಾಸಯೋಃ

೧. ಕವಿ ಹಾಗೂ ಕಾವ್ಯ:— ಈ ಪಾಠವನ್ನು 'ವಿಶಾಖದತ್ತ'ನ 'ಮುದ್ರಾರಾಕ್ಷಸ'ವೆಂಬ ನಾಟಕದಿಂದ ಆಯ್ದುಕೊಳ್ಳಲಾಗಿದೆ.

ವಿಶಾಖದತ್ತನ ಬಗ್ಗೆ ನಿಶ್ಚಿತ ವಿವರಗಳು ಗೊತ್ತಿಲ್ಲ. ಅವನ ಮುದ್ರಾರಾಕ್ಷಸ ನಾಟಕದ ಆಧಾರದಿಂದಲೇ ಕೆಲವೊಂದು ಸಂಗತಿಗಳು ಗೊತ್ತಾಗುತ್ತವೆ. ಇವನು ಸಾಮಂತ ವಟೇಶ್ವರದತ್ತನ ಮೊಮ್ಮಗ, ಮಹಾರಾಜ ಪೃಥುವಿನ (ಅಥವಾ ಭಾಸ್ಕರದತ್ತನ) ಮಗ. ಆದರೆ ಇವರು ಯಾರು, ಯಾವಾಗ ಮತ್ತು ಎಲ್ಲಿ ಇದ್ದರು, ಏನು ಮಾಡಿದರು ಮುಂತಾದವೊಂದೂ ನಿರ್ಧಾರವಾಗಿ ಗೊತ್ತಿಲ್ಲ. ವಿಶಾಖದತ್ತನಿಗೆ 'ದೇವ' ಎಂದು ಬಿರುದು ಇದ್ದುದಾಗಿ ತೋರುತ್ತದೆ. ಈ ಕವಿಗೆ ಆಶ್ರಯ ಕೊಟ್ಟವನು ಕಾನ್ಯಕುಬ್ಜದ ಅವಂತೀವರ್ಮ ರಾಜನು.

ವಿಶಾಖದತ್ತನ ಕಾಲ, ಬಹುಜನ ವಿದ್ವಾಂಸರ ಅಭಿಪ್ರಾಯದ ಮೇರೆಗೆ ಕ್ರಿ. ಶ. ೫ ಇಲ್ಲವೆ ೬ನೇ ಶತಮಾನ.

ಮುದ್ರಾರಾಕ್ಷಸವನ್ನು ಹೊರತುಪಡಿಸಿ ವಿಶಾಖದತ್ತನ ಬೇರೆ ಕೃತಿಗಳು ಇನ್ನೂ ದೊರೆತಿಲ್ಲ. ಆದರೆ ಇವನು ದೇವೀಚಂದ್ರಗುಪ್ತ (ಇದರ ಕೆಲವೊಂದು ಭಾಗ ಇತ್ತೀಚೆಗೆ ದೊರೆತಿವೆ.) ರಾಘವಾನಂದ, ಅಭಿಸಾರಿಕಾವಂಚಿತಕ ಎಂಬ ನಾಟಕಗಳನ್ನೂ ಬರೆದಿರುವದಾಗಿ ತಿಳಿದುಬರುತ್ತದೆ.

ವಿಶಾಖದತ್ತನು ಒಳ್ಳೆಯ ನಾಟಕಕಾರ; ನಾಟ್ಯಶಾಸ್ತ್ರದಲ್ಲಿ ನಾಟಕದ ಬಗ್ಗೆ ಹೇಳಿದ ಎಲ್ಲ ಲಕ್ಷಣಗಳನ್ನೂ ಇವನ ಮುದ್ರಾರಾಕ್ಷಸ ನಾಟಕದಲ್ಲಿ ನಾವು ಕಾಣಬಹುದು. ನ್ಯಾಯಶಾಸ್ತ್ರ ಮತ್ತು ಜ್ಯೋತಿಃಶಾಸ್ತ್ರಗಳಲ್ಲಿಯೂ ಇವನಿಗೆ ಸಾಕಷ್ಟು ಪಾಂಡಿತ್ಯವಿದ್ದಿತು. ಇವನದು ಗೌಡೀ ಶೈಲಿ; ಇದರಲ್ಲಿ 'ಋಜುತ್ವವೂ ಬಿಗುವೂ ಇವೆ; ಆದರೆ ಜಟಿಲತ್ವವಿಲ್ಲ. ಪಾತ್ರ, ಸನ್ನಿವೇಶ, ಸಂದರ್ಭಗಳಿಗೆ ಉಚಿತವಾಗಿದೆ; ವರ್ಣನೆಯಲ್ಲಿ ಮಿತಿ ಇದೆ.' ಸಂಭಾಷಣೆಯು ಭರದಿಂದ ಸಾಗುತ್ತದೆ. ಆದರೆ ಕಾಲಿದಾಸ-ಭವಭೂತಿ ಮುಂತಾದವರಲ್ಲಿ ಕಂಡುಬರುವ ಉಚ್ಚ ಹಾಗೂ ಉದಾತ್ತ ಕಲ್ಪನೆಗಳೂ, ವರ್ಣನಾಚಾತುರ್ಯವೂ ಇವನಲ್ಲಿ ಇಲ್ಲ. ಆದರೂ ಮುದ್ರಾರಾಕ್ಷಸವು, ರಾಜಕೀಯ ತಳಹದಿಯುಳ್ಳ ವಸ್ತುಸ್ವರೂಪ, ಉಚಿತ ಸನ್ನಿವೇಶ ರಚನೆ, ಸಜೀವ ಪಾತ್ರಗಳು, ಸ್ತ್ರೀ ಪಾತ್ರದ ಅಭಾವ, (ಕೊನೆಯ ಅಂಕದಲ್ಲಿ ಮಾತ್ರ ಚಂದನದಾಸನ

ಹೆಂಡತಿ ಬರುತ್ತಾಳೆ.) ಭರದಿಂದ ಸಾಗುವ ಸಂಭಾಷಣೆ, ಕಥೆ ಒಮ್ಮುಖ ವಾಗಿ ಬೆಳೆದು ಮುಗಿಯುವದು, ಓದುಗರಲ್ಲಿ ಕುತೂಹಲವನ್ನು ಕೆರಳಿಸುವದು, ಉಚ್ಚ ಹಾಗೂ ಉದಾತ್ತ ಧ್ಯೇಯಗಳನ್ನು ಸಾಧಿಸುವದಕ್ಕಾಗಿ ಉಪಯೋಗಿಸಿದ ಭೇದನೀತಿ ಮುಂತಾದವುಗಳ ಮೂಲಕ ಅಪೂರ್ವ ಸ್ಥಾನ ಗಳಿಸಿದೆ. ಅಂತೆಯೇ ಅದು ಹೆಚ್ಚಾಗಿ ಪಾಶ್ಚಿಮಾತ್ಯ ಪಂಡಿತರ ಮೆಚ್ಚುಗೆಗೆ ಪಾತ್ರ ವಾಗಿದೆ.

**ಮುದ್ರಾರಾಕ್ಷಸ ನಾಟಕದ ಕಥೆ:—** [ಚಂದ್ರಗುಪ್ತನು ಚಾಣಕ್ಯನ ಸಹಾಯದಿಂದ ನಂದರನ್ನು ಸಂಹಾರ ಮಾಡಿ ತಾನೇ ರಾಜನಾದನು. ಹಾಗೂ ಚಾಣಕ್ಯನನ್ನು ಮುಖ್ಯ ಮಂತ್ರಿಯನ್ನಾಗಿ ಮಾಡಿಕೊಂಡನು. ಆದರೆ ಚಾಣಕ್ಯ ನಿಗೆ ಆ ಹೊಣೆಯನ್ನು ಕೊನೆಯವರೆಗೂ ಸಾಗಿಸಿಕೊಂಡು ಹೋಗುವ ಇಚ್ಛೆ ಇರಲಿಲ್ಲ. ಅದಕ್ಕಾಗಿ ಅವನು ಹಿಂದಕ್ಕೆ ನಂದರ ಮುಖ್ಯಮಂತ್ರಿಯಾಗಿದ್ದ ಬುದ್ಧಿವಂತ ಅಮಾತ್ಯರಾಕ್ಷಸನನ್ನು ತನ್ನೆಡೆಗೆ ಒಲಿಸಿಕೊಂಡು, ಅವನಿಗೆ ಮುಖ್ಯಮಂತ್ರಿಯ ಪದವಿಕೊಟ್ಟು ತಾನು ತನ್ನ ಪರ್ಣಕುಟೀರಕ್ಕೆ ಹೋಗ ಬೇಕೆಂದು ಹವಣಿಸಿದನು. ಈ ಕಾರ್ಯವು ಚಾಣಕ್ಯನ ಕೈಯಲ್ಲಿ ಆಕಸ್ಮಿಕ ವಾಗಿ ದೊರೆತ ರಾಕ್ಷಸನ ಮುದ್ರೆಯುಂಗುರದ ಮೂಲಕ ಸಾಧಿಸಿತು. ಅಂತೆಯೇ ಈ ನಾಟಕಕ್ಕೆ ಮುದ್ರಾರಾಕ್ಷಸ (ಮುದ್ರೆಯುಂಗುರದ ಮೂಲಕ ರಾಕ್ಷಸನನ್ನು ಒಲಿಸಿಕೊಂಡಿದ್ದು) ಎಂಬ ಹೆಸರು ಬಂದಿದೆ.]

ನಿಪುಣಕನೆಂಬ ಗೂಢಚಾರನು ಆಕಸ್ಮಿಕವಾಗಿ ದೊರೆತ ರಾಕ್ಷಸನ ಮುದ್ರೆ ಯುಂಗುರವನ್ನು ಚಾಣಕ್ಯನಿಗೆ ತಂದುಕೊಡುತ್ತಾನೆ. ಆಗ ಚಾಣಕ್ಯನು ಅಮಾತ್ಯ ರಾಕ್ಷಸನ ಗೆಳೆಯನಾದ ಶಕಟದಾಸನಿಂದ 'ಹೆಸರು ಕುಲಗೋತ್ರಗಳಿಲ್ಲದ ಒಂದು ಕಾಗದವನ್ನು ಬರೆಸಿ ಅದಕ್ಕೆ ಈ ಉಂಗುರದಿಂದ ಮೊಹರು ಮಾಡಿಸಿ' ಅದನ್ನು ಸಿದ್ಧಾರ್ಥಕನೆಂಬ ತನ್ನ ಗೂಢಚಾರನಿಗೆ ಕೊಡುತ್ತಾನೆ. ಇದರಿಂದ ಶಕಟದಾಸನನ್ನು ಶೂಲಕ್ಕೇರಿಸುವ ಏರ್ಪಾಡಾಗುವದು. ಆದರೆ ಆಗ ಸಿದ್ಧಾರ್ಥಕನು ಬಂದು ಅವನನ್ನು ಬಿಡಿಸಿಕೊಳ್ಳುವನು ಹಾಗೂ ಇಬ್ಬರೂ ಓಡಿಹೋಗಿ ರಾಕ್ಷಸನ ಆಶ್ರಯ ಪಡೆಯುವರು. ಶಕಟದಾಸನ ಮೋಚನ ದಿಂದ ಸಂತುಷ್ಟನಾದ ರಾಕ್ಷಸನು ಸಿದ್ಧಾರ್ಥಕನಿಗೆ ತನ್ನ ಆಭರಣಗಳನ್ನು ಕೊಡುವನು. ಅವನಾದರೋ ಅವುಗಳನ್ನು ಒಂದು ಪೆಟ್ಟಿಗೆಯಲ್ಲಿ ಹಾಕಿ, ತಾನು ತಂದ ರಾಕ್ಷಸನ ಉಂಗುರದಿಂದ ಅದಕ್ಕೆ ಮೊಹರು ಮಾಡಿ, ಅದನ್ನು ರಾಕ್ಷಸನ ಬಳಿಯಲ್ಲಿಯೇ ಇಡುವನು. ಇತ್ತ ಚಾಣಕ್ಯನು ರಾಕ್ಷಸನ

ಗೆಳೆಯನಾದ ಚಂದನದಾಸನನ್ನು, ಅವನು ರಾಕ್ಷಸನ ಪರಿವಾರವನ್ನು ಬಚ್ಚಿಟ್ಟಿರುವನೆಂಬ ಆರೋಪದಿಂದ ಬಂಧಿಸುವನು. ಚಾಣಕ್ಯನ ಬುದ್ಧಿಬಲ ಹಾಗೂ ಭೇದತಂತ್ರದಿಂದ ಚಂದ್ರಗುಪ್ತನನ್ನು ಕೊಲ್ಲಿಸಬಯಸಿದ ರಾಕ್ಷಸನ ಎಲ್ಲ ಕುತಂತ್ರಗಳೂ ನಿಷ್ಫಲವಾಗುತ್ತವೆ. ಹಾಗೂ ಇದರಿಂದ ರಾಕ್ಷಸನ ಅಪಖ್ಯಾತಿ ಎಲ್ಲೆಡೆ ಹರಡುತ್ತದೆ. ವಿಷಕನ್ಯೆಯ ಮೂಲಕ ಪರ್ವತರಾಜನನ್ನು ಕೊಂದವನು ಅಮಾತ್ಯರಾಕ್ಷಸನೆಂದು ಪ್ರಸಿದ್ಧವಾಗುತ್ತದೆ. ಇದರಿಂದ ಪರ್ವತ ರಾಜನ ಮಗನಾದ ಮಲಯಕೇತುವಿಗೆ ರಾಕ್ಷಸನಲ್ಲಿದ್ದ ವಿಶ್ವಾಸ ತಪ್ಪುತ್ತದೆ. ಸಿದ್ಧಾರ್ಥಕನಾದರೋ ಇದಕ್ಕೆ ಪುಟ ಕೊಡುತ್ತಾನೆ. ಸಿದ್ಧಾರ್ಥಕನು ಓಂದೆ ಹೆಸರು ಕುಲಗೋತ್ರಗಳಿಲ್ಲದೆ ಶಕಟದಾಸನಿಂದ ಬರೆಸಿದ [illegible] ರಾಕ್ಷಸನ ಮುದ್ರಿಕೆಯಿಂದ ಮೊಹರು ಮಾಡಿಸಿದ್ದ ಆಭರಣಗಳ ಪೆಟ್ಟಿಗೆ ಯನ್ನೂ ತೆಗೆದುಕೊಂಡು ಹೋಗುತ್ತ ಬೇಕೆಂದು ಸಿಕ್ಕಿಬಿದ್ದು, ಮಲಯ ಕೇತುವಿಗೆ ಅದೆಲ್ಲ ರಾಕ್ಷಸನ ಉಪಾಯವೆಂದೂ ಅವನು ಚಂದ್ರಗುಪ್ತನ ಪ್ರಸಾದಾಪೇಕ್ಷಿಯೆಂದೂ ತಿಳಿಸುವನು. ಕಾರಣ, ಚಾಣಕ್ಯ-ಚಂದ್ರಗುಪ್ತರ ಕೃತಕಕಲಹ ನಿಜವೆಂದು ನಂಬಿ ಅವರಮೇಲೆ ದಂಡೆತ್ತಿ ಹೊರಟ ರಾಕ್ಷಸನಿಗೆ ಮಲಯಕೇತುವಿನ ಸಹಾಯ ದೊರೆಯುವದಿಲ್ಲ. ಮೇಲಾಗಿ ರಾಕ್ಷಸನ ಇತರ ಸಹಾಯಕರೂ ಬಂಧಿಸಲ್ಪಡುವರು. ಹೀಗಾಗಿ ಉಪಾಯಗಾಣದೆ ಅಮಾತ್ಯರಾಕ್ಷಸನು ಪಾಟಲಿಪುರದ ತೋಟಕ್ಕೆ ಬರುವನು. ಅಲ್ಲಿ ನೇಣುಹಾಕಿ ಕೊಳ್ಳಲು ಪ್ರಯತ್ನಿಸುತ್ತಿದ್ದ ಉದುಂಬರನಿಂದ, ಚಂದನದಾಸನು ರಾಕ್ಷಸನಿ ಗಾಗಿ ಶೂಲಕ್ಕೇರಿಸಲ್ಪಡುತ್ತಿದ್ದಾನೆ ಎಂಬ ವರ್ತಮಾನಕೇಳಿ, ಸ್ಮಶಾನದೆಡೆಗೆ ಧಾವಿಸುವನು. ಹಾಗೂ ಚಂದನದಾಸನಬದಲು ತನನ್ನು ಶೂಲಕ್ಕೇರಿಸಬೇಕೆಂದು ಬಿನ್ನಯಿಸುವನು. ಆಗ ಚಾಣಕ್ಯ ಹಾಗೂ ಚಂದ್ರಗುಪ್ತರು ಅವನಿಗೆ ಮಂತ್ರಿಪದ ಸ್ವೀಕರಿಸಲು ಪ್ರಾರ್ಥಿಸುವರು. ಚಂದನದಾಸನನ್ನು ಉಳಿಸಿಕೊಳ್ಳಲು ಅವನು ಅನಿವಾರ್ಯವಾಗಿ ಒಪ್ಪಿಕೊಳ್ಳುವನು. ಮಲಯಕೇತುವಿಗೆ ತಂದೆಯ ರಾಜ್ಯ ದೊರೆಯುತ್ತದೆ; ಚಂದನದಾಸನಿಗೆ ಜಗತ್ತಿನಲ್ಲಿಯ ಎಲ್ಲ ಪಟ್ಟಣಗಳ ಮುಖ್ಯ ವ್ಯಾಪಾರಸ್ಥನೆಂಬ ಹುದ್ದೆ ಲಭಿಸುತ್ತದೆ; ಮತ್ತು ಚಾಣಕ್ಯನು ತನ್ನ ಜುಟ್ಟವನ್ನು ಕಟ್ಟುವನು.

**೨. ಕಥಾಸಂದರ್ಭ ಹಾಗೂ ಪಾಠದ ಸಾರಾಂಶ:—**

ಚಾಣಕ್ಯನು ನಂದರನ್ನು ಸೋಲಿಸಿ ಚಂದ್ರಗುಪ್ತನನ್ನು ಪಟ್ಟಕ್ಕೆ ಕೂಡಿಸಿದನು ಮತ್ತು ರಾಜ್ಯಸ್ಥಿರವಾಗಿ ಉಳಿಯುವಂತೆ ತುಂಬಾ ಜಾಗರೂಕತೆ

ವಹಿಸಿದನು. ಇದಕ್ಕಾಗಿ ನಂದರ ಮುಖ್ಯಮಂತ್ರಿಯಾಗಿದ್ದ ಅಮಾತ್ಯ ರಾಕ್ಷಸನ ಮನೆಯ ಜನರನ್ನು ಬಚ್ಚಿಟ್ಟಿರುವನೆಂಬ ಆರೋಪದಿಂದ ಚಾಣಕ್ಯನು ಅಮಾತ್ಯನ ಪರಮಸ್ನೇಹಿತನಾದ ಚಂದನದಾಸನನ್ನು ಕರೆಕಳಿಸುವನು. ಹಾಗೂ ಅವನಿಗೆ ರಾಕ್ಷಸನ ಮನೆಯವರನ್ನು ಒಪ್ಪಿಸಬೇಕೆಂದೂ ಇಲ್ಲವಾದರೆ ಉಗ್ರಶಿಕ್ಷೆಗೆ ಗುರಿಯಾಗಬೇಕಾಗುವದೆಂದೂ ತಿಳಿಸುವನು. ನಿಷ್ಠಾವಂತ ಚಂದನದಾಸನು ಚಾಣಕ್ಯನ ಬೆದರಿಕೆಗೆ ಸೊಪ್ಪು ಹಾಕುವದಿಲ್ಲ. ಮಿತ್ರನಾದ ಅಮಾತ್ಯರಾಕ್ಷಸನ ಹಿತ ಸಾಧಿಸಲು ತನ್ನ ಪ್ರಾಣವನ್ನು ಕೂಡ ಕೊಡಲು ಸಿದ್ಧನಾಗುತ್ತಾನೆ.

೩. ಭಾಷಾಂತರ:—

೭. ಚಾಣಕ್ಯ—ಚಂದನದಾಸರ (ವಾಗ್ವಾದ).

ಚಾಣಕ್ಯ:– ಮಗೂ, ದೊಡ್ಡ ರತ್ನವ್ಯಾಪಾರಿಯಾದ ಚಂದನದಾಸನನ್ನು ಈಗ ನೋಡಲಿಚ್ಛಿಸುತ್ತೇನೆ.

ಶಿಷ್ಯ:– (ಹಾಗೆಯೇ) ಆಗಲಿ (ಎಂದು ಹೊರಟು ಹೋಗಿ, ಚಂದನ ದಾಸನೊಂದಿಗೆ ಪ್ರವೇಶಿಸಿ) ಶೆಟ್ಟರೇ, ಇತ್ತ ಕಡೆ, ಇತ್ತ ಕಡೆ (ಬನ್ನಿರಿ).

ಚಂದನದಾಸ:– (ತನ್ನಲ್ಲಿ)

ನಿರ್ದಯನಾದ ಚಾಣಕ್ಯನಿಂದ ಆಕಸ್ಮಿಕವಾಗಿ ಕರೆಕಳುಹಲ್ಪಟ್ಟ ನಿರ್ದೋಷಿಯಾದ ಮನುಷ್ಯನಿಗೂ ಕೂಡ ಹೆದರಿಕೆ ಹುಟ್ಟುತ್ತದೆ; ಎಂದ ಮೇಲೆ, ದೋಷಿಯಾದ ನನಗೆ ಅದೆಷ್ಟು ಭೀತಿ ಹುಟ್ಟಬೇಡ? (೧)

ಆದ್ದರಿಂದ, ನನ್ನ ಮನೆಯಲ್ಲಿದ್ದ ಧನಸೇನ ಮೊದಲಾದವರಿಗೆ ನಾನು (ಹೀಗೆ) ಹೇಳಿದ್ದೇನೆ. 'ದುಷ್ಟ ಚಾಣಕ್ಯನು ಎಂದಾದರೂ (ಒಮ್ಮಿಲ್ಲೊಮ್ಮೆ) ನನ್ನ ಮನೆ ಶೋಧಿಸುವನು. ಆದ್ದರಿಂದ ಲಕ್ಷ್ಯಪೂರ್ವಕವಾಗಿ ಒಡೆಯನಾದ ಅಮಾತ್ಯರಾಕ್ಷಸನ ಮನೆಜನರನ್ನು ಸಾಗಿಸಿರಿ (ಕರೆದುಕೊಂಡು ಹೋಗಿರಿ). ನನಗಾದರೋ, ಏನು ಆಗುವದಿದೆಯೋ (ಅದೆಲ್ಲ) ಆಗಲಿ'.

ಶಿಷ್ಯ:– ಶೆಟ್ಟರೇ, ಇತ್ತ ಬನ್ನಿರಿ, ಇತ್ತ ಬನ್ನಿರಿ.

ಚಂದನದಾಸ:– ಇಗೋ ನಾನು ಬರುತ್ತೇನೆ. (ಇಬ್ಬರೂ ಸುತ್ತಲು ತಿರುಗುತ್ತಾರೆ.)

ಶಿಷ್ಯ:–(ಸಮೀಪಕ್ಕೆ ಸರಿದು)ಗುರುಗಳೇ, ಇವರು ಚಂದನದಾಸಶೆಟ್ಟರು.

ಚಂ:– ಪೂಜ್ಯರಿಗೆ ಜಯವಾಗಲಿ.

ಚಾ:– (ನೋಡಿದಂತೆ ನಟಿಸಿ) ಶೆಟ್ಟರೇ, ಸ್ವಾಗತವು. ಈ ಆಸನದ ಮೇಲೆ ಕೂಡಿರಿ.

ಚಂ:– (ನಮಸ್ಕಾರಮಾಡಿ) ಯೋಗ್ಯವಲ್ಲದ ಸತ್ಕಾರವು ಮನಸ್ಸಿಗೆ ಅವಮಾನಕ್ಕಿಂತಲೂ ಹೆಚ್ಚು ದುಃಖವನ್ನುಂಟುಮಾಡುತ್ತದೆಂದು ಪೂಜ್ಯರಿಗೆ ಗೊತ್ತಿಲ್ಲವೇ ? ಆದ್ದರಿಂದ ಇಲ್ಲಿಯೇ (ನನಗೆ) ಯೋಗ್ಯವಾದ ನೆಲದ ಮೇಲೆ ಕೂಡುವೆನು.

ಚಾ:– ಶೆಟ್ಟರೇ, ಬೇಡ, ಹಾಗೆ ಬೇಡ. ನಮ್ಮಂಥವರು ನಿಮಗೆ ಈ ರೀತಿ ಸತ್ಕರಿಸುವದು ಯುಕ್ತವೇ. ಆದ್ದರಿಂದ (ಈ) ಆಸನದ ಮೇಲೆಯೇ ಕುಳಿತುಕೊಳ್ಳಿರಿ.

ಚಂ:– (ತನ್ನಲ್ಲಿ) ಈ ದುಷ್ಟನು ಏನೋ ಒಂದು (ಒಳ್) ಎಸೆದಿದ್ದಾನೆ. (ಪ್ರಕಟವಾಗಿ) ಪೂಜ್ಯರು ಅಪ್ಪಣೆ ಕೊಟ್ಟಂತೆ ( ಮಾಡುವೆನು. ) (ಎಂದು ಕುಳಿತುಕೊಳ್ಳುತ್ತಾನೆ.)

ಚಾ:– ಚಂದನದಾಸ ಶೆಟ್ಟರೇ, ನಿಮ್ಮ ಪ್ರಾಮಾಣಿಕ ವ್ಯವಹಾರದ ಬಡ್ಡಿ ಹಾಗೂ ಲಾಭಗಳು ಹೆಚ್ಚಾಗುತ್ತಿವೆಯೋ?

ಚಂ:– (ತನ್ನಲ್ಲಿ) ಅತಿಯಾದ ಆದರವು ಅಂಜಿಕೆಯನ್ನು (ಸಂಶಯವನ್ನು) ಹುಟ್ಟಿಸುತ್ತದೆ. (ಪ್ರಕಟವಾಗಿ) ಹೌದು, ಪೂಜ್ಯರ ಅನುಗ್ರಹದಿಂದ ನನ್ನ ವ್ಯವಹಾರವು ಆತಂಕವಿಲ್ಲದೆ ಸಾಗಿದೆ.

ಚಾ:– ಈಗ, ಚಂದ್ರಗುಪ್ತನ ದೋಷಗಳು ಪ್ರಜೆಗಳಿಗೆ ಹಿಂದಿನ ಅರಸರ (ನಂದ) ಗುಣಗಳನ್ನು ನೆನಪಿಗೆ ತಂದುಕೊಡುವದಿಲ್ಲವಷ್ಟೇ?

ಚಂ:– (ಎರಡೂ ಕಿವಿಗಳನ್ನು ಮುಚ್ಚಿಕೊಂಡು) ಪಾಪವು ಪರಿಹಾರವಾಗಲಿ.

ಶರತ್ಕಾಲದ ಪೌರ್ಣಿಮೆಯಂದು ಉದಯಿಸಿದ ಪೂರ್ಣ ಚಂದ್ರನಂತೆ ಇರುವ ಚಂದ್ರಗುಪ್ತ ರಾಜನಿಂದ ಪ್ರಜೆಗಳು ಹೆಚ್ಚು ಸಂತೋಷ ಪಡುತ್ತಾರೆ. (೨.)

ಚಾ:– ಶೆಟ್ಟರೇ, ಹೀಗಿದ್ದರೆ, ಅರಸರು ಸಂತುಷ್ಟರಾದ ಪ್ರಜೆಗಳಿಂದ ಮರಳಿ ತಮಗೆ ಇಷ್ಟವಾದುದನ್ನು ಅಪೇಕ್ಷಿಸುತ್ತಾರೆ.

ಚಂ:– ನನ್ನಿಂದ ಏನು ಮತ್ತು ಎಷ್ಟು (ದೊರೆಯಬೇಕೆಂದು) ಇಚ್ಛಿಸಲ್ಪಡುತ್ತದೆ ಎಂದು ಪ್ರಭುಗಳು ಅಪ್ಪಣೆಕೊಡಬೇಕು.

ಚಾ:–ಶೆಟ್ಟರೇ, ಇದು ಚಂದ್ರಗುಪ್ತನ ರಾಜ್ಯವು, ನಂದರ ರಾಜ್ಯವಲ್ಲ. ಏಕೆಂದರೆ, ಸಂಪತ್ತೇ ಪ್ರಿಯವಾಗಿಯುಳ್ಳ ನಂದರಿಗೆ ಮಾತ್ರ ಹಣ ದೊರೆಯು ವದರಿಂದ ಸಂತೋಷವಾಗುತ್ತದೆ; ಆದರೆ ಚಂದ್ರಗುಪ್ತನಿಗೆ, ನೀವು (ಪ್ರಜೆಗಳು) ತೊಂದರೆಯಿಲ್ಲದಲೆ ಇರುವದರಿಂದ ಸಂತೋಷವಾಗುತ್ತದೆ.

ಚಂ:– (ಆನಂದದಿಂದ) ಪೂಜ್ಯರೇ, ಅನುಗ್ರಹಿಸಲ್ಪಟ್ಟೆನು.

ಚಾ:– ಶೆಟ್ಟರೆ, ತೊಂದರೆ ಇಲ್ಲದೆ ಇರುವದು ಹೇಗೆ ವ್ಯಕ್ತವಾಗುತ್ತ ದೆಂದು ನೀವು ನಮಗೆ ಕೇಳಬೇಕು.

ಚಂ:– ಪೂಜ್ಯರು ಅಪ್ಪಣೆ ಕೊಡಬೇಕು.

ಚಾ:– ಸಂಕ್ಷೇಪವಾಗಿ ಹೇಳಬೇಕಾದರೆ, ರಾಜನಿಗೆ ವಿರೋಧವಾಗ ದಂತೆ ನಡೆಯುವದರಿಂದ.

ಚಂ:– ಪೂಜ್ಯರೇ, ಯಾವ ದುರ್ದೈವಿಯು ರಾಜನಿಗೆ ವಿರುದ್ಧವಾಗಿ ವರ್ತಿಸುತ್ತಾನೆಂದು ತಮಗೆ ತಿಳಿದುಬರುತ್ತದೆ?

ಚಾ:– ನೀವೇ ಮೊದಲಿನವರು.

ಚಂ:– (ಕಿವಿಗಳನ್ನು ಮುಚ್ಚಿಕೊಂಡು) ಪಾಪವು ಪರಿಹಾರವಾಗಲಿ, ಪಾಪವು ಪರಿಹಾರವಾಗಲಿ. ಹುಲ್ಲಿಗೆ ಬೆಂಕಿಯೊಡನೆ ಎಂತಹ ವಿರೋಧ?

ಚಾ:– ಈ ವಿರೋಧವು ಈ ಬಗೆಯದಾಗಿದೆ. ಏನಂದರೆ, ರಾಜನಿಗೆ ಅಹಿತಮಾಡುವ ಅಮಾತ್ಯ ರಾಕ್ಷಸನ ಮನೆಯ ಜನರನ್ನು ನಿನ್ನ ಮನೆಯಲ್ಲಿ ಇನ್ನೂ ರಕ್ಷಣೆ ಮಾಡುತ್ತೀ.

ಚಂ:– ಪೂಜ್ಯರೇ, ಇದು ಸುಳ್ಳು. ಅರಿಯದ ಯಾರೋ ಪೂಜ್ಯರಿಗೆ ಹೇಳಿರುವರು.

ಚಾ:– ಶೆಟ್ಟರೇ, ಅಂಜಿಕೆ ಸಾಕು. ಅಂಜಿದ ಹಿಂದಿನ ರಾಜಸೇವಕರು (ಕೆಲವು) ನಾಗರಿಕರ ಮನೆಗಳಲ್ಲಿ ಅವರ ಇಚ್ಛೆಗೆ ವಿರುದ್ಧವಾಗಿಯೂ ಕೂಡ ತಮ್ಮ ಮನೆಯವರನ್ನು ಇಟ್ಟು, ಬೇರೆ ದೇಶಕ್ಕೆ ಹೋಗುತ್ತಾರೆ. ಆದರೆ ಬಳಿಕ ಅವರನ್ನು ಬಚ್ಚಿಡುವದು (ಮಾತ್ರ) ಅಪರಾಧವಾಗುತ್ತದೆ. (ಶಬ್ದಶಃ ತಪ್ಪನ್ನು ಹುಟ್ಟಿಸುತ್ತದೆ).

ಚಂ:– ಇದು ನಿಜವಾಗಿಯೂ ಹೀಗಿದೆ. (ಎಂದರೆ ನೀವು ಹೇಳಿ ದಂತಿದೆ). ಆ ಕಾಲಕ್ಕೆ, ಅಮಾತ್ಯರಾಕ್ಷಸನ ಮನೆಯವರು ನಮ್ಮ ಮನೆ ಯಲ್ಲಿದ್ದರು.

ಚಾ:– ಮೊದಲು 'ಸುಳ್ಳು' ( ಎಂದು ನುಡಿದುದು ), ಬಳಿಕ ಈಗ 'ಹಿಂದೆ ಇದ್ದರು' ಎನ್ನುವದು ಪರಸ್ಪರ ( ಒಂದಕ್ಕೊಂದು ) ವಿರುದ್ಧವಾದ ಮಾತುಗಳು.

ಚಂ:– ಇಷ್ಟೇ ನನ್ನ ಮಾತಿನ ದೋಷ !

ಚಾ:– ಶೆಟ್ಟರೇ, ಚಂದ್ರಗುಪ್ತನ ರಾಜನಲ್ಲಿ, ಮೋಸಕ್ಕೆ ಅವಕಾಶವಿಲ್ಲ. ಆದ್ದರಿಂದ ರಾಕ್ಷಸನ ಮನೆಯವರನ್ನು ಒಪ್ಪಿಸು ಮತ್ತು ಅಪ್ರಾಮಾಣಿಕತೆ-ಯಿಂದ ದೂರಾಗು.

ಚಂ:– ಪೂಜ್ಯರೇ, ಅಮಾತ್ಯರಾಕ್ಷಸನ ಮನೆಯವರು ನನ್ನ ಮನೆಯಲ್ಲಿ ಇದ್ದರು ಎಂದಿಷ್ಟೇ ನಾನು ವಿನಂತಿ ಮಾಡಿಕೊಳ್ಳುತ್ತೇನೆ.

ಚಾ:– ಈಗ ಎಲ್ಲಿ ಹೋದರು?

ಚಂ:– ನಾನರಿಯೆ.

ಚಾ:–(ಮುಗುಳ್ನಗೆ ನಕ್ಕು) ಅದು ಹೇಗೆ ತಾನೇ ಗೊತ್ತಾಗುವದಿಲ್ಲ.? ಶೆಟ್ಟರೇ, ಭಯ ತಲೆಯಮೇಲೆ, ಅದರ ನಿವಾರಣೆ (ನಿವಾರಿಸುವ ಉಪಾಯ ಮಾತ್ರ) ಬಲು ದೂರದಲ್ಲಿವೆ, ಮೇಲಾಗಿ, ವಿಷ್ಣುಗುಪ್ತನು ( ಚಾಣಕ್ಯನು ) ನಂದರನ್ನು ನಿರ್ಮೂಲಗೊಳಿಸಿದಂತೆ (ಎಂದು ಅರ್ಧ ನುಡಿಯುವದರಲ್ಲಿಯೇ, ನಾಚಿಕೆಯನ್ನು ತೋರಿಸಿ), ಅಮಾತ್ಯರಾಕ್ಷಸನು ಚಂದ್ರಗುಪ್ತನನ್ನು ನಿರ್ಮೂಲಗೊಳಿಸುವನು ಎಂದು ತಿಳಿಯಬೇಡ.

ಚಂ:– (ತನ್ನಲ್ಲಿ) ಈತನ ಜಂಭದ ಮಾತು ಫಲಕ್ಕೆ ಅನುಗುಣವಾಗಿದೆ.

(ಪರದೆಯಹಿಂದೆ ಗದ್ದಲ)

ಚಾ:– ಶಾರ್ಙ್ಗರವ, ಅದು ಏನೆಂದು ತಿಳಿದುಕೋ.

ಶಿಷ್ಯ:– ಆಗಲಿ (ಎಂದು ಹೊರಟು ಹೋಗಿ ಮತ್ತೆ ಪ್ರವೇಶಿಸಿ) ಗುರುಗಳೇ, ಚಂದ್ರಗುಪ್ತದೊರೆಯ ಆಜ್ಞೆಯಮೇರೆಗೆ ರಾಜನಿಗೆ ಅಹಿತಮಾಡುವ ಜೀವಸಿದ್ಧಿಯೆಂಬ ಜೈನ ಸನ್ಯಾಸಿಯು ಪಟ್ಟಣದಿಂದ ಅವಮಾನಪೂರ್ವಕವಾಗಿ ತಳ್ಳಲ್ಪಡುತ್ತಿದ್ದಾನೆ.

ಚಾ:– ಅಯ್ಯೋ ! ಜೈನಯತಿ ! ಅಥವಾ, (ಅವನು) ರಾಜನಿಗೆ ಅಹಿತ ಮಾಡಿದುದರ ಫಲ ಅನುಭವಿಸಲಿ. ಚಂದನದಾಸಶೆಟ್ಟರೇ, ಈ ರೀತಿ ಅರಸನು ಅಹಿತಮಾಡುವವರಿಗೆ ಉಗ್ರಶಿಕ್ಷೆ ವಿಧಿಸುವನು. ಆದ್ದರಿಂದ ಗೆಳೆಯನ (ನನ್ನ) ಹಿತಕರವಾದ ಮಾತಿನಂತೆ ಮಾಡು. ರಾಕ್ಷಸನ ಮನೆಯವರನ್ನು ಒಪ್ಪಿಸು,

(ಹಾಗೂ) ರಾಜನ ಅಸಾಧಾರಣ ಅನುಗ್ರಹವನ್ನು ಬಹುಕಾಲ ಭೋಗಿಸು. (ಶಬ್ದಶಃ, ಬಹುಕಾಲದ ವರೆಗೆ ಅನುಭವಿಸಲ್ಪಡಲಿ).

ಚಂ:— ಅಮಾತ್ಯನ ಮನೆಯವರು ನನ್ನ ಮನೆಯಲ್ಲಿಲ್ಲ.

(ಪರದೆಯ ಹಿಂದೆ, ಮತ್ತೆ ಗದ್ದಲ)

ಚಾ:— ಶಾರ್ಙರವನೇ, ಅದೇನೆಂದು ತಿಳಿದುಕೋ.

ಶಿಷ್ಯ:— ಆಗಲಿ. (ಎಂದು ಹೋಗಿ ಮತ್ತೆ ಪ್ರವೇಶಿಸಿ) ಗುರುಗಳೇ, ರಾಜನಿಗೆ ಕೇಡು ಮಾಡುವ ಈ ಬರಹಗಾರ ಶಕಟದಾಸನಾದರೋ ಶೂಲಕ್ಕೆ ಏರಿಸುವದಕ್ಕಾಗಿ ಒಯ್ಯಲ್ಪಡುತ್ತಿದ್ದಾನೆ.

ಚಾ:— ತನ್ನ (ಕೆಟ್ಟ) ಕೆಲಸದ ಫಲವನ್ನು ಅನುಭವಿಸಲಿ. ಶೆಟ್ಟರೇ, ಹೀಗೆ ಅಹಿತವಮಾಡುವವರಿಗೆ ಉಗ್ರಶಿಕ್ಷೆ ವಿಧಿಸುವ ರಾಜನು, ನೀನು ಅಮಾತ್ಯರಾಕ್ಷಸನ ಹೆಂಡತಿಯನ್ನು ಬಚ್ಚಿಟ್ಟದ್ದನ್ನು ಸಹಿಸಲಾರನು. ಆದ್ದರಿಂದ ಬೇರೆಯವರ ಹೆಂಡತಿಯನ್ನು ಒಪ್ಪಿಸಿ ನಿನ್ನ ಹೆಂಡತಿಯನ್ನೂ, ಜೀವವನ್ನೂ ಉಳಿಸಿಕೋ.

ಚಂ:— ಪೂಜ್ಯರೇ, ನನಗೆ ಅಂಜಿಕೆ ತೋರಿಸುವಿರೋ ? (ನನ್ನ ಮನೆಯಲ್ಲಿ) ಇದ್ದರೂ ಕೂಡ ಅಮಾತ್ಯರಾಕ್ಷಸನ ಮನೆಯವರನ್ನು ಒಪ್ಪಿಸಲಾರೆ; ಎಂದಮೇಲೆ ಇಲ್ಲದೆ ಇದ್ದವರನ್ನು ಒಪ್ಪಿಸುವದು ಹೇಗೆ ?

ಚಾ:— ಚಂದನದಾಸಾ, ಇದು ನಿಶ್ಚಯವೇ ?

ಚಂ:— ಅಹುದು, ಇದು ನನ್ನ ನಿಶ್ಚಯವು.

ಚಾ:— (ತನ್ನಲ್ಲಿ) ಭಲೆ ಚಂದನದಾಸ, ಭಲೆ, ಭಲೆ.

ಬೇರೆಯವರನ್ನು ದುಃಖಕ್ಕೆ ಈಡುಮಾಡುವದರಿಂದ (ಅಥವಾ ಪರರ ವಸ್ತುವನ್ನು ಒಪ್ಪಿಸುವದರಿಂದ) ಹಣವು ಸುಲಭವಾಗಿ ದೊರೆಯುವಾಗ, ಶಿಬಿಯನ್ನು ಬಿಟ್ಟು ಯಾವ ಮನುಷ್ಯನು ತಾನೇ ಮಾಡಲು ಕಠಿಣವಾದುದನ್ನು ಈಗ ಮಾಡುವನು?(ಪ್ರಕಟವಾಗಿ)ಚಂದನದಾಸಾ, ಇದು ನಿಶ್ಚಯವೋ? (೩)

ಚಂ:— ಅಹುದು.

ಚಾ:— (ಸಿಟ್ಟಿನಿಂದ) ದುಷ್ಟಾ, ದುರುಳವರ್ತಕಾ, ಹಾಗಾದರೆ ಅರಸನ ಸಿಟ್ಟನ್ನು ಅನುಭವಿಸು.

ಚಂ:— ಸಿದ್ಧನಿದ್ದೇನೆ. ಪೂಜ್ಯರು ತಮ್ಮ ಅಧಿಕಾರಕ್ಕೆ ತಕ್ಕಂತೆ ವರ್ತಿಸಲಿ.

ಚಾ:— ಶಾರ್ಙ್ಗರವನೇ, ನನ್ನ ಮಾತಿನ ಮೇರೆಗೆ, ಶಿಕ್ಷಿಸುವ ಕಾಲ-ಪಾಶನಿಗೆ, 'ಈ ದುಷ್ಟ ವರ್ತಕನು ಬೇಗ ಬಂಧಿಸಲ್ಪಡಲಿ' ಎಂದು ತಿಳಿಸು. ಅಥವಾ ಇರಲಿ. 'ಇವನ ಸರ್ವಸ್ವವನ್ನು ತೆಗೆದುಕೊಂಡು, ಇವನನ್ನು ಹೆಂಡತಿ ಮಕ್ಕಳು ಸಹಿತವಾಗಿ ಬಂಧಿಸಿ, ನಾನು ಚಂದ್ರಗುಪ್ತನಿಗೆ (ವೃಷಲ) ಹೇಳುವ ವರೆಗೆ ಇವನನ್ನು ರಕ್ಷಿಸು' ಎಂದು ಕೋಟೆಕಾಯುವ ವಿಜಯಪಾಲನಿಗೆ ಹೇಳು. ಚಂದ್ರಗುಪ್ತನೇ ಇವನಿಗೆ ಮರಣದಂಡನೆಯ ಶಿಕ್ಷೆವಿಧಿಸುವನು.

ಶಿಷ್ಯ:— ಗುರುಗಳು ಅಪ್ಪಣೆಕೊಟ್ಟಂತೆ ಮಾಡುವೆನು. ಶ್ರೇಷ್ಠಿಯೇ, ಇತ್ತ ಕಡೆ, ಇತ್ತ ಕಡೆ ಬನ್ನಿರಿ.

ಚಂ:— ಅಯ್ಯಾ, ಇಗೋ ನಾನು ಬರುತ್ತೇನೆ. ದುರ್ದೈವದಿಂದ ನನ್ನ ನಾಶವು ಗೆಳೆಯನ ಕೆಲಸಕ್ಕಾಗಿ (ಆಗುವದು); ಮಾನವ ಸಹಜವಾದ ನನ್ನ ತಪ್ಪಿನಿಂದಲ್ಲ. (ಸುತ್ತಲೂ ತಿರುಗಿ ಶಿಷ್ಯನೊಂದಿಗೆ ಹೊರಟು ಹೋಗುತ್ತಾನೆ).

—ಮುದ್ರಾರಾಕ್ಷಸ (ನಾಟಕ) ದ ೧ ನೆಯ ಅಂಕದಲ್ಲಿ

**೪. ಟೀಕೆ ಟಿಪ್ಪಣಿಗಳು:—**

**ಪುಟ ೧೯.** ಚಾಣಕ್ಯಚಂದನದಾಸಯೋಃ— ಚಾಣಕ್ಯಃ ಚ ಚಂದನದಾಸಃ ಚ ಚಾಣಕ್ಯಚಂದನದಾಸೌ (ದ್ವಂದ್ವ) ತಯೋಃ. ಚಾಣಕ ಮತ್ತು ಚಂದನದಾಸರ. ವಾಗ್ವಾದಃ (ಜಗಳ) ಎಂಬ ಶಬ್ದವು ಗುಪ್ತವಿದೆ. ಚಾಣಕ್ಯ— ಬ್ರಾಹ್ಮಣ ರಾಜಕಾರಣಿ. ನಂದರನ್ನು ಸೋಲಿಸಿ ಅವರ ರಾಜ್ಯವನ್ನು ಪಡೆಯಲಿಕ್ಕೆ ಚಂದ್ರಗುಪ್ತನಿಗೆ ಬಹಳ ನೆರವಾದನು, ಮುಂದೆ ಕೆಲಕಾಲ ಚಂದ್ರಗುಪ್ತನ ಮುಖ್ಯ ಮಂತ್ರಿಯಾಗಿ ಕೆಲಸಮಾಡಿದನು. ಇವನಿಗೆ ವಿಷ್ಣುಗುಪ್ತವೆಂಬ ಬೇರೊಂದು ಹೆಸರೂ ಇದೆ. ಕುಟಿಲನೀತಿ ಬೋಧಿಸಿದುದರಿಂದ ಇವನಿಗ ಕೌಟಿಲ್ಯ ಎಂಬ ಮೂರನೆಯ ಹೆಸರೂ ಪ್ರಾಪ್ತವಾಯಿತು. ಇವನು ಬರೆದ ಅರ್ಥಶಾಸ್ತ್ರವೆಂಬ ರಾಜನೀತಿ ಗ್ರಂಥವು ಜಗನ್ಮಾನ್ಯವಾಗಿದೆ. ಚಂದನ-ದಾಸ— ಇವನು ಅಮಾತ್ಯ ರಾಕ್ಷಸನ (ನಂದರ ಮುಖ್ಯ ಮಂತ್ರಿ) ಪರಮ ಸ್ನೇಹಿತ. ಅಂತೆಯೇ ರಾಕ್ಷಸನು ದೇಶಾಂತರಕ್ಕೆ ಹೋಗುವಾಗ ತನ್ನ ಮನೆಯ ಜನರನ್ನು ಇವನಲ್ಲಿ ಇರಿಸಿದ್ದನು. ಇವನು ನಿಜವಾಗಿಯೂ ಆದರ್ಶ ಮಿತ್ರನಾಗಿದ್ದನು. ಆದುದರಿಂದಲೇ ಗೆಳೆಯನಾದ ಅಮಾತ್ಯ ರಾಕ್ಷಸನಿಗೋಸ್ಕರ ಸರ್ವಸ್ವವನ್ನು ಕಳೆದುಕೊಂಡು ಪ್ರಾಣತ್ಯಾಗ ಮಾಡಲು ಕೂಡ ಸಿದ್ಧನಾದನು. ಇವನ ಈ ಬಗೆಯ ತ್ಯಾಗ ಗುಣ ಹಾಗೂ ನಿಷ್ಠೆ ಯಿಂದ ತನ್ನ ವೈರಿಯಾದ ಚಾಣಕ್ಯನ ಮೆಚ್ಚುಗೆಯನ್ನೂ ಪಡೆಯುತ್ತವೆ. (ಶ್ಲೋಕ ೩

ನೋಡಿರಿ). ಚಂದನದಾಸ ಎಂಬ ಹೆಸರು ಬಂಗಾಲೀ ಇಲ್ಲವೆ ಗುಜರಾಥೀ ಆಗಿರಬೇಕು. ಬಹುಶಃ ಬಂಗಾಲೀ ಇರಬಹುದು. ಮಣಿಕಾರಶ್ರೇಷ್ಠಿನಂ— ದೊಡ್ಡ ರತ್ನವ್ಯಾಪಾರಿ. ಮಣಿಕಾರಃ — ರತ್ನವ್ಯಾಪಾರಿ. ಶ್ರೇಷ್ಠಿನ್— (ಶ್ರೇಷ್ಠಂ ಧನಾದಿಕಂ ಅಸ್ಯ ಅಸ್ತಿ ಇತಿ.) ದೊಡ್ಡ ಇಲ್ಲವೆ ಮುಖ್ಯವರ್ತಕ. ಮಣಿಕಾರಃ ಚ ಅಸೌ ಶ್ರೇಷ್ಠೀ ಚ ಮ........ಷ್ಠೀ ( ಕ. ಸ. ). ತಂ. ತಥಾ - ಹಾಗೆಯೇ ಆಗಲಿ. ಒಳ್ಳೆಯದು. ನಿಷ್ಕ್ರಮ್ಯ ಹಾಗೂ ಪ್ರವಿಶ ಇವು ಅನುಕ್ರಮವಾಗಿ ನಿಸ್ + ಕ್ರಮ (೧. ಉ) ಮತ್ತು ಪ್ರ + ವಿಶ್ (೬. ಪ) ಧಾತುಗಳ ಲ್ಯಬಂತಾವ್ಯಗಳು. ಇತಃ ಇತಃ — ಇತ್ತ, ಇತ್ತ. ಎಂದರೆ ಇತ್ತ ಬನ್ನಿರಿ ಎಂಬ ಅರ್ಥ.

**ಶ್ಲೋಕ ೧ ಅನ್ವಯ.**— ಅಕರುಣೇನ ಚಾಣಕ್ಯೇನ ಸಹಸಾ ಶಬ್ದಾಯಿತಸ್ಯ ನಿರ್ದೋಷಸ್ಯ ಅಪಿ ಜನಸ್ಯ ಶಂಕಾ (ಜಾಯತೇ) ಜಾತ ದೋಷಸ್ಯ ಮಮ ಕಿಂ ಪುನಃ ।

ಅಕರುಣೇನ — ನಿರ್ದಯನಾದ. ನಾಸ್ತಿ ಕರುಣಾ ಯಸ್ಯ ಸಃ ಅಕರುಣಃ (ಬ. ಸ.). ತೇನ । ಸಹಸಾ— ಒಮ್ಮೆಲೆ. ಅಕಸ್ಮಾತ್ತಾಗಿ. ಮೊದಲು ಕಾರಣವನ್ನು ತಿಳಿಸದಲೆ. ಶಬ್ದಾಯಿತಸ್ಯ— 'ಶಬ್ದ' ಎಂಬ ನಾಮ ದಿಂದುಂಟಾದ 'ಶಬ್ದಾಯ್' ಎಂಬ ನಾಮಧಾತುವಿನ ಕ. ಭೂ. ಧಾ. ವಿ. (ಪು) ಷ. ಏ. ವ. ಕರೆಯಲ್ಪಟ್ಟ. ಕರೆಕಳುಹಲ್ಪಟ್ಟ. ನಿರ್ದೋಷಸ್ಯ— ನಿರ್ದೋಷಿಯಾದ. ನಿರಪರಾಧಿಯಾದ. ನಿರ್ಗತಃ ದೋಷಃ ಯಸ್ಮಾತ್ ಸಃ (ಬ. ಸ.) ತಸ್ಯ. ಶಂಕಾ— ಸಂಶಯ. ಭೀತಿ. ಅಂಜಿಕೆ. ಜಾತ ದೋಷಸ್ಯ— ಜಾತಃ ದೋಷಃ ಯಸ್ಮಿನ್ ಸಃ (ಬ. ಸ.) ತಸ್ಯ. ಕಿಂ ಪುನಃ — ಅದೆಷ್ಟು. ಎಂದ ಮೇಲೆ ಅದೆಷ್ಟು ಹೆಚ್ಚು. ತು. ಮಾ.— ಮೋಘಾಲೋಕೇ ಭವತಿ ಸುಖಿನೋಽಪ್ಯನ್ಯಥಾವೃತ್ತಿ ಚೇತಃ, ಕಂಠಾ ಶ್ಲೇಷಪ್ರಣಯಿನಿ ಜನೇ ಕಿಂ ಪುನರ್ದೂರಸಂಸ್ಥೇ ॥ ಅಚೇತನಾಃ ತರವಃ ಅಪಿ ಸಸಂಭ್ರಮಾ ಇವ ಲಕ್ಷ್ಯಂತೇ ಅಸ್ಯ ಭಗವತಃ, ಕಿಂ ಪುನಃ ಸಚೇತನಾಃ ಪ್ರಾಣಿನಃ ।

ಭಣಿತಾಃ— ಹೇಳಲ್ಪಟ್ಟಿದ್ದಾರೆ. ಭಣ್ (೧.ಪ) ಧಾತುವಿನ ಕರ್ಮಣಿ ಭೂ. ಧಾ. ವಿ. (ಪು) ಪ್ರ. ಬ. ವ. ಧನಸೇನ ಪ್ರಮುಖಾಃ— ಧನಸೇನ ಮೊದಲಾದವರು. ಧನಸೇನಃ ಪ್ರಮುಖಃ ಯೇಷಾಂ ತೇ (ಬ. ಸ.). ನಿಜನಿವೇಶಸಂಸ್ಥಿತಾಃ — ನನ್ನ ಮನೆಯಲ್ಲಿದ್ದ. ನಿಜಃ ನಿವೇಶಃ ನಿಜನಿವೇಶಃ

(ಕ. ಸ.) ತಸ್ಮಿನ್ ಸಂಸ್ಥಿತಾಃ (ಸ. ತ. ಸ.) ಕದಾಪಿ— ಎಂದಾದರೂ. **ಚಾಣಕ್ಯಹತಕಃ**— ದುಷ್ಟ ಚಾಣಕ್ಯನು. ಹತಃ ಏವ ಹತಕಃ। ಚಾಣಕ್ಯಶ್ಚಾಸೌ ಹತಕಶ್ಚ ಚಾಣಕ್ಯಹತಕಃ (ಕ. ಸ.). ಹತಕ ಎಂಬ ಶಬ್ದವು ದುಷ್ಟ, ನೀಚ, ಎಂಬ ಅರ್ಥದಲ್ಲಿ ಸಮಾಸದ ಕೊನೆಗೆ ಬರುತ್ತದೆ. ಉದಾ. ರಾಮಹತಕ, ಪುತ್ರಹತಕ. ಗೇಹಂ— ಮನೆ. **ವಿಚಾಯಯತಿ**—ಹುಡುಕಿಸುವನು. ಶೋಧಿಸುವನು. ವಿ+ಚಿ (೫.ಉ) ಧಾತುವಿನ ಪ್ರಯೋಜಕ ರೂಪದ ವ.ತೃ.ಪು.ಏ.ವ. ಭವಿಷ್ಯತ್ಕಾಲದ ಅರ್ಥದಲ್ಲಿ ವರ್ತಮಾನಕಾಲ ಉಪಯೋಗಿಸಲ್ಪಟ್ಟಿದೆ. ಅವಹಿತಾಃ – ಲಕ್ಷ್ಯವುಳ್ಳವರು. ಅವ+ಧಾ (೩.ಉ) ಧಾತುವಿನ ಕರ್ಮಣಿ ಭೂ. ಧಾ. ವಿ. (ಪು). ಪ್ರ. ಬ. ವ. ನಿರ್ವಹತ— ಒಯ್ಯಿರಿ. ನಿಸ್ + ವಹ್(೧. ಪ) ಧಾತುವಿನ ಆಜ್ಞಾರ್ಥ ದ್ವಿ. ಪು. ಬ. ವ. ನಿರುಹ್ಯತಾಂ ರಾಕ್ಷಸಸ್ಯ ಗೃಹಜನಃ (ಕರ್ಮಣಿ ಪ್ರಯೋಗ.) ಅಮಾತ್ಯರಾಕ್ಷಸಸ್ಯ— ಮಂತ್ರಿಯಾದ ರಾಕ್ಷಸನ. ಅಮಾತ್ಯಶ್ಚಾಸೌ ರಾಕ್ಷಸಶ್ಚ (ಕ.ಸ.) ತಸ್ಯ. 'ರಾಕ್ಷಸ' ಎಂಬ ಹೆಸರುಳ್ಳ ಒಬ್ಬ ಬ್ರಾಹ್ಮಣನು ನಂದರ ಮಂತ್ರಿಯಾಗಿದ್ದನು. ಇವನು ಬಹಳ ಬುದ್ಧಿವಂತ. ಅಂತೆಯೇ ಇವನನ್ನು ತನ್ನೆಡಗೆ ಒಲಿಸಿಕೊಳ್ಳಬೇಕೆಂದು ಚಾಣಕ್ಯನ ಹವಣಿಕೆ. ರಾಕ್ಷಸನು ಕಾಲ್ಪನಿಕ ವ್ಯಕ್ತಿಯಾಗಿರದೆ ಐತಿಹಾಸಿಕ ವ್ಯಕ್ತಿಯಾಗಿರಲು ಸಾಕು. ಇಲ್ಲವಾದರೆ ನಾಟಕಕಾರನು ನಂದರ ಮುಖ್ಯಮಂತ್ರಿಗೆ ರಾಕ್ಷಸ ಎಂಬ ಅಸಹ್ಯ ಹೆಸರನ್ನು ಕಲ್ಪಿಸುತ್ತಿರಲಿಲ್ಲ. ಯದ್ಭವತಿ ತದ್ಭವತು — ಆಗುವದೆಲ್ಲ ಆಗಲಿ. *Come what may*. ಅಯಮಾಗಚ್ಛಾಮಿ — ಇಗೋ, ನಾನು ಬರುತ್ತಿದ್ದೇನೆ. ಇದಂ ಶಬ್ದವನ್ನು ಅನೇಕ ಸಲ, 'ಇಗೋ' ಎಂಬರ್ಥದಲ್ಲಿ ಉಪಯೋಗಿಸುತ್ತಾರೆ. ಉದಾ.— ಅಯಮಾಗಚ್ಛಾಮಿ। ಇಯಮಹಮಾರೋಹಾಮಿ। ಉಪಸೃತ್ಯ— ಸಮೀಪಕ್ಕೆ ಸರಿದು. ಉಪ+ಸೃ (೧. ಪ) ಧಾತುವಿನ ಲ್ಯಬಂತಾವ್ಯಯ. ಸ್ವಾಗತಂ — ಸ್ವಾಗತವು. ಇದು ಚತುರ್ಥೀ ವಿಭಕ್ತಿ ತೆಗೆದುಕೊಳ್ಳುತ್ತದೆ. ಉದಾ.— ಸ್ವಾಗತಂ ದೇವ್ಯೈ । ಆಸ್ಯತಾಂ—ಕೊಡಲ್ಪಡಲಿ. ಆಸ್ (೨. ಪ) ಧಾತುವಿನ ಕರ್ಮಣಿ ಆಜ್ಞಾರ್ಥ ತೃ. ಪು. ಏ. ವ. ಉಪಚಾರಃ— ( ಉಪಚರ್ಯತೇ ಅನೇನ ಇತಿ ) ಮರ್ಯಾದೆ, ಆದರ, ಸತ್ಕಾರ. ನ ಉಚಿತಃ ಅನುಚಿತಃ (ನ. ತ. ಸ.). ಪರಿಭವಃ— ಅವಮಾನ. ಉತ್ಪಾದಯತಿ—ಹುಟ್ಟಿಸುತ್ತದೆ. ಉತ್+ಪದ್ (೪.ಆ)ಧಾತುವಿನ ಪ್ರಯೋಜಕ ರೂಪದ ತೃ.ಪು.ಏ.ವ. ತಸ್ಮಾತ್+ಇಹ+ಏವ+ಉಚಿತಾಯಾಂ.

ಭೂಮೌ + ಉಪವಿಶಾಮಿ = ತಸ್ಮಾ.................ಮಿ. ಉಪವಿಶ್ (ತು. ಪ) [ಕೂಡು] ಧಾತುವು ಸಪ್ತಮೀ ವಿಭಕ್ತಿಯನ್ನು ತೆಗೆದುಕೊಳ್ಳುತ್ತದೆ. ಉದಾ.— ಅಹಂ ಆಸನೇ ಉಪವಿಶಾಮಿ। ಮಾ— ಬೇಡ. ನಿಷೇಧಾರ್ಥಕ ಅವ್ಯಯ. ಧಾತುಗಳ ಆಜ್ಞಾರ್ಥಕ ರೂಪಗಳೊಂದಿಗೆ ಉಪಯೋಗಿಸಲ್ಪಡುತ್ತದೆ. ಉದಾ.— ಮಾ ಏವಂ ಭಣ। ಸಂಭಾವಿತಂ— ನೆಲದ ಮೇಲೆ ಕೂಡುವದೇ ಉಚಿತವೆಂದು ಚಂದನದಾಸನು ಹೇಳವನು. ಆದರೆ ಚಾಣಕ್ಯನು ಈ ಮಾತನ್ನು ನಿರಾಕರಿಸಿ ಅವನಿಗೆ ಯೋಗ್ಯ ಆಸನವನ್ನು ಕೊಟ್ಟು ಸತ್ಕರಿಸುವನು. ಹಾಗೂ ಅವನು ಚಾಣಕ್ಯನಿಂದ ಇಂತಹ ಸತ್ಕಾರ ಪಡೆಯಲು ಅರ್ಹನು ಎಂದು ಹೇಳುವನು. ಇಲ್ಲಿ ಸಂಭಾವಿತಂ ಎಂಬ ಶಬ್ದವು ಸಂಭಾವನಾ (ಆದರ, ಸತ್ಕಾರ.) ಎಂಬ ಅರ್ಥದಲ್ಲಿ ಉಪಯೋಗಿಸಲ್ಪಟ್ಟಿದೆ. ಅಥವಾ ಸಂಭಾವಿತಂ ಎಂದರೆ 'ಉಚಿತ' ಯೋಗ್ಯವಾದುದು ಎಂಬುದಾಗಿಯೂ ಇಟ್ಟುಕೊಳ್ಳಬಹುದು. ಅಂತೂ, ಸಂಭಾವಿತ....... ....ಭವತಃ ಎಂಬ ವಾಕ್ಯಕ್ಕೆ ೩-೪ ಅರ್ಥ ಮಾಡಬಹುದು ಅವು ಹೀಗಿವೆ. (i) ನಾವು (ನಮ್ಮಂಥವರು) ಕೊಟ್ಟ ಆಸನವು ನಿಮಗೆ ಉಚಿತವಿದೆ. (ii) ನಾವು ನಿಮಗೆ ಕೊಡಮಾಡಿದುದು ಸಾಮಾನ್ಯ ಸತ್ಕಾರವೇ ಸರಿ. (iii) ನಿಮ್ಮಿಂದ ಇದನ್ನು (ಎಂದರೆ ನೀವು ಹೀಗೆ ಮಾಡುವದನ್ನು) ನಾವು ನಿರೀಕ್ಷಿಸಿದ್ದೆವು. (iv) ನಿಮ್ಮಿಂದ (ಬೇಡ ಬೇಡ ಎನ್ನುವ) ಈ ಒಣ ಹೆಮ್ಮೆಯನ್ನು ನಾವು ನಿರೀಕ್ಷಿಸಿದ್ದೆವು. ['ಬಹಿರುಪಚಾರಃ ಪರಿಭವಕರಣಮಿತಿ ತು ನಿಗೂಢ ಆಶಯಃ' ಟೀಕಾ]. ಬಹುಶಃ ಈ ನಾಲ್ಕನೆಯ ವ್ಯಂಗ್ಯಾರ್ಥವೇ ಚಾಣಕ್ಯನ ಮನಸ್ಸಿನಲ್ಲಿರಲು ಸಾಕು. ತದುಪವಿಶ್ಯತಾಂ ಆಸನೇ ಏವ— ತದುಪವಿಶ ಆಸನೇ ಏವ (ಕರ್ತರಿ ಪ್ರಯೋಗ).

ಪುಟ ೨೦. ಕಿಮಪಿ ಉಪಕ್ಷಿಪ್ತಂ— ಏನನ್ನೋ ಮುಂದೆ ಮಾಡಿದ್ದಾನೆ, ಚಾಚಿದ್ದಾನೆ. ಏನನ್ನೋ ಆರಂಭಿಸಿದ್ದಾನೆ. ಏನೋ (ಬಲೆ) ಎಸೆದಿದ್ದಾನೆ. ತಾನು ತಪ್ಪುಗಾರನಿದ್ದುದರಿಂದ ಚಾಣಕ್ಯನ ಮಾತಿನಲ್ಲಿ ಏನೋ ಒಂದು ಗೂಢಾರ್ಥವಿರಬೇಕೆಂದು ಚಂದನದಾಸನು ಮನದಲ್ಲಿ ಅಂದುಕೊಳ್ಳುತ್ತಾನೆ. ಕಳೆದು ಹೋದ ಅಮಾತ್ಯರಾಕ್ಷಸನ ಮೊಹರಿನ ಉಂಗುರವು ಚಾಣಕ್ಯನ ಕೈಗೆ ಸಿಕ್ಕಿರಬಹುದೆಂದೂ ಅದರಿಂದ ರಾಕ್ಷಸನ ಹೆಂಡತಿ

ಹಾಗೂ ಮಗ ಚಂದನದಾಸನ ಮನೆಯಲ್ಲಿರಬಹುದೆಂದು ಚಾಣಕ್ಯನು ಊಹಿಸಿರಲು ಸಾಕೆಂದೂ ಚಂದನದಾಸನ ಮನದೊಳಗಿನ ಯೋಚನೆ. ಪ್ರಚೀಯಂತೇ — ಹೆಚ್ಚಾಗಿ ಬೆಳೆಯುತ್ತವೆ. 'ಪ್ರಕರ್ಷೇಣ ವರ್ಧಂತೇ' —ಟೀಕಾ ಸಂವ್ಯವಹಾರಾಣಾಂ—ಪ್ರಾಮಾಣಿಕ ವ್ಯವಹಾರಗಳ. ಚಂದನ-ದಾಸನು ಕೇವಲ ರತ್ನವ್ಯಾಪಾರಿಯಾಗಿರವೆ ಇತರ ವ್ಯವಹಾರಗಳನ್ನೂ ಮಾಡುತ್ತಿದ್ದನೆಂಬುದು ಇಲ್ಲಿ ಉಪಯೋಗಿಸಿದ ಬಹುವಚನದಿಂದ ಗೊತ್ತಾಗುತ್ತದೆ. ಸಮ್ಯಂಚಃ ವ್ಯವಹಾರಾಃ (ಕ. ಸ.) ತೇಷಾಂ. ವೃದ್ಧಿಲಾಭಾಃ— ವೃದ್ಧಯಃ ಚ ಲಾಭಾಃ ಚ (ದ್ವಂದ್ವ). ವೃದ್ಧಿ ಎಂದರೆ ಬಡ್ಡಿ. ಲಾಭ ಎಂದರೆ ವ್ಯವಹಾರದಲ್ಲಿ ಆಗುವ ಫಾಯಿದೆ. ಅತ್ಯಾದರಃ ಶಂಕನೀಯಃ— ಇದೊಂದು ಗಾದೆಯ ಮಾತು. ಅತಿಯಾಗಿ ತೋರಿಸಿದ ಆದರವು ಸಂಶಯವನ್ನು ಉಂಟುಮಾಡುತ್ತದೆ. ಅಥವಾ ಅಂಜಿಕೆಯನ್ನು ಹುಟ್ಟಿಸುತ್ತದೆ. (ಶಂಕಾ— ಸಂಶಯ, ಅಂಜಿಕೆ.) ಶಂಕನೀಯಃ—ಶಂಕ್ (೧. ಆ) ಧಾತುವಿನ ಕರ್ಮಣಿ ವಿಧ್ಯರ್ಥ ಧಾ. ಸಾ. ವಿ. (ಪು) ಪ್ರ. ಏ. ವ. ಅತಿಶಯಃ ಆದರಃ ಅತ್ಯಾದರಃ (ಕ. ಸ.). ಅಥಕಿಮ್ — ಅಹುದು, ಹೌದು. *Yes*. ಅಖಂಡಿತಾ—ಆತಂಕವಿಲ್ಲದೆ. ತಡೆಯಿಲ್ಲದೆ. ವಣಿಜ್ಯಾ—ವ್ಯಾಪಾರ. ವಣಿಜಃ ಕರ್ಮ; ವಣಿಜಿ ಸಾಧುಃ. ನ ಖಲು..................ಪ್ರಕೃತೀಃ

ಈ ಪ್ರಶ್ನೆ ಕೇಳುವದರಲ್ಲಿ ಚಾಣಕ್ಯನ ಧೂರ್ತತನ ವ್ಯಕ್ತವಾಗುತ್ತದೆ. ಹೌದು ಎಂದು ಉತ್ತರ ಕೊಟ್ಟರೆ, ಚಂದನದಾಸನು ನೇರವಾಗಿ ರಾಜದ್ರೋಹಿಯಾಗುತ್ತಾನೆ. ಇಲ್ಲವೆಂದು ಉತ್ತರಕೊಟ್ಟರೆ, 'ಹಾಗಾದರೆ ನೀನೇಕೆ ಅಮಾತ್ಯರಾಕ್ಷ-ಸನ ಮನೆಯವರನ್ನು ನಿನ್ನ ಮನೆಯಲ್ಲಿ ಇಟ್ಟುಕೊಂಡಿರುವೆ?' ಎಂಬ ಮರು ಪ್ರಶ್ನೆಯ ಮೂಲಕ ಚಂದನದಾಸನು ದೋಷಿಯೆಂದು ಸಿದ್ಧಮಾಡುವದು ಇದ್ದೇ ಇದೆ. ಸ್ಮರಯಂತಿ—ನೆನಪಿಗೆ ತಂದುಕೊಡು. ದುಃಖ ಇಲ್ಲವೆ ಇಚ್ಛಾ ಪೂರ್ವಕವಾಗಿ ನೆನಪಿಗೆ ತಂದುಕೊಡು. ಸ್ಮೃ(೧.ಪ)ಧಾತುವಿನ ಪ್ರಯೋಜಕ ರೂಪದ ವ.ತೃ.ಪು.ಬ.ವ. 'ಪ್ರಕೃತಯಃ ಅತಿಕ್ರಾಂತ ಪಾರ್ಥಿವಗುಣಾನ್ ನ ಸ್ಮರಂತಿ ಖಲು' ಎಂಬುದು ಮೂಲವಾಕ್ಯ. ಅತಿಕ್ರಾಂತಾಃ ಪಾರ್ಥಿವಾಃ (ಪೃಥಿವ್ಯಾ ಈಶ್ವರಾಃ) ಅ....ವಾಃ (ಕ.ಸ.). ತೇಷಾಂ ಗುಣಾಃ (ಷ.ತ.ಸ.). ತಾನ್. ಕರ್ಣೌ ಪಿಧಾಯ— ಎರಡೂ ಕಿವಿಗಳನ್ನು ಮುಚ್ಚಿಕೊಂಡು. ಚಂದ್ರಗುಪ್ತನ ವಿಷಯವಾಗಿ ಆಡಿದ ಕೆಟ್ಟ ಮಾತನ್ನು ಕೇಳಲಾರದೆ, ಚಂದನ ದಾಸನು ಕಿವಿಗಳನ್ನು ಮುಚ್ಚಿಕೊಳ್ಳುತ್ತಾನೆ. ಪಿಧಾಯ— ಪಿ+ಧಾ (೩.ಉ)

ಧಾತುವಿನ ಲ್ಯಬಂತಾವ್ಯಯ. ಶಾಂತಂ ಪಾಪಂ— ಧೂರ್ತ ಚಂದನದಾಸ ನಾದರೋ ಚಾಣಕ್ಯನ ಮಾತಿಗೆ ಅಸಮ್ಮತಿ ಸೂಚಿಸುವಪಕ್ಕಾಗಿ ಹೀಗೆ ಉದ್ಗಾರ ತೆಗೆಯುತ್ತಾನೆ. ಒಬ್ಬರ ಮಾತಿಗೆ ಅಸಮ್ಮತಿ ಸೂಚಿಸಲು, ಇಲ್ಲವೆ 'ಪೀಡೆ ಹೋಗಲಿ' 'ಕಾಟ ಪಾಟಗಳು ದೂರಾಗಲಿ' ಎಂಬ ಅರ್ಥ ಸೂಚಿಸಲು, ನಾಟಕದಲ್ಲಿ 'ಶಾಂತಂ ಪಾಪಂ' ಎಂಬ ಪದಾವಲಿ ಉಪಯೋಗಿಸುವರು.

**ಶ್ಲೋಕ ೨. ಅನ್ವಯ:—** ಪ್ರಕೃತಯಃ ಶರತ್ಪೌರ್ಣಮಾಸೀ-ಸಮುದ್ಗತೇನ ಪೂರ್ಣಚಂದ್ರೇಣ ಇವ (ಭೂತೇನ) ದೇವೇನ ಚಂದ್ರಶ್ರಿಯಾ ಅಧಿಕಂ ನಂದಂತಿ ನನು ।

ಪ್ರಕೃತಯಃ— ಪ್ರಜೆಗಳು. ಶರ..........ಗತೇನ— ಶರತ್ಕಾಲದ ಪೌರ್ಣಿಮೆಯಂದು ಉದಯಿಸಿದ. ಶರದಃ ಪೌರ್ಣಮಾಸೀ ಶ....ಮಾಸೀ (ಷ. ತ. ಸ.). ತಸ್ಯಾಂ ಉದ್ಗತಃ (ಸ.ತ.ಸ.) ತೇನ. ಪೌರ್ಣಮಾಸೀ— ಹುಣ್ಣಿಮೆ. ಪೂರ್ಣಚಂದ್ರೇಣ— ಪೂರ್ಣಃ ಚಂದ್ರಃ ಪೂರ್ಣಚಂದ್ರಃ (ಕ. ಸ.). ತೇನ ಪೂರ್ಣಚಂದ್ರನಿಂದ. ದೇವೇನ ಚಂದ್ರಶ್ರಿಯಾ— ದೊರೆಯಾದ ಚಂದ್ರಗುಪ್ತನಿಂದ. 'ಚಂದ್ರಶ್ರಿಯಾ ಚಂದ್ರಗುಪ್ತೇನೇತ್ಯರ್ಥಃ' ಟೀಕಾ. ನಂದಂತಿ— ಸಂತೋಷಪಡುತ್ತಾರೆ. ನಲಿಯುತ್ತಾರೆ. ಶರತ್ಕಾಲದ ಹುಣ್ಣಿಮೆಯ ಪೂರ್ಣಚಂದ್ರನು ನಿಜವಾಗಿಯೂ ಬಹಳ ಆಹ್ಲಾದಕರನಾಗಿರುತ್ತಾನೆ. ಆದ್ದರಿಂದ ಆ ಚಂದ್ರನಂತೆ ಇರುವ ಈ ಚಂದ್ರಗುಪ್ತ-ನಾದರೂ ಪ್ರಜೆಗಳನ್ನು ಸಂತೋಷಗೊಳಿಸುತ್ತಾನೆ. ಪ್ರತಿಪ್ರಿಯಂ—ಪ್ರತಿಕೃತಂ ಪ್ರಿಯಂ (ಪ್ರಾದಿ. ತ) ಮರಳಿ ಇಷ್ಟವಾದುದು. ತಾವು ಮಾಡಿದ ಉಪಕಾರಕ್ಕೆ ಪ್ರತ್ಯುಪಕಾರಕ್ಕೆ *benifit ( agreeable service in return)* — *Kale*. ಕಿಂ ಕಿಯತ್ — ಏನು ಮತ್ತು ಎಷ್ಟು. ಇಷ್ಯತೇ — ಇಚ್ಛಿಸಲ್ಪಡುತ್ತದೆ. ಚಂದ್ರಗುಪ್ತನು ಹಣವನ್ನು ಬೇಡುತ್ತಾನೆಂದು ಚಂದನ ದಾಸನ ತಿಳುವಳಿಕೆ. ಅರ್ಥರುಚೇಃ — ಹಣವು ಪ್ರಿಯವಾಗಿಯುಳ್ಳ, ಹಣವೇ ಹೆಚ್ಚಾಗಿ ಸೇರುವ. ಅರ್ಥೇ ರುಚಿಃ ಯಸ್ಯ ಸಃ ಅರ್ಥರುಚಿಃ (ಬ. ಸ.) ತಸ್ಯ. ನಂದರು ಬಹಳ ದ್ರವ್ಯಲೋಭಿಗಳಿದ್ದರು. ಅಂತೆಯೇ ಅವರು ಪ್ರಜೆಗಳ ಹಿತ ಲಕ್ಷಿಸದೆ ಅಪಾರ ಸಂಪತ್ತನ್ನು ಗಳಿಸಿದ್ದರು. ಅವರಲ್ಲಿ ೯೯ ಕೋಟಿ ಭಂಗಾರ ನಾಣ್ಯಗಳಿದ್ದವಂತೆ ! ಆದರೆ ಪ್ರಜೆಗಳ ಹಿತವನ್ನು ಸಾಧಿಸುವ ಚಂದ್ರಗುಪ್ತನು ಹೀಗೆ ಮಾಡುತ್ತಿರಲಿಲ್ಲ. ಪ್ರಜೆಗಳು ಸುಖಿಯಾಗಿ,

ಯಾವ ತೊಂದರೆಗಳೂ ಇಲ್ಲದಲೆ ಇದ್ದರೆ, ಅವನಿಗೆ ಸಂತೋಷವಾಗುತ್ತಿತ್ತು. **ಅಪರಿಕ್ಲೇಶಃ** — ಶಿಕ್ಷಿಸದೆ ಇರುವದು. ಹಿಂಸಿಸದೆ ಇರುವದು. ಅರ್ಥಾತ್ ಸುಖದಿಂದಿರುವದು. ಪರಿಕ್ಲೇಶವೆಂದರೆ ಒಂದು ಬಗೆಯ ದಂಡ ಇಲ್ಲವೆ ಶಿಕ್ಷೆ ತು. ಮಾ. "ವಧೋಽರ್ಥಗ್ರಹಣಂ ಚೈವ ಪರಿಕ್ಲೇಶಸ್ತಥೈವ ಚ । ಇತಿ ದಂಡ ವಿಧಾನಜ್ಞೈರ್ದಂಡೋಽಪಿ ತ್ರಿವಿಧಃ ಸ್ಮೃತಃ." 'ಅಪರಿಕ್ಲೇಶಃ ಅಪರಿಕ್ಲೇಶನಂ ದಂಡಪಾರುಷ್ಯಾಭಾವಾತ್ ಸುಖಸ್ಥಿತಿರಿತಿ ಯಾವತ್' —ಟೀಕಾ. ಸ ಚ.... ....ಸ್ಮಃ – ತೇನ ಚ ಅಪರಿಕ್ಲೇಶೇನ ಕಥಂ ಆವಿರ್ಭೂಯತೇ ಇತಿ ಭವಾನ್ ಅಸ್ಮಾನ್ ಪೃಚ್ಛೇತ್ (ಪ್ರಯೋಗ ಬದಲಿಸಿದ್ದು) ಭವತ್ (ನೀವು) ಶಬ್ದಕ್ಕೆ ಅನುಗುಣವಾದ ಕ್ರಿಯಾರೂಪವು ತೃ. ಪು.ದಲ್ಲಿರಬೇಕು. ಉದಾ:— ಭವಾನ್ ಭಿಕ್ಷಾಂ ದದಾತು । ಭವತಾ ಪ್ರಷ್ಟವ್ಯಾಃ ಸ್ಮಃ — ನೀನು ನಮ್ಮನ್ನು ಕೇಳ ಬೇಕು. ಪ್ರಷ್ಟವ್ಯ — ಪ್ರಚ್ಛ್ (೧ ಪ) ಧಾತುವಿನ ಕರ್ಮಣಿ ವಿಧ್ಯರ್ಥ ಧಾ. ಸಾ. ವಿ. ಸಂಕ್ಷೇಪತಃ — ಸಂಕ್ಷಿಪ್ತದಲ್ಲಿ ಹೇಳುವದಾದರೆ ರಾಜನಿ + ಅವಿರುದ್ಧಾಭಿಃ + ವೃತ್ತಿಭಿಃ — ರಾಜನಿಗೆ ವಿರೋಧವಾಗಿ ನಡೆಯದೆ ಇರುವ ದರಿಂದ.

**ಪುಟ ೨೧** ರಾಜ್ಞಾ ವಿರುದ್ಧಃ ರಾಜ್ಞಾ ಸಹ ಕೃತವಿರೋಧಃ ರಾಜ ನೊಡನೆ ವಿರೋಧ. ಈ ಸಂದರ್ಭದಲ್ಲಿ ಸಪ್ತಮೀ ಇಲ್ಲವೆ ಷಷ್ಠೀ ವಿಭಕ್ತಿ ಉಪಯೋಗಿಸುವದು ನೆಟ್ಟಗೆ. ರಾಜ್ಞಃ ಇಲ್ಲವೆ ರಾಜನಿ ಎಂಬುದಾಗಿರಬೇಕು. ಅವಗಮ್ಯತೇ — ಜ್ಞಾಯತೇ ತಿಳಿಯಲ್ಪಡುತ್ತದೆ. ಅವ್ + ಗಮ್ (೧ಪ) ಧಾತುವಿನ ವರ್ತಮಾನಕಾಲ ಕರ್ಮಣಿ ತೃ.ಪು.ಏ.ವ. ಕೀದೃಶ — ಎಂತಹ. ಹುಲ್ಲಿಗೆ ಬೆಂಕಿಯೊಡನೆ ಎಂತಹ ವಿರೋಧ! ಹುಲ್ಲು ಮತ್ತು ಬೆಂಕಿಗಳ ನಡುವೆ ಅತ್ಯಂತ ಮಿತ್ರತ್ವವಿದೆ. ಅಂತೆಯೇ ಉರಿಯುವ ಬೆಂಕಿಗೆ ಹುಲ್ಲಿನ ಸಮಾಗಮ ಆದೊಡನೆ, ಎಂದರೆ ಹುಲ್ಲಿನ ಸಂಪರ್ಕವಾಗಲು, ಅದು ಹೆಚ್ಚು ಪ್ರಖರವಾಗಿ ಉರಿಯತೊಡಗುತ್ತದೆ. ಆದ್ದರಿಂದ ಚಂದನದಾಸನು ತನ್ನ ಹಾಗೂ ಚಂದ್ರಗುಪ್ತ ರಾಜನ ನಡುವಿನ ಸಂಬಂಧವು ಹುಲ್ಲು – ಬೆಂಕಿಗಳ ಸಂಬಂಧದಂತೆ ಅತ್ಯಂತ ಸ್ನೇಹಮಯವಾಗಿದೆಯೆಂದೂ, ವಿರೋಧಕ್ಕೆ ಎಳ್ಳಷ್ಟು ಅವಕಾಶವಿಲ್ಲೆಂದೂ ಉದ್ಗಾರ ತೆಗೆಯುತ್ತಾನೆ. ಈದೃಶ — ಇಂತಹ. ಚಂದ್ರಗುಪ್ತನೊಡನೆ ಇದ್ದ ದ್ವೇಷವು ಈ ಬಗೆಯದಾಗಿದೆ ಎಂದು ಚಾಣಕ್ಯನು ನಿರೂಪಿಸಲಣಿಯಾಗುವನು. **ರಾಜಾಪಥ್ಯಕಾರಿಣಃ**—ರಾಜನಿಗೆ ಅಹಿತ ಮಾಡುವ. ರಾಜ್ಞಃ ಅಪಥ್ಯಂ [ನ ಪಥ್ಯಂ ಅಪಥ್ಯಂ ನ. ತ.] ರಾಜಾ-

ಪಥ್ಯಂ (ಷ. ತ.). ತತ್ ಕರೋತಿ ಇತಿ (ಉಪ. ತ.) ತಸ್ಯ. ಅಲೀಕ— ಸುಳ್ಳು. ಕೇನಾ .... ನಿವೇದಿತಂ — ಕೋಽಪಿ ಆರ್ಯಸ್ಯ ನಿವೇದಿತವಾನ್ (ಕರ್ತರಿ ಪ್ರಯೋಗ) ನ ಅಭಿಜ್ಞಃ ಅನಭಿಜ್ಞಃ (ನ. ತ.) — ಅರಿಯದವ ಅಲಂ ಆಶಂಕಯಾ — ಅಂಜಿಕೆ ಸಾಕು. ಪೂರ್ವರಾಜಪುರುಷಾಃ–ಹಿಂದಿನ ರಾಜನ ಸೇವಕರು. ಪೂರ್ವಃ ರಾಜಾ ಪೂರ್ವರಾಜಃ (ಕ. ಸ.) ತಸ್ಯ ಪುರುಷಾಃ (ಷ. ತ. ಸ.) ಅನಿಚ್ಛತಾಂ ಅಪಿ — ಅವರು ಇಚ್ಛಿಸದೆ ಇದ್ದರೂ ಸಹ; ಅವರ ಇಚ್ಛೆಗೆ ವಿರುದ್ಧವಾಗಿಯೂ ಕೂಡ. **ದೇಶಾಂತರಂ** — ಅನ್ಯಃ ದೇಶಃ ದೇಶಾಂತರಂ (ಕ. ಸ.) ತತ್. ಬೇರೆದೇಶಕ್ಕೆ ವ್ರಜ (೧.ಪ) — ಹೋಗು. ತತಃ+ತಂ...........ನಂ — ಬಳಿಕ ಅವರನ್ನು ಅಡಗಿಸುವದು. ಪ್ರಚ್ಛಾದನಂ — ಬಚ್ಚಿಡುವದು. ದೋಷಮುತ್ಪಾದಯತಿ — ದೋಷವನ್ನುಂಟು ಮಾಡುತ್ತದೆ. ಅಪರಾಧವಾಗುತ್ತದೆ. ತಸ್ಮಿನ್ ಸಂಭ್ರಮೇ — ಆ ಕಾಲಕ್ಕೆ *At the time*. ಪೂರ್ವ....ವಚನೇ — ನೀನು ಪೂರ್ವಾಪರ ವಿರುದ್ಧವಾದ ಮಾತನ್ನಾಡುವೆ ಎಂದು ಧೂರ್ತಚಾಣಕ್ಯನು ಚಂದನದಾಸನ ಮಾತಿನಲ್ಲಿಯ ವಿರೋಧವನ್ನು ಎತ್ತಿ ತೋರಿಸುತ್ತಾನೆ. ರಾಕ್ಷಸನ ಮನೆಯವರು ನನ್ನ ಮನೆಯಲ್ಲಿದ್ದುದು ಸುಳ್ಳು ಎಂದು ಚಂದನದಾಸನು ಮೊದಲು ನುಡಿದಿದ್ದನು. ಆದರೆ ಕೆಲವು ಪ್ರಶ್ನೋತ್ತರಗಳನಂತರ, ರಾಕ್ಷಸನ ಮನೆಯವರು ಮೊದಲು ನನ್ನ ಮನೆಯಲ್ಲಿ ಇದ್ದರು ಎಂದು ಹೇಳುವನು. ಹೀಗೆ 'ಸುಳ್ಳು' ಎಂಬ ಮಾತು 'ಮೊದಲು ಇದ್ದರು' ಎಂಬ ಮಾತು ಪರಸ್ಪರ ವಿರುದ್ಧ ಇವೆ ಎಂದು ಚಾಣುಕ್ಯನು ನುಡಿಯುತ್ತಾನೆ. ಪೂರ್ವಂ ಅಲೀಕಂ, ಇದಾನೀಂ ಆಸೀತ್, ಇತಿ ವಚನೇ ಪರಸ್ಪರ ವಿರೋಧಿನೀ ಎಂಬುದಾಗಿ ಅನ್ವಯ ವಚನೇ ಮತ್ತು ವಿರೋಧಿನೀ ಎಂಬುವು ಪ್ರಥಮಾ ದ್ವಿವಚನಗಳು. ವಚನಂ—ಮಾತು. ವಿರೋಧಿನ್ (ವಿ) — ವಿರೋಧವುಳ್ಳ. ವಾಕ್ಛಲಂ— ಮಾತಿನದೋಷ, ಆದರೆ ನಿಜವಾದ ದೋಷವಲ್ಲ. 'ತ್ವಂ ಅದ್ಯಾಪಿ ರಾಕ್ಷಸಸ್ಯ ಗೃಹಜನಂ ಸ್ವಗೃಹೇ ರಕ್ಷಸಿ' ಎಂಬುದು ಚಂದನದಾಸನ ಮೇಲೆ ಚಾಣಕ್ಯನು ಹೊರಿಸಿದ ಆರೋಪ. ಈ ಆರೋಪಕ್ಕೆ ಚಂದನದಾಸನು ತಾನು ಕೊಟ್ಟ ಉತ್ತರಗಳನ್ನು ಸಮರ್ಥಿಸಿಕೊಳ್ಳುತ್ತಾನೆ. ಅವನ ವಾದದ ಸರಣಿ ಇಂತಿದೆ:— ನೀವು ಹೊರಿಸಿದ ಆರೋಪ ಸುಳ್ಳು ಎಂದು ಮೊದಲು ಉತ್ತರ ಕೊಟ್ಟೆ. ಆದರೆ ಮುಂದೆ 'ಅದ್ಯಾಪಿ' (ಇನ್ನೂ ರಕ್ಷಿಸುವೆ) ಎಂಬ ಶಬ್ದಕ್ಕೆ ಪ್ರಾಶಸ್ತ್ಯ ಕೊಟ್ಟು, ಮೊದಲು ಇದ್ದರು ಎಂಬುದಾಗಿ ಮೊದಲಿನ ಉತ್ತರವನ್ನೇ ವಿವರಿಸಿ

ಹೇಳಿದೆ. ಆದ್ದರಿಂದ ಪರಸ್ಪರ ವಿರೋಧವಿಲ್ಲ. ಆದರೂ ಕೂಡ 'ಅಲೀಕಂ' (ಸುಳ್ಳು) ಮತ್ತು 'ಆಸೀತ್' (ಮೊದಲು ಇದ್ದರು) ಎಂಬ ಶಬ್ದಗಳ ನಡುವೆ ವಿರೋಧವಿರುವದು ನಿಜ. ಆದ್ದರಿಂದ ನಾನು ಹೇಳಿದ ಮಾತಿನ ಅಭಿಪ್ರಾಯದಲ್ಲಿ ವಿರೋಧವಿಲ್ಲ. ಉಪಯೋಗಿಸಿದ ಶಬ್ದಗಳಲ್ಲಿ ಮಾತ್ರ ಕೊಂಚ ವಿರೋಧವಿದೆ. ಕಾರಣ ನನ್ನದು ನಿಜವಾದ ತಪ್ಪಲ್ಲ; ಶಬ್ದಗಳ ದೋಷ ಮಾತ್ರ ಇದೆ. 'ವಾಕ್‌ಛಲಂ ನ ತು ಪರಮಾರ್ಥತಃ ವಿಸಂವಾದಿ' –ಟೀಕಾ. ಚಂದ್ರಗುಪ್ತೇ ರಾಜನಿ ಮುಂ— ಚಂದ್ರಗುಪ್ತನ ರಾಜ್ಯದಲ್ಲಿ ತಪ್ಪಿಗೆ ಎಳ್ಳಷ್ಟೂ ಅವಕಾಶವಿಲ್ಲೆಂದು ಚಾಣಕ್ಯನು ವಿವರಿಸುತ್ತಾನೆ. ಇದು ಸತಿ ಸಪ್ತಮಿ ಪ್ರಯೋಗದ ಉದಾಹರಣೆ ಛಲಂ— ಮೋಸ. ಅಪ್ರಾಮಾಣಿಕತೆ. **ಸಮರ್ಪಯ**–ಒಪ್ಪಿಸು. ಸಮ್ + ಋ (೧.ಪ) ಧಾತುವಿನ ಪ್ರಯೋಜಕ ರೂಪದ ಆಜ್ಞಾರ್ಥ ದ್ವಿ. ಪು. ಏ. ವ. ಅಚ್ಛಲಂ ಭವತು ಭವತಃ—ನಿಮ್ಮಿಂದ ಪ್ರಾಮಾಣಿಕತೆಯು ಘಟಿಸಲಿ. ಅಚ್ಛಲಂ— ಪ್ರಾಮಾಣಿಕತೆ. ನಛಲಂ (ನ.ತ.) ಕಥಂ ನ ಜ್ಞಾಯತೇನಾಮ—ಅದು ಹೇಗೆ ತಾನೇ ಗೊತಾಗುವದಿಲ್ಲ? **ಶಿರಸಿಭಯಂ ಅತಿದೂರೇ ತತ್ಪ್ರತಿಕಾರಃ** — ಇದೊಂದು ಗಾದೆಯ ಮಾತಾಗಿದೆ. ವಿಪತ್ತು ಸಮೀಪದಲ್ಲಿ; ( ಆದರೆ ಅದನ್ನು ನಿವಾರಿಸುವ ) ಉಪಾಯ ದೂರದಲ್ಲಿ ಎಂಬುದಾಗಿ ಅದರ ಅರ್ಥ. ಈ ಗಾದೆಯ ಮಾತನ್ನು ಇಲ್ಲಿ ಎರಡು ಅರ್ಥಗಳಲ್ಲಿ ಉಪಯೋಗಿಸಲಾಗಿದೆ. (i) ತೋರಿಕೆಯ ಅರ್ಥ. ಮನುಷ್ಯರಿಗೆ ವಿಪತ್ತುಗಳು ಸಹಜವಾಗಿ ಬರುತ್ತವೆ; ಆದರ ಆ ವಿಪತ್ತುಗಳನ್ನು ಪರಿಹರಿಸಿಕೊಳ್ಳುವ ಉಪಾಯಗಳು ಮಾತ್ರ ಬಹಳ ದೂರದಲ್ಲಿವೆ. ಆದ್ದರಿಂದ ಮನುಷ್ಯನು ಅವುಗಳಿಗೆ ಮೋಸಹೋಗಬಾರದು. (ii) ಗೂಢಾರ್ಥ. ನೀನು ಶೀಘ್ರದಲ್ಲಿಯೇ ಶಿಕ್ಷೆ ಅನುಭವಿಸು; ಬಹಳ ದೂರದಲ್ಲಿರುವದರಿಂದ ರಾಕ್ಷಸನು ನಿನ್ನನ್ನು ಉಳಿಸಿಕೊಳ್ಳಲಾರನು. 'ಶಿರಸಿ ಭಯಂ ರಾಜದಂಡಃ ಸಮಾಪನ್ನ ಏವ। ತತ್ಪ್ರತಿ ವಿಧಾನಂ ರಾಕ್ಷಸಶ್ಚಂದ್ರಗುಪ್ತಂ ನಿಪಾತ್ಯ ಮೇ ರಕ್ಷಣಂ ಕರಿಷ್ಯತೀತ್ಯಾಶಾ ಸುತರಾಂ ದೂರಾಪೇತಾ ಇತ್ಯರ್ಥಃ' –ಟೀಕಾ.

**ಪುಟ ೨೨.** ವಿಷ್ಣುಗುಪ್ತಃ— ವಿಷ್ಣುಗುಪ್ತನು, ಚಾಣಕ್ಯನು **ನಾಟಯಿತ್ವಾ**—ನಟಿಸಿ, ನಟ್ (೧ ಪ) ಧಾತುವಿನ ಪ್ರಯೋಜಕರೂಪದ ಲ್ಯಬಂತಾವ್ಯಯವು. **ಸಮುಚ್ಛೇತ್ಸ್ಯತಿ**— ನಿರ್ಮೂಲಗೊಳಿಸುವನು, ಸಮ್+ಉತ್+ಛಿದ್ (೭.ಉ) ಧಾತುವಿನ ದ್ವಿ: ಭ.ತೃ.ಪು.ಏ.ವ. ಮಾ ಮೆಂಸ್ಥಾಃ—

ತಿಳಿಯಬೇಡ. **ಮಂಸ್ಥಾಃ**— ಮನ್ (೪ ಆ) ಧಾತುವಿನ ಅಡಾಗಮ ವಿರಹಿತ ತೃ. ಭೂ. ದ್ವಿ. ಪು. ಏ. ವ. ಮಾ ಎಂಬ ನಿಷೇಧಾರ್ಥಕ ಅವ್ಯಯ ದೊಡನೆ ತೃ. ಭೂ. ದ್ವಿ. ಪು. ರೂಪಗಳು ಬರಲಾಗಿ ಹಿಂದಿನ 'ಅ' ಲೋಪ ವಾಗುತ್ತದೆ. ಉದಾ— ಮಾ ಗಮಃ, ಮಾ ಭೂತ್. ಫಲೇನ........ ವಿಕತ್ಥಿತಂ— ಇವನು ಆಡಿದ ಮಾತು ಫಲಕ್ಕೆ ಎಂದರೆ ಪರಿಣಾಮಕ್ಕೆ ಅನು ಗುಣವಾಗಿದೆ. ಇವನ ಮಾತುಗಳು ಕೇವಲ ಜಂಭದ ಮಾತುಗಳಲ್ಲ; ಯಥಾ ರ್ಥವಾಗಿವೆ. ನುಡಿದಂತೆಯೇ ಮಾಡಿದ್ದಾನೆ. ಕೃತಿಯಲ್ಲಿಯೇ, ನಂದರನ್ನು ನಿರ್ಮೂಲಗೊಳಿಸಿದ್ದಾನೆ. **ಸಂವಾದಿತಂ**— ಸಂ+ವದ್ (೧ ಪ) ಧಾತು ವಿನ ಪ್ರಯೋಜಕ ರೂಪದ ಕರ್ಮಣಿ ಭೂ. ಧಾ. ವಿ. (ನ) ಪ್ರ. ಏ. ವ. ವಿಕತ್ಥಿತಂ— ಜಂಭ, ಆತ್ಮಪೌರುಷ. ಕ್ಷಪಣಕಃ— ಜೈನ ಇಲ್ಲವೆ ಬೌದ್ಧ ಸನ್ಯಾಸಿ. ಜೀವಸಿದ್ಧಿಃ—ಇವನು ನಿಜವಾಗಿ ಚಾಣಕ್ಯನ ಗೂಢಚಾರ. ಒಡೆ ಯನ ಆಜ್ಞೆಯ ಮೇರೆಗೆ ರಾಕ್ಷಸನ ಪಕ್ಷಸೇರಿ ಅಲ್ಲಿ ಜರಗುವ ಸಂಗತಿಗಳನ್ನು ಚೆನ್ನಾಗಿ ಪರಿಶೀಲಿಸಿ, ಯೋಗ್ಯ ಸಮಯದಲ್ಲಿ ಅವುಗಳನ್ನು ಚಾಣಕ್ಯನಿಗೆ ತಿಳಿಸಿ, ಅವನಿಗೆ ಹಿತವಾಗುವಂತೆ ವರ್ತಿಸುತ್ತಿದ್ದನು. ಈ ಜೀವಸಿದ್ಧಿಯು ಚಂದ್ರಗುಪ್ತನ ವಿಷಯವಾಗಿ ತೋರಿಸಿದ ವಿರೋಧ ಕೃತಕವಾದುದು. ಅಂತೆಯೇ ಅವನನ್ನು ಪಟ್ಟಣದಿಂದ ತಳ್ಳುವದು ಕೂಡ ಕೃತ್ರಿಮವಾದುದು. ಅವನನ್ನು ತಳ್ಳುವದರಲ್ಲಿ ಸ್ವಾರ್ಥಸಾಧನೆಯ ದೊಡ್ಡ ಉದ್ದೇಶವಿದೆ. ಪಟ್ಟಣದಿಂದ ಹೊರಬಿದ್ದೊಡನೆ ರಾಕ್ಷಸನ ಪಕ್ಷ ಸೇರಿ ಅವನ ಸ್ನೇಹಿತನಂತೆ ನಟಿಸುತ್ತಾನೆ. **ಸನಿಕಾರಂ**— ನಿಕಾರೇಣ ಸಹಿತಂ ಯಥಾ ಸ್ಯಾತ್ತಥಾ (ಅವ್ಯಯೀಭಾವ) ಅವಮಾನಪೂರ್ವಕವಾಗಿ. ನಿಕಾರಃ = ಅಪಮಾನ. **ನಿರ್ವಾಸ್ಯತೇ**— ನಿಸ್+ವಸ್ (೧ ಪ) ಧಾತುವಿನ ಪ್ರಯೋಜಕ ರೂಪದ ಕರ್ಮಣಿ ವ. ತೃ. ಪು. ಏ. ವ., ತಳ್ಳಿಸಲ್ಪಡುತ್ತಾನೆ. ಅಹಹ— ಇಲ್ಲಿ ಖೇದಸೂಚಕ ಅವ್ಯಯ. (೧) ಆನಂದ ಇಲ್ಲವೆ ಆಶ್ಚರ್ಯಸೂಚಕ. ಅಹಹ ಮಹತಾಂ ನಿಸ್ಸೀಮಾನಶ್ಚರಿತ್ರವಿಭೂತಯಃ. (೨) ಖೇದಸೂಚಕ : ಅಹಹ ಕಷ್ಟಮಪಂಡಿತತಾ ವಿಧೇಃ। ಅಹಹ ದಾರುಣೋ ವಜ್ರನಿಘಾತಃ, ಅನುಭವತು ರಾಜಾಪಥ್ಯಕಾರಿತ್ವಸ್ಯ ಫಲಂ— ಅನುಭೂಯತಾಂ ರಾಜಾಪಥ್ಯ- ಕಾರಿತ್ವಸ್ಯ ಫಲಂ (ಕರ್ಮಣಿ ಪ್ರಯೋಗ). ತೀಕ್ಷ್ಣದಂಡಃ—ಉಗ್ರ ದಂಡ (ಶಿಕ್ಷೆ)ವಿಧಿಸುವವ. ತೀಕ್ಷ್ಣಃ ದಂಡಃ ಯಸ್ಯ ಸಃ (ಬ.ಸ.). ಸಮ- ರ್ಪ್ಯತಾಂ—ಒಪ್ಪಿಸಲ್ಪಡಲಿ, ಸಂ+ಋ (೧ ಪ) ಧಾತುವಿನ ಪ್ರಯೋಜಕ

ರೂಪದ ಕರ್ಮಣಿ ಆಜ್ಞಾರ್ಥ ತೃ.ಪು.ಏ.ವ. ವಿಚಿತ್ರಃ—ವಿಲಕ್ಷಣವಾದ, ವಿಶೇಷ ಅನುಗ್ರಹವುಳ್ಳ. ಕಾಯಸ್ಥಃ ಶಕಟದಾಸಃ—ಬರಹಗಾರ ಶಕಟ ದಾಸನು. ಶಕಟದಾಸನು ನಿಜವಾಗಿಯೂ ರಾಕ್ಷಸನ ಗೆಳೆಯ. **ಕಾಯಸ್ಥಃ**—ಕ್ಷತ್ರಿಯ ಪುರುಷನಿಂದ ಶೂದ್ರ ಸ್ತ್ರೀಯಲ್ಲಿ ಹುಟ್ಟಿದವನು ಇವರು ಹೆಚ್ಚಾಗಿ ಕಾಗದಗಳನ್ನು ಬರೆಯುವ ಕೆಲಸ ಮಾಡುತ್ತಿದ್ದರು. ಹಿಂದಿನ ಕಾಲದಲ್ಲಿ ಇವರಿಗೆ ಸಮಾಜದಲ್ಲಿ ತಕ್ಕ ಮನ್ನಣೆ ದೊರೆತಂತೆ ತೋರುವದಿಲ್ಲ. ಆರೋ-ಪಯಿತುಂ—ಆ+ರುಹ್ (೧ ಪ) ಧಾತುವಿನ ಪ್ರಯೋಜಕ ರೂಪದ ತುಮಂ-ತಾನ್ವಯ, ಮರ್ಷಯಿಷ್ಯತಿ—ಸಹಿಸುವನು, ಮೃಷ್ (೧೦.ಉ) ಧಾತು ವಿನ ದ್ವಿ. ಭ. ತೃ. ಪು. ಏ. ವ. ರಾಕ್ಷಸಕಲತ್ರಪ್ರಚ್ಛಾದನಂ— ರಾಕ್ಷಸನ ಹೆಂಡತಿಯನ್ನು ಬಚ್ಚಿಡುವದು, ರಾಕ್ಷಸಸ್ಯ ಕಲತ್ರಂ ರಾಕ್ಷಸಕಲತ್ರಂ (ಷ. ತ.), ರಾಕ್ಷಸಕಲತ್ರಸ್ಯ ಪ್ರಚ್ಛಾದನಂ (ಷ.ತ.). ಕಲತ್ರಂ=ಹೆಂಡತಿ. ಈ ಶಬ್ದವು ನಪುಂಸಕಲಿಂಗದ್ದಿದೆ. ಹೆಂಡತಿ ಎಂಬ ಅರ್ಥವುಳ್ಳ ಸಂಸ್ಕೃತ ಶಬ್ದ ಗಳು ಮೂರೂ ಲಿಂಗದವಿವೆ. ದಾರ (ಪು), ಕಲತ್ರ (ನ), ಭಾರ್ಯಾ (ಸ್ತ್ರೀ). ಪರಸ್ಯ ಕಲತ್ರಂ ಪರಕಲತ್ರಂ (ಷ.ತ) ತೇನ, ಪರಕಲತ್ರೇಣ. ತದ್ರಕ್ಷ.... ....ಚ—ತದ್ರಕ್ಷ್ಯೇತಾಂ ಪರಕಲತ್ರೇಣ ಆತ್ಮನಃ ಕಲತ್ರಂ ಜೀವಿತಂ ಚ (ಕರ್ಮಣಿ ಪ್ರಯೋಗ). ಭಯಂ=ಅಂಜಿಕೆ. ಯಾರಿಗೆ ಭಯವಿದೆಯೋ ಆ ಶಬ್ದವನ್ನು ಷಷ್ಠೀ ವಿಭಕ್ತಿಯಲ್ಲಿ, ಮತ್ತು ಯಾರಿಂದ ಭಯವಿದೆಯೋ ಆ ಶಬ್ದವನ್ನು ಪಂಚಮೀ ವಿಭಕ್ತಿಯಲ್ಲಿ ಉಪಯೋಗಿಸುವರು. ಉದಾ— ಮಮ ಸಿಂಹಾತ್ ಭಯಮಸ್ತಿ। ಸಜ್ಜನಾನಾಂ ದುರ್ಜನೇಭ್ಯಃ ಭಯಂ ವಿದ್ಯತೇ। ಸಂತಮಪಿ=ಇದ್ದರೂ ಕೂಡ. ನನ್ನ ಮನೆಯಲ್ಲಿ ರಾಕ್ಷಸನ ಮನೆಯವರಿದ್ದರೂ ಸಹ. ಅಸಂತಂ=ಇಲ್ಲದೆ ಇದ್ದವರನ್ನು.

**ಪುಟ ೨೩. ಶ್ಲೋಕ ೩, ಅನ್ವಯ**:— ಪರಸಂವೇದನೇ ಸುಲಭೇಷು ಅರ್ಥಲಾಭೇಷು, ಶಿಬಿನಾ ವಿನಾ ಕಃ ಜನಃ ಇದಾನೀಂ ಇದಂ ದುಷ್ಕರಂ ಕುರ್ಯಾತ್।

(i) ಪರಸಂವೇದನೇ—ಪರರನ್ನು ದುಃಖಕ್ಕೆ ಈಡು ಮಾಡವದರಿಂದ. (ii) ಬೇರೆಯವರನ್ನು ಅಥವಾ ಬೇರೆಯವರ ವಸ್ತುವನ್ನು ಅರ್ಪಿಸುವದರಿಂದ. ಅರ್ಥಲಾಭಃ=ಹಣದ ಗಳಿಕೆ. ದುಷ್ಕರಂ—( ದುಃಖೇನ ಕರ್ತುಂ ಶಕ್ಯಂ)

ಮಾಡಲು ಕಠಿಣವಾದುದು. ಶಿಬಿನಾ ವಿನಾ=ಶಿಬಿಯನ್ನು ಬಿಟ್ಟು. ಶಿಬಿ ಚಕ್ರವರ್ತಿಯು ಉದಾರಗುಣಕ್ಕಾಗಿ ಪ್ರಸಿದ್ಧನಾಗಿದ್ದಾನೆ. ಒಮ್ಮೆ ಅವನ ಔದಾರ್ಯ ಪರೀಕ್ಷಿಸಲು ಇಂದ್ರ ಹಾಗೂ ಅಗ್ನಿದೇವರು ಅನುಕ್ರಮವಾಗಿ ಗಿಡಗ ಹಾಗೂ ಪಾರಿವಾಳದ ವೇಷ ಧರಿಸಿ ಅವನೆಡೆಗೆ ಬಂದರು. ಗಿಡಗವು ಪಾರಿವಾಳವನ್ನು ಒಳ್ಳೇ ರಭಸದಿಂದ ಬೆನ್ನಟ್ಟಿತು. ಆಗ ಪಾರಿವಾಳವು ವ್ಯರ್ಥವಾಗಿ ಸಾಯುವದೆಂದು ಮನಗಂಡ ಉದಾರ ಶಿಬಿಚಕ್ರವರ್ತಿಯು ಪಾರಿವಾಳದ ತೂಕಕ್ಕೆ ಸರಿಯಾಗುವಷ್ಟು ತನ್ನ ದೇಹದಲ್ಲಿಯ ಮಾಂಸವನ್ನು ಕೊಟ್ಟು ಆ ಪಾರಿವಾಳವನ್ನು ಸಂರಕ್ಷಿಸಿದನು. ಈಗ ರಾಕ್ಷಸನಿಗೋಸ್ಕರ ತನ್ನ ಪ್ರಾಣವನ್ನರ್ಪಿಸಲು ಸಿದ್ಧನಾದ ಚಂದನದಾಸನು ನಿಜವಾಗಿ ಔದಾರ್ಯ ದಲ್ಲಿ ಶಿಬಿಯನ್ನೇ ಹೋಲುವನೆಂಬು ಚಾಣಕ್ಯನ ಅಭಿಪ್ರಾಯ. ವಿರೋಧಿ ಪಕ್ಷದವನಿದ್ದರೂ ಚಂದನದಾಸನ ಮಿತ್ರನಿಷ್ಠೆ ಚಾಣಕ್ಯನ ಮೆಚ್ಚುಗೆ ಪಡೆ ಯಿತು. ಸ್ವಲ್ಪದರಲ್ಲಿ ಹೇಳಬೇಕೆಂದರೆ ಚಂದನದಾಸನು ಆದರ್ಶ ಮಿತ್ರ. ವಿನಾ=ಬಿಟ್ಟು, ಹೊರ್ತುಪಡಿಸಿ. ಈ ಶಬ್ದವು ದ್ವಿತೀಯಾ, ತೃತೀಯಾ ಇಲ್ಲವೆ ಪಂಚಮೀ ವಿಭಕ್ತಿ ತೆಗೆದುಕೊಳ್ಳುತ್ತದೆ. ಉದಾ— ಕಾರಣಂ (ಕಾರಣೇನ, ಕಾರಣಾತ್ ವಾ) ವಿನಾ ಕಾರ್ಯಂ ನ ಸಂಭವತಿ। ಇದಾ- ನೀಮ್=ಈಗ. ಶಿಬಿಚಕ್ರವರ್ತಿ ತನ್ನ ಉದಾರಗುಣವನ್ನು ತೋರಿಸಿದ್ದು ಕೃತಯುಗದಲ್ಲಿ. ಆದರೆ ಪಾಪವೇ ಹೆಚ್ಚಾಗಿ ಜರಗುತ್ತಿರುವ ಈ ಕಲಿ ಯುಗದಲ್ಲಿ ನಿನ್ನನ್ನು ಬಿಟ್ಟು ಯಾರು ತಾನೇ ಸ್ವಾರ್ಥವನ್ನು ಬದಿಗಿಟ್ಟು ಪರಹಿತ ಸಾಧಿಸುವರು? ಆದ್ದರಿಂದ ನಿನ್ನ ಈ ಔದಾರ್ಯವು ಶಿಬಿಯನ್ನು ಕೂಡ ಮರೆಯಿಸುವಂತಹದಿದೆ.

ಏಷ ತೇ ನಿಶ್ಚಯಃ—ಕಿಂ ಎಂಬ ಶಬ್ದವು ಗುಪ್ತವಿದೆ ಇದು ನಿನ್ನ ನಿಶ್ಚಯವೋ? ಬಾಢಂ=ಅಹುದು, Yes. ಸಕ್ರೋಧಂ= ಸಿಟ್ಟಿನಿಂದ ಕ್ರೋಧೇನ ಸಹಿತಂ ಯಥಾ ಸ್ಯಾತ್ ತಥಾ (ಅವ್ಯಯೀಭಾವ ಸಮಾಸ.) ಅಧಿಕಾರಸದೃಶಂ— ಅಧಿಕಾರಕ್ಕೆ ತಕ್ಕ. ಅಧಿಕಾರಸ್ಯ ಸದೃಶಂ' (ಷ.ತ.ಸ.) ತತ್ । **ಉಚ್ಯತಾಂ**— ಹೇಳಲ್ಪಡಲಿ. ವಚ್ (೨. ಪ) ಧಾತುವಿನ ಕರ್ಮಣಿ ಆಜ್ಞಾರ್ಥ ತೃ. ಪು. ಏ. ವ. ಕಾಲಪಾಶಿಕೋ ದಂಡಪಾಶಿಕಃ— ಶಿಕ್ಷಿಸುವ ಕಾಲಪಾಶಿಕನು. ಅನೇಕ ಮೂಲ ಪುಸ್ತಕಗಳಲ್ಲಿ ಕಾಲಪಾಶಿಕೋ

ದಂಡಪಾಶಿಕಶ್ಚ ಎಂದಿದೆ. ಈ ಪಾಠ ಇಟ್ಟುಕೊಂಡರೆ ಕಾಲಪಾಶಿಕ ಮತ್ತು ದಂಡ ಪಾಶಿಕ ಎಂಬವು ಇಬ್ಬರ ಹೆಸರುಗಳು. ಕಾಲಪಾಶಿಕ ಶಬ್ದಗ ಅರ್ಥ ಶಿಕ್ಷೆಯ ಆಜ್ಞೆಕೊಡುವವ ಎಂದು ಆಗುತ್ತದೆ. (ಕಾಲಸ್ಯ ಇವ ಪಾಶಃ ಯಸ್ಯ ಸಃ ।). ದಂಡಪಾಶಿಕ ಎಂದರೆ ವಿಧಿಸಿದ ಶಿಕ್ಷೆಯನ್ನು ಕಾರ್ಯ ಕಾರೀ ಮಾಡುವವ. ಪ್ರತ್ಯಕ್ಷ ಶಿಕ್ಷಿಸುವವ. ದುರ್ಗಪಾಲಃ— ಕೋಟೆಯ ರಕ್ಷಕ. ದುರ್ಗಂ ಪಾಲಯತಿ ಇತಿ ದುರ್ಗಪಾಲಃ (ಉಪ. ತ. ಸ.). ವಿಜಯಪಾಲಃ— ಇದು ಕೋಟೆಯನ್ನು ಕಾಯುವವನ ಹೆಸರು. ಇಲ್ಲಿ ಹೇಗೆ ವಿಜಯಪಾಲ ಎಂಬುದು ದುರ್ಗಪಾಲ (ಕೋಟೆ ಕಾಯುವವ) ನ ಹೆಸರಿದೆಯೋ ಅದೇ ಮೇರೆಗೆ ಮೇಲೆ ಬಂದ ಕಾಲಪಾಶಿಕ ಎಂಬುದು ದಂಡಪಾಶಿಕ (ಶಿಕ್ಷಿಸುವವ) ನ ಹೆಸರೆಂದು ಪೊ. ಧ್ರುವಾ ಇವರ ಅಭಿ ಪ್ರಾಯ. ಗೃಹೀತಸಾರಂ ಸರ್ವಸ್ವವು ಕಸಿದುಕೊಳ್ಳಲ್ಪಟ್ಟವ. ಗೃಹೀತಂ ಸಾರಂ ಯಸ್ಯ ಸಃ ಗೃಹೀತಸಾರಃ (ಬ.ಸ.) ತಂ. ಸಾರಂ— ಸರ್ವಸ್ವ. ತಿರುಳು. **ಸಪುತ್ರಕಲತ್ರಂ**— ಪುತ್ರಃ ಚ ಕಲತ್ರಂ ಚ ಪುತ್ರಕಲತ್ರೇ (ದ್ವಂದ್ವ ಸ.). ಪುತ್ರಕಲತ್ರಾಭ್ಯಾಂ ಸಹಿತಃ ಯಥಾ ಸ್ಯಾತ್ ತಥಾ (ಅವ್ಯಯಿ ಭಾವ ಸ.). ಮಗ ಮತ್ತು ಹೆಂಡಂತಿ ಸಹಿತವಾಗಿ. ಯಾವತ್ ...... ತಾವತ್ (i) ಎಲ್ಲಿಯ ವರೆಗೋ' ಅಲ್ಲಿಯ ವರೆಗೆ. ಯಾವತ್ ಮಯಾ ವೃಸಲಾಯ ಕಥ್ಯತೇ ತಾವತ್ ರಕ್ಷ ಏನಂ । ಯಾವತ್ ವಿತ್ತೋಪಾರ್ಜನ-ಶಕ್ತಃ ತಾವತ್ ನಿಜಪರಿವಾರಃ ರಕ್ತಃ । (ii) ಯಾವಾಗ, ಆಗ. ಯಾವತ್ ತೇ ಕಿಂಚಿತ್ ಮಾರ್ಗಂ ಯಾಂತಿ ತಾವತ್ ದ್ವೌ ಪಂಥಾನೌ ಸಮಾಯಾತೌ । (iii) ಎಷ್ಟು ಅಷ್ಟು. ಯಾವಾನ್ ಪುಣ್ಯಸಂಚಯಃ ತಾವಾನ್ ಸ್ವರ್ಗೇ ನಿವಾಸಃ। ವೃಷಲಃ— ಬ್ರಾಹ್ಮಣ ಪುರುಷನಿಂದ ಶೂದ್ರ ಸ್ತ್ರೀಯಲ್ಲಿ ಹುಟ್ಟಿದ ಚಂದ್ರಗುಪ್ತ. ಪ್ರಾಣಹರಂ— ಪಾಣವನ್ನು ಅಪಹರಿಸುವ. ದೇಹಾಂತ. ಪ್ರಾಣಾನಾಂ ಹರಃ ಪ್ರಾಣಹರಃ (ಷ. ತ. ಸ.) ತಂ। ಆಜ್ಞಾಪಯಿಷ್ಯತಿ— ಆ+ಜ್ಞಾ (೯. ಪ) ಧಾತುವಿನ ಪ್ರಯೋಜಕರೂಪದ ದ್ವಿ. ಭ. ತೃ. ಪು, ಏ. ವ. ದಿಷ್ಟ್ಯಾ ಇತ್ಯಾದಿ— 'ಸುದೈವದಿಂದ, ನನ್ನ ಸಾವು ಗೆಳೆಯನ ಕಾರ್ಯ ಕ್ಕಾಗಿ ಇದೆ; ಮಾನವ ಸಹಜವಾದ ನನ್ನ ತಪ್ಪಿಗಾಗಿ ಅಲ್ಲ! ಎಂದು ಚಂದನದಾಸನು ಸಂತೋಷಪಡುತ್ತಾನೆ. 'ದಿಷ್ಟ್ಯಾ' ಇದರ ಉಪಯೋಗ.

(i) ಸಂತೋಷ. ದಿಷ್ಟ್ಯಾ ಪ್ರತಿಹತಂ ದುರ್ಜಾತಂ ।

(ii) ಅಭಿನಂದನೆ. ದಿಷ್ಟ್ಯಾ ಮಹಾರಾಜೋ ವಿಜಯೇನ ವರ್ಧತೇ ।

# EXERCISES.

**೫. ಅಭ್ಯಾಸಕ್ಕಾಗಿ ಪ್ರಶ್ನೆಗಳು:—**

**೧. ಭಾಷಾಂತರಿಸಿರಿ:—** (i) ಶ್ಲೋಕ ೧, ೨, ೩.
(ii) ಚಂ :— ಏವಂ ನ್ವಿದಂ........... । ಚಾ :— ...........ಮಾ ಮ್ಮೈವಂ ಮಂಸ್ಥಾಃ ! (ಪುಟ ೬೧ – ೨೨)

**೨. ವಿಗ್ರಹಿಸಿ ಸಮಾಸಗಳ ಹೆಸರು ಹೇಳಿರಿ :—** ಚಾಣಕ್ಯಹತಕಃ; **ಪ್ರತಿಪ್ರಿಯಂ;** ಅರ್ಥರುಚೇಃ; ರಾಜಾಪಥ್ಯಕಾರಿಣಃ; **ದೇಶಾಂತರಂ;** ಸನಿಕಾರಂ; ತೀಕ್ಷ್ಣದಂಡಃ; **ಸಪುತ್ರಕಲತ್ರಂ.**

**೩. ರೂಪ ಗುರುತಿಸಿರಿ :— ಶಬ್ದಾಯಿತಸ್ಯ; ವಿಚಾಯಯತಿ;** ಸ್ಮರಯಂತಿ; ನಾಟಯಿತ್ವಾ; ಸಮುಚ್ಛೇತ್ಸ್ಯತಿ; **ಮಂಸ್ಥಾಃ;** ಸಂವಾದಿತಂ; **ಸಮುಪಸ್ಥ್ಯತಾಂ;** ಮರ್ಷಯಿಷ್ಯತಿ; ಆಜ್ಞಾಪಯಿಷ್ಯತಿ; **ನಿರ್ವಾಸ್ಯತೇ;** ಪಿಧಾಯ.

**೪. ವಾಕ್ಯಗಳಲ್ಲಿ ಉಪಯೋಗಿಸಿರಿ :— ಕಿಂ ಪುನಃ;** ಅಲಂ; ವಿನಾ; ಯಾವತ್ ... .... ತಾವತ್; **ದಿಷ್ಟ್ಯಾ.**

**೫. ಲಘು ಟಿಪ್ಪಣಿ ಬರೆಯಿರಿ:—** ಶ್ರೇಷ್ಠಿನ್; ವೃದ್ಧಿಲಾಭಾಃ; **ಪರಿಕ್ಲೇಶಃ;** ಕಾಯಸ್ಥಃ; ಶಿಬಿಃ.

**೬. ಪ್ರಯೋಗ ಬದಲಿಸಿರಿ:—** (i) ನಿರ್ವಹತ ರಾಕ್ಷಸಸ್ಯ ಗೃಹಜನಂ । (ii) ತದುಪವಿಶ್ಯತಾಮಾಸನ ಏವ । (iii) ಚಂದ್ರಗುಪ್ತದೋಷಾಃ ಅತಿಕ್ರಾಂತಪಾರ್ಥಿವಗುಣಾನ್ ಸ್ಮರಯಂತಿ ಪ್ರಕೃತೀಃ । (ಮೂಲವಾಕ್ಯ). (iv) ಅನುಭೂಯತಾಂ ಚಿರಂ ವಿಚಿತ್ರೋ ರಾಜಪ್ರಸಾದಃ ।

**೭. ಸಂಧಿ ಬಿಡಿಸಿರಿ:—** (i) ತಸ್ಮಾದಿಹೈವೋಚಿತಾಯಾಂ ಭೂಮಾವುಪಾವಿಶಾಮಿ । (ii) ನಂದಸ್ಯೈವಾರ್ಥರುಚೇರರ್ಥಸಂಬಂಧಃ ।



## ೮. ಶುಕರೂಪಧಾರಿಣೋ ವೈಶಂಪಾಯನಸ್ಯ ಅವಸ್ಥಾ

### ೧. ಕವಿ ಹಾಗೂ ಕಾವ್ಯ:—

ಈ ಪಾಠವನ್ನು ಕಾದಂಬರಿಯ ಉತ್ತರ ಭಾಗದಿಂದ ಆಯ್ದುಕೊಳ್ಳಲಾಗಿದೆ. ಈ ಉತ್ತರ ಭಾಗ ಬರೆದವನು ಬಾಣ ಭಟ್ಟನ ಮಗನಾದ ಭೂಷಣ ಭಟ್ಟ. ಆದರೂ ಒಟ್ಟಾರೆ ಕಾದಂಬರೀ ಗ್ರಂಥವು ಬಾಣನ ಹೆಸರಿನಿಂದಲೇ ಪ್ರಸಿದ್ಧವಿರುವದರಿಂದ, ಅವನ ವಿಷಯವಾಗಿ ಕೆಲವೊಂದು ಸ್ಥೂಲ ವಿವರಗಳನ್ನು ಕೆಳಗೆ ಕೊಟ್ಟಿದೆ.

**ಬಾಣನ ಜೀವನ ಚರಿತ್ರೆ :—** ಬಾಣಕವಿಯು ತನ್ನ ವಿಷಯವಾಗಿ ಕೆಲವೊಂದು ವಿವರಗಳನ್ನು ತನ್ನ ಗ್ರಂಥಗಳಲ್ಲಿ ಕೊಟ್ಟಿದ್ದಾನೆ. ಆದ್ದರಿಂದ ಅವನ ಬಗ್ಗೆ ಕೆಲವೊಂದಾದರೂ ಸಂಗತಿಗಳನ್ನು ನಿಶ್ಚಯವಾಗಿ ಹೇಳಬಹುದು.

ಬಾಣನ ಜನ್ಮ ಪ್ರಸಿದ್ಧವಾದ ವಾತ್ಸ್ಯಾಯನ ಗೋತ್ರದ ಒಂದು ಬ್ರಾಹ್ಮಣ ಮನೆತನದಲ್ಲಾಯಿತು. ಇವನ ತಂದೆ ಚಿತ್ರಭಾನು ಹಾಗೂ ತಾಯಿ ರಾಜದೇವಿ. ಬಾಣನು ಹುಟ್ಟಿದ ಸ್ವಲ್ಪ ಕಾಲದಲ್ಲಿಯೇ ತಾಯಿ ತೀರಿಕೊಂಡಳು. ಹೀಗಾಗಿ ಮಗನ ಲಾಲನೆ ಪಾಲನೆಗಳ ಹೊಣೆ ತಂದೆಯ ಮೇಲೆ ಬಿತ್ತು. ಆದರೆ ದುರ್ದೈವದಿಂದ ಬಾಣನು ಇನ್ನೂ ೧೪ ವರ್ಷದ ವಯಸ್ಸಿನವನಿರುವಾಗಲೇ ತಂದೆಯೂ ಸಹ ಮೃತನಾದನು. ಆದ್ದರಿಂದ ಬಾಣನು ಅನಾಥನಾಗಿ, ಅನೇಕ ಗೆಳೆಯರ ಜೊತೆಗೆ ದೇಶಪರ್ಯಟನ ಮಾಡಿದನು. ಇದರಿಂದ ಅವನ ದೃಷ್ಟಿಕೋನ ವಿಶಾಲವಾಯಿತು. ಅನೇಕ ಅನುಭವಗಳನ್ನು ಪಡೆದನು.

ಹೀಗಿರಲು ಒಮ್ಮೆ ಅವನಿಗೆ ಶ್ರೀಹರ್ಷರಾಜನಿಂದ ಆಸ್ಥಾನಕ್ಕೆ ಬರಲು ಕರೆಬಂದಿತು. ಅವನ ವಿದ್ವತ್ತೆಯ ವಾರ್ತೆ ಕೇಳಿದ ರಾಜನು ತನ್ನ ತಮ್ಮನಾದ ಕೃಷ್ಣನನ್ನು ಬಾಣನನ್ನು ಕರೆತರಲು ಕಳಿಸಿದ್ದನು. ಬಾಣನಾದರೂ ರಾಜನ ಮಮತೆಯ ಕರೆಗೆ ಮನ್ನಣೆಕೊಟ್ಟು ಆಸ್ಥಾನದಲ್ಲಿ ಹೋಗಿ ನೆಲಿಸಿದನು. ತುಸು ಕಾಲದಲ್ಲಿಯೇ ತನ್ನ ಪಾಂಡಿತ್ಯದ ಮೂಲಕ ವಿದ್ವತ್ಸಭೆಯಲ್ಲಿ ಉಚ್ಚ ಸ್ಥಾನ ಪಡೆದನು; ಶ್ರೀಹರ್ಷನ ಆಸ್ಥಾನ ಕವಿಯಾದನು.

**ಗ್ರಂಥಗಳು :—** ಹೀಗೆ ಶ್ರೀಹರ್ಷನ ಆಸ್ಥಾನದಲ್ಲಿದ್ದುಕೊಂಡು ಹರ್ಷಚರಿತ ಕಾದಂಬರೀ ಮತ್ತು ಚಂಡೀಶತಕ ಎಂಬ ಗ್ರಂಥಗಳನ್ನು ಬರೆದನು. ಪಾರ್ವತೀ ಪರಿಣಯವೆಂಬ ನಾಟಕವನ್ನೂ ಸಹ ಇವನೇ ಬರೆದಿರುವದಾಗಿ ಕೆಲವರ ಮತ. ಶ್ರೀಹರ್ಷನ ನಾಟಕಗಳೆಂದು ಪ್ರಸಿದ್ಧವಾದ ರತ್ನಾವಲೀ,

ಪ್ರಿಯದರ್ಶಿಕಾ ಮತ್ತು ನಾಗಾನಂದಗಳನ್ನು ರಾಜನ ಹೆಸರಿನಿಂದ ಬಾಣ ಕವಿಯೇ ಬರೆದನೆಂದು ಒಂದು ಪ್ರತೀತಿ ಇದೆ. ಆದರೆ ಇದಕ್ಕೆ ಸಾಕಷ್ಟು ಆಧಾರವಿಲ್ಲ.

ಕಾದಂಬರೀ ಗ್ರಂಥವನ್ನು ಬಾಣನು ಬರೆಯಲೇನೋ ಆರಂಭಿಸಿದನು. ಆದರೆ ಅವನ್ನು ಪೂರ್ತಿಗೊಳಿಸಲಿಲ್ಲ. ಮುಕ್ಕಾಲು ಭಾಗ ಮುಗಿಯುವಷ್ಟ ರಲ್ಲಿಯೇ ಕಾಲವಶನಾದನು. ಮುಂದೆ ಅವನ ಮಗ ಭೂಷಣಭಟ್ಟನು ಉಳಿದ ಭಾಗವನ್ನು .ತಂದೆ ಸತ್ತ ಒಂದು ವರ್ಷದೊಳಗಾಗಿಯೇ ಬರೆದು ಮುಗಿಸಿದನು. ಆದರೆ ಭೂಷಣಭಟ್ಟನು ತನ್ನ ಹೆಸರನ್ನು ಎಲ್ಲಿಯೂ ಕಾಣಿಸಿಲ್ಲ. 'ಇದು ಆತನ ವಿನಯಗುಣಕ್ಕೂ ಪಿತೃಭಕ್ತಿಗೂ ಭೂಷಣವೇ ಸರಿ' [ಬಾಣನು ಬರೆದ ಭಾಗಕ್ಕೆ ಪೂರ್ವಾರ್ಧವೆಂದು ಹೆಸರು; ಅವನ ಮಗನು ರಚಿಸಿದ ಭಾಗ ಉತ್ತರಾರ್ಧವು].

**ಕಾಲ:**—ಬಾಣ ಕವಿಗೆ ಆಶ್ರಯ. ಕೊಟ್ಟ ಶ್ರೀಹರ್ಷನು ಕ್ರಿ. ಶ. ೬೦೬ ರಿಂದ ೬೪೮ ರ ವರೆಗೆ ಆಳಿದನು. ಆದ್ದರಿಂದ ಬಾಣನಕಾಲ ಕ್ರಿ. ಶ. ೬ನೇ ಶತಕದ ಕೊನೆಯ ಭಾಗ ಮತ್ತು ೭ನೇ ಶತಕದ ಆದಿಭಾಗ.

**ಶೈಲಿ:**— ಇವನದು ಪಾಂಚಾಲೀ ಶೈಲಿ. ಇದರಲ್ಲಿ ಶಬ್ದ ಹಾಗೂ ಅರ್ಥಗಳಿಗೆ ಸರಿಯಾದ ಪ್ರಾಶಸ್ತ್ಯ. ಬಾಣನ ವಾಗ್ಝರಿ ಎಲ್ಲರನ್ನೂ ಅಚ್ಚರಿ ಗೊಳಿಸಿದೆ. ಉದ್ದುದ್ದ ಸಮಾಸ, ದೀರ್ಘ ವರ್ಣನೆ, ಅಸಂಖ್ಯಾಕ ಶಬ್ದ ಹಾಗೂ ಅರ್ಥಾಲಂಕಾರಗಳು, ಬಾಣನ ವೈಶಿಷ್ಟ್ಯಗಳು. ಪಾತ್ರಸೃಷ್ಟಿ ಯಲ್ಲಿಯೂ ಸಾಕಷ್ಟು ಜಾಣ್ಮೆ ತೋರಿಸಿದ್ದಾನೆ. ಇವುಗಳ ಜೊತೆಗೆ ಅಲ್ಲಲ್ಲಿ ಸಣ್ಣ ಸಣ್ಣ ವಾಕ್ಯಗಳನ್ನೊಳಗೊಂಡ ಭಾಗಗಳನ್ನೂ ಬರೆದಿದ್ದಾನೆ.

ಭೂಷಣಭಟ್ಟನ ಶೈಲಿಯಾದರೂ ಹೆಚ್ಚಾಗಿ ಬಾಣನಂತೆಯೇ ಇದೆ. ಆದರೆ ತಂದೆಯಲ್ಲಿದ್ದ ಓಜಸ್ಸು ಹಾಗೂ ಕಥಾಚಾತುರ್ಯ ಮಗನಲ್ಲಿ ಎದ್ದು ಕಂಡುಬರುವದಿಲ್ಲ. ತಂದೆ ಇನ್ನಷ್ಟು ಕಾಲ ಬದುಕಿದ್ದರೆ ಕಥೆ ಇಷ್ಟಕ್ಕೇ ಮುಗಿಯದೆ ಇನ್ನೂ ಬೆಳೆಯಬಹುದಾಗಿತ್ತು.

**ಕಾದಂಬರೀ ಕಥೆಯ ಮುಖ್ಯಾಂಶಗಳು:**— ಹಿಂದಕ್ಕೆ ಶ್ವೇತಕೇತು ಎಂಬ ಮಹಾತೇಜಸ್ವಿಯಾದ ಋಷಿಯು ದೇವರ ಪೂಜೆಗಾಗಿ ಆಕಾಶ ಗಂಗೆ ಯಲ್ಲಿಯ ಕಮಲಗಳನ್ನು ಹರಿಯುವಾಗ, ಬಿಳಿಯ ಕಮಲದಲ್ಲಿದ್ದ ಲಕ್ಷ್ಮಿಗೆ ಮೋಹಿತನಾಗಿ, ಅವಳಿಂದ ಪುಂಡರೀಕನೆಂಬ ಮಗನನ್ನು ಪಡೆದನು.

ಮುಂದೆ ಇವನು ದೊಡ್ಡವನಾಗಲು ಮಹೇಶ್ವರನ ದರ್ಶನಕ್ಕೆಂದು ತನ್ನ ಮಿತ್ರನಾದ ಕಪಿಂಜಲನೊಡನೆ ಹೊರಟನು. ಹಾದಿಯಲ್ಲಿ ಅವನಿಗೆ ನಂದನ-ವನವು ಕಾಣಿಸಿತು. ಅಲ್ಲಿ ಅವರಿಬ್ಬರೂ ತುಸುಹೊತ್ತು ನಿಂತರು. ಅದೇ ನಂದನ ವನಕ್ಕೆ ಬಂದ ಗಂಧರ್ವಕನ್ಯೆ ಮಹಾಶ್ವೇತೆಯು ಪುಂಡರೀಕನ ಮನವನ್ನು ಸೆಳೆದಳು. ಇಬ್ಬರಿಗೂ ಪರಸ್ಪರ ಪ್ರೀತಿ ಹುಟ್ಟಿತು. ಆದರೆ ತಾಯಿಯ ಕರೆ ಬಂದುದರಿಂದ ಮಹಾಶ್ವೇತೆ ಹೋಗಬೇಕಾಯಿತು. ಇತ್ತ ಪುಂಡರೀಕನು ಅವಳ ವಿರಹದಿಂದ ಬಳಲತೊಡಗಿದನು. ಆಗ ಚಂದ್ರೋದಯವಾಯಿತು. ಆದ್ದರಿಂದ ಕಾಮ ಸಂತಾಪ ಹೆಚ್ಚಿತು. ಇದರಿಂದ ಚಂದ್ರನ ಮೇಲೆ ಸಿಟ್ಟಿಗೆದ್ದ ಪುಂಡರೀಕನು 'ಭೂಮಿಯ ಮೇಲೆ ಅವತರಿಸು; ಹಾಗೂ ನನ್ನಂತೆಯೇ ಪ್ರಿಯೆಯ ಸಮಾಗಮಸುಖವನ್ನು ಪಡೆಯದೆ ಸಾಯಿ' ಎಂದು ಚಂದ್ರನಿಗೆ ಶಾಪಕೊಟ್ಟು ಸತ್ತುಹೋದನು. ಚಂದ್ರನಾದರೂ ಇದರಿಂದ ಸಿಟ್ಟಿಗೆದ್ದು 'ನನ್ನಂತಹ ಸುಖದುಃಖಗಳು ನಿನಗೂ ಆಗಲಿ' ಎಂದು ಮರುಶಾಪಕೊಟ್ಟನು. ಹೀಗಾಗಿ ಚಂದ್ರನು ಚಂದ್ರಾಪೀಡನೆಂದೂ, ಪುಂಡರೀಕನು ವೈಶಂಪಾಯನನೆಂದೂ ಭೂಮಿಯ ಮೇಲೆ ಅವತರಿಸಿದರು. ಮುಂದೆ ಪೂರ್ವಜನ್ಮದ ಸಂಸ್ಕಾರದಿಂದ ವೈಶಂಪಾಯನನು ಮಹಾಶ್ವೇತೆಯ ಮೇಲೆ ಆಕ್ರಮಿಸಲು ಉದ್ಯುಕ್ತನಾದನು. ಆದರೆ ಅವಳು ಸಿಟ್ಟಿಗೆದ್ದು ಶಾಪಕೊಡಲು ಗಿಳಿಯಾಗಿ ಮತ್ತೆ ಹುಟ್ಟುವನು. ಇತ್ತ ಚಂದ್ರಾಪೀಡನಾದರೂ ಮಹಾಶ್ವೇತೆಯ ಗೆಳತಿಯಾದ ಕಾದಂಬರಿಗೆ ಮನಸೋತು, ಅವಳ ವಿರಹ ವ್ಯಥೆಯಿಂದ ಬಳಲುತ್ತ ಪ್ರಾಣಬಿಡುವನು. ಮತ್ತು ಮುಂದೆ ಶೂದ್ರಕರಾಜನಾಗಿ ಮತ್ತೆ ಭೂಮಿಯ ಮೇಲೆ ಹುಟ್ಟುವನು. ಹೀಗಿರಲು ಪುಂಡರೀಕ ಹಾಗೂ ವೈಶಂಪಾಯನರ ಅವತಾರವಾದ ಆ ಗಿಳಿ ತನ್ನ ತಾಯಿ ಲಕ್ಷ್ಮೀದೇವಿಯ ಅವತಾರಳಾದ ಚಾಂಡಾಲ ಕನ್ಯೆಯ ಕೈಗೆ ಸಿಕ್ಕಿತು. ಅವಳು ಅದನ್ನು ಪಂಜರದಲ್ಲಿ ಹಾಕಿ ಶೂದ್ರಕರಾಜನೆಡೆಗೆ ಒಯ್ಯಲು, ಗಿಳಿ ತನ್ನ ಪೂರ್ವ ವೃತ್ತಾಂತವನ್ನೆಲ್ಲ ಹೇಳಿ ಮರಣಹೊಂದಿತು. ಇದರಿಂದ ಶೂದ್ರಕರಾಜನಿಗೂ ಪೂರ್ವ ಜನ್ಮದ ಸಂಸ್ಮರಣೆಯಾಗಿ ಅವನೂ ಪ್ರಾಣಬಿಡುವನು. ಹೀಗೆ ಶಾಪ ದೋಷದಿಂದ ಮುಕ್ತನಾದ ಚಂದ್ರಾಪೀಡನು ಕಾದಂಬರಿಯನ್ನೂ, ಹಾಗೂ ಪುಂಡರೀಕನು ಮಹಾಶ್ವೇತೆಯನ್ನೂ ಲಗ್ನಮಾಡಿಕೊಳ್ಳುವರು. ಕಾದಂಬರಿಯೇ ಈ ಕಥೆಯಲ್ಲಿ ನಾಯಿಕೆಯಾದುದರಿಂದ ಈ ಗ್ರಂಥಕ್ಕೆ ಕಾದಂಬರೀ ಎಂಬ ಹೆಸರು ಬಂದಿದೆ.

**ಕಾದಂಬರೀ ಕಥೆಯ ಸಾರಾಂಶ :** – ಒಮ್ಮೆ ಬೆಳಿಗ್ಗೆ ಲಕ್ಷ್ಮಿಯ ಅವತಾರವೋ ಎನ್ನುವಂತಿದ್ದ ಒಬ್ಬ ಚಾಂಡಾಲಕನ್ಯೆ ವೈಶಂಪಾಯನವೆಂಬ ಗಿಳಿಯನ್ನು ತೆಗೆದುಕೊಂಡು ಮಾಳವದೇಶದ ಅರಸನಾದ ಶೂದ್ರಕ ರಾಜನೆಡೆಗೆ ಹೋಗಿ ಅವನಿಗೆ ಆ ಗಿಳಿ ಒಪ್ಪಿಸಿದಳು. ಆಗ ಗಿಳಿ ರಾಜನಿಗೆ ನಮಸ್ಕಾರ ಮಾಡಿ ಒಂದು ಶ್ಲೋಕ ಅಂದಿತು. ಇದರಿಂದ ಶೂದ್ರಕರಾಜನು ಅಚ್ಚರಿಗೊಂಡನು. ಮುಂದೆ ಊಟ ಉಡಿಗೆಗಳನ್ನು ತೀರಿಸಿಕೊಂಡು ಗಿಳಿಗೂ ಹಣ್ಣುಹಂಪಲ ಕೊಡಿಸಿ, ಅದರ ಮುಖದಿಂದ ಅದರ ಆತ್ಮವೃತ್ತಾಂತ ಕೇಳತೊಡಗಿದನು. ಮನಸ್ಸಿಲ್ಲದಿದ್ದರೂ ಶೂದ್ರಕನ ಬಿನ್ನಹದ ಮೇರೆಗೆ ಗಿಳಿಯು ತನ್ನ ವೃತ್ತಾಂತವನ್ನು ಹೇಳತೊಡಗಿತು.

ವಿಂಧ್ಯಾದ್ರಿಯ ಅಡವಿಯಲ್ಲಿರುವ ಒಂದು ಹಳೆಯ ಶಾಲ್ಮಲೀವೃಕ್ಷದಲ್ಲಿ (ಬೂರಲಮರ) ನಾನು ಹುಟ್ಟಿದೆನು. ಕೂಡಲೇ ನನ್ನ ತಾಯಿಯು ಪ್ರಸವ-ವೇದನೆಯಿಂದ ತೀರಿಕೊಂಡಳು. ಆದ್ದರಿಂದ ನನ್ನ ತಂದೆಯೇ ನನ್ನನ್ನು ಜೋಪಾನ ಮಾಡಿದನು. ಒಮ್ಮೆ ಮಾತಂಗಕನೆಂಬ ಬೇಡನ ತಂಡದಲ್ಲಿರುವ ಒಬ್ಬ ಮುದಿಬೇಡನು ನಾವಿರುವ ಗಿಡವನ್ನೇರಿ ನಮ್ಮ ಗೂಡಿನೊಳಗೆ ಕೈ ಹಾಕಿ ತಂದೆಯ ಗೋಣನ್ನು ಮುರಿದು ಕೆಳಗೆ ಚೆಲ್ಲಿದನು. ನಾನಾದರೋ ತಂದೆಯ ಪಕ್ಕದೊಳಗೆ ಅಡಗಿಕೊಂಡದ್ದರಿಂದ ಪಾರಾದೆನು. ಕೆಳಗಾದರೂ ತರಗೆಲೆಗಳ ರಾಶಿಯಮೇಲೆ ಬಿದ್ದೆನು. ಮುಂದೆ ಆ ಮುದಿಬೇಡನು ಗಿಡದಿಂದ ಕೆಳಗಿಳಿದು ಮುರಿದು ಚೆಲ್ಲಿದ ಗಿಳಿಗಳನ್ನು ಆರಿಸತೊಡಗಿದನು. ಆದರೆ ನನ್ನ ಬಣ್ಣ ಆ ತರಗೆಲೆಗಳ ಬಣ್ಣದಂತೆ ಇದ್ದುದರಿಂದ ನಾನು ಅವನ ದೃಷ್ಟಿಗೆ ಬೀಳಲಿಲ್ಲ. ಬಳಿಕ ಆ ಮುದಿಬೇಡನು ಹೋದ ಮೇಲೆ ನೀರಡಿಕೆಯಿಂದ ತೊಳಲುತ್ತ ಜಲಾಶಯದೆಡೆಗೆ ಕುಂಟುತ್ತ ಸಾಗಿದೆನು. ಆಗ ಸ್ನಾನಕ್ಕೆ ಹೊರಟ ಹಾರೀತನೆಂಬ ಮುನಿಕುಮಾರನು ನನ್ನನ್ನು ಕಂಡು ಕನಿಕರಗೊಂಡನು. ಹಾಗೂ ನನಗೆ ನೀರು ಕುಡಿಸಿ, ಜಾಬಾಲಿ ಋಷಿಗಳ ಆಶ್ರಮಕ್ಕೆ ಕರೆದೊಯ್ದನು. ಅಲ್ಲಿಯಾದರೂ ನಡೆದ ವೃತ್ತಾಂತವನ್ನು ಹೇಳಿ ಜಾಬಾಲಿ ಮುನಿಗಳೆದುರು ನನ್ನನ್ನು ಇಟ್ಟನು. ಅವರು ನನ್ನನ್ನು ನೋಡಿ ನಕ್ಕು 'ಇವನು ತನ್ನ ಪಾಪದ ಫಲವನ್ನು ಅನುಭವಿಸುತ್ತಿದ್ದಾನೆ' ಎಂದರು. ಇದರಿಂದ ಕೌತುಕಗೊಂಡ ಮುನಿಕುಮಾರರು ನನ್ನ ಸಮಗ್ರ ವೃತ್ತಾಂತವನ್ನು ಹೇಳಬೇಕೆಂದು ಆ ಜಾಬಾಲಿ ಋಷಿಗೆ ಬಿನ್ನಯಿಸಿಕೊಂಡರು. ಆಗ ಆ ಜಾಬಾಲಿ ಮಹರ್ಷಿಗಳು ಹೇಳಲಾರಂಭಿಸಿದರು.

ಅವಂತೀದೇಶದ ಉಜ್ಜಯಿನಿಯಲ್ಲಿ ಆಳುತ್ತಿದ್ದ ತಾರಾಪೀಡನೆಂಬ ರಾಜನಿಗೆ ವಿಲಾಸವತಿಯಲ್ಲಿ ಚಂದ್ರಾಪೀಡನೆಂಬ ಒಬ್ಬ ಮಗನು ಮುಪ್ಪಿನ ಕಾಲದಲ್ಲಿ ಹುಟ್ಟಿದನು. ಅಂದೇ ಅವನ ಮಂತ್ರಿಯಾದ ಶುಕನಾಸನಿಗೆ ವೈಶಂಪಾಯನನೆಂಬ ಮಗನು ಹುಟ್ಟಿದನು. ಚಂದ್ರಾಪೀಡ ವೈಶಂಪಾಯನರು ಪರಮ ಸ್ನೇಹಿತರು. ಒಂದೇ ಗುರುಕುಲದಲ್ಲಿ ವಿದ್ಯಾಭ್ಯಾಸ ಮಾಡಿದರು. ವಿದ್ಯಾಭ್ಯಾಸಂಗ ಮುಗಿದ ಬಳಿಕ ಮರಳಿ ಊರಿಗೆ ಬಂದರು. ಬಳಿಕ ಒಮ್ಮೆ ಚಂದ್ರಾಪೀಡನು ವಜ್ರಾಯುಧವೆಂಬ ಕುದುರೆಯನ್ನೇರಿ ಕಿನ್ನರ ದಂಪತಿಗಳನ್ನು ಬೆನ್ನಟ್ಟುತ್ತ ಅಚ್ಛೋದ ಸರೋವರಕ್ಕೆ ಹೋದನು. ಅಲ್ಲಿ ಶಿವನನ್ನು ಆರಾಧಿಸುತ್ತಿದ್ದ ಮಹಾಶ್ವೇತೆಯಿಂದ ಆದರಾತಿಥ್ಯ ಹೊಂದಿ ಅವಳ ವೃತ್ತಾಂತ ಕೇಳಲು ಆಶಿಸಿದನು. ಅವಳಾದರೋ ತನ್ನ ದುಃಖವನ್ನು ನುಂಗಿಕೊಂಡು ಆತ್ಮವೃತ್ತಾಂತ ಹೇಳಲಾರಂಭಿಸಿದಳು.

"ನಾನು ಗಂಧರ್ವ ಕನ್ನಿಕೆ. ಒಮ್ಮೆ ತಾಯಿಯೊಡನೆ ಅಚ್ಛೋದ ಸರೋವರಕ್ಕೆ ಸ್ನಾನಕ್ಕೆಂದು ಹೋದಾಗ ಗೆಳತಿಯೊಡನೆ ಹೂ ಕೊಯ್ಯುತ್ತ ತುಸು ದೂರ ಹೋದೆನು. ಆಗ ಪುಂಡರೀಕನೆಂಬ ಮುನಿಕುಮಾರನನ್ನು ಕಂಡು ಅವನಲ್ಲಿ ಅನುರಾಗವುಳ್ಳವಳಾದೆನು. ಅವನಾದರೂ ನನ್ನನ್ನು ಕಾಮಿಸಿದನು. ಆದರೆ ನಮಗೆ ಸಮಾಗಮಸೌಖ್ಯ ಲಭಿಸಲಿಲ್ಲ. ಪುಂಡರೀಕನು ವಿರಹವ್ಯಥೆಯಿಂದ ಪ್ರಾಣಬಿಟ್ಟನು. ಆ ಸುದ್ದಿ ಗೊತ್ತಾದೊಡನೆ ನಾನಾದರೂ ಸಹಗಮನ ಮಾಡಲು ಸಿದ್ಧನಾದೆನು. ಆದರೆ 'ಮಗಳೇ, ಸಾಯಬೇಡ, ನಿನಗೆ ಮುಂದೆ ಪುಂಡರೀಕನ ಸಮಾಗಮವಾಗುವದು' ಎಂದು ಹೇಳಿ ದಿವ್ಯಪುರುಷನೊಬ್ಬನು ಚಂದ್ರಲೋಕಕ್ಕೆ ಆ ಪುಂಡರೀಕನ ಮೃತದೇಹವನ್ನು ತೆಗೆದುಕೊಂಡು ಹೋದನು. ಪುಂಡರೀಕನ ಗೆಳೆಯನಾದ ಕಪಿಂಜಲನು ಆ ದಿವ್ಯಪುರುಷನನ್ನು ಬೆನ್ನಟ್ಟುತ್ತ ಆಕಾಶಕ್ಕೆ ಜಿಗಿದನು. ಅಂದಿನಿಂದ ಪುಂಡರೀಕನ ಪುನರಾಗಮನದ ಮಾರ್ಗನಿರೀಕ್ಷಣೆ ಮಾಡುತ್ತ ಇಲ್ಲಿ ತಪಸ್ಸಾಚರಿಸುತ್ತಿದ್ದೇನೆ. ನನ್ನ ದುಃಖವಾರ್ತೆಯಿಂದ ವ್ಯಥೆಗೊಂಡ ನನ್ನ ಪ್ರಾಣಸಖಿ ಕಾದಂಬರಿಯೂ ಆಜನ್ಮ ಕನ್ಯೆಯಾಗಿ ಉಳಿಯಲು ಹಟ ಹಿಡಿದಿದ್ದಾಳೆ. 'ಇದು ಸರಿಯಲ್ಲ; ತಂದೆಯ ಮಾತಿನಂತೆ ವರ್ತಿಸು ಹಾಗೂ ವಿವಾಹ ಮಾಡಿಕೋ' ಎಂದು ನಾನು ಅವಳಿಗೆ ಇದೀಗ ಹೇಳಿಕಳಿಸಿದ್ದೇನೆ. ಬೇಕಾದರೆ ನಡೆಯಿರಿ. ಇಬ್ಬರೂ ಹೋಗಿ ಅವಳಿಗೆ ಸಮಾಧಾನ ಹೇಳುವಾ."

ಈ ಮಾತಿಗೆ ಚಂದ್ರಾಪೀಡನು ಒಪ್ಪಿಕೊಂಡನು. ಚಂದ್ರಾಪೀಡ ಹಾಗೂ ಮಹಾಶ್ವೇತೆ ಇಬ್ಬರೂ ಕಾದಂಬರಿಯ ತಂದೆಯಾದ ಚಿತ್ರರಥರಾಜನೆಡೆಗೆ ಹೋದರು. ಇಬ್ಬರಿಗೂ ಆದರಾತಿಥ್ಯವಾಯಿತು. ಈ ಸನ್ನಿವೇಶದಿಂದ ಕಾದಂಬರೀ ಹಾಗೂ ಚಂದ್ರಾಪೀಡ ಇವರಲ್ಲಿ ಪರಸ್ಪರ ಪ್ರೇಮ ಹುಟ್ಟಿತು. ಒಬ್ಬರಿಗೊಬ್ಬರು ಪ್ರೇಮಕಾಣಿಕೆಗಳನ್ನು ಕೊಡುವದೂ ಆಯಿತು. ಆದರೆ ಇಷ್ಟರಲ್ಲಿ 'ಕೂಡಲೇ ಹಿಂದಿರುಗಬೇಕೆಂದು' ರಾಜಧಾನಿಯಿಂದ ಪತ್ರ ಬಂದುದರಿಂದ ಚಂದ್ರಾಪೀಡನು ಉಜ್ಜಯನಿಗೆ ತೆರಳಿದನು. ಹಾಗೂ ಗೆಳೆಯನಾದ ವೈಶಂಪಾಯನನಿಗೆ ಸೈನ್ಯ ಕರೆತರಲು ತಿಳಿಸಿದನು.

ಆದರೆ ಬಹುಕಾಲವಾದರೂ ವೈಶಂಪಾಯನನು ಬರಲಿಲ್ಲ. ಆದ್ದರಿಂದ ಅವನನ್ನು ಹುಡುಕಿ ತರಲು ಚಂದ್ರಾಪೀಡನು ಹೊರಟನು. ಮತ್ತೆ ಮಹಾಶ್ವೇತೆಯ ಬಳಿಗೆ ಹೋದನು. ಆಗ ಅವಳು ಅಳುವದನ್ನು ಕಂಡು ಶೋಕಿಸುವ ಕಾರಣ ಕೇಳಿದನು. ಆಗ ಮಹಾಶ್ವೇತೆಯು 'ನೀನು ಉಜ್ಜಯಿನಿಗೆ ಹೋದ ಮೇಲೆ ನಿನ್ನ ಗೆಳೆಯ ವೈಶಂಪಾಯನನು ನನ್ನನ್ನು ಕಾಮಿಸಿ ನನ್ನ ಮೇಲೆ ಆಕ್ರಮಣ ಮಾಡಿದನು. ಆದರೆ ಅವನು ನಿನ್ನ ಗೆಳೆಯನೆಂದು ಅರಿಯದ ನಾನು ಅವನಿಗೆ 'ಸತ್ತು ಗಿಳಿಯಾಗಿ ಹುಟ್ಟು' ಎಂದು ಶಾಪ ಕೊಟ್ಟೆನು 'ಕೂಡಲೇ ಅವನು ಕಾಣದಾದನು.'

ಗೆಳೆಯನ ಈ ಮರಣವಾರ್ತೆಯನ್ನು ಕೇಳಿ ಚಂದ್ರಾಪೀಡನು ಗತಪ್ರಾಣನಾಗುವನು. ಚಂದ್ರಾಪೀಡನು ಬಂದುದನ್ನು ಕೇಳಿ ಅವನನ್ನು ಕಾಣಬೇಕೆಂದು ಅಲ್ಲಿಗೆ ಬಂದಿದ್ದ ಕಾದಂಬರಿ ಮೂರ್ಛೆಗೊಂಡಳು. ಮುಂದೆ ಎಚ್ಚತ್ತು ಸಹಗಮನಕ್ಕೆ ಸಿದ್ಧಳಾದಳು. ಆದರೆ, ಚಂದ್ರಾಪೀಡನ ದೇಹವನ್ನು ಕಾಯಬೇಕೆಂದೂ ಮುಂದೆ ಅವನೊಡನೆ ಕಾದಂಬರಿಗೆ ಸಮಾಗಮ ಸೌಖ್ಯ ದೊರೆಯುವದೆಂದೂ ಆಕಾಶವಾಣಿಯಾಗುತ್ತದೆ. ಇದರಿಂದ ಎಲ್ಲರಿಗೂ ಆಶ್ಚರ್ಯವಾಗುತ್ತದೆ. ಆಗ ಚಂದ್ರಾಪೀಡನ ದಾಸಿಯಾದ ಪತ್ರಲೇಖೆ ಇಂದ್ರಾಯುಧ ಕುದುರೆಯೊಂದಿಗೆ ಅಚ್ಛೋದ ಸರೋವರದಲ್ಲಿ ಧುಮುಕುವಳು. ಕೂಡಲೇ ಕಪಿಂಜಲಮುನಿ (ಪುಂಡರೀಕನ ಗೆಳೆಯ) ನೀರಿನಿಂದ ಏಳುವನು. ಆಗ ಮಹಾಶ್ವೇತೆ ಪುಂಡರೀಕನ ದೇಹದ ಬಗ್ಗೆ ವಿಚಾರಿಸಲಾಗಿ ಕಪಿಂಜಲನು ಹೇಳತೊಡಗಿದನು. 'ಪುಂಡರೀಕನು ನಿನ್ನ ವಿರಹ ವ್ಯಥೆಯಿಂದ ಬಳಲುತ್ತಿರುವಾಗ ಚಂದ್ರೋದಯವಾಯಿತು. ಇದರಿಂದ ಅವನ ಸಂತಾಪ ಹೆಚ್ಚಿತು.

ಕಾರಣ ಚಂದ್ರನ ಮೇಲೆ ಸಿಟ್ಟಿಗೆದ್ದ ಪುಂಡರೀಕನು 'ಭೂಮಿಯ ಮೇಲೆ ಎರಡು ಸಲ ಅವತರಿಸು. ಹಾಗೂ ನನ್ನಂತೆಯೇ ಪ್ರಿಯೆಯ ಸಮಾಗಮ ಸುಖವನ್ನು ಪಡೆಯದೆ ಸಾಯು' ಎಂದು ಚಂದ್ರನಿಗೆ ಶಾಪಕೊಟ್ಟು ಸತ್ತನು. ಚಂದ್ರನಾದರೂ ಇದರಿಂದ ಸಂತಾಪಗೊಂಡು, 'ನನ್ನಂತಹ ಸುಖ ದುಃಖಗಳು ನಿನಗೂ ಆಗಲಿ' ಎಂದು ಮರುಶಾಪ ಕೊಟ್ಟನು. ಪುಂಡರೀಕನ ದೇಹವು ಈಗ ಚಂದ್ರಲೋಕದಲ್ಲಿದೆ. ಇದೆಲ್ಲ ವರ್ತಮಾನ ಪುಂಡರೀಕನ ತಂದೆಯಾದ ಶ್ವೇತಕೇತುವಿಗೆ ತಿಳಿಸಲು ಹಾಗೂ ಅವನಿಗೆ ಆಯುಷ್ಕಾಮ ಹೋಮಮಾಡಲು ಅರುಹಲು ಚಂದ್ರನು ನನಗೆ ಅಪ್ಪಣೆ ವಿಧಿಸಿದನು. ಅದರಂತೆ ನಾನು ತಿಳಿಸಲು ಹೊರಟಾಗ, ದಾರಿಯಲ್ಲಿ ಒಬ್ಬ ವೈಮಾನಿಕನನ್ನು ದಾಟಿದೆನು. ಅವನು ಸಿಟ್ಟಿಗೆದ್ದು ನನಗೆ ಕುದುರೆಯಾಗಲು ಶಾಪಕೊಟ್ಟನು. ಬಳಿಕ ಅವನನ್ನು ಬಹುಪರಿಯಿಂದ ಬಿನ್ನಯಿಸಿಕೊಳ್ಳಲಾಗಿ, ಕುದುರೆಯಾದರೂ ಗೆಳೆಯನ ವಿಯೋಗವಾಗದಂತೆ ಅನುಗ್ರಹಿಸಿದನು. ಕೂಡಲೇ ನಾನು ಕುದುರೆಯಾದೆನು. ಆದರೆ ಪೂರ್ವಜನ್ಮದ ಸ್ಮರಣೆ ಇದ್ದುದರಿಂದ ಚಂದ್ರನ ಅವತಾರವಾದ ಚಂದ್ರಾಪೀಡನನ್ನು ಈ ಸ್ಥಳಕ್ಕೆ ಕರೆದುಕೊಂಡು ಬಂದೆ. ಚಂದ್ರಾಪೀಡನು ಹೋದಬಳಿಕ ನಿನ್ನನ್ನು ಕಾಮಿಸಿದ ಆದರೆ ಅರಿಯದ ನೀನು ಗಿಳಿಯಾಗೆಂದು ಶಾಪಕೊಟ್ಟ ವೈಶಂಪಾಯನನು ನಿನ್ನ ನಲ್ಲನಾದ ಪುಂಡರೀಕನ ಅವತಾರ. ಚಿಂತೆಯಿಲ್ಲ; ನಾನೀಗ ಶಾಪದಿಂದ ಮುಕ್ತನಾಗಿರುವೆ. ಆದ್ದರಿಂದ ಆಯುಷ್ಕಾಮ ಹೋಮ ಮಾಡಲು ಶ್ವೇತಕೇತುವಿಗೆ ತಿಳಿಸಲು ಹೊರಟಿದ್ದೇನೆ.'

'ಪುಂಡರೀಕನ ಅವತಾರನಾದ ವೈಶಂಪಾಯನನು ಮಹಾಶ್ವೇತೆಗೆ ಮೋಹಿಸಿ ಶಾಪದಿಂದ ಗಿಳಿಯಾದನು' ಎಂದು ಜಾಬಾಲಿ ಮುನಿಗಳು ಹೇಳಿದೊಡನೆಯೇ ಗಿಳಿಗೆ ಪೂರ್ವಜನ್ಮದ ಪೂರ್ಣಸ್ಮರಣೆಯಾಗಿ 'ಸ್ವಾಮೀ, ನನ್ನ ಮಿತ್ರ ಚಂದ್ರನು ಎಲ್ಲಿರುವನೆಂಬುದನ್ನು ದಯಮಾಡಿ ಹೇಳಿರಿ. ಅವನನ್ನು ಕಾಣಬೇಕೆಂದು ಬಹಳ ಆಶೆಯಾಗಿದೆ' ಎಂದು ಕೇಳಿತು. ಜಾಬಾಲಿಯು ನಕ್ಕು 'ಪಕ್ಕಗಳು ಬಲಿತ ಮೇಲೆ ಹೋಗು' ಎಂದು ಅಂದರು.

ಮುಂದೆ ನನ್ನ ಪಕ್ಕಗಳು ಬಲಿಯಲು ಗೆಳೆಯ ಚಂದ್ರಾಪೀಡನನ್ನು ಕಾಣಬೇಕೆಂದು ಆ ಜಾಬಾಲಿ ಮುನಿಗಳ ಆಶ್ರಮದಿಂದ ಹೊರಬಿದ್ದೆನು. ದಾರಿಯಲ್ಲಿ ದಣುವಿನಿಂದ ಮಲಗಿದಾಗ ಒಬ್ಬ ಬೇಡನು ನನ್ನನ್ನು ಬಲೆಯಲ್ಲಿ ಹಿಡಿದಿದ್ದನು. 'ಗೆಳೆಯನನ್ನು ಕಾಣಲು ಆತುರನಾಗಿದ್ದೇನೆ. ಆದ್ದರಿಂದ ನನ್ನನ್ನು ಬಿಡು' ಎಂದು ಅಂಗಲಾಚಿ ಬೇಡಿಕೊಂಡರೂ, ಅವನು ನನ್ನನ್ನು

ಬಿಡಲಿಲ್ಲ. ಹಾಗೆಯೇ ತೆಗೆದುಕೊಂಡು ಹೋಗಿ ನನ್ನನ್ನು ತನ್ನ ಒಡೆಯನ ಮಗಳಾದ ಚಂಡಾಲಕನ್ಯೆಗೆ ಕೊಟ್ಟನು. ಅವಳಾದರೋ ನನ್ನನ್ನು ಈ ಪಂಜರದಲ್ಲಿ ಹಾಕಿ ನಿನ್ನ ಬಳಿಗೆ ತಂದಿದ್ದಾಳೆ.'

ಹೀಗೆ ಹೇಳಿ ಗಿಳಿ ತನ್ನ ಮಾತು ಮುಗಿಸಿತು. ಆಗ ರಾಜನು ಆಶ್ಚರ್ಯದಿಂದ ಆ ಚಾಂಡಾಲ ಕನ್ಯೆಗೆ ಹೇಳಿಕಳಿಸಲಾಗಿ ಅವಳು ಬಂದು ಹೀಗೆ ನುಡಿದಳು. 'ಶೂದ್ರಕ ರಾಜನೇ ಚಂದ್ರಾಪೀಡನಾಗಿದ್ದ ಚಂದ್ರನು. ಈ ಗಿಳಿಯೇ ವೈಶಂಪಾಯನನಾಗಿದ್ದ ಪುಂಡರೀಕನು. ನಾನೇ ಲಕ್ಷ್ಮಿ. ಶ್ವೇತಕೇತುವಿನ ಆಜ್ಞೆಯಂತೆ ಹೋಮ ಮುಗಿಯುವ ವರೆಗೂ ಇವನನ್ನು ಸೆರೆಯಲ್ಲಿಟ್ಟಿದ್ದೆ. ಈಗ ಹೋಮ ಮುಗಿಯುತ್ತ ಬಂದದ್ದರಿಂದ ಮಿತ್ರನ ಬಳಿಗೆ ಕರೆತಂದಿದ್ದೇನೆ. ಇನ್ನು ನೀವೀರ್ವರೂ ದಿವ್ಯ ದೇಹಗಳನ್ನು ಪಡೆದು ಇಷ್ಟಜನ ಸಮಾಗಮ ಸುಖವನ್ನು ಪಡೆಯಬಹುದು' ಇಷ್ಟು ಹೇಳಿ ಅವಳು ಆಕಾಶಕ್ಕೆ ಹಾರಿದಳು. ಬಳಿಕ 'ಚಂದ್ರಾಪೀಡ ಹಾಗೂ ವೈಶಂಪಾಯನರು ದಿವ್ಯ ದೇಹಗಳನ್ನು ಪಡೆದು ತಮ್ಮ ತಮ್ಮ ಇಷ್ಟಜನರೊಡನೆ ಸುಖವಾಗಿದ್ದರು.'

**೪. ಕಥಾಸಂದರ್ಭ ಹಾಗೂ ಪಾಠದ ಸಾರಾಂಶ :—**

ಹಾರೀತ ಮುನಿಕುಮಾರನಿಂದ ಜಾಬಾಲಿಯ ಆಶ್ರಮಕ್ಕೆ ತರಲ್ಪಟ್ಟ ವೈಶಂಪಾಯನನ ಅವತಾರವಾದ ಗಿಳಿಯು ಕೆಲಕಾಲ ಆಶ್ರಮದಲ್ಲಿಯೇ ಇದ್ದಿತು. ಮುಂದೆ ಪಕ್ಕಗಳು ಬಲಿತು ಹಾರಾಡುವ ಶಕ್ತಿ ಬರಲು ಗೆಳೆಯನಾದ ಚಂದ್ರಾಪೀಡನನ್ನು ಕಾಣಬೇಕೆಂಬ ಆಶೆಯಿಂದ, ಆ ಆಶ್ರಮದಿಂದ ಹೊರಬಿದ್ದಿತು. ಆದರೆ ಮಧ್ಯದಾರಿಯಲ್ಲಿ ದಣಿವಿನಿಂದ ಪ್ರಯಾಸಹೊಂದಿ ಅಲ್ಲಿಯೇ ವಿಶ್ರಮಿಸಿತು. ಬಹಳ ಪ್ರಯಾಸದ ಮೂಲಕ ಅದಕ್ಕೆ ಕೂಡಲೇ ನಿದ್ದೆ ಹತ್ತಿತು. ಆದರೆ ನಿದ್ದೆಯಿಂದೆಚ್ಚತ್ತು ನೋಡುವಷ್ಟರಲ್ಲಿಯೇ ತನ್ನನ್ನು ಒಬ್ಬ ಬೇಡನು ಬಂಧಿಸಿದುದನ್ನು ಕಂಡಿತು. 'ಗೆಳೆಯನನ್ನು ಕಾಣಲು ಆತುರನಾಗಿರುವೆ. ಆದ್ದರಿಂದ ದಯಮಾಡಿ ಬಿಡು' ಎಂದು ಅಂಗಲಾಚಿ ಬೇಡಿಕೊಂಡರೂ ಆ ಬೇಡ ಬಿಡಲಿಲ್ಲ. ಅವನು ಅದನ್ನು ಎತ್ತಿಕೊಂಡು ನೇರವಾಗಿ ಚಾಂಡಾಲಕನ್ಯೆಯೆಡೆಗೆ ಹೋಗಿ ಅವಳಿಗೆ ಒಪ್ಪಿಸಿದನು. ಅವಳು ನೀಚ ಚಂಡಾಲ ಜಾತಿಯವಳಾದುದರಿಂದ, ಬಿನ್ನಹಮಾಡಿಕೊಂಡರೆ ಫಲಕಾರಿಯಾಗದೆಂದೂ, ಮೇಲಾಗಿ ತನ್ನ ಮುಗ್ಧ ಮಾತುಗಳ ಮೂಲಕ ಬಂಧನಾವಧಿಯೇ ಹೆಚ್ಚಾಗಬಹುದೆಂದು ಎಣಿಕೆಹಾಕಿದ ಆ ಗಿಳಿಯು ಅವಳೊಡನೆ

ಮಾತನಾಡಲಿಲ್ಲ. ಹಾಗೂ ಕೊಡಮಾಡಿದ ಆಹಾರ ಸ್ವೀಕರಿಸಲಿಲ್ಲ. ಮುಂದೆ ಮರುದಿನ ಆ ಚಾಂಡಾಲ ಕನ್ಯೆ ಹಣ್ಣುಹಂಪಲಗಳನ್ನೊಯ್ದು ಗಿಳಿಗೆ ಪ್ರೀತಿ ಪೂರ್ವಕವಾಗಿ ನುಡಿದಳು. 'ಭಕ್ಷ್ಯಾಭಕ್ಷ್ಯ ವಿಚಾರವು ಪಕ್ಷಿಗಳಿಗೆ ಸಲ್ಲದು. - ಮೇಲಾಗಿ ತಾನು ತಂದ ಈ ಪದಾರ್ಥಗಳು ಆಹಾರದ ನಿಯಮ ಗಳನ್ನಿಟ್ಟುಕೊಂಡವರು ಸಹ ಸೇವಿಸುವಂಥವವಿವೆ. ಏಕೆಂದರೆ ಹಣ್ಣು ಹಂಪಲಗಳನ್ನು ಚಾಂಡಾಲರಿಂದ ಸಹ ಸ್ವೀಕರಿಸಬಹುದೆಂಬೂ, ಚಾಂಡಾಲರ ಪಾತ್ರೆಯಿಂದ ನೆಲದ ಮೇಲೆ ಬಿದ್ದ ನೀರು ಶುದ್ಧವೆಂದೂ ಶಾಸ್ತ್ರಗಳು ಸಾರು ತ್ತವೆ. ಆದ್ದರಿಂದ ಈ ಪದಾರ್ಥಗಳನ್ನು ಸ್ವೀಕರಿಸಿ ನಿನ್ನ ಹಸಿವೆ ನೀರಡಿಕೆ ಗಳನ್ನು ಹಿಂಗಿಸು' ಅವಳ ಈ ಮಾತು ಕೇಳಿ ಗಿಳಿಯು ಕೊಡಮಾಡಿದ ಆಹಾರವನ್ನು ಸ್ವೀಕರಿಸಿತು. ಆದರೆ ಈ ವರೆಗೆ ತಾಳಿದ ಮೌನವನ್ನು ಮಾತ್ರ ಬಿಡಲಿಲ್ಲ.

**ಸೂಚನೆ:—** ಗಿಳಿಯೇ ತನ್ನ ಆತ್ಮವೃತ್ತಾಂತವನ್ನು ಶೂದ್ರಕ ರಾಜ ನೆದುರಿಗೆ ಹೇಳುತ್ತಿರುವದರಿಂದ ಈ ಪಾಠದಲ್ಲಿ ಹೆಚ್ಚಾಗಿ ಪ್ರಥಮ ಪುರುಷದ ಕರ್ತೃ ಹಾಗೂ ಕ್ರಿಯಾಪದಗಳು ಬಂದಿವೆ. ಆದರೆ ವಿದ್ಯಾರ್ಥಿಗಳ ಸೌಕರ್ಯ ಕ್ಕಾಗಿ ಪಾಠದ ಸಾರಾಂಶವನ್ನು ತೃತೀಯ ಪುರುಷದಲ್ಲಿ ಕೊಡಲಾಗಿದೆ.

**೫. ಭಾಷಾಂತರ:—**

ಅ. ಗಿಳಿಯ ವೇಷಧರಿಸಿದ ವೈಶಂಪಾಯನನ ಅವಸ್ಥೆ.

ಹೀಗೆ ಹಾರೀತನಿಂದ ಲಕ್ಷ್ಯಪೂರ್ವಕವಾಗಿ ಪೋಷಿಸಲ್ಪಟ್ಟ ನನಗೆ ಕೆಲವೇ ದಿನಗಳಲ್ಲಿ ಪಕ್ಕಗಳೊಡೆದವು. (ಶಬ್ದಶಃ, ನಾನು ಪಕ್ಕಗಳೊಡೆದವ ನಾದೆನು). (ಮುಂದೆ) ಹಾರಾಡುವ ಶಕ್ತಿ ಬರಲು, ಮನದಲ್ಲಿ ಆಲೋಚಿಸಿ ದೆನು. '(ಇಲ್ಲಿಂದ) ಹೋಗಲು ಸಮರ್ಥನಾಗಿದ್ದೇನೆ. ಚಂದ್ರಾಪೀಡನು ಎಲ್ಲಿ ಹುಟ್ಟಿರುವನೆಂಬುದರ ಅರಿವು ಮಾತ್ರ (ನನಗೆ) ಇನ್ನೂ ಆಗಿಲ್ಲ ಎಂಬುದು ನಿಜ; (ಆದರೆ) ಮಹಾಶ್ವೇತೆಯಾದರೋ ಮೊದಲಿನಂತೆಯೇ ಇದ್ದಾಳೆ. ಆದ್ದರಿಂದ [ಹಿಂದಿನ ಜನ್ಮದ] ಅರಿವು ಹುಟ್ಟಿದರೂ ಅವಳನ್ನು ನೋಡದೆ ಕ್ಷಣಕಾಲ ಕೂಡ ನನ್ನನ್ನೇಕೆ ದುಃಖಕ್ಕೆ ಈಡುಮಾಡಿಕೊಳ್ಳ ಬೇಕು? (ಆದದ್ದು) ಆಗಲಿ; ಅಲ್ಲಿಯೇ ಹೋಗಿ ಇರುವೆ.' ಹೀಗೆ ಒಮ್ಮೆ ಬೆಳಿಗ್ಗೆ ನಿಶ್ಚಯಿಸಿ, ತಿರುಗಾಡಲು ಹೊರಬಿದ್ದ ನಾನು ಉತ್ತರದಿಕ್ಕನ್ನು ಹಿಡಿದು ಸಾಗಿದೆನು. ಹಾರಾಡುವ ರೂಢಿ ಬಹಳ ದಿನಗಳ ವರೆಗೆ ಇದ್ದಿಲ್ಲ ವಾದ್ದರಿಂದ ಸ್ವಲ್ಪೇ ದೂರ ಹೋಗಲು, ನನ್ನ ಅವಯವಗಳು ದಣಿವಿನಿಂದ

ಜರ್ಜರಿತವಾದವು. ಆ (ಬಗೆಯ) ಅವಸ್ಥೆಯುಳ್ಳ, ಪಕ್ಕಗಳು ಸಡಿಲಾದ ನಾನು ಬೀಳುವೆ, ಇಲ್ಲಿ ಬೀಳುವೆ' ( ಎಂದು ಯೋಚಿಸುತ್ತ, ಪೂರ್ಣ ) ನಿಸ್ಸಹಾಯನಾಗಿ (ಬಹಳದಣಿದು) [ಕೊನೆಗೆ], ರಾತ್ರಿಯ ಕತ್ತಲೆಯ ಸಮು-ದಾಯವೋ ಎನ್ನುವಂತಿದ್ದ, ಸೂರ್ಯಕಿರಣಗಳನ್ನು ತಡೆಗಟ್ಟುವ (ಮುಚ್ಚುವ), ದಟ್ಟವಾದ ಹಸಿರುಬಣ್ಣದ ಚಿಗುರೆಲೆಗಳ ಭಾರದಿಂದ ಬಾಗಿದ, ತೀರ ಸಮೀಪದಲ್ಲಿಯೇ ಇದ್ದ, ಸರೋವರದ ದಂಡೆಯಮೇಲಿನ ಗಿಡಗಳ ಒಂದು ಗುಂಪಿನಮೇಲೆ ನನ್ನನ್ನು ಬೀಳಗೊಟ್ಟೆನು. ಬಹುಕಾಲದ ನಂತರ ದಾರಿಯ ದಣಿವಿನ ಆಯಾಸವು (ದುಃಖವು) ದೂರಾಗಲು, ಕೆಳಗಿಳಿದು, ದಟ್ಟವಾದ ನೆರಳನ್ನೀಯುವ ಬೇರೊಂದು ಟೊಂಗೆಯನ್ನೇರಿ, ಗಿಡದ ಬೊಡ್ಡೆ ಯಲ್ಲಿಯೇ ಇರತೊಡಗಿದೆನು. ಹಾಗೆ ಇರಲು, ದಾರಿಯ ದಣಿವಿಗೆ ಸುಲಭ ವಾಗಿ ಬರುವ ನಿದ್ರೆ ಹೋದೆನು. ಬಹುಕಾಲದನಂತರ ಎಚ್ಚರವಾಗಲು, ಬಿಡಿಸಲು ಬಾರದ ಹಗ್ಗಗಳ ಬಲಿಯಿಂದ ನನ್ನನ್ನು ಕಟ್ಟಿದುದನ್ನು ಕಂಡೆನು. ಮತ್ತು ನನ್ನ ಎದುರಿಗೆ, ದಂಡಪಾಶವಿಲ್ಲದ ಯಮದೂತನಂತಿದ್ದ, ದೇಹವು ಬಹಳ ಬಿರುಸು ಮತ್ತು ಕಪ್ಪು ಇದ್ದುದರಿಂದ ಕೇವಲ ಕಬ್ಬಿಣದ ಚೂರು ಗಳಿಂದಲೇ ನಿರ್ಮಿಸಲ್ಪಟ್ಟಿರುವನೋ ಎನ್ನುವಂತಿದ್ದ, ಬಣ್ಣ ಹಾಗೂ ನಡತೆ ಯಲ್ಲಿ ಕಪ್ಪಾದ, ಹೊಲಸು ಬಟ್ಟೆ ಹಾಗೂ ಕೆಲಸಗಳುಳ್ಳ, ಮಾತು ಹಾಗೂ ದೇಹ ಬಿರುಸಾದ, ಅವನಂಥವನನ್ನು (ಮೊದಲು) ನೋಡದಿದ್ದರೂ, ಕೇಳದಿದ್ದರೂ, ಕೂಡ ಅವನ ಆಕಾರದ ಜ್ಞಾನದಿಂದಲೇ ಅವನ ನಿರ್ದಯತೆಯ ದೋಷವನ್ನು ಊಹಿಸಬಹುದಾದ, ಮನುಷ್ಯನನ್ನು ನೋಡಿದೆನು. ಅಂಥ ಅವನನ್ನು ನೋಡಿ, ಜೀವದಬಗ್ಗೆ ಆಶೆಯೇ ಇಲ್ಲದವನಾಗಿ ಅವನಿಗೆ ಕೇಳಿದೆನು. 'ಪುಣ್ಯಾತ್ಮನೇ, ನೀನು ಯಾರು? ನನ್ನನ್ನೇಕೆ ಕಟ್ಟಿರುವೆ? ಮಾಂಸದ ಆಶೆಯಿಂದಾದರೆ, ಮಲಗಿದಾಗಲೇ ನನ್ನನ್ನೇಕೆ ಕೊಲ್ಲಲಿಲ್ಲ ? ನಿರ್ದೋಷಿಯಾದ ನನ್ನನ್ನು ಬಂಧನದುಃಖಕ್ಕೆ ಈಡುಮಾಡುವದರಿಂದೇನು ಪ್ರಯೋಜನ ? ಕೇವಲ ಕುತೂಹಲಕ್ಕಾಗಿ ಬಂಧಿಸಿದುದಾದರೆ, ಕುತೂಹಲವು ಸಾಕು. ಪುಣ್ಯಾತ್ಮನು ನನ್ನನ್ನು ಬಿಡಬೇಕು. ಪ್ರಿಯೆಯನ್ನು (ಕಾಣಲು) ಆತುರನಾದ ನಾನು ದೂರ ಹೋಗಬೇಕು. ನನ್ನ ಮನಸ್ಸು ಕಾಲವಿಲಂಬವನ್ನು ಸಹಿಸಲು ಶಕ್ತವಿಲ್ಲ. ನೀವಾದರೂ ಪ್ರಾಣಿಗಳ ಲಕ್ಷಣಗಳಿಗೆ ಒಳಪಟ್ಟಿರುವಿರಿ'. ಹೀಗೆ ನುಡಿಯ ಲ್ಪಟ್ಟ ಅವನು ನನಗೆ ಅಂದನು. 'ಮಹಾತ್ಮನೇ, ನಾನು ನಿಜವಾಗಿಯೂ ಕ್ರೂರ ಕೆಲಸಗಳನ್ನು ಮಾಡುವವನು ಮತ್ತು ಜಾತಿಯಿಂದ ಹೊಲೆಯನು

ಇರುವೆ. ನಾನು ನಿನ್ನನ್ನು ಮಾಂಸದ ಆಶೆಯಿಂದ ಇಲ್ಲವೆ ಕುತೂಹಲದಿಂದ ಹಿಡಿದಿಲ್ಲ. ಚಂಡಾಲರ ವಸತಿ ಸ್ಥಳದ ಒಡೆಯನಾದ ನನ್ನ ದೊರೆ, ಇಲ್ಲಿಂದ ಸಮೀಪದಲ್ಲಿಯೇ ಚಾಂಡಾಲರು (ಮನೆಮಾರುಗಳನ್ನು) ಕಟ್ಟಿದ ಪ್ರದೇಶದಲ್ಲಿ ವಾಸಮಾಡಿಕೊಂಡಿದ್ದಾನೆ. ಅವನ ಮಗಳು ಹೆಚ್ಚಾಗಿ ಕುತೂಹಲವುಳ್ಳ ವಯಸ್ಸಿನ ಪೂರ್ವಭಾಗದಲ್ಲಿದ್ದಾಳೆ. 'ಜಾಬಾಲಿಯ ಆಶ್ರಮದಲ್ಲಿ ಈ ಬಗೆಯ ಗುಣಗಳುಳ್ಳ, ಬಹಳ ಆಶ್ಚರ್ಯವನ್ನುಂಟುಮಾಡುವ ಒಂದು ಗಿಳಿ ಇದೆ' ಎಂದು ಅವಳಿಗೆ ಒಬ್ಬ ದುಷ್ಟನು ಹೇಳಿದನು. ಅದನ್ನು ಕೇಳಿ, ಕುತೂಲ ಹುಟ್ಟಿದುದರಿಂದ, ಅವಳು ಆ ಗಿಳಿಯನ್ನು ಹಿಡಿಯಲು, ನನ್ನಂತಹ ಅನೇಕ ಜನರಿಗೆ ಆಜ್ಞೆ ಕೊಟ್ಟಳು. ಆದ್ದರಿಂದ ನೀನು ಸುದೈವದಿಂದ ಇಂದು ನನಗೆ ದೊರೆತಿರುವೆ. ಕಾರಣ ನಾನು ನಿನ್ನನ್ನು ಅವಳ ಚರಣಸನ್ನಿಧಿಗೆ ಒಯ್ಯುವೆನು. ಈಗ ನಿನ್ನನ್ನು ಕಟ್ಟಿಹಾಕಲು ಇಲ್ಲವೆ ಬಿಡಲು ಅವಳಿಗೆ ಅಧಿಕಾರವಿದೆ.'

ನಾನಾದರೋ ಅದನ್ನು ಕೇಳಿ, ಬೇಸಿಗೆಯಲ್ಲಿ ತಲೆಯಮೇಲೆ ಸಿಡ್ಲಿನಿಂದ (ವಜ್ರಾಯುಧದಿಂದ) ಹೊಡೆಯಲ್ಪಟ್ಟನೋ ಎನ್ನುವಂತೆ ಒಳಗಿಂದೊಳಗೆ ಹೆಚ್ಚಾಗಿ ನೊಂದುಕೊಂಡು,(ಬೆದರಿ)ಮನದಲ್ಲಿ ಆಲೋಚಿಸಿದನು. 'ಅಯ್ಯೋ! ದುರ್ದೈವಿಯಾದ ನನ್ನ (ದುಷ್ಟ) ಕೆಲಸಗಳ ಪರಿಣಾಮವು ಅದೆಷ್ಟು ಉಗ್ರ ವಾಗಿದೆ! ಏಕೆಂದರೆ, ದೇವದಾನವರ ತಲೆಯ ಮೇಲಿದ್ದ ಕಿರೀಟಗಳಿಂದ ವಂದಿಸಲ್ಪಟ್ಟ ಪಾದಕಮಲಗಳುಳ್ಳ ಲಕ್ಷ್ಮೀದೇವಿಯಿಂದ ಹುಟ್ಟಿದ, ಮತ್ತು ಮೂಲೋಕಗಳಿಂದ ನಮಸ್ಕಾರಮಾಡಿಸಿಕೊಳ್ಳಲು ಯೋಗ್ಯನಾದ (ಅಥವಾ ಮೂಲೋಕಗಳಿಗೆ ಪೂಜ್ಯನಾದ) ಮಹಾಮುನಿ ಶ್ವೇತಕೇತುವಿನ ಸ್ವಂತ ಕೈಯಿಂದ ಪೋಷಿಸಲ್ಪಟ್ಟ ನಾನು(ಈ ವರೆಗೆ)ದೇವಲೋಕದ ಆಶ್ರಮದಲ್ಲಿದ್ದು ಕೊಂಡು, ಈಗ (ಮಾತ್ರ), ಮ್ಲೇಚ್ಛ ಜಾತಿಯವರು ಕೂಡ ಒಳಹೋಗಲು ದೂರದಿಂದಲೇ ತೊರೆಯುವ ಚಾಂಡಾಲರ ವಾಸಸ್ಥಳವನ್ನು ಸೇರಬೇಕಾಗಿದೆ. (ಪ್ರವೇಶಿಸಬೇಕಾಗಿದೆ). ಚಂಡಾಲರೊಡನೆ ಒಂದೆಡೆಯಲ್ಲಿಯೇ ಇರಬೇಕು; ಮುದಿ ಬೇಡರ ಸ್ತ್ರೀಯರು ತಂದ ತುತ್ತುಗಳಿಂದ ಜೀವಪೋಷಣೆಮಾಡಬೇಕು. ಚಂಡಾಲರ ಹುಡುಗರಿಗೆ ಆಟದ ಸಾಧನವಾಗಬೇಕು. ದುಷ್ಟ ಹಾಗೂ ನೀಚ ಪುಂಡರೀಕನೇ, ನಿನ್ನ ಜನ್ಮದೊರೆಯುವದಕ್ಕೆ ಧಿಕ್ಕಾರವಿರಲಿ. ಇಂತಹ ಫಲವು ನಿನ್ನ (ದುಷ್ಟ) ಕೃತಿಗಳದೇ. ಮೊದಲನೆಯ ಗರ್ಭದಲ್ಲಿಯೇ ಶೀಳಿ ಸಾವಿದ ಚೂರು ಏಕೆ ಆಗಲಿಲ್ಲಿ? ತಾಯೀ, ಲಕ್ಷ್ಮೀದೇವೀ, ದೀನ ಜನರಿಗೆ

ಆಶ್ರಯ ಕೊಡುವ ಪಾದಕಮಲಗಳುಳ್ಳವಳೇ, ಈ ಆಳವಾದ ಹಾಗೂ ಭೀಕರವಾದ ನರಕದೊಳಗೆ ಬೀಳುವದರಿಂದ ನನ್ನನ್ನು ಸಂರಕ್ಷಿಸು. ತಂದೆಯೇ ಮೂಲೋಕಗಳನ್ನು ರಕ್ಷಿಸುವ ಸಾಮರ್ಥ್ಯವುಳ್ಳವನೇ, (ನಿನ್ನ) ವಂಶ ಬೆಳೆಯಿಸುವ (ಈ) ಒಬ್ಬನನ್ನೇ ಸಂರಕ್ಷಿಸು. ನಿನ್ನಿಂದಲೇ ನಾನು ಪೋಷಣೆ ಹೊಂದಿದ್ದೇನೆ. ಗೆಳೆಯಾ, ಕಪಿಂಜಲಾ, ನೀನು ಹಿಂದಿರುಗಿ ನನ್ನನ್ನು ಈ ದುಷ್ಟನಿಂದ ಬಿಡಿಸದೆ ಇದ್ದರೆ, ಬೇರೆ ಜನ್ಮಗಳಲ್ಲಿಯೂ ಕೂಡ ನನ್ನ ಭೆಟ್ಟಿಯ ಆಶೆಯನ್ನು ಮಾಡಬೇಡ. ' ಹೀಗೆ ಈ ಮತ್ತು ಬೇರೆ ವಿಚಾರಗಳ ವಿಷಯವಾಗಿ ಮನಸ್ಸಿನಲ್ಲಿ ಶೋಕಿಸಿ, ಮತ್ತೆ ಬಿನ್ನಹಪೂರ್ವಕವಾಗಿ ದಯೆ ಹುಟ್ಟುವಂತೆ ನುಡಿದೆನು. ' ಪುಣ್ಯಾತ್ಮನೇ, ಹಿಂದಿನ ಜನ್ಮಗಳ ಸ್ಮರಣೆಯುಳ್ಳ ನಾನು ಜಾತಿಯಿಂದ ಋಷಿಯು. ಆದ್ದರಿಂದ ಈ ದೊಡ್ಡ ಪಾಪವೆಂಬ ವಿಪತ್ತಿನಿಂದ ನನ್ನನ್ನು ಉದ್ಧರಿಸುವ ನಿನಗಾದರೂ ಪರಲೋಕ ಸುಖಕ್ಕೆ ಕಾರಣವಾದ ಪುಣ್ಯವು ಬರುವದು. ಈ ಲೋಕದಲ್ಲಿಯೂ ಸಹ ಯಾರೂ ನಿನ್ನನ್ನು ನೋಡಿಲ್ಲವಾದ್ದರಿಂದ ನನ್ನನ್ನು ಬಿಡುವ ನಿನಗೆ ದೋಷವು ಇಲ್ಲವೇ ಇಲ್ಲ. ಆದ್ದರಿಂದ ಪುಣ್ಯಾತ್ಮನು ನನ್ನನ್ನು ಬಿಡಬೇಕು.' ಹೀಗೆ ನುಡಿಯುತ್ತ ಅವನ ಪಾದಗಳಿಗೆರಗಿದನು. ಅವನಾದರೋ ನಕ್ಕು ನನಗೆ ನುಡಿದನು. ' ಎಲೈ, ಅಜ್ಞಾನದಿಂದ (ಮೋಹದಿಂದ) ಕುರುಡನಾದವನೇ, ಪುಣ್ಯ ಹಾಗೂ ಪಾಪ ಕೆಲಸಗಳಿಗೆ ಸಾಕ್ಷಿಯಾದ ಹಾಗೂ ನಿನ್ನ ದೇಹದಲ್ಲಿಯೇ ಇರುವ ಐದು ಲೋಕಪಾಲರು ಯಾರ (ಶುಭಾಶುಭ ಕೆಲಸಗಳನ್ನು) ನೋಡುವದಿಲ್ಲವೋ ಆ ಮನುಷ್ಯನು ಬೇರೆಯವರ ಅಂಜಿಕೆಯಿಂದ ಕೆಟ್ಟಕೆಲಸ ಮಾಡುವದಿಲ್ಲ. [ಆದರೆ ಲೋಕಪಾಲರು ನನ್ನ ಕೆಲಸಗಳನ್ನು ನೋಡುವರು. ಆದ್ದರಿಂದ ನಾನು ಯಾವಾಗಲೂ ಯೋಗ್ಯ ಕೆಲಸ ಮಾಡುತ್ತೇನೆ] ಕಾರಣ, ದೊರೆಯ ಆಜ್ಞೆಯ ಮೇರೆಗೆ ನಿನ್ನನ್ನು ಒಯ್ಯುವೆ' ಹೀಗೆ ನುಡಿಯುತ್ತಲೇ ನನ್ನನ್ನು ತೆಗೆದುಕೊಂಡು ಚಾಂಡಾಲರ ವಾಸಸ್ಥಳದೆಡೆಗೆ ಹೋದನು.

ಅವನ ಆ ಮಾತುಗಳಿಂದ ತಲೆಯ ಮೇಲೆ ಹೊಡೆಯಲ್ಪಟ್ಟೆನೋ ಎನ್ನುವಂತೆ, ಮೌನ ತಾಳಿ, ' ಇದು ಯಾವ (ಕೆಟ್ಟ) ಕೆಲಸಗಳ ಫಲ' ಎಂದು ಮನಸ್ಸಿನಲ್ಲಿ ವಿಚಾರಮಾಡುತ್ತ ಪ್ರಾಣಬಿಡಲು ನಿಶ್ಚಯವ ಮಾಡಿದೆನು. ಅವನಿಂದ ಆ ರೀತಿಯಾಗಿ ಒಯ್ಯಲ್ಪಡುವ ನಾನು, ನೆನೆದರೂ ಕೂಡ ಅಂಜಿಕೆಯನ್ನುಂಟು ಮಾಡುವ, ಕೇಳಿದರೂ ಕೂಡ ಕಳವಳವನ್ನು ಹುಟ್ಟಿಸುವ, ನೋಡಿದರೂ ಕೂಡ ಪಾಪಕರವಾದ, ಜಾತಿ ಹಾಗೂ ಆಚಾರಗಳಿಗಿಂತ ಹೆಚ್ಚು ಹೊಲಸಾದ

ಜನರುಳ್ಳ, ಅಂತ್ಯಜರ ವಾಸಸ್ಥಳವನ್ನು ಕಂಡೆನು. ನರಕವಲ್ಲಿ ವಾಸಮಾಡಿ ಕೊಂಡಿರುವವನಿಗೂ ಕೂಡ ಕಳವಳವನ್ನುಂಟುಮಾಡುವ ಅಂತಹ ಆ ಪ್ರದೇಶವನ್ನು ನೋಡಿ, (ಅದರ ಬಗ್ಗೆ) ತಿರಸ್ಕಾರ ಹುಟ್ಟಲು, ಮನದಲ್ಲಿ ಆಲೋಚಿಸಿದೆನು. 'ಆ ಚಾಂಡಾಲ ಕನ್ಯೆ ದೂರದಿಂದಲೇ ನನ್ನನ್ನು ನೋಡಿ ಬಿಟ್ಟು ಬಿಡುವಳು (ಮೋಚನ ಗೊಳಿಸುವಳು) ಮತ್ತು ತನ್ನ ಜಾತಿಗೆ ತಕ್ಕಂತೆ ವರ್ತಿಸುವದಿಲ್ಲ ಎಂದು ಆಶಿಸುವೆ. (ಹಾಗೂ) ನನಗೆ ಇಂಥ ಪುಣ್ಯವಿದೆ ಯೆಂದು ನಿರೀಕ್ಷಿಸುವೆ. ಒಂದು ಕ್ಷಣಕಾಲ ಕೂಡ ಇಲ್ಲಿ ಹೆಜ್ಜೆ ಇಡಲಾರೆನು' ಆ ಚಂಡಾಲನು ಹೀಗೆ ಆಶಿಸಿದ ನನ್ನನ್ನು ತೆಗೆದುಕೊಂಡು ಹೋಗಿ ದೂರ ದಿಂದಲೇ ನಮಸ್ಕಾರಮಾಡಿ, 'ಆ ಈ ಗಿಳಿ ನನಗೆ ದೊರೆತಿದೆ' ಎಂದು ಹೇಳಿ, ನೋಡಲಸಹ್ಯವಾದ ರೂಪ ಹಾಗೂ ವೇಷಗಳುಳ್ಳ, ಆ ಚಾಂಡಾಲಕನ್ಯೆಗೆ ನನ್ನನ್ನು ತೋರಿಸಿದನು. ಅವಳಾದರೋ ಹೆಚ್ಚಾಗಿ ಹರ್ಷ ಗೊಂಡ ಮುಖ ವುಳ್ಳವಳಾಗಿ 'ಚೆನ್ನಾಗಿ ಮಾಡಿದೆ' ಎಂದು ಹೇಳಿ, ಅವನ ಕೈಯಿಂದ ನನ್ನನ್ನು, ತನ್ನ ಎರಡೂ ಕೈಗಳಿಂದ ತೆಗೆದುಕೊಂಡು 'ಮಗನೇ, ನೀನು ಸಿಕ್ಕಿರುವೆ. ಈಗ ಬೇರೆ ಎಲ್ಲಿ ಹೋಗುವೆ? ನಿನ್ನ ಈ ಎಲ್ಲ ಸ್ವಚ್ಛಂದ ನಡತೆಯನ್ನು ದೂರ ಮಾಡುವೆನು' ಎಂದು ಅಂದಳು. ಹೀಗೆ ನುಡಿಯುತ್ತಲೇ, ಓಡುವ ಚಂಡಾಲ ಬಾಲಕರಿಂದ ತರಲ್ಪಟ್ಟು ಅರ್ಧ ಒಣಗಿದ, ತುಂಬ ಕೂದಲುಳ್ಳ ಮತ್ತು ಕೆಟ್ಟ ನಾರುವ ಆಕಳ ತೊಗಲಿನ ಪಟ್ಟಿಯಿಂದ ಬಿಗಿಯಲ್ಪಟ್ಟ, ಕಟ್ಟಿಗೆಯ ಕುಡಿ ಯುವ ಪಾತ್ರೆ ಹಾಗೂ ಊಟದ ಪಾತ್ರೆಯನ್ನು ಬಿಗಿಯಾಗಿ ಕಟ್ಟಿದ, ಮತ್ತು ಸ್ವಲ್ಪು ತೆರೆದ ಬಾಗಿಲವುಳ್ಳ ಕಟ್ಟಿಗೆಯ ಪಂಜರದೊಳಗೆ, ಮಹಾಶ್ವೇತೆಯನ್ನು ಕಾಣಬೇಕೆಂಬ ಮನೋಬಯಕೆ ಸಹಿತವಾಗಿ ನನ್ನನ್ನು ಹಾಕಿ, ಬಾಗಿಲವನ್ನು ಮುಚ್ಚಿ (ಬಾಗಿಲಿಗೆ ಅಗಳಿ ಹಾಕಿ) 'ಈ ಪಂಜರದಲ್ಲಿಯೇ ಈಗ ಸುಖವಾಗಿ ಇರು' ಎಂದು ನನಗೆ ಅಂದಳು. ಹೀಗೆ ನುಡಿದು ಮಾತನಾಡದೆ ನಿಂತು- ಕೊಂಡಳು.

ಆ ರೀತಿ ಬಂಧಿಸಲ್ಪಟ್ಟ ನಾನು ಮನದಲ್ಲಿ ಆಲೋಚಿಸಿದೆನು. 'ದೊಡ್ಡ ಸಂಕಟವಲ್ಲಿ ಬಿದ್ದಿರುವೆ. ಆದ್ದರಿಂದ ನನ್ನ ಅವಸ್ಥೆಯನ್ನು ಹೇಳಿ, ಸಾಷ್ಟಾಂಗ ನಮಸ್ಕಾರಮಾಡಿ (ಶಬ್ದಶಃ. ತಲೆಯಿಂದ ಬಾಗಿ) (ನನ್ನನ್ನು) ಬಿಟ್ಟು ಬಿಡಲು ಬಿನ್ನಯಿಸಿಕೊಂಡರೆ, ಯಾವ ಗುಣವು (ಈ ವರೆಗೆ) ದೋಷ ಭಾವ ತಾಳಿಬಂಧನಕ್ಕೆ ಕಾರಣವಾಗಿದೆಯೋ ಅದನ್ನೇ ಹೆಚ್ಚಿಸಿದಂತಾಗುವದು. ಚೆನ್ನಾಗಿ ಮಾತನಾಡುತ್ತೇನೆ [ಶಬ್ದಶಃ, (ಈ ಗಿಳಿ) ಚೆನ್ನಾಗಿ ಮಾತನಾಡುತ್ತದೆ]

ಎಂದೇ ನಾನು ಇವಳಿಂದ ಬಂಧಿಸಲ್ಪಟ್ಟಿರುವೆ ( ಹಿಡಿಯಲ್ಪಟ್ಟಿರುವೆ ) ನನಗಾಗುವ ಬಂಧನ ದುಃಖದಿಂದ ಇವಳಿಗಾವ ದುಃಖವಾಗುತ್ತದೆ? ನಾನು ಇವಳ ಮಗ, ಸಹೋದರ ಇಲ್ಲವೆ ಆಪ್ತನಲ್ಲ. ಒಂದುವೇಳೆ ಮೌನತಾಳಿ ಕುಳಿತುಕೊಂಡರೆ, ನನ್ನ ಠಕ್ಕತನಕ್ಕಾಗಿ ಸಿಟ್ಟಿಗೆದ್ದ ಅವಳು ನನ್ನನ್ನು ಇದಕ್ಕೂ ಹೆಚ್ಚಿನ ಸಂಕಟ ಪರಿಸ್ಥಿತಿಗೆ ಗುರಿಮಾಡುವಳು. ಏಕೆಂದರೆ ಈ (ಚಂಡಾಲ) ಜಾತಿಯು ಅತ್ಯಂತ ನೀಚ (ಕ್ರೂರ) ವಿದೆ. ಅಥವಾ, ಚಾಂಡಾಲರೊಡನೆ ಮಾತುಕಥೆಯಾಡುವದಕ್ಕಿಂತ ಇದಕ್ಕೂ ಹೆಚ್ಚಿನ ಸಂಕಟಕ್ಕೀಡಾಗುವದು ಲೇಸು. ಮೇಲಾಗಿ, ಮೌನತಾಳಿದ ನನ್ನನ್ನು ಅವಳು ಒಂದು ವೇಳೆ ನಿರಾಶೆ ಯಿಂದ (ತಿರಸ್ಕಾರದಿಂದ) ಬಿಡಬಹುದು. ಆದರೆ ಮಾತನಾಡಿದರೆ ಮಾತ್ರ ಇವಳು ನನ್ನನ್ನು ಬಿಡಲಾರಳು. ಮತ್ತೊಂದೆಂದರೆ, ಸ್ವರ್ಗಲೋಕದಿಂದ ಕಳಚಿ ಬೀಳುವದು, ಮರಣಾಧೀನವಾದ (ಈ) ಲೋಕದಲ್ಲಿ ಹುಟ್ಟುವದು, ಕೆಳದರ್ಜೆಯ (ಪಕ್ಷಿ) ಜಾತಿಯಲ್ಲಿ ಸೇರುವದು (ಶಬ್ದಶಃ, ಬೀಳುವದು), ಚಾಂಡಾಲರ ಕೈಯಲ್ಲಿ ಹೋಗುವದು, ಮತ್ತು ಪಂಜರದಲ್ಲಿ ಬಂಧಿಸಲ್ಪಟ್ಟ ಈ ಬಗೆಯ ದುಃಖ—ಇವೆಲ್ಲವೂ ಇಂದ್ರಿಯಗಳನ್ನು ನಿಗ್ರಹಿಸದೆ ಇರುವದರ ದುಷ್ಟಪರಿಣಾಮವು (ಶಬ್ದಶಃ, ದೋಷವು). ಆದ್ದರಿಂದ, ಮಾತೊಂದೇ ಏಕೆ? 'ಎಲ್ಲ ಇಂದ್ರಿಯಗಳನ್ನೂ ನಿಗ್ರಹಿಸುವೆ.' ಹೀಗೆ ನಿಶ್ಚಯಿಸಿ, ಮೌನ ತಾಳಿ ದೆನು. ಬಲಾತ್ಕಾರದಿಂದ ಮಾತನಾಡಿದರೂ, ಬೆದರಿಸಿದರೂ, ಹೊಡೆದರೂ, (ಪಕ್ಕಗಳನ್ನು) ಹರಿದರೂ ಕೂಡ ನಾನು ಏನೂ ಮಾತನಾಡಲಿಲ್ಲ. ಕೇವಲ ಗಟ್ಟಿಯಾಗಿ ಚೀರುತ್ತಿದ್ದೆನು. ಕುಡಿಯುವ ಹಾಗೂ ತಿನ್ನುವ ಪದಾರ್ಥಗಳು ತರಲ್ಪಟ್ಟರೂ ಆ ದಿವಸವನ್ನು ಉಪವಾಸದಿಂದ ಕಳೆದೆನು. ಮರುದಿನ, ಊಟದ ವೇಳೆ ಮೀರಲು ಮತ್ತು ನಾನು ಮನದಲ್ಲಿ ಕಳವಳಗೊಳ್ಳುತ್ತಿರಲು, ಆ ಚಂಡಾಲಕನ್ಯೆಯು ತನ್ನ ಕೈಯೊಳಗೆ ಅನೇಕ ಬಗೆಯ ಮಾಗಿದ ಹಾಗೂ ಮಾಗದೆ ಇದ್ದ ಹಣ್ಣುಗಳನ್ನೂ, ಸುವಾಸನೆಯುಳ್ಳ ಹಾಗೂ ತಂಪಾದ ನೀರನ್ನೂ ತಂದಳು. ಹಾಗೂ ಅವುಗಳನ್ನು ಸೇವಿಸದೆ ಇರುವ ನನ್ನನ್ನು ಪ್ರೀತಿಸುವಳೋ ಎನ್ನುವಂತೆ ತನ್ನ ದೃಷ್ಟಿಯನ್ನು (ನನ್ನಲ್ಲಿ) ಇಟ್ಟು, ನನಗೆ ಅಂದಳು. 'ಹಸಿವೆ ಮತ್ತು ನೀರಡಿಕೆಯಿಂದ ಬಳಲಿದ ಹಾಗೂ (ಸಾರಾಸಾರ) ವಿಚಾರವಿಲ್ಲದ ಮನಸ್ಸುಳ್ಳ ಪಶುಪಕ್ಷಿಗಳು ತಂದ ಆಹಾರವನ್ನು ಸೇವಿಸದೆ ಇರುವದು ಕೂಡುವದೇ ಇಲ್ಲ. ಒಂದುವೇಳೆ, ಸೇವಿಸಲು ಯೋಗ್ಯ ಹಾಗೂ

ಅಯೋಗ್ಯ ವಸ್ತುಗಳನ್ನು ವಿಂಗಡಿಸುವ, ಹಿಂದಿನ ಜನ್ಮಗಳ ಸ್ಮರಣೆಯುಳ್ಳ ಈ ಬಗೆಯಾಗಿರುವ ನೀನು ನಾವು ಕೊಟ್ಟ (ಶಬ್ದಶಃ, ನಮ್ಮ) ಆಹಾರವನ್ನು ಬಿಟ್ಟರೂಕೂಡ, ತಿನ್ನಲು ಯೋಗ್ಯ ಹಾಗೂ ಅಯೋಗ್ಯ ವಸ್ತುಗಳನ್ನು ವಿಂಗಡಿಸುವ ವಿವೇಕಬುದ್ಧಿಯಿಲ್ಲದ ಕೆಳದರ್ಜೆಯ (ಪಕ್ಷಿ) ಜಾತಿಯಲ್ಲಿರುವ ನಿನಗೆ ಅಬಕ್ಷ್ಯ (ತಿನ್ನಲಯೋಗ್ಯ) ವಸ್ತುವಾದರೂ ಯಾವದು ? ಏಕೆಂದರೆ (ನಾವು ಕೊಟ್ಟಿದ್ದನ್ನು) ನೀನು ತಿನ್ನುವದಿಲ್ಲ. ಉಚ್ಚಜಾತಿಯನ್ನು ಪಡೆದು, ಕೆಳದರ್ಜೆಯ ಜಾತಿಯಲ್ಲಿ ಬೀಳುವಂತಹ (ಕೆಟ್ಟ) ಕೆಲಸ ಮಾಡಿದ ನೀನು ಬೇರೆ ಏನನ್ನು ಯೋಚಿಸುವೆ ? ಮೊದಲು ನೀನು ನಿನ್ನನ್ನು ವಿವೇಕ ಮಾರ್ಗ ದಲ್ಲಿ ಇರಿಸಲಿಲ್ಲ. (ನೀನು) ಈಗ ನಿನ್ನ (ಕೆಟ್ಟ) ಕೆಲಸದಿಂದ ಗಳಿಸಿದ ಜಾತಿಗೆ ಉಚಿತವಾದಂತೆ ವರ್ತಿಸಿದರೆ, ಯಾವ ದೋಷವೂ ಇಲ್ಲ. ಯಾರಿಗೆ ತಿನ್ನಲು ಯೋಗ್ಯ ಹಾಗೂ ಅಯೋಗ್ಯ ವಸ್ತುಗಳ ಬಗ್ಗೆ ನಿರ್ಬಂಧವಿದೆಯೋ ಅವರಿಗೂ ಕೂಡ, ಸಂಕಟಸಮಯದಲ್ಲಿ, ಅಭಕ್ಷ್ಯವಸ್ತುವನ್ನು ಸೇವಿಸಿಯೂ ಪ್ರಾಣವನ್ನು ಉಳಿಸಿಕೊಳ್ಳಬೇಕು ಎಂದು ವಿಧಿಸಲಾಗಿದೆ. ಎಂದಮೇಲೆ ನಿನ್ನಂಥವರಬಗ್ಗೆ ಹೇಳುವದೇನು ? (ಇದಲ್ಲದೆ), ಚಾಂಡಾಲರ ಆಹಾರತಿಂದ ಸಂಶಯ ಬರುವಂತಹ ಯಾವ ಪದಾರ್ಥವನ್ನೂ ನಾನು ತಂದಿಲ್ಲ. (ಏಕೆಂದರೆ) ಹಣ್ಣುಗಳನ್ನು ಚಂಡಾಲನಿಂದಲೂ ಸ್ವೀಕರಿಸಬಹುದು. (ಹಣ್ಣುಗಳು ಹೊಲೆಯನಿಂದಲೂ, ಎಂದರೆ ಹೊಲೆಯನ ಕೈಯಿಂದಲೂ, ಸ್ವೀಕರಿಸಲ್ಪಡು ತ್ತವೆ.) ಚಂಡಾಲನ ಪಾತ್ರೆಯಿಂದ ನೆಲದಮೇಲೆ ಬಿದ್ದ ನೀರು ಕೂಡ ಪವಿತ್ರವೆಂದು ಜನರು ಹೇಳುತ್ತಾರೆ. ಆದ್ದರಿಂದ ನಿನ್ನನ್ನು ಹಸಿವೆ ಹಾಗೂ ನೀರಡಿಕೆಗಳಿಂದ ಏಕೆ ತೊಳಲಿಸುವೆ ? ಏಕೆಂದರೆ, ನೀನು ಮುನಿಗಳಿಗೆ ಯೋಗ್ಯವಾದ ಅಡವಿಯ ಹಣ್ಣು, ಮತ್ತು ನೀರನ್ನೂ ಸೇವಿಸುವದಿಲ್ಲ. ಚಾಂಡಾಲಜಾತಿಗೆ ಸಲ್ಲದ ಅವಳ ಆ ಮಾತು ಹಾಗೂ ವಿವೇಕಬುದ್ಧಿಗಳಿಂದ ಮನದೊಳಗೆ ಅಚ್ಚರಿಗೊಂಡ ನಾನು 'ಹಾಗೆಯೇ ಆಗಲಿ, (ತಿನ್ನುವೆ)' ಎಂದು ಒಪ್ಪಿ, ಶಾಪಕ್ಕೆ ಒಳಪಟ್ಟಿದ್ದರಿಂದ (ಜೀವದಬಗ್ಗೆ ಇದ್ದ) ತಿರಸ್ಕಾರವನ್ನು ಬಿಟ್ಟುಕೊಟ್ಟು, ಜೀವದ ಆಶೆಯಿಂದ ಹಾಗೂ ಹಸಿವೆ–ನೀರಡಿಕೆಗಳು ಶಾಂತ- ವಾಗುವದಕ್ಕಾಗಿ ಆಹಾರವನ್ನು ಸೇವಿಸಿದೆನು. ಆದರೆ ಮೌನವನ್ನು (ಮಾತ್ರ)

–'ಕಾದಂಬರಿಯ ಉತ್ತರಭಾಗದಲ್ಲಿ'

೬. ಟೀಕೆ–ಟಿಪ್ಪಣಿಗಳು:—

**ಪುಟ ೨೪.** ಶುಕರೂಪಧಾರಿಣಃ—ಗಿಳಿಯ ವೇಷ ಧರಿಸಿದ. ಶುಕಸ್ಯ ರೂಪಂ ಶುಕರೂಪಂ (ಷ. ತ. ಸ.) । ಧರತಿ ಧಾರಯತಿ ವಾ ಇತಿ ಧಾರೀ । ಕೃದ್‌ವೃತ್ತಿ । ಶುಕರೂಪಸ್ಯ ಧಾರೀ ಶುಕರೂಪಧಾರೀ (ಷ.ತ.ಸ.) ತಸ್ಯ ಧಾರಿನ್ ಎಂಬ ಪ್ರತ್ಯೇಕ ಶಬ್ದವಿರುವದರಿಂದ ಉಪಪದ ತತ್ಪುರುಷ ಸಮಾಸಮಾಡದೆ, ಶುಕರೂಪಸ್ಯ ಧಾರೀ ಶುಕರೂಪಧಾರೀ ಎಂದು (ಷ.ತ.ಸ.) ಸಮಾಸವನ್ನೇ ಮಾಡಬೇಕು. ಉಪಪದ ತ. ಸಮಾಸ ಮಾಡುವದು ವ್ಯಾಕರಣ ದೃಷ್ಟಿಯಿಂದ ತಪ್ಪು. ವೈಶಂಪಾಯನಃ— ಪುಂಡರೀಕನ ಗೆಳೆಯ ಅವತಾರ. ಈ ವೈಶಂಪಾಯನನೇ ಮಹಾಶ್ವೇತೆಯ ಶಾಪದ ಮೂಲಕ ಗಿಳಿ ಯಾಗಿ ಹುಟ್ಟಿದನು. ಅವಸ್ಥಾ—ಸ್ಥಿತಿ, ಪರಿಸ್ಥಿತಿ [ಈ ಪಾಠದಲ್ಲಿ ಗಿಳಿ ತನ್ನ ಆತ್ಮವೃತಾಂತವನ್ನು ಹೇಳುತ್ತಲಿದೆ.]

ಅವಹಿತಚೇತಸಾ (ಹಾರೀತೇನ)—ಲಕ್ಷ್ಯಪೂರ್ವಕವಾದ ಮನಸ್ಸುಳ್ಳ (ಹಾರೀತನಿಂದ) ಅವಹಿತಂ ಚೇತಃ ಯಸ್ಯ ಸಃ ಅವಹಿತಚೇತಾಃ (ಬ. ಸ.) ತೇನ. ಸಂವರ್ಧ್ಯಮಾನಃ—ಪೋಷಿಸಲ್ಪಟ್ಟವನು. ಸಮ್+ವೃಧ್ (೧. ಆ) ಧಾ. ಪ್ರಯೋಜಕ ಕರ್ಮಣಿ ವ ಧಾ.ವಿ.(ಪು).ಪ್ರ.ಏ.ವ. ಕತಿಪಯ–ಕೆಲವು ಸಂಜಾತಪಕ್ಷಃ–ಪಕ್ಕಗಳೊಡೆದವನು. ಸಂಜಾತೌ ಪಕ್ಷೌ ಯಸ್ಯ ಸಃ (ಬ.ಸ.) ಉತ್ಪನ್ನೋತ್ಪತನಸಾಮರ್ಥ್ಯಃ—ಹಾರಾಡುವ ಶಕ್ತಿಬಂದವ (ಉಂಟಾದವ) ಉತ್ಪನ್ನಂ ಉತ್ಪತನಸಾಮರ್ಥ್ಯಂ (ಉತ್ಪತನೇ ಸಾಮರ್ಥ್ಯಂ ಸ. ತ. ಸ.) ಯಸ್ಮಿನ್ ಸಃ (ಬ. ಸ.) ಚೇತಸಿ ಅಕರವಂ—ಮನದಲ್ಲಿ ಯೋಚಿಸಿದೆನು. ಗಮನಕ್ಷಮಃ—ಹಾರಾಡಲು ಸಮರ್ಥನು. ಗಮನೇ ಕ್ಷಮಃ (ಸ. ತ.) ನಾಮ—ನಿಜ. ಒಪ್ಪಿಗೆ ಇದೆ. *granted*. ಚಂದ್ರಾಪೀಡನು ಹುಟ್ಟಿದರ ಜ್ಞಾನ ಇಲ್ಲವೆಂಬುದು ನಿಜ. ಚಂದಾಪೀಡಸ್ಯ ಉತ್ಪತ್ತಿಃ ಚಂ........ತ್ತಿಃ (ಷ. ತ. ಸ.) ಚಂ.........ತ್ತೇಃ ಪರಿಜ್ಞಾನಂ ಚಂ........ನಂ (ಷ. ತ. ಸ.) । ಸೈವ—ಅವಳೇ. ಎಂದರೆ ಮೊದಲಿನಂತೆಯೇ. ನಾನು ಎಲ್ಲಿ ಬಿಟ್ಟಿರುವೆನೋ ಅಲ್ಲಿಯೇ, ಅದೇ ರೀತಿಯಾಗಿ ಇದ್ದಾಳೆ. ಉತ್ಪನ್ನಜ್ಞಾನೋಽಪಿ—(ಪೂರ್ವ ಜನ್ಮದ) ಜ್ಞಾನ ಉಪಯಿಸಿದರೂ ಉತ್ಪನ್ನಂ ಜ್ಞಾನ್ನಂ ಯಸ್ಮಿನ್ (ಯಸ್ಯ ವಾ) (ಬ. ಸ.) ಆತ್ಮಾನಂ ದುಃಖಂ ಕಿಂ ಸ್ಥಾಪಯಾಮಿ—ನನ್ನನ್ನೇಕೆ ದುಃಖಕ್ಕೆ ಈಡುಮಾಡಿಕೊಳ್ಳಲಿ? (ಈಡುಮಾಡಿಕೊಳ್ಳಬೇಕು). ನಿಮೇಷಮಪಿ—ಕ್ಷಣಕಾಲ ಕೂಡ. ನಿಮೇಷಃ—ಕ್ಷಣ. ಒಮ್ಮೆ ಕಣ್ಣುಮುಚ್ಚಿ ತೆಗೆಯಲು

ಹಿಡಿಯುವ ಅವಕಾಶ. ಸ್ಥಾಪಯಾಮಿ — ಸ್ಥಾ (೧. ಪ) ಧಾತುವಿನ ಪ್ರಯೋಜಕರೂಪದ ವ. ತೃ. ಪು. ಏ. ವ. ಭವತು—ಆಗಲಿ. ನಿಶ್ಚಿತ್ಯ— ನಿಶ್ಚಯಿಸಿ ನಿಸ್+ಚಿ (೫. ಉ) ಧಾತುವಿನ ಲ್ಯಬಂತಾವ್ಯಯ. ಪ್ರಾತರ್— ಬೆಳಿಗ್ಗೆ ವಿಹಾರನಿರ್ಗತಃ–ತಿರುಗಾಡಲು ಹೊರಟ (ಹೊರಬಿದ್ದ) ವಿಹಾರಾಯ (ವಿಹಾರಾರ್ಥಂ) ನಿರ್ಗತಃ (ಚ. ತ.) ಕಕುಭಂ—ದಿಕ್ಕನ್ನು ಕಕುಭ್ (ಸ್ತ್ರೀ) ಶಬ್ದದ ದ್ವಿ. ಏ. ವ. ಅವಹಮ್—ಸಾಗಿದೆನು, ಹೋದೆನು. ಅಚಲಂ ಇತ್ಯರ್ಥಃ (ಟೀಕಾ).

**ಸಾಲು ೮.** ಅಬಹುದಿವಸಾಭ್ಯಸ್ತಗಮನತಯಾ — ಸ್ವಲ್ಪೇ ದಿನಗಳ ಹಿಂದೆ ಹಾರಾಡುವದನ್ನು ಕಲಿತಿದ್ದರಿಂದ ಎಂದರೆ, ಬಹಳ ದಿವಸಗಳ ವರೆಗೆ ಹಾರಾಡುವ ರೂಢಿ ಇದ್ದಿಲ್ಲವಾದ್ದರಿಂದ. *'On account of my having learnt to fly only a fewdays back' -Apte. 'As I had not practised flying for many days' Nerurkar and also Virkar.* ಬಹವಃ ದಿವಸಾಃ ಬಹುದಿವಸಾಃ (ಕ. ಸ.) ನ ಬ............ಸಾಃ ಅ....ಸಾಃ (ನ. ತ.). ಅಬಹುದಿವಸಾನ್ (ದಿವಸೈಃ ವಾ) ಅಭ್ಯಸ್ತಂ ಗಮನಂ ಯೇನ ಸಃ ಅ............ನಃ (ಬ. ಸ.) ತಸ್ಯ ಭಾವಃ ಅಬಹು....ಗಮನತಾ (ತದ್ಧಿತ). ತಯಾ । ಸ್ತೋಕ — ತುಸು, ಸ್ವಲ್ಪ. ಅವಶೀರ್ಯಂತ—ಇದು ಸರಿಯಾದ ಪಾಠವಲ್ಲ, ಅಶೀರ್ಯಂತ ಇಲ್ಲವೆ ಅವಾಶೀರ್ಯಂತ ಎಂಬುದಾಗಿರಬೇಕು. ಎಮ್. ಆರ್. ಕಾಳೆ ಅವರು ಅಶೀರ್ಯಂತ ಎಂಬಪಾಠವನ್ನೇ ಇಟ್ಟುಕೊಂಡಿದ್ದಾರೆ. ಹಿಂದೆ ಹಾಗೂ ಮುಂದೆ ಭೂತಕಾಲದ ಕ್ರಿಯಾಪದಗಳಿರುವದರಿಂದ ಇದಾದರೂ ಭೂತಕಾಲದ್ದಿರಬೇಕು. [ಹಾಗಿದ್ದಲ್ಲಿ ಶೈ (೯. ಪ.) ಧಾತುವಿನ ಕರ್ಮಣಿ ಭೂ. ತೃ. ಬ. ವ. ಅಶೀರ್ಯಂತ ಎಂದು ಆಗುವದು][ಅವಶೀರ್ಯಂತೇ ಇವ=ಅವಶೀ.. ರ್ಯಂತಯ್ +ಇವ=ಅವಶೀರ್ಯಂತ ಇವ ಎಂದು ಬಿಡಿಸಲು ಬರುವದು. ಇಲ್ಲಿ ವರ್ತಮಾನಕಾಲ ಅಭಿಪ್ರೇತವಿದ್ದಂತೆ ತೋರುವದಿಲ್ಲ] ಶೀಳಿದವು, ದಣಿದವು, ಜರ್ಜರಿತವಾದವು. ತದವಸ್ಥಶ್ಚ ಇತ್ಯಾದಿ— ಈ ದೊಡ್ಡ ವಾಕ್ಯದಲ್ಲಿ ತದವಸ್ಥಃ ಚ ಸರಸ್ತೀರತರುನಿಕುಂಜಸ್ಯ ಉಪರಿ ಆತ್ಮಾನಂ ಅಮುಂಚಮ್ ಎಂಬುದು ಮುಖ್ಯಭಾಗ. ಷಷ್ಠ್ಯಂತ ಪದಗಳೆಲ್ಲ ತರುನಿ-ಕುಂಜಸ್ಯ ಎಂಬ ಪದಕ್ಕೆ ವಿಶೇಷಣಗಳಾಗಿವೆ. ತದವಸ್ಥ [— ಆ ಅವಸ್ಥೆ

(ಪರಿಸ್ಥಿತಿ) ಯುಳ್ಳ (ನಾನು) ಸಾಽವಸ್ಥಾ ಯಸ್ಯ ಸಃ (ಬ. ಸ.) ಶಿಥಿಲಾಯಮಾನಪಕ್ಷತಿಃ — ಪಕ್ಕಗಳು ಸಡಿಲಾದ (ನಾನು). ಶಿಥಿಲಾಯಮಾನಾ ಪಕ್ಷತಿಃ ಯಸ್ಯ ಸಃ (ಬ. ಸ.) ಪಕ್ಷತಿಃ — ಪಕ್ಕ, ಪಕ್ಕದ ಮೂಲಭಾಗ. *The root of the wing;* ಪರವಾನ್ — ಪರಾಧೀನ. ನಿಸ್ಸಹಾಯನಾದ, ಬಹಳ ದಣಿದ. '*Quite exhausted*' —*Kale.* ಸರ........ ನಿಕುಂಜಸ್ಯ—ಸರೋವರದ ದಂಡೆಯಮೇಲಿದ್ದ ಗಿಡಗಳ ಗುಂಪಿನ ಮೇಲೆ. ತರುನಿಕುಂಜಃ — ಗಿಡಗಳ ಗುಂಪು. ಗಿಡಗಳ ಝುಡುಪು. *Grove or bower of trees.* ಸರಸಃ ತೀರಂ ಸರಸ್ತೀರಂ (ಷ. ತ. ಸ.) ತರೂಣಾಂನಿಕುಂಜಃ ತರುನಿಕುಂಜಃ (ಷ. ತ. ಸ.) ಸರಸ್ತೀರೇ ಯಃ ತರುನಿಕುಂಜಃ ಸ........ಜಃ (ಸ. ತ. ಸ.) ತಸ್ಯ. ಇನ್ನು ತರುನಿಕುಂಜಸ್ಯ ಎಂಬ ಪದಕ್ಕೆ ವಿಶೇಷಣಗಳಾದ ೫ ಪದಗಳ ಉಲ್ಲೇಖ ಬರುವದು. ಅನ್ಯತಮಸ್ಯ–ಒಂದು. ಗಿಡಗಳ ಸಮುದಾಯಗಳು ಅನೇಕವಿದ್ದವು. ಅವುಗಳಲ್ಲಿ ಒಂದರಮೇಲೆ ಗಿಳಿ ಬಿದ್ದಿತು. ೩ ಇಲ್ಲವೆ ಅದಕ್ಕೂ ಹೆಚ್ಚು ಇದ್ದ ಪದಾರ್ಥಗಳಲ್ಲಿ ಒಂದರ ಬಗ್ಗೆ ಹೇಳುವಾಗ ಅನ್ಯತಮ ಶಬ್ದವನ್ನು ಉಪಯೋಗಿಸುವರು. ತಮಸ್ವಿನೀತಿಮಿರಸಂಘಾತಸ್ಯ ಇವ —ರಾತ್ರಿಯ ಕತ್ತಲೆಯ ಸಮುದಾಯವೋ ಎನ್ನುವಂತಿದ್ದ. ತಮಸ್ವಿನೀ—ರಾತ್ರಿ. ತಿಮಿರಃ (ರಂ) — ಕತ್ತಲೆ. ಸಂಘಾತಃ—ಸಮೂಹ. ತಿಮಿರಸ್ಯಸಂಘಾತಃ ತಿಮಿರಸಂಘಾತಃ (ಷ. ತ. ಸ.). ತಮಸ್ವಿನ್ಯಾಃ ತಿ .... ತಃ ತಮಸ್ವಿನೀ..................ತಃ (ಷ.ತ.ಸ.) ತಸ್ಯ. ಅರ್ಕಕರತಿರಸ್ಕಾರಿಣಃ — ಸೂರ್ಯ ಕಿರಣಗಳನ್ನು ತಡೆಗಟ್ಟುವ ಅಥವಾ ಮುಚ್ಚುವ. ಅರ್ಕಃ—ಸೂರ್ಯ. ಕರಃ—ಕಿರಣ. ತಿರಸ್ಕಾರಿನ್–ಮುಚ್ಚುವದು *Screening. concealing.* ಅರ್ಥಾತ್ ಸೂರ್ಯ ಕಿರಣಗಳ ಪ್ರವೇಶಕ್ಕೆ ಅವಕಾಶಕೊಡದ, ಒಳಗೆ ಸೂರ್ಯಕಿರಣಗಳು ಬೀಳದ. ಅರ್ಕಸ್ಯಕರಾಃ ಅರ್ಕಕರಾಃ (ಷ. ತ. ಸ.). ತೇಷಾಂ ತಿರಸ್ಕಾರೀ (ಷ. ತ. ಸ.) ತಸ್ಯ. ಘನಹರಿತಪಲ್ಲವಭರಾವನಮ್ರಸ್ಯ — ದಟ್ಟವಾದ ಹಸಿರುಬಣ್ಣದ ಚಿಗುರೆಲೆಗಳ ಭಾರದಿಂದ ಬಾಗಿದ. ಹರಿತಾಃ ಪಲ್ಲವಾಃ ಹರಿತಪಲ್ಲವಾಃ (ಕ. ಸ.). ಘನಾಃಹರಿತಪಲ್ಲವಾಃ ಘನ....ವಾಃ (ಕ. ಸ.) ತೇಷಾಂ ಭರಃ (ಷ. ತ.) ತೇನ ಅವನಮ್ರಃ (ತೃ ತ) ತಸ್ಯ. ಆಸನ್ನತರಸ್ಯ— ಬಹಳ ಸಮೀಪದಲ್ಲಿದ್ದ. ವಿಶೇಷಣಗಳಿಗೆ ತರ ತಮ ಹಚ್ಚುವದರಿಂದ *Comparative* ಮತ್ತು *Superlative* ಇವುಗಳ ಅರ್ಥವಾಗುತ್ತದೆ.

ಉದಾ:—ಸುಲಭತರ, ಸುಲಭತಮ. ಚಿರಾತ್ — ಬಹುಕಾಲದ ನಂತರ **ಉನ್ಮುಕ್ತಾಧ್ವಶ್ರಮಕ್ಲಮಃ** — ದಾರಿಯದಣುವಿನ ಆಯಾಸವು ದೂರ ವಾದ. ಅಧ್ವನ್ (ಪು) — ದಾರಿ. ಕ್ಲಮಃ — ಆಯಾಸ. ಅಧ್ವನಃ ಶ್ರಮಃ ಅಧ್ವಶ್ರಮಃ (ಷ. ತ. ಸ.) ಅಧ್ವಶ್ರಮೇಣ ಕ್ಲಮಃ ಅ..........ಮಃ (ತೃ. ತ.) ಉನ್ಮುಕ್ತಃ ಅಧ್ವಶ್ರಮಕ್ಲಮಃ ಯೇನ ಸಃ (ಬ. ಸ.) ಅವಿಚ್ಛಿನ್ನ-ಚ್ಛಾಯಾಂ — ದಟ್ಟವಾದ ನೆರಳುಳ್ಳ (ಟೊಂಗೆ). ಅವಿಚ್ಛಿನ್ನಾ (ನ ವಿಚ್ಛಿನ್ನಾ ನ. ತ.) ಛಾಯಾ ಯಸ್ಯಾಃ ಸಾ (ಬ. ಸ.) ತಾಂ। ಮೂಲಭಾಗೇ — ಬುಡ ದಲ್ಲಿ, ಗಿಡದ ಬೊಡ್ಡೆಯಲ್ಲಿ. ಅಧ್ವಶ್ರಮಸುಲಭಾಂ—ದಾರಿಯ ದಣುವಿಗೆ ಸುಲಭವಾದ, ಅಧ್ವನಃ ಶ್ರಮಃ ಅಧ್ವಶ್ರಮಃ (ಷ. ತ. ಸ.) ತಸ್ಯ ಸುಲಭಾ (ಷ. ತ.) ತಾಂ. ನಿದ್ರಾಂ ಅಗಚ್ಛಮ್ — ನಿದ್ರೆಹೋದೆನು, ಮಲಗಿದೆನು. ಲಬ್ಧಪ್ರಬೋಧಃ — ಎಚ್ಚರ ಹುಟ್ಟಿದ, ಎಚ್ಚತ್ತ. ಲಬ್ಧಃ ಪ್ರಬೋಧಃ ಯೇನ ಸಃ (ಬ. ಸ.) ಆತ್ಮಾನಂ ಬದ್ಧಂ ಅಪಶ್ಯಂ — ನನ್ನನ್ನು ಕಟ್ಟಿದುದನ್ನು ಕಂಡೆನು. ತಂತುಪಾಶೈಃ — ಹಗ್ಗಗಳ ಬಲಿಗಳಿಂದ. ತಂತುಃ — ಹಗ್ಗ. ಪಾಶಃ—ಬಲೆ. ಅನುನ್ಮೋಚನೀಯೈಃ—ಬಿಡಿಸಲು ಬಾರದ. ನ ಉನ್ಮೋ-ಚನೀಯಾಃ ಅನುನ್ಮೋಚನೀಯಾಃ ( ನ. ತ. ). ತೈಃ. ಉನ್ಮೋಚನೀಯ — ಬಿಡಿಸಲು ಬರುವ. ಉತ್+ಮುಚ್ (೬. ಉ.) ಧಾತುವಿನ ಕರ್ಮಣಿ ವಿಧ್ಯರ್ಥ ಧಾ. ಸಾ. ವಿ.

**ಸಾಲು ೧೫.** ಅಗ್ರತಃ ಚ ಪುರುಷಂ ಅದ್ರಾಕ್ಷಮ್—ಎದುರಿಗೆ ಒಬ್ಬ ಮನುಷ್ಯನನ್ನು ಕಂಡೆನು. ಇದುವೇ ವಾಕ್ಯದ ಮುಖ್ಯ ಭಾಗ. ಉಳಿದ ಪದಗಳು 'ಪುರುಷಂ' ಶಬ್ದಕ್ಕೆ ವಿಶೇಷಣಗಳಾಗಿವೆ. **ಅದ್ರಾಕ್ಷಂ**—ದೃಶ್ (೧. ಪ) ಧಾತುವಿನ ತೃತೀಯ ಭೂತ ಪ್ರ. ಪು. ಏ. ವ. ಕಾಲಪುರುಷಃ— ಯಮದೂತ. ಕಾಲಃ—ಯಮ. ಕಾಲಸ್ಯ ಪುರುಷಃ (ಷ. ತ. ಸ.) ಪಾಶಃ— ಬಲೆ, ದಂಡಪಾಶ. ಯಮದೂತರು ದಂಡಪಾಶದಿಂದ ಮನುಷ್ಯನನ್ನು ಬಿಗಿದು ಯಮಲೋಕಕ್ಕೆ ಒಯ್ಯುತ್ತಾರೆ. ಬಳಿಕ ಯಮದೇವರು ಆ ಮನುಷ್ಯನು ಮಾಡಿದ ಪುಣ್ಯ ಹಾಗೂ ಪಾಪಗಳನ್ನು ವಿಚಾರಿಸಿ, ಆ ಆ ಕರ್ಮಗಳಿಗನು-ಗುಣವಾದ ಲೋಕಕ್ಕೆ ಕಳಿಸುವರು. ವಪುಷಃ ಅತಿಕಠಿನತಯಾ ಕಾಲಿಮ್ನಾ ಚ— ದೇಹವು ಬಹಳ ಬಿರುಸು ಮತ್ತು ಕಪ್ಪು ಇದ್ದುದರಿಂದ ವಪುಸ್ (ನ)— ದೇಹ. ಕಾಲಿಮನ್ (ಪು)—*blackness*. ಕಾಲಿಮ್ನಾ—ಕಾಲಿಮನ್ (ಪು) ಶಬ್ದದ ತೃ. ಏ. ವ. ಕೇವಲೈಃ ಕಾಲಾಯಸಪರಮಾಣುಭಿಃ ನಿರ್ಮಿತಂ

ಇವ—ಕೇವಲ ಕಬ್ಬಿಣದ ಚೂರುಗಳಿಂದಲೇ ನಿರ್ಮಿಸಲ್ಪಟ್ಟಿರುವನೋ ಎನ್ನುವಂತಿದ್ದ. ಅಯಸ್ (ನ)–ಕಬ್ಬಿಣ. ಕಾಲಾಯಸಂ—ಕಬ್ಬಿಣ. **ಪರಮಾಣುಃ**—ಚೂರು. 'ಜಾಲಾಂತರಸ್ಥಸೂರ್ಯಾಂಶೌ ಯತ್ಸೂಕ್ಷ್ಮಂ ದೃಶ್ಯತೇ ರಜಃ। ಭಾಗಸ್ತಸ್ಯ ಚ ಷಷ್ಠೋಽಯಂ ಪರಮಾಣುಃ ಸ ಉಚ್ಯತೇ' ತರ್ಕಕೌಮುದಿ. ಬೆಳಕಿಂಡಿ ಇಲ್ಲವೆ ಕಿಡಕಿಯಿಂದ ಬರುವ ಸೂರ್ಯನ ಕಿರಣದಲ್ಲಿ ಕಾಣುವ ಒಂದು ಧೂಳಿಕಣದ ೬ನೆಯ ಭಾಗಕ್ಕೆ ಪರಮಾಣು ಎಂದು ಹೆಸರು. ವೈಶೇಷಿಕ ದರ್ಶನದ ಮೇರೆಗೆ ಜಗತ್ತಿನಲ್ಲಿಯ ಸೃಷ್ಟಿ ಹಾಗೂ ವಿನಾಶಗಳು ಈ ಪರಮಾಣುಗಳಿಂದಲೇ ಆಗುತ್ತದೆ. [ಪ್ರತಿಯೊಂದು ವಸ್ತುವಿನಲ್ಲಿ ಅನೇಕ ಭಾಗಗಳನ್ನು ಮಾಡಲು ಬರುತ್ತದೆ. ಈ ಭಾಗಗಳಲ್ಲಿಯೂ ಮತ್ತೆ ಸಣ್ಣ ಸಣ್ಣ ಭಾಗಗಳನ್ನು ಮಾಡಬಹುದು. ಹೀಗೆ ಭಾಗ ಮಾಡುತ್ತ ಹೋದಂತೆ ಕೊನೆಗೆ ಒಂದು ಅತಿ ಸಣ್ಣ ಭಾಗ ಒಪ್ಪಬೇಕಾಗುವದು. ಹಾಗೂ ಅದರಲ್ಲಿ ಮತ್ತೆ ಭಾಗಮಾಡಲು ಬರುವದಿಲ್ಲೆಂದೂ ಒಪ್ಪಬೇಕಾಗುವದು; ಇಲ್ಲವಾದರೆ ಅನವಸ್ಥಾ ದೋಷಬರುತ್ತದೆ. ಕಣ್ಣಿಗೆಕಾಣುವ ಅತಿ ಸಣ್ಣ ಭಾಗಕ್ಕೆ (ಕಿಡಿಕಿಯಿಂದ ಬರುವ ಸೂರ್ಯಕಿರಣದಲ್ಲಿಯ ಧೂಳಿಯ ಕಣ) ತ್ರ್ಯಣುಕ ಎಂದು ಹೆಸರು. ಈ ತ್ರ್ಯಣುಕದ ೧/೩ ಭಾಗಕ್ಕೆ ದ್ವ್ಯಣುಕ ಎಂದು ಹೆಸರು. ದ್ವ್ಯಣುಕದ ೧/೨ ಭಾಗವೇ ಪರಮಾಣು. ಆದ್ದರಿಂದ, ೨ ಪರಮಾಣು=೧ ದ್ವ್ಯಣುಕ. ೩ ದ್ವ್ಯಣುಕ=೧ ತ್ರ್ಯಣುಕ. ಇದೇ ಮೇರೆಗೆ, ೪ ತ್ರ್ಯಣುಕ=೧ ಚತುರಣುಕ ಮುಂ. ಪರಮಾತ್ಮನ ಇಚ್ಛೆಯ ಮೇರೆಗೆ ಪರಮಾಣುಗಳಲ್ಲಿ ಕ್ರಿಯೆ ಹುಟ್ಟುತ್ತದೆ. ಕೂಡಲೇ ೨ ಪರಮಾಣುಗಳ ಸಂಬಂಧದಿಂದ ೧ ದ್ವ್ಯಣುಕವೂ, ೩ ದ್ವ್ಯಣುಕಗಳಿಂದ ೧ ತ್ರ್ಯಣುಕವೂ, ೪ ತ್ರ್ಯಣುಕಗಳಿಂದ ೧ ಚತುರಣಕವೂ ಹುಟ್ಟುವವು. ಇದೇಕ್ರಮ ಮುಂದು-ವರಿದು ಸ್ಥೂಲ ಪಂಚಮಹಾಭೂತಗಳು ಅಸ್ತಿತ್ವದಲ್ಲಿ ಬರುತ್ತವೆ. ಮುಂದೆ ವಿನಾಶವಾದರೂ ಇದೇ ಕ್ರಮದಲ್ಲಿ ಆಗುತ್ತದೆ. ಈಶ್ವರೇಚ್ಛೆಯ ಮೇರೆಗೆ ಪರಮಾಣುಗಳು ಒಂದಕ್ಕೊಂದು ವಿಘಟಿತವಾಗುತ್ತವೆ. ಆಗ ಅನುಕ್ರಮವಾಗಿ ದ್ವ್ಯಣುಕ, ತ್ರ್ಯಣಕ, ಚತುರಣುಕ ಮುಂ. ನಾಶವಾಗುತ್ತವೆ. ವೈಶೇಷಿಕರ ಈ ಪರಮಾಣುವಾದವು ಗ್ರೀಕರ '*Atomic theory*' ಹೋಲುತ್ತದೆ. ಆದರೆ ಈ ಪರಮಾಣುವಾದದಲ್ಲಿ ಅನೇಕದೋಷಗಳಿವೆ. (ಉದಾ:— ಸೃಷ್ಟಿ ಹಾಗೂ ವಿನಾಶಕ್ರಮ ಒಂದೇ ಇರದೆ, ಭಿನ್ನವಿರುವದು ಸುಸಂಗತ). ಅಂತೆಯೇ ಈ ಪರಮಾಣುವಾದವು ವೇದಾಂತಿಗಳಿಗೆ ಸಮ್ಮತವಿಲ್ಲ.]

ಕೃಷ್ಣ— (i) ಕಪ್ಪು *dark* (ii) ಕೆಟ್ಟ *wicked* ಮಲಿನ— i) ಹೊಲಸು *dirty* (ii) ಪಾಪಿಷ್ಠ *sinful* ಪರುಷ— (i) ಬಿರುಸು *harsh* (ii) ಗಟ್ಟಿ *Rough Coarse*. ಎಂಡೆರಡು ಶಬ್ದಗಳಿಗೆ ಕೂಡಿ ಒಂದೇ ವಿಶೇಷಣ ಕೊಡಲಾಗಿದೆ ಹಾಗೂ ಈ ವಿಶೇಷಣ ಎರಡೂ ಶಬ್ದಗಳಿಗೆ ಬೇರೆ ಬೇರೆ ಅರ್ಥಗಳಿಂದ ಅನ್ವಯಿಸುತ್ತದೆ. ಹೇಗೆಂದರೆ, ಕೃಷ್ಣ— ಬಣ್ಣವು ಕಪ್ಪು ಹಾಗೂ ನಡತೆ ಕೀಳು; ಮಲಿನ – ಬಟ್ಟೆ (ನಿವಸನ) ಹೊಲಸು ಮತ್ತು ಕೃತಿ ಪಾಪಯುಕ್ತವಾದದು; ಪರುಷ–ಮಾತು ಬಿರುಸು ಮತ್ತು ದೇಹ ಗಟ್ಟಿ ಯಾದುದು. ಅದೃಷ್ಟಾಶ್ರುತಾನುರೂಪಂ–ಅವನಂಥವನನ್ನು ನೋಡದ ಹಾಗೂ ಕೇಳದ '*The like of whom was never seen or heard of*' —*Apte*. ಅದೃಷ್ಟಂ ಅಶ್ರುತಂ ಚ ಅನುರೂಪಂ (ಅನುಗತಂ ರೂಪಂ ಕ.ಸ.) ಯಸ್ಯ ಸಃ (ಬ. ಸ.) ತಂ. ಆಕಾರಪ್ರತ್ಯಯಾತ್ —ಆಕೃತಿಯ ಜ್ಞಾನ ದಿಂದ. ಅವನ ರೂಪ ನೋಡುವದರಿಂದ. 'ಆಕೃತೇಃ ಪ್ರತ್ಯಕ್ಷದರ್ಶನಾತ್' —ಟೀಕಾ. ಅನುಮೀಯಮಾನಕ್ರೌರ್ಯದೋಷ — ಕ್ರೌರ್ಯದೋಷ ವನ್ನು ಊಹಿಸಬಹುದಾದ ಕ್ರೌರ್ಯಂ ಏವ ದೋಷಃ ಕ್ರೌರ್ಯದೋಷಃ (ಕ.ಸ.) ಅನುಮೀಯಮಾನಃ ಕ್ರೌರ್ಯದೋಷಃ ಯಸ್ಯ ಸಃ (ಬ.ಸ.) ತಂ ।

**ಸಾಲು ೧೯.** ತಾದೃಶಂ ಚ ತಂ ಆಲೋಕ್ಯ— ಅಂಥ ಅವನನ್ನು ಕಂಡು, ಆತ್ಮನಃ ಉಪರಿ ನಿಷ್ಪ್ರತ್ಯಾಶಃ— ನನ್ನ ಜೀವದಬಗ್ಗೆ ನಿರಾಶನಾಗಿ, ಪ್ರತಿಗತಾ ಆಶಾ ಪ್ರತ್ಯಾಶಾ (ಪ್ರಾದಿ ಸ.) ನಿರ್ಗತಾ ಪ್ರತ್ಯಾಶಾ ಯಸ್ಮಾತ್ ಸಃ (ಬ. ಸ.) ಭದ್ರ— ಸುಮಂಗಲ ಪುರುಷನೇ ಆಮಿಷತೃಷ್ಣಯಾ— ಮಾಂಸದ ಆಶೆಯಿಂದ ಆಮಿಷಸ್ಯ ತೃಷ್ಣಾ (ಷ. ತ. ಸ.) ತಯಾ । ಕಿಮಿತಿ— ಏಕೆ. ನವ್ಯಾಪಾದಿತಃ— (ಏಕೆ) ಕೊಲ್ಲಲ್ಪಡಲಿಲ್ಲ. ವ್ಯಾಪಾದಿತಃ— ವಿ+ಆ+ಪದ್ (೪. ಆ) ಧಾತುವಿನ ಪ್ರಯೋಜಕರೂಪ ಕರ್ಮಣಿ ಭೂ. ಧಾ. ವಿ. (ಪು). ಪ್ರ. ಏ. ವ. ನಿರಾಗಸಾ— ನಿರ್ದೋಷಿಯಾದ (ನನ್ನಿಂದ) ನಿರ್ಗತಂ ಆಗಃ ಯಸ್ಮಾತ್ ಸಃ (ಬ. ಸ.) ತೇನ. ಅನುಭಾವಿತೇನ— ಪ್ರಾಪಿತೇನ ಇತ್ಯರ್ಥಃ ಅನು+ಭೂ (೧. ಪ) ಧಾತುವಿನ ಪ್ರಯೋಜಕರೂಪದ ಕ. ಭೂ. ಧಾ. ವಿ. (ಪು) ತೃ. ಏ. ವ. ಕೌತುಕಾತ್ — ಕುತೂಹಲದಿಂದ. ಕೃತಂ— ಸಾಕು. ಈ ಶಬ್ದವು ಸಾಮಾನ್ಯವಾಗಿ ತೃತೀಯಾ ವಿಭಕ್ತಿ ತೆಗೆದು-ಕೊಳ್ಳುತ್ತದೆ. ಉದಾ:— ಅಲಂ ಅತಿಯಂತ್ರಣಯಾ; ಕೃತಂ ಅತಿಪ್ರಸಾದೇನ। ಭದ್ರಮುಖಃ–ಪುಣ್ಯಾತ್ಮ. ಮಂಗಲಕರವಾದ ಮುಖವುಳ್ಳವ. ಭದ್ರಂ ಮುಖಂ

ಯಸ್ಯ ಸಃ (ಬ. ಸ.) ಕೆಲವರ ಮುಖ ಮಂಗಲಕರವಿರುತ್ತದೆ. ಬೆಳಿಗ್ಗೆ ಎದ್ದು ಅವರ ಮುಖ ನೋಡಿದರೆ ಕಾರ್ಯಗಳು ಕೈಗೂಡುತ್ತವೆ. ಮುಂಚತು ಮಾಂ ಇದಾನೀಂ ಭದ್ರಮುಖಃ (ಕರ್ತರಿ)—ಭದ್ರಮುಖೇನ ಅಹಂ ಇದಾನೀಂ ಮುಚ್ಯೈ (ಕರ್ಮಣಿ) ಮಯಾಗಂತವ್ಯಂ (ಕರ್ಮಣಿ)—ಅಹಂ ಗಚ್ಛೇಯಂ (ಕರ್ತರಿ) ವಲ್ಲಭಜನೋತ್ಕಂಠಿತೇನ— ಪ್ರಿಯೆಯನ್ನು ಕಾಣಲು ಉತ್ಸುಕನಾದ. ಪ್ರಿಯೆಗಾಗಿ (ಪ್ರೀತಿಯ ಮನುಷ್ಯ) ಆತುರನಾದ. ವಲ್ಲಭಃ ಜನಃ ವ....ನಃ (ಕ. ಸ.) ವಲ್ಲಭಜನೇ ಉತ್ಕಂಠಿತಃ (ಸ. ತ.) ತೇನ. ಅಕಾಲಕ್ಷೇಪಕ್ಷಮಂ ಕಾಲವಿಲಂಬ ಸಹಿಸಲಾರದ. ಕಾಲಸ್ಯ ಕ್ಷೇಪಃ ಕಾಲಕ್ಷೇಪಃ (ಷ. ತ. ಸ.) ತಸ್ಯ ಕ್ಷಮಃ (ಷ. ತ. ಸ.) ನ ಕಾಲಕ್ಷೇಪಕ್ಷಮಃ ಅ.......ಮಃ (ನ. ತ.) ತಂ.

**ಪುಟ ೨೫.** ಭವಾನಪಿ ಪ್ರಾಣಿಧರ್ಮೇ ವರ್ತತೇ—ನೀವಾದರೂ ಪ್ರಾಣಿಗಳ ಲಕ್ಷಣಗಳಿಗೆ ಒಳಪಟ್ಟಿರುವಿರಿ. '*You too are subject to the characteristics of human beings*' Nerurkar. ಪ್ರಾಣಿಧರ್ಮಃ ಪ್ರಾಣಿನಾಂ ಧರ್ಮ (ಷ.ತ.ಸ.) ಇಚ್ಛಾ, ದ್ವೇಷ, ಪ್ರೀತಿ, ರಾಗ, ಮುಂತಾದ ಮಾನವ ಸಹಜವಾದ ಗುಣಗಳು. **ಉಕ್ತವಾನ್**— ಅಂದನು. ವಚ್ (೨. ಪ) ಧಾತುವಿನ ಕರ್ತರಿ ಭೂ. ಧಾ. ವಿ. (ಪು) ಪ್ರ. ಏ. ವ. ಕ್ರೂರಕರ್ಮಾ—ಕ್ರೂರಕೆಲಸಗಳುಳ್ಳವ. ಕ್ರೂರಂ ಕರ್ಮ ಯಸ್ಯ ಸಃ (ಬ.ಸ.) ಜಾತ್ಯಾಚಾಂಡಾಲಃ—ಜಾತಿಯಿಂದ ಚಾಂಡಾಲನು ಚಾಂಡಾಲ ಜಾತಿಯವನು. **ಚಂಡಾಲಃ, ಚಾಂಡಾಲಃ** — ಅಂತ್ಯಜ–ಅಸ್ಪೃಶ್ಯ– ಹೊಲೆಯ. ನೀಚ ಹಾಗೂ ಕೀಳು ಜಾತಿಯವ. ಶೂದ್ರ ಪುರುಷನಿಂದ ಬ್ರಾಹ್ಮಣ ಸ್ತ್ರೀಯಲ್ಲಿ ಹುಟ್ಟಿದ ಕೀಳು ಮನುಷ್ಯ. ಅತ್ಯಂತ ಅಯೋಗ್ಯ ಸ್ತ್ರೀ ಪುರುಷರ ಸಂಬಂಧದಿಂದ ಹುಟ್ಟಿದ ಚಂಡಾಲರನ್ನು ಹಿಂದಿನ ಕಾಲದಲ್ಲಿ ಮುಟ್ಟಿಸಿಕೊಳ್ಳುತ್ತಿದ್ದಿಲ್ಲ. ಮೇಲಾಗಿ ಇವರ ಕೃತಿಗಳಾದರೂ ಗರ್ಹ್ಯ— ವಾಗಿದ್ದವು. ಪ್ರಾಣಿವಧೆ, ಮಾಂಸ ಭಕ್ಷಣ, ಹಾಗೂ ಸುರಾಪಾನ ಇವು ಅವರ ನಿತ್ಯದ ವ್ಯಾಪಾರಗಳು. ಆದರೆ ಕಾಲಕ್ರಮದಿಂದ ಅವರಲ್ಲಿಯೂ ಈಗ ಸಾಕಷ್ಟು ಸುಧಾರಣೆಯಾಗಿರುವದರಿಂದ ಅವರೂ ಉಚ್ಚ ಸಂಸ್ಕೃತಿಯ ಮಟ್ಟಕ್ಕೆ ಬರಹತ್ತಿದ್ದಾರೆ. ಅವರಾದರೂ ನಮ್ಮ ಮಾನವ ಬಂಧುಗಳಲ್ಲವೇ? ಆದ್ದರಿಂದ ಭಾರತ ಸರಕಾರವು ಅಸ್ಪೃಶ್ಯತೆಯನ್ನು ಕಾಯ್ದೆಯಿಂದ ಪೂರ್ಣ

ದೂರಮಾಡಿದೆ. ಆಮಿಷಲುಬ್ಧೇನ — ಮಾಂಸದ ಆಶೆಯಿಂದ. ಮಾಂಸದ ಆಶೆಯುಳ್ಳ ನನ್ನಿಂದ ಪಕ್ವಣಾಧಿಪತಿಃ—ಚಾಂಡಾಲರ ವಸತಿಸ್ಥಳದ ದೊರೆ. 'ಪಕ್ವಣಃ ಶಬರವಾಸಃ' –ಟೀಕಾ. ಪಕ್ವಣಸ್ಯ ಅಧಿಪತಿಃ [ ಅಧಿಕಃ ಪತಿಃ ಪ್ರಾದಿ.ತ. ] (ಷ. ತ. ಸ.) ನಾತಿದೂರೇ — ಸಮೀಪದಲ್ಲಿ ಮಾತಂಗಕಪ್ರತಿಬದ್ಧಾಯಾಂ— ಮಾತಂಗಕೈಃ ಪ್ರತಿಬದ್ಧಾ (ತೃ.ತ.) ತಸ್ಯಾಂ. ಚಂಡಾಲರಿಂದ ರಚಿಸಲ್ಪಟ್ಟ. ಚಂಡಾಲರು ಮನೆಮಾರುಗಳನ್ನು ಕಟ್ಟಿದ. ಮಾತಂಗಕಃ— ಚಂಡಾಲರ ಒಂದು ಅವಾಂತರ ಜಾತಿ. ಕೃತಾವಸ್ಥಾನಃ – ವಾಸಮಾಡಿಕೊಂಡಿರುವವ. ಕೃತಂ ಅವಸ್ಥಾನಂ ಯೇನ ಸಃ (ಬ. ಸ.) ಕೌತುಕಮಯೀ — ಕುತೂಹಲ ತುಂಬಿದ. ಹೆಚ್ಚಾಗಿ ಕುತೂಹಲವುಳ್ಳ ಪ್ರಥಮೇವಯಸಿ–ವಯಸ್ಸಿನ ಪೂರ್ವ ಭಾಗದಲ್ಲಿ, ತಾರುಣ್ಯದಲ್ಲಿ. ತಸ್ಯಾಃ ತ್ವಂ ಕೇನಾಪಿ ದುರಾತ್ಮನಾ ಕಥಿತಃ (ಕರ್ಮಣಿ)— ಕೋಽಪಿ ದುರಾತ್ಮಾ ತಸ್ಯಾಃ ತ್ವಾಂ ಕಥಿತವಾನ್ (ಕರ್ತರಿ). ಏವಂಗುಣವಿಶಿಷ್ಟಃ— ಈ ಬಗೆಯ ಗುಣಗಳುಳ್ಳ. ಮಾತನಾಡುವ ಹಾಗೂ ಪೂರ್ವಜನ್ಮದ ಸ್ಮೃತಿಯುಳ್ಳ ಗಿಳಿ ಎಂದು ಮುಂತಾಗಿ ನಿನ್ನ ಬಗ್ಗೆ ಹೇಳಿದನು. ಉತ್ಪನ್ನ ಕೌತುಕಾತ್— ಸೋಜಿಗವು ಹುಟ್ಟಿದುದರಿಂದ ತ್ವದ್ಗ್ರಹಣಾಯ— ನಿನ್ನನ್ನು ಹಿಡಿಯಲು, ತವ ಗ್ರಹಣಂ ತ್ವದ್ಗ್ರಹಣಂ (ಷ. ತ. ಸ.) ತಸ್ಮೈ। ಅಪರೇ — ಬೇರೆ. ಮಾದೃಶಾಃ ಪುರುಷಾಃ — ನನ್ನಂತಹ ಮನುಷ್ಯರು. ಸಮಾದಿಷ್ಟಾಃ — ಆಜ್ಞಾಪಿಸಲ್ಪಟ್ಟಿದ್ದಾರೆ. ಸಮ್ + ಆ + ದಿಶ್ (೬. ಪ.) ಧಾತುವಿನ ಕರ್ಮಣಿ ಭೂ.ಧಾ ವಿ. (ಪು) ಪ್ರ.ಬ.ವ. ಮಯಾ ಆಸಾದಿತಃ— ನನಗೆ ದೊರೆತಿ, ನಾನು ಪಡೆದೆನು. ಆ + ಸದ್ (೧.ಪ) ಧಾ. ಪ್ರಯೋಜಕ ಕರ್ಮಣಿ ಭೂ. ಧಾ. ವಿ. ( ಪು ) ಪ್ರ. ಏ. ವ. ತತ್ಪಾದಮೂಲಂ – ಅವಳ ಪಾದಸನ್ನಿಧಿಗೆ ತಸ್ಯಾಃ ಪಾದೌ ತತ್ಪಾದೌ (ಷ. ತ. ಸ.) ತಯೋಃ ಮೂಲಂ (ಷ. ತ. ಸ.) ತತ್ । ಪ್ರಾಪಯಾಮಿ— ಮುಟ್ಟಿಸುವೆ. ಪ್ರ+ಆಪ್ (೫.ಪ) ಧಾತುವಿನ ಪ್ರಯೋಜಕರೂಪದ ವ. ಪ್ರ ಪು. ಏ. ವ. **ಸಾ ತೇ ಪ್ರಭವತಿ**– ಅವಳು ನಿನ್ನ ಒಡೆಯಳು. ಅವಳಿಗೆ ನಿನ್ನ ಮೇಲೆ ಅಧಿಕಾರವಿದೆ. ಆಳು, ಅಧಿಕಾರವಿದು ಎಂಬ ಅರ್ಥವುಳ್ಳ ಧಾತುಗಳು ಷಷ್ಠೀ ವಿಭಕ್ತಿ ತೆಗೆದುಕೊಳ್ಳುತ್ತವೆ. ಉದಾ:— ನನು ಆಚಾರ್ಯಃ ಶಿಷ್ಯಜನಸ್ಯ ಪ್ರಭವತಿ ।

**ಸಾಲು ೧೧.** ಅಹಂ ಚೇತಸಿ ಅಕರವಂ — ನಾನು ಮನದಲ್ಲಿ ಆಲೋಚಿಸಿದೆನು. ಶಿರಸಿ ಶುಷ್ಕಾಶನಿನಾ ತಾಡಿತಃ ಇವ — ತಲೆಯಮೇಲೆ

ಬೇಸಿಗೆಯಲ್ಲಿ ಸಿಡ್ಲಿನಿಂದ (ವಜ್ರಾಯುಧ) ಹೊಡೆಯಲ್ಪಟ್ಟೆನೋ ಎನ್ನುವಂತೆ. ಅಶನಿಃ — ವಜ್ರಾಯುಧ, ಸಿಡ್ಲು. ಶುಷ್ಕ — ಒಣಗಿದ, ಬಿಸಲುಳ್ಳ. ಅರ್ಥಾತ್ ಬಿಸಿಲಿನ ಸಮಯ. ಶುಷ್ಕೇ (ಸಮಯೇ ಯಃ) ಅಶನಿಃ (ತೃ. ತ.) ತೇನ. ಬೇಸಿಗೆಯಲ್ಲಿ ಸಾಮಾನ್ಯವಾಗಿ ಸಿಡ್ಲು ಬೀಳುವದಿಲ್ಲ. ಆದ್ದರಿಂದ ಅನಿರೀಕ್ಷಿತವಾದ ಅಥವಾ ಆಕಸ್ಮಿಕವಾದ ಅನಾಹುತದಿಂದ ಹೊಡೆಯಲ್ಪ-ಟ್ಟೆನೋ ಎನ್ನುವಂತೆ, ಎಂಬುದಾಗಿಯೂ ಅರ್ಥಮಾಡಬಹುದು. ಸಂವಿ-ಗ್ನಾಂತರಾತ್ಮಾ—ನೊಂದ ಅಥವಾ ಬೆದರಿದ ಮನಸ್ಸುಳ್ಳ. ಅಂತರಾತ್ಮನ್ — ಒಳಗಿನ ಜೀವ ಅಥವಾ ಮನಸ್ಸು. ಅಂತರ್ಗತಃ ಆತ್ಮಾ ಅಂತರಾತ್ಮಾ (ಕ.ಸ.) ಸಂವಿಗ್ನಃ ಅಂತರಾತ್ಮಾ ಯಸ್ಯ ಸಃ (ಬ. ಸ.). ಅಹೋ — ದುಃಖಸೂಚಕ ಅವ್ಯಯ. ಅಯ್ಯೋ ! ವಿಪಾಕಃ — ಪರಿಣಾಮ. ದಾರುಣ — ಉಗ್ರ. ಯೇನ — ಯೇನ ಕಾರಣೇನ. ಏಕೆಂದರೆ (ಏವಂ ವಿಧೇನ)ಮಯಾ ದಿವ್ಯ-ಲೋಕಾಶ್ರಮನಿವಾಸಿನಾ ಭೂತ್ವಾ ಅಧುನಾ ಪಕ್ವಣಂ ಪ್ರವೇಷ್ಟವ್ಯಂ—ಇದು ವಾಕ್ಯದ ಮುಖ್ಯ ಭಾಗ. (ಇಂತಹ) ನಾನು ಸ್ವರ್ಗಲೋಕದ ಆಶ್ರಮ ದಲ್ಲಿದ್ದುಕೊಂಡು ಈಗ ಚಂಡಾಲರ ವಾಸಸ್ಥಳವನ್ನು ಸೇರಬೇಕಾಗಿದೆ. ಮಯಾ ಎಂಬುದಕ್ಕೆ ೨ ವಿಶೇಷಣ ಪದಾವಲಿಗಳೂ, ಪಕ್ವಣಂ ಎಂಬುದಕ್ಕೆ ೧ ವಿಶೇಷಣ ಪದಾವಲಿಯೂ ಇವೆ. ಸುರಾ....ಜಾತೇನ—ಇದು ಮಯಾ (ನನ್ನಿಂದ) ಶಬ್ದಕ್ಕೆ ಸಂಬಂಧವಿದೆ. ಶ್ರಿಯಃ ಜಾತೇನ — ಲಕ್ಷ್ಮಿಯಿಂದ ಹುಟ್ಟಿದ. ಲಕ್ಷ್ಮಿಯ ಮಗನಾದ. ಶ್ರಿಯಃ—ಶ್ರೀ (ಸ್ತ್ರೀ) ಶಬ್ದದ ಪಂ.ಏ.ವ. ಸುರಾ........ಸರಸಿಜಾಯಾಃ — ಇದು 'ಶ್ರಿಯಃ' (ಲಕ್ಷ್ಮಿಯ) ಎಂಬ ಪದಕ್ಕೆ ಸಂಬಂಧವಿದೆ. ದೇವದಾನವರ ತಲೆಯ ಮೇಲಿದ್ದ ಕಿರೀಟಗಳಿಂದ ವಂದಿಸಲ್ಪಟ್ಟ ಪಾದಕಮಲಗಳುಳ್ಳ (ಲಕ್ಷ್ಮಿಯಿಂದ ಹುಟ್ಟಿದ ನನ್ನಿಂದ). ಶೇಖರಃ—ಕಿರೀಟ. ಸರಸಿಜಂ—ಕಮಲ. ಅಭ್ಯರ್ಚಿತ—ಪೂಜಿಸಲ್ಪಟ್ಟ. ಸುರಾಃ ಚ ಅಸುರಾಃ ಚ ಸುರಾಸುರಾಃ (ದ್ವಂದ್ವ). ತೇಷಾಂ ಶಿರಾಂಸಿ(ಷ.ತ.ಸ.) ತೇಷು ಯೇ ಶೇಖರಾಃ (ಸ. ತ. ಸ.). ತೈಃ ಅಭ್ಯರ್ಚಿತೇ ಚರಣಸರಸಿಜೇ ಯಸ್ಯಾಃ ಸಾ (ಬ. ಸ.) ತಸ್ಯಾಃ । [ಸರಸಿ ಜಾಯತೇ ಇತಿ ಸರಸಿಜಂ (ಅಲುಕ್ ತ.) ಚರಣೌ ಸರಸಿಜೇ ಇವ ಚರಣಸರಸಿಜೇ (ಕ. ಸ.)]. ಜಗತ್ತ್ರಯ...........ಸಂವರ್ಧಿತೇನ — ಇದಾದರೂ 'ಮಯಾ' ಶಬ್ದಕ್ಕೆ ಸಂಬಂಧಿಸಿದೆ. ಮೂಲೋಕಗಳಿಗೆ ಪೂಜ್ಯನಾದ ಮಹಾಮುನಿ ಶ್ವೇತಕೇತುವಿನ ಸ್ವಂತ ಕೈಯಿಂದ ಪೋಷಿಸಲ್ಪಟ್ಟ. (ನನ್ನಿಂದ) ನಮಸ್ಯ — ನಮಸ್ಕಾರ

ಮಾಡಿಸಿಕೊಳ್ಳಲು ಯೋಗ್ಯನಾದ. ಪೂಜ್ಯ—ವಂದನೀಯ. ಜಗತಾಂ ತ್ರಯಂ. ಜಗತ್ತ್ರಯಂ (ಷ. ತ. ಸ.) ತಸ್ಯ ನಮಸ್ಯಃ (ಷ. ತ. ಸ.) ದಿವ್ಯಲೋಕಾ-ಶ್ರಮನಿವಾಸಿನಾ ಭೂತ್ವಾ — ದೇವಲೋಕದ ಆಶ್ರಮವಾಸಿಯಾಗಿ. ದಿವ್ಯಃ ಲೋಕಃ (ಕ. ಸ.) । ತಸ್ಯ ಆಶ್ರಮಃ (ಷ. ತ. ಸ.) । ತಸ್ಯ ನಿವಾಸೀ (ಷ. ತ. ಸ.) ತೇನ । ಮ್ಲೇಚ್ಛ...........ಪ್ರವೇಶಂ ಪಕ್ವಣಂ - ಮ್ಲೇಚ್ಛ ಜಾತಿಯವರು ಕೂಡ ಒಳಗೆ ಹೋಗಲು (ಪ್ರವೇಶಿಸಲು) ದೂರದಿಂದಲೇ ತೊರೆಯುವ. ಪರಿಹೃತಃ ಪ್ರವೇಶಃ ಯಸ್ಮಿನ್ ಸಃ ( ಬ. ಸ. ) ತಂ । **ಮ್ಲೇಚ್ಛಜಾತಿಃ** — 'ಗೋಮಾಂಸಖಾದಕೋ ಯಸ್ತು ವಿರುದ್ಧಂ ಬಹು ಭಾಷತೇ । ಸರ್ವಾಚಾರವಿಹೀನಶ್ಚ ಮ್ಲೇಚ್ಛ ಇತ್ಯಭಿಧೀಯತೇ' ಗೋ-ಮಾಂಸವನ್ನು ಸೇವಿಸಿ, ಅಸಂಬದ್ಧ ಮಾತನಾಡುವ ಆಚಾರವಿಹೀನನಿಗೆ ಮ್ಲೇಚ್ಛ ಎಂಬ ಸಂಜ್ಞೆಯುಂಟು. ಪುಲಿಂದ, ಭಿಲ್ಲ, ಕಿರಾತ, ಮುಂತಾದವ ರೆಲ್ಲ ಈ ಮ್ಲೇಚ್ಛ ಜಾತಿಗೆ ಸೇರಿದವರು. ತು. ಮಾ. 'ಪುಲಿಂದಾ ನಾಹಲಾ ನಿಷ್ಟ್ಯಾಃ ಶಬರಾ ವರುಟಾ ಭಟಾಃ । ಮಾಲಾ ಭಿಲ್ಲಾಃ ಕಿರಾತಾಶ್ಚ ಸರ್ವೇಽಪಿ ಮ್ಲೇಚ್ಛಜಾತಯಃ.' ಪಕ್ವಣಃ — ಚಾಂಡಾಲರ ವಾಸಸ್ಥಳ. ಮಯಾ ಪ್ರವೇಷ್ಟವ್ಯಂ ( ಭಾವೇ ) — ಅಹಂ ಪ್ರವಿಶೇಯಂ ( ಕರ್ತರಿ ). ನಾನು ಪ್ರವೇಶಿಸಬೇಕು. ಪ್ರವೇಷ್ಟವ್ಯಂ — ಪ್ರ+ವಿಶ್ ( ೬.ಪ ) ಧಾತುವಿನ ಕರ್ಮಣಿ ವಿಧ್ಯರ್ಥ ಧಾ. ವಿ. (ನ). ಪ್ರ. ಏ. ವ.

**ಸಾಲು ೧೫.** ಇದರಂತೆಯೇ ಸ್ಥಾತವ್ಯ, ಪೋಷಣೀಯ, ಭವಿತವ್ಯ ಎಂಬುವು ಅನುಕ್ರಮವಾಗಿ ಸ್ಥಾ (೧. ಪ), ಪುಷ್ (೪. ಪ), ಭೂ (೧. ಪ) ಧಾತುಗಳ ಕರ್ಮಣಿ ವಿಧ್ಯರ್ಥ. ಧಾ. ವಿ. ಇವೆ. ಸ್ಥಾತವ್ಯಂ—ಇರಬೇಕು. ಜರತ್......ನೀತೈಃ — ಮುದಿಬೇಡ ಸ್ತ್ರೀಯರು ತಮ್ಮ ಕೈಯಿಂದ ತಂದ ಮಾತಂಗಾನಾಂ ಅಂಗನಾಃ ಮಾತಂಗಾಂಗನಾಃ (ಷ.ತ.ಸ.) ಜರತ್ಯಃ ಮಾ... ನಾಃ (ಕ. ಸ.) ತಾಸಾಂ ಕರಾಃ (ಷ. ತ. ಸ.) ತೈಃ ಉಪನೀತಾಃ (ತೃ. ತ.) ತೈಃ. ಕವಲೈಃ—ತುತ್ತುಗಳಿಂದ ಕ್ರೀಡನೀಯಂ—ಆಟದ ಸಾಧನ. ಆಟಿಕೆ **ದುರಾತ್ಮನ್** ದುಷ್ಟನೇ ದುಷ್ಟಃ ಆತ್ಮಾ ಯಸ್ಯ ಸಃ ದುರಾತ್ಮಾ (ಬ. ಸ.) ತಸ್ಯ ಸಂಬೋಧನಂ । **ಪುಂಡರೀಕಹತಕ**—ಹತಃ ಏವ ಹತಕಃ । ಪುಂಡರೀ-ಕಶ್ಚಾಸೌ ಹತಕಶ್ಚ ಪುಂಡರೀಕಹತಕಃ (ಕ. ಸ.) ತಸ್ಯ ಸಂಬುದ್ಧಿಃ । ದುಷ್ಟ ಪುಂಡರೀಕನೇ ದುಷ್ಟ, ನೀಚ ಎಂಬ ಅರ್ಥದಲ್ಲಿ ಹತಕ ಶಬ್ದವು ಸಮಾಸದ

ಕೊನೆಗೆ ಬರುತ್ತದೆ. ಧಿಕ್ ತೇ ಜನ್ಮಲಾಭಂ — ನಿನ್ನ ಜನ್ಮ ದೊರೆಯುವದಕ್ಕೆ ಧಿಕ್ಕಾರವಿರಲಿ. ಧಿಕ್ ಶಬ್ದವು ಪ್ರಥಮಾ, ದ್ವಿತೀಯಾ ಇಲ್ಲವೆ ಸಂಬೋಧನ ವಿಭಕ್ತಿ ತೆಗೆದುಕೊಳ್ಳುತ್ತದೆ. ಉದಾ:—ಧಿಗಿಯಂ ದರಿದ್ರತಾ। ಧಿಕ್‌ತಾಂಚ ತಂ ಚ ಮದನಂ ಚ ಮಾಂ ಚ। ಧಿಕ್ ಮೂರ್ಖ। ಜನ್ಮನಃ ಲಾಭಃ ಜನ್ಮ ಲಾಭಃ (ಷ. ತ. ಸ.) ತಂ। ಸಹಸ್ರಧಾ — ನೂರು ಚೂರಾಗಿ. ಕಿಂ ನ ಶೀರ್ಣಃ—ಏಕೆ ಶೀಳಲಿಲ್ಲ. ಶೀರ್ಣ—ಶ್ರೀ (೯. ಪ) ಧಾತುವಿನ ಕರ್ಮಣಿ ಭೂ. ಧಾ. ವಿ. ಪ್ರಥಮಗರ್ಭೇ—ಮೊದಲನೆಯ ಗರ್ಭದಲ್ಲಿ ಅರ್ಥಾತ್ ಲಕ್ಷ್ಮಿಯ ಗರ್ಭದಲ್ಲಿ. ಪ್ರಥಮಃ ಗರ್ಭಃ (ಕ. ಸ.) ತಸ್ಮಿನ್। ಅಶರಣ... ಪಂಕಜೇ—ದೀನರಿಗೆ ಆಶ್ರಯಕೊಡುವ ಪಾದಕಮಲಗಳುಳ್ಳವಳೇ. ನಾಸ್ತಿ ಶರಣಂ ಯೇಷಾಂತೇ ಅಶರಣಾಃ (ಬ. ಸ.) ಅಶರಣಾಃ ಜನಾಃ ಅ...ನಾಃ (ಕ. ಸ.) ತೇಷಾಂ ಶರಣಂ ಚರಣಪಂಕಜಂ [ಪಂಕೇ ಜಾಯತೇ ಇತಿ ಪಂಕಜಂ (ಅಲುಕ್ ತ) ಚರಣಃ ಪಂಕಜಂ ಇವ (ಕ.ಸ.)] ಯಸ್ಯಾಃ ಸಾ (ಬ. ಸ.) ತಸ್ಯಾಃ ಸಂಬೋಧನಂ। ಮಹಾನರಕಪಾತಾತ್—ದೊಡ್ಡ ನರಕ ದೊಳಗೆ ಬೀಳುವದರಿಂದ ಮಹಾನ್ ನರಕಃ ಮಹಾನರಕಃ (ಕ. ಸ.) ತಸ್ಮಿನ್ ಪಾತಃ (ಸ. ತ.) ತಸ್ಮಾತ್। ನರಕಃ—ಸತ್ತನಂತರ ಪಾಪಮಾಡಿದವರು ವಾಸಿ ಸುವ ಪ್ರದೇಶ. ಕುಂಭೀಪಾಕ ಮುಂತಾದ ೨೧ ಪ್ರಕಾರದ ನರಕಗಳಿವೆ. ಇವುಗಳಲ್ಲಿ ವಿಚಿತ್ರ ಬಗೆಯ ಹಿಂಸೆ ಕೊಡಲಾಗುತ್ತದೆ. ಅತಿಗಹನಃ (ಅತಿಶ-ಯೇನ ಗಹನಃ ಕ. ಸ.) ಚ ಅಸೌ ಗಭೀರಃ ಚ ಅತಿ....ರಃ (ಕ. ಸ.) ತಸ್ಮಾತ್। ಆಳ ಹಾಗೂ ಭೀಕರವಾದ. ಭುವನತ್ರಯತ್ರಾಣಕ್ಷಮ— ಮೂರುಲೋಕಗಳನ್ನು ರಕ್ಷಿಸುವ ಸಾಮರ್ಥ್ಯವುಳ್ಳವನೇ. ಭುವನಾನಾಂ ತ್ರಯಂ (ಷ. ತ. ಸ.) ತಸ್ಯ ತ್ರಾಣಂ (ಷ. ತ. ಸ.) ತಸ್ಮಿನ್ ಕ್ಷಮಃ (ಸ. ತ.)। ತಸ್ಯ ಸಂಬೋಧನಃ। ಭುವನಃ—ಲೋಕ. ತ್ರಾಣಂ—ರಕ್ಷಣೆ. ತ್ರಾಯಸ್ವ—ರಕ್ಷಿಸು. ತ್ರೈ (೧. ಆ) ಧಾತುವಿನ ಆಜ್ಞಾರ್ಥ ದ್ವಿ. ಪು. ಏ ವ. ಕುಲ-ತಂತುಂ—ವಂಶಬೆಳೆಯಿಸುವ. ಕುಲಕ್ಕೆ ಸಂತಾನವಾದ. ಕುಲಸ್ಯ ತಂತುಃ ತಂ. ಸಂವರ್ಧಿತಃ—ಬೆಳೆಯಿಸಲ್ಪಟ್ಟವ. ಸಂ+ವೃಧ್ (೧.ಪ)ಧಾ. ಪ್ರಯೋಜಕ ಕರ್ಮಣಿ ಭೂ. ಧಾ. ವಿ. (ಪು) ಪ್ರ. ಏ. ವ. ಪರಾಪತ್ಯ – ಹಿಂತಿರುಗಿ. ಪರಾ+ಪತ್ (೧.ಪ) ಧಾತುವಿನ ಲ್ಯಬಂತಾವ್ಯಯ. ಜನ್ಮಾಂತರೇ—ಇನ್ನೊಂದು ಜನ್ಮದಲ್ಲಿ. ಅನ್ಯತ್ ಜನ್ಮ ಜನ್ಮಾಂತರಂ (ಕ. ಸ.) ತಸ್ಮಿನ್। ಕೃಥಾಃ—ಕೃ (೮. ಉ) ಧಾತುವಿನ ಅಡಾಗಮ ವಿರಹಿತ ತೃ. ಭೂ. ದ್ವಿ. ಪು. ಏ. ವ.

ಮಾ ಬಂದುದರಿಂದ ಹಿಂದಿನ 'ಅ' ಲೋಪವಾಗಿದೆ. ಹಾಗೂ ಆಜ್ಞಾರ್ಥದ ಅರ್ಥವಾಗುತ್ತದೆ. ಮತ್ಸಮಾಗಮ ಪ್ರತ್ಯಾಶಾಂ–ನನ್ನ ಸಮಾಗಮದ ವಿಷಯವಾಗಿ ಆಶೆಯನ್ನು ಮಮ ಸಮಾಗಮಃ ಮತ್ಸಮಾಗಮಃ (ಷ. ತ. ಸ) **ಅಭ್ಯರ್ಥನಾದೀನಂ**– ಪ್ರಾರ್ಥನೆಯಿಂದ (ಬಿನ್ನಹ) ದೈನ್ಯ (ದಯೆ) ಹುಟ್ಟುವಂತೆ. ಅಭ್ಯರ್ಥನಯಾ ದೀನಂ ಯಥಾಸ್ಯಾತ್ ತಥಾ (ಅವ್ಯಯೀಭಾವ ಸಮಾಸ). ಜಾತಿಸ್ಮರಃ – 'ಜಾತಿಸ್ಮರಣವಾನ್' —ಟೀಕಾ. ಪೂರ್ವಜನ್ಮದ ಸ್ಮರಣೆಯುಳ್ಳವ. '*One who remembers who he was in his previous life*'. —*Kale*. ತವಾಪಿ ಧರ್ಮಃ ಭವತಿ–ನಿನಗೂ ಪುಣ್ಯ ಬರುವದು. ಉದ್ಧೃತ್ಯ–ಎತ್ತಿ. ಉತ್ + ಧೃ (೧೦.ಉ) ಧಾತುವಿನ ಲ್ಯಬಂತಾವ್ಯಯ ಪಾಪಂ ಏವ ಸಂಕಟಂ (ಕ. ಸ.) ತಸ್ಮಾತ್.

**ಪುಟ ೨೬.** ಅದೃಷ್ಟಸುಖಹೇತುಃ—(i) ಕಣ್ಣಿಗೆ ಕಾಣದ ಸುಖಕ್ಕೆ ಕಾರಣವಾದ. (ii) ಪರಲೋಕಸುಖಕ್ಕೆ ಕಾರಣವಾದ, ಧರ್ಮ ಮಾಡುವದರಿಂದ ಪುಣ್ಯಸಂಚಯವಾಗಿ ಪರಲೋಕದಲ್ಲಿ ಸೌಖ್ಯವುಂಟಾಗುತ್ತದೆ. ಆದರೆ ಆ ಸೌಖ್ಯವನ್ನು ಈ ಲೋಕದವರಿಗೆ ನೋಡಲು ಬರುವದಿಲ್ಲ. ಆದ್ದರಿಂದ ಅದೃಷ್ಟಸುಖ ಎಂದರೆ ಕಣ್ಣಿಗೆ ಕಾಣದ ಸುಖ, ಇಲ್ಲವೆ ಪರಲೋಕ ಸುಖ ಎಂಬುದಾಗಿ ಅರ್ಥಮಾಡಬಹುದು. (i) ನ ದೃಷ್ಟಂ ಅದೃಷ್ಟಂ (ನ. ತ.) ಅದೃಷ್ಟಂ ಸುಖಂ ( ಕ. ಸ. ) ತಸ್ಯ ಹೇತುಃ ( ಷ. ತ. ಸ. ) (ii) ಸುಖಸ್ಯ ಹೇತುಃ ಸುಖಹೇತುಃ ಅದೃಷ್ಟೇ ( ಪರತ್ರ ) ಸುಖಹೇತುಃ (ಸ. ತ.). ದೃಷ್ಟೇ ಅಪಿ — (i) ಪ್ರತ್ಯಕ್ಷ ಕಣ್ಣಿಗೆ ಕಾಣುವ ವಿಷಯದಲ್ಲಿಯಾದರೂ. (ii) ಈ ಲೋಕದಲ್ಲಿಯಾದರೂ. ತೇ ಪ್ರತ್ಯವಾಯಃ ನಾಸ್ತಿ— ನಿನಗೆ ದೋಷವಿಲ್ಲ. ಪ್ರತ್ಯವಾಯಃ — ದೋಷ. ಮಾಡುವ ಕೆಲಸವನ್ನು ಸರಿಯಾಗಿ ಇಲ್ಲವೆ ವಿಧಿಪೂರ್ವಕವಾಗಿ ಮಾಡದೆ ಇದ್ದರೆ ಬರುವ ದೋಷ. ಮನ್ಮುಕ್ತಿಕೃತಃ — ನನ್ನನ್ನು ಮೋಚನ ಮಾಡುವ. ಕೇನಚಿತ್ ಅದೃಷ್ಟಸ್ಯ– ಯಾರಿಂದಲೂ ನೋಡಲ್ಪಡದ ( ನಿನಗೆ ) ಅಭಿದಧಾನಃ — ನುಡಿಯುತ್ತ. ಅಭಿ + ಧಾ (೩. ಉ) ಧಾತುವಿನ ವ. ಧಾ. ವಿ. (ಪು). ಪ್ರ. ಏ. ವ. ಪಾದಯೋಃ ಅಪತಂ — ಪಾದಗಳಿಗೆ ಎರಗಿದೆನು. (ಬಿದ್ದೆನು). ವಿಹಸ್ಯ — ನಕ್ಕು. **ಅವಾದೀತ್** – ನುಡಿದನು. ವದ್ (೧.ಪ) ಧಾತುವಿನ ತೃ. ಭೂ. ಕೈ. ಪು. ಏ. ವ.

**ಸಾಲು ೩.** ರೇ ಮೋಹಾಂಧ, ಯಸ್ಯ....ನಾಚರತಿ – ಇದೊಂದು ಕಠಿಣ ವಾಕ್ಯವು. ಅರ್ಥ ಸ್ಪಷ್ಟವಾಗುವಂತೆ ಪದಗಳಿಲ್ಲ. ಆದರೂ 'ಸ್ಥಿತಸ್ಯ ಗತಿಶ್ಚಿಂತನೀಯಾ' ಎಂಬ ಮಾತಿನ ಮೇರೆಗೆ ಅರ್ಥಮಾಡಲಾಗಿದೆ. ಮೋಹಾಂಧ — ಮೋಹದಿಂದ ( ಅಜ್ಞಾನದಿಂದ ) ಕುರುಡನಾದವನೇ. ಮೋಹೇನ ಅಂಧಃ (ತೃ. ತ.) ತಸ್ಯ ಸಂಬೋಧನಂ ಶುಭಾ........ತಾಃ— ಶುಭ ಮತ್ತು ಅಶುಭಕೆಲಸಗಳಿಗೆ ಸಾಕ್ಷಿಯಾದ. ಶುಭಂ ಚ ಅಶುಭಂ ಚ ಶುಭಾಶುಭೇ (ದ್ವಂದ್ವ) ಶುಭಾಶುಭೇ ಕರ್ಮಣೀ ಶು........ಣೀ (ಕ. ಸ.). ತಯೋಃ ಸಾಕ್ಷಿಭೂತಾಃ (ಷ. ತ.) ಮನುಷ್ಯನು ಮಾಡುವ ಒಳ್ಳೆಯ (ಪುಣ್ಯ ಧರ್ಮ) ಹಾಗೂ ಕೆಟ್ಟ ( ಪಾಪ, ಅಧರ್ಮ ) ಕೆಲಸಗಳಿಗೆ ಸಾಕ್ಷಿಯಾದ, ಎಂದರೆ ಅವುಗಳನ್ನು ನೋಡುವ. **ಲೋಕಪಾಲಾಃ** — (ಲೋಕಾನ್ ಪಾಲಯಂತಿ ಇತಿ (ಉಪ. ತ.) ಪ್ರತಿಯೊಬ್ಬನ ದೇಹದಲ್ಲಿ ಇಂದ್ರ, ಯಮ, ವರುಣ, ಸೋಮ (ಚಂದ್ರ), ಕುಬೇರ ಎಂಬ ೫ ಲೋಕಪಾಲರಿದ್ದಾರೆ. ಅವರು ಮನುಷ್ಯರು ಮಾಡುವ ಪುಣ್ಯ ಹಾಗೂ ಪಾಪ ಕೆಲಸಗಳನ್ನು ಸದಾ ನಿರೀಕ್ಷಿಸುವರು. ಬೇರೆ ಯಾರೂ ನೋಡುವದಿಲ್ಲೆಂದು ಮನುಷ್ಯನು ಪಾಪ ಕೆಲಸ ಮಾಡುವದು ಅವನ ಪಡ್ಡತನವನ್ನು ಮಾತ್ರ ಸೂಚಿಸುತ್ತದೆ. ಏಕೆಂದರೆ ಈ ೫ ಲೋಕಪಾಲರು ಸದಾ ಜಾಗರೂಕರಾಗಿ ಮಾನವನ ಶುಭಾ ಶುಭ ಕೃತಿಗಳಿಗೆ ಸಾಕ್ಷಿಯಾಗಿ ದೇಹದೊಳಗೆ ಸನ್ನದ್ಧರಾಗಿರುವರು. ಈ ಲೋಕಪಾಲರಲ್ಲದೆ ಪ್ರತಿಯೊಂದು ದಿಕ್ಕಿಗಿರುವ ೪ ಇಲ್ಲವೆ ೮ ದಿಕ್ಪಾಲಕರು ಜೇರಿಯೇ. ತವೈ........ತಾಃ — ನಿನ್ನ ದೇಹದಲ್ಲಿಯೇ ಇದ್ದ. ಯಸ್ಯ ನ ಪಶ್ಯಂತಿ – 'ಯಸ್ಯ ಜಂತೋಃ ಶುಭಾಶುಭಕರ್ಮ ನ ಪಶ್ಯಂತಿ. —ಟೀಕಾ ನಿನ್ನ ದೇಹದಲ್ಲಿದ್ದ ಲೋಕಪಾಲರು ಯಾವ ಮನುಷ್ಯನ ಪುಣ್ಯ ಪಾಪಗಳನ್ನು ನೋಡುವದಿಲ್ಲವೋ, ಆ ಮನುಷ್ಯನು ಮಾತ್ರ [ಎಂದರೆ ನೀನೇ] ಬೇರೆಯವರ (ಲೋಕ ಪಾಲರನ್ನು ಬಿಟ್ಟು ಉಳಿದವರ) ಅಂಜಿಕೆಯಿಂದ ಅಕಾರ್ಯವನ್ನು ಮಾಡುವದಿಲ್ಲ. ಅಕಾರ್ಯಂ – ನ ಕಾರ್ಯಂ ( ನ. ತ. ) ಕೆಟ್ಟ ಕೆಲಸ. ಅಭಿಮುಖ – ಕಡೆಗೆ.

**ಅನ್ವಯ—** ತವ ಏವ ಆತ್ಮಶರೀರಸ್ಥಿತಾಃ ಶುಭಾಶುಭಕರ್ಮ ಸಾಕ್ಷಿಭೂತಾಃ ಪಂಚ ಲೋಕಪಾಲಾಃ ಯಸ್ಯ (ಜಂತೋಃ ಶುಭಾಶುಭ ಕರ್ಮ) ನ ಪಶ್ಯಂತಿ ಸಃ ಅನ್ಯಸ್ಯ ( ತೇಭ್ಯಃ ಇತರಸ್ಯ ) ಭಯಾತ್ ಅಕೃತ್ಯಂ ನ ಆಚರತಿ.

ಅಥವಾ

ಯಸ್ಯ (ಜಂತೋಃ) ಆತ್ಮಶರೀರಸ್ಥಿತಾಃ ಶುಭಾಶುಭಕರ್ಮಸಾಕ್ಷಿಭೂತಾಃ ಪಂಚಲೋಕಪಾಲಾಃ ತವ ಏವ (ಇವ) ನ ಪಶ್ಯಂತಿ ಸಃ ಅನ್ಯಸ್ಯ (ದೇಹಬಹಿರ್ಭೂತಸ್ಯ ಇತರಸ್ಯ) ಭಯಾತ್ ಅಕೃತ್ಯಂ ನ ಆಚರತಿ.

೧ನೆಯ ಅನ್ವಯದ ಪ್ರಕಾರ ಆಗುವ ಅರ್ಥ ಭಾಷಾಂತರದಲ್ಲಿ ಕೊಟ್ಟಿದೆ. ಅಲ್ಲಿ ನೋಡಿರಿ. ಎರಡನೆಯ ಪ್ರಕಾರದ ಅನ್ವಯದಮೇಲೆಗೆ ಆಗುವ ಭಾಷಾಂತರ ಕೊಟ್ಟಿದೆ.

ಪುಣ್ಯ ಹಾಗೂ ಪಾಪ ಕೆಲಸಗಳಿಗೆ ಸಾಕ್ಷಿಯಾದ ಹಾಗೂ ಯಾರ ದೇಹದಲ್ಲಿರುವ ೫ ಲೋಕಪಾಲರು, ನಿನ್ನಂತೆ ಯಾರ ಶುಭಾಶುಭ ಕೆಲಸ ನೋಡುವದಿಲ್ಲವೋ (ಎಂದರೆ, ನಿನ್ನ ಮಹಾಶ್ವೇತಾಕ್ರಮಣ ಮುಂತಾದ ಪಾಪ ಕೆಲಸಗಳನ್ನು ನೋಡದೆ ಇರುವಂತೆ, ಇತರರ ಕರ್ಮಗಳನ್ನೂ ನೋಡುವದಿಲ್ಲವೋ). ಆ ಮನುಷ್ಯನು (ಮಾತ್ರ) ಬೇರೆಯವರ ಅಂಜಿಕೆಯಿಂದ ಕೆಟ್ಟ ಕೆಲಸ ಮಾಡುವದಿಲ್ಲ. [ಆದರೆ ಲೋಕಪಾಲರು ನನ್ನ ಕೆಲಸಗಳನ್ನು ನೋಡುವರು. ಆದ್ದರಿಂದ ನಾನು ಯಾವಾಗಲೂ ಯೋಗ್ಯ ಕೆಲಸ ಮಾಡುತ್ತೇನೆ.]

**ಚಾಂಡಾಲ ಬಾಲಕನ ಅಭಿಪ್ರಾಯು ಕೆಳಗಿನಂತಿದೆ:—**

ನಿನ್ನ ದೇಹದಲ್ಲಿಯೇ ೫ ಲೋಕಪಾಲರಿದ್ದಾರೆ. ಅವರು ಎಲ್ಲ ಶುಭಾಶುಭ ಕಾರ್ಯಗಳನ್ನು ನೋಡುತ್ತಾರೆ. ಆದರೆ ಅವರು ಯಾರ ಶುಭಾಶುಭ ಕೆಲಸಗಳನ್ನು ನೋಡುವದಿಲ್ಲವೋ ಆ ಮನುಷ್ಯನು ಮಾತ್ರ ಅವರನ್ನು ಬಿಟ್ಟು ಬೇರೆಯವರ ಅಂಜಿಕೆಯಿಂದ ಪಾಪ ಮಾಡುವದಿಲ್ಲ. ನೀನೇ ಇದಕ್ಕೆ ಉದಾಹರಣೆ, ಲೋಕಪಾಲರು ನಿನ್ನ ಕೆಲಸಗಳನ್ನು ನಿರೀಕ್ಷಿಸುವದಿಲ್ಲ; ಆದ್ದರಿಂದ ನೀನು ಬೇರೆಯವರ ಅಂಜಿಕೆಯಿಂದ ಮಾತ್ರ ಪಾಪ ಕೆಲಸ ಮಾಡುವದಿಲ್ಲ, ಎಂದರೆ ಬೇರೆಯವರು ನೋಡುವಾಗ ಮಾತ್ರ ಕೆಟ್ಟ ಕೆಲಸ ಮಾಡುವದಿಲ್ಲ. ಅವರು ನೋಡದೆ ಇರುವಾಗ ಕೆಟ್ಟ ಕೆಲಸ ಮಾಡುವೆ. ನೀನು ಪರಸ್ತ್ರೀಯಾದ ಮಹಾಶ್ವೇತೆಯ ಮೇಲೆ ಆಕ್ರಮಣ ಮಾಡಲು ಯತ್ನಿಸಿದುದೇ ಇದಕ್ಕೆ ನಿದರ್ಶನ. ಇಂತಹ ಪಾಪಿಷ್ಠನಾದ ನೀನು ನನಗೆ ಬುದ್ಧಿವಾದ ಹೇಳಲು ಹೊರಟಿರುವೆ. ಎಂದಮೇಲೆ ನಿನ್ನ ಅಜ್ಞಾನವೆಷ್ಟು! ನನ್ನನ್ನಾದರೋ ಲೋಕಪಾಲರು ನೋಡುವರು. ಆದ್ದರಿಂದ 'ಬೇರೆಯವರು ನಿನ್ನನ್ನು ನೋಡಿಲ್ಲ;

ಕಾರಣ ನನ್ನನ್ನು ಬಿಡು' ಎಂದು ನೀನು ಹೇಳಿದುದು ಸರಿಯಲ್ಲ. ನಾನು ಯಾವಾಗಲೂ ಸ್ವಂತ ತಿಳುವಳಿಕೆಯಿಂದ (ಬೇರೆಯವರ ಅಂಜಿಕೆಯಿಂದಲ್ಲ) ಸತ್ಕಾರ್ಯಗಳನ್ನು ಮಾಡುತ್ತೇನೆ. ಈಗಲಾದರೋ, ನಿನ್ನನ್ನು ಹಿಡಿದು ತರಲು ಹೇಳಿದ ಒಡೆಯನ ಆಜ್ಞೆ ಮೀರಿದಂತಾಗುವದು. ಮೇಲಾಗಿ ನನ್ನ ಈ ಪಾಪಕೃತಿಯನ್ನು ಲೋಕಪಾಲರು ನೋಡುವರು. ಕಾರಣ ನಿನ್ನನ್ನು ಒಡೆಯನ ಆಜ್ಞೆಯ ಮೇರೆಗೆ ಹಿಡಿದಿರುವೆ.

**ಸಾಲು ೭.** ಅಹಂತು–ನಾನಾದರೋ. ಮೂರ್ಧ್ನಿ–ತಲೆಯಮೇಲೆ ಮೂರ್ಧನ್ (ಪು) ಶಬ್ದದ ಸ. ಏ. ವ. ಮೂಕತಾಂ. ಆಪನ್ನಃ–ಮೌನತಾಳಿ. ಮೂಕಸ್ಯ ಭಾವಃ ಮೂಕತಾ (ತದ್ಧಿತ) ಅಂತರಾತ್ಮನಾ ಧ್ಯಾಯನ್–ಮನಸಾ ಆಲೋಚಿಸುತ್ತಾ. ಪ್ರಾಣಪರಿತ್ಯಾಗಂ – ಜೀವಬಿಡುವದು. ಪ್ರಾಣಾನಾಂ ಪರಿತ್ಯಾಗಃ (ಷ.ತ.ಸ.) ತಂ. ಪ್ರಾಣ ಶಬ್ದವು ಯಾವಾಗಲೂ ಬಹುವಚನದಲ್ಲಿ ಉಪಯೋಗಿಸಲ್ಪಡುತ್ತದೆ. ಕೃತನಿಶ್ಚಯಃ–ಕೃತಃ ನಿಶ್ಚಯಃ ಯೇನ ಸಃ (ಬ. ಸ.) ನಿಶ್ಚಯ ಮಾಡಿದವನು. ತೇನ ತಥಾ ನೀಯಮಾನಃ ಚ–ಅವನಿಂದ ಆ ರೀತಿ ಒಯ್ಯಲ್ಪಡುವ ನಾನು. **ನೀಯಮಾನಃ** – ಒಯ್ಯಲ್ಪಡುವ. ನೀ (೧. ಪ) ಧಾತುವಿನ ಕರ್ಮಣಿ ವ. ಧಾ. ವಿ. (ಪು) ಪ್ರ. ಏ. ವ. ಇನ್ನು ಮುಂದೆ 'ಪಕ್ವಣ' (ಅಂತ್ಯಜರ ವಾಸಸ್ಥಾನ)ದ ವರ್ಣನೆ ಇದೆ. ನಾಲ್ಕು ವಿಶೇಷಣ ಪದಾವಲಿಗಳಿವೆ. ಉದ್ವೇಗಃ–ಕಳವಳ, ದುಃಖ. **ಸ್ಮರ್ಯಮಾಣಂ** ಶ್ರೂಯಮಾಣಂ, ದೃಶ್ಯಮಾನಂ–ಇವು ಅನುಕ್ರಮವಾಗಿ ಸ್ಮೃ (೧. ಪ), ಶ್ರು (೫. ಉ), ದೃಶ್ (೧. ಪ) ಧಾತುಗಳ ಕರ್ಮಣಿ ವ. ಧಾ. ವಿ. (ಪು) ದ್ವಿ. ಏ. ವ. ಇವೆ. ಜನ್ಮಕರ್ಮತಃ ಮಲಿನತರಂ–ಅವರ ಜಾತಿ ಹಾಗೂ ಆಚರಣೆ ಗಿಂತ ಹೆಚ್ಚು ಹೊಲಸಾದ. ಜನ್ಮಕರ್ಮತಃ–(ಜಾತಿ ಮತ್ತು ಆಚಾರಗಳಿಗಿಂತ) ಜನ್ಮತಃ ಕರ್ಮತಃ ಚ ಎಂದು ಅರ್ಥ. ನಾಮಪದಗಳಿಗೆ ತಸ್ (ತಸಿಲ್) ಪ್ರತ್ಯಯ ಹಚ್ಚುವದರಿಂದ ಪಂಚಮೀ ವಿಭಕ್ತಿಯ ಅರ್ಥವಾಗುತ್ತದೆ. ಮಲಿನತರ (ಹೆಚ್ಚು ಹೊಲಸು) ಶಬ್ದ ಬಂದುದರಿಂದ, ಏತಕ್ಕಿಂತ ಹೆಚ್ಚು ಹೊಲಸು ಎಂಬ ಆಕಾಂಕ್ಷೆ ಹುಟ್ಟುತ್ತದೆ. ಅದನ್ನು ಪೂರೈಸಲು ಪಂಚಮೀ ವಿಭಕ್ತಿಯಲ್ಲಿಯ ಒಂದು ಶಬ್ದ ಬೇಕು. ಅಂತೆಯೇ ಜನ್ಮ ಕರ್ಮತಃ ಎಂಬ ಪ್ರಯೋಗ. ನರಕವಾಸಿನಃ ಅಪಿ ಉದ್ವೇಗಕರಂ–ನರಕದಲ್ಲಿ ವಾಸಿಸುವವ ನಿಗೂ ಕಳವಳವನ್ನುಂಟುಮಾಡುವ. ನರಕೇ ವಸತಿ ಇತಿ ನರಕವಾಸೀ

(ಉಪ.ತ.) ತಸ್ಯ, ನರಕವಾಸಿನಃ. ಸಮುತ್ಪನ್ನ ಘೃಣಃ–ಜಿಗುಪ್ಸೆ (ತಿರಸ್ಕಾರ) ಹುಟ್ಟಿದವ. ಸಮುತ್ಪನ್ನಾ ಘೃಣಾ ಯಸ್ಯ–(ಯಸ್ಮಿನ್ ವಾ) ಸಃ (ಬ. ಸ.) ಘೃಣಾ–ಜಿಗುಪ್ಸೆ, ತಿರಸ್ಕಾರ. ಅಂತರಾತ್ಮನಿ–ಮನಸ್ಸಿನಲ್ಲಿ. ಅಪಿ ನಾಮ ಸಾ ಮಾಂ ಮೋಚಯೇತ್ ನ..........ಆಚರಿಷ್ಯತಿ–ಅವಳು ನನ್ನನ್ನು ಬಿಡ-ಬಹುದು ಮತ್ತು ತನ್ನ ಜಾತಿಗೆ ತಕ್ಕಂತೆ ವರ್ತಿಸುವದಿಲ್ಲ ಎಂದು ಆಶಿಸುವೆ. **ಅಪಿ ನಾಮ**–ಅಪಿ ಶಬ್ದದ ಮುಂದೆ ನಾಮ ಶಬ್ದ ಬಂದರೆ, ಆಶೆ, ನಿರೀಕ್ಷಣೆ *(hope, expectation)* ಸೂಚಕ ಅರ್ಥ ವಾಗುತ್ತದೆ. ಉದಾ:– ಅಪಿ ನಾಮ ರಾಮಭದ್ರಃ ಪುನರಪಿ ಇದಂ ವನಂ ಅಲಂಕುರ್ಯಾತ್। ಅಪಿ ನಾಮ ತಯೋಃ ಏಷಃ ಪಾಣಿಗ್ರಹಃ ಅಭಿಮತಃ ಸ್ಯಾತ್ । ಚಾಂಡಾಲದಾರಿಕಾ–ಚಾಂಡಾಲಕನ್ಯೆ, ಚಾಂಡಾಲಸ್ಯ ದಾರಿಕಾ (ಷ. ತ. ಸ.) ಆಲೋಕ್ಯ–ಆ+ಲೋಕ್ (೧. ಆ) ಧಾತುವಿನ ಲ್ಯಬಂತಾವ್ಯಯ. ಉತ್ಪನ್ನಕರುಣಾ–ದಯೆ ಹುಟ್ಟಿದವಳಾಗಿ, ಉತ್ಪನ್ನಾ ಕರುಣಾ ಯಸ್ಯಾಂ ಸಾ (ಬ.ಸ.) ಮೋಚಯೇತ್ ಮುಚ್ (೬. ಉ) ಧಾತುವಿನ ಪ್ರಯೋಜಕದ ವಿಧ್ಯರ್ಥ ತೃ. ಪು. ಏ. ವ. ಜಾತಿ-ಸದೃಶಂ–ಜಾತಿಗೆ ಉಚಿತವಾದ ಜಾತ್ಯಾ ಸದೃಶಂ(ತೃ.ತ) (ಅಪಿನಾಮ) ಭವಿಷ್ಯಂತಿ ......ಪುಣ್ಯಾನಿ–ಇಂತಹ ಪುಣ್ಯ ನನಗೆ ಇದೆ ಎಂದು ನಿರೀಕ್ಷಿಸುವೆ. ಹಿಂದಿನ ವಾಕ್ಯದಲ್ಲಿಯ ಅಪಿ ನಾಮ ಎಂಬುದನ್ನು ಈ ವಾಕ್ಯಕ್ಕೂ ತೆಗೆದು-ಕೊಳ್ಳಬೇಕು. ಏವಂ ವಿಧಾನಿ–ಇಂತಹ ಈ ಕುತ್ತಿನಿಂದ ಪಾರಾಗುವಂತಹ ಇವಳ ಕೈಯಿಂದ ಮೋಚನ ಹೊಂದುವಂತಹ. ಬಹುಶಃ ಪೂರ್ವ ಜನ್ಮದಲ್ಲಿ (ಪುಂಡರೀಕನಜನ್ಮ) ಮಾಡಿದ ತಪಸ್ಸಿನ ಪುಣ್ಯಪ್ರಭಾವದಿಂದ ಈಗ ಸದ್ಯಕ್ಕೆ ಬಂದ ವಿಪತ್ತಿನಿಂದ ಪಾರಾಗಬಹುದೆಂದು ನನ್ನ ನಿರೀಕ್ಷೆ *(expectation)* ಇದೆ. ಭವಿಷ್ಯಂತಿ–ಭೂ. (೧. ಪ) ಧಾತುವಿನ ದ್ವಿ. ಭ. ತೃ. ಪು. ಬ. ವ. ನಿಮೇಷಮಾತ್ರಂ–ಒಂದು ಕ್ಷಣಕಾಲ ಕೂಡ ನಿಮೇಷಃ–ಒಮ್ಮೆ ಕಣ್ಣು ಪಿಳಕಿಸಲು ಹಿಡಿಯುವ ಅವಧಿ. ನಿಮೇಷ ಏವ ನಿಮೇಷಮಾತ್ರಂ (ನಿತ್ಯ ಸ.) ಇತ್ಯೇವ–ಈ ರೀತಿ ಕೃತಾಶಂಸಂ–ಆಶೆಮಾಡಿದ, ನಿರೀಕ್ಷಿಸಿದ, ಇಚ್ಛಿಸಿದ. ಕೃತಾ ಆಶಂಸಾ ಯೇನ ಸಃ (ಬ. ಸ.) ತಂ । ಸಃ ದೂರತಃ ಸ್ಥಿತ್ವಾ ಪ್ರಣಮ್ಯ 'ಏಷಸ ಮಯಾ ಪ್ರಾಪ್ತ ಇತಿ' ತಸ್ಯೈ ದುರ್ದರ್ಶನಾಕಾರ ವೇಷಾಯೈ ದಾರಿಕಾಯೈ ಪ್ರದರ್ಶಿತವಾನ್ ಎಂಬುದಾಗಿ ಅನ್ವಯ ಪ್ರಣಮ್ಯ–ನಮಸ್ಕಾರಮಾಡಿ ಪ್ರ+ನಮ್ (೧. ಪ) ಧಾತುವಿನ ಲ್ಯಬಂತಾ-ವ್ಯಯ. ದಾರಿಕಾಯೈ–ಹುಡಿಗಿಗೆ. ಚಾಂಡಾಲಕನ್ಯೆಗೆ. **ಪ್ರದರ್ಶಿತವಾನ್**–ತೋರಿಸಿದನು. ಪ್ರ+ದೃಶ್ (೧. ಪ) ಧಾತುವಿನ ಪ್ರಯೋಜಕರೂಪದ

ಕರ್ತರಿ ಭೂ. ಧಾ. ವಿ. (ಪು) ಪ್ರ. ಏ. ವ. ದುರ್ದರ್ಶನಾಕಾರವೇಷಾಯೈ– ಇದು ದಾರಿಕಾಯೈ(ಚಾಂಡಾಲಕನ್ಯೆಗೆ) ವಿಶೇಷಣ ನೋಡಲಸಹ್ಯವಾದ ರೂಪ ಹಾಗೂವೇಷಗಳುಳ್ಳ. ದುರ್ದರ್ಶನ–ಕುರೂಪ ಆಕಾರಃ ವೇಷಃ ಚ ಆಕಾರವೇಷೌ (ದ್ವಂದ್ವ) ದುರ್ದರ್ಶನೌ ಆಕಾರವೇಷೌ ಯಸ್ಯಾಃ ಸಾ (ಬ. ಸ.) ತಸ್ಯೈ । ಪ್ರಹೃಷ್ಟತರವದನಾ–ಹೆಚ್ಚು ಹರ್ಷಗೊಂಡ ಮುಖವುಳ್ಳವಳು. ಪ್ರಹೃಷ್ಟತರಂ ವದನಂ ಯಸ್ಯಾಃ ಸಾ (ಬ. ಸ.) ಶೋಭನಂ ಕೃತಂ–ಒಳ್ಳೆಯ ಕೆಲಸ ಮಾಡಿದೆ, ಅಥವಾ ಚೆನ್ನಾಗಿ ಮಾಡಿದೆ. ತತ್ಕರಾತ್–ಆ ಚಾಂಡಾಲನ ಕೈಯಿಂದ ಸ್ವಕರಯುಗೇನ–ತನ್ನ ಎರಡೂ ಕೈಗಳಿಂದ ಕರಯೋಃ ಯುಗಂ ಕರಯುಗಂ (ಷ. ತ. ಸ.) ಸ್ವಸ್ಯ ಕರಯುಗಂ (ಷ. ತ. ಸ.) ಯುಗಂ– ಜೋಡಿ. *Pair* ಆಃ ಪುತ್ರಕ–ಮಗನೇ, ಮಗೂ, ಬಾಳಾ. ಸಣ್ಣ ಮಗನಿಗೆ ಪುತ್ರಕ ಎಂಬ ಹೆಸರು. ಪುತ್ರಃ–ಮಗ. ಪುತ್ರಕಃ–ಚಿಕ್ಕಮಗ. 'ಪುನ್ನಾಮ್ನೋ ನರಕಾದ್ಯಸ್ಮಾತ್ ತ್ರಾಯತೇ ಪಿತರಂ ಸುತಃ । ತಸ್ಮಾತ್ ಪುತ್ರ ಇತಿ ಪ್ರೋಕ್ತಃ ಸ್ವಯಮೇವ ಸ್ವಯಂಭುವಾ' ಪುನ್ನಾಮ ನರಕದಿಂದ ತಂದೆಯನ್ನು ರಕ್ಷಿಸುವದರಿಂದ ಮಗನಿಗೆ ಪುತ್ರ ಎಂಬ ಹೆಸರು. ವ್ಯಪನಯಾಮಿ– ಕಳೆಯುವೆನು. ಕಾಮಚಾರಿತ್ವಂ–ಸ್ವಚ್ಛಂದವೃತ್ತಿ ಸ್ವೇಚ್ಛಾಚಾರ ಕಾಮೇನ ಚರತಿ ಇತಿ ಕಾಮಚಾರೀ (ಉಪ. ತ.) ತಸ್ಯ ಭಾವಃ (ತದ್ಧಿತ).

**ಸಾಲು ೨೦.** ಇತಿ ಅಭಿದಧಾನಾ ಏವಸಾ ಮಾಂ ಮಹಾ........ ರಥೈಃ ಸಮಂ ದಾರುಪಂಜರೇ ನಿಕ್ಷಿಪ್ಯ, ಅರ್ಗಲಿತದ್ವಾರಾ ಅವದತ್ ಹೀಗೆ ಅನ್ವಯಕ್ರಮ ಇಟ್ಟುಕೊಳ್ಳಬೇಕು. ಉಳಿದ ಸಪ್ತಮ್ಯಂತ ಪದಗಳು ದಾರು ಪಂಜರೇ ಶಬ್ದಕ್ಕೆ ವಿಶೇಷಣಗಳಾಗಿವೆ. ಅಭಿದಧಾನಾ ಏವ—ನುಡಿಯುತ್ತಲೇ ಅಭಿ+ಧಾ (೩.ಉ) ಧಾತುವಿನ ವ. ಧಾ. ವಿ. (ಸ್ತ್ರೀ) ಪ್ರ. ಏ. ವ. ಮಹಾ.... ರಥೈಃ ಸಮಂ—ಮಹಾಶ್ವೇತೆಯನ್ನು ಕಾಣಬೇಕೆಂಬ ಇಚ್ಛೆ ಸಹಿತವಾಗಿ. ಗಿಳಿಗೆ ಮಹಾಶ್ವೇತೆಯನ್ನು ಕಾಣಬೇಕೆಂಬ ಇಚ್ಛೆ ಇದ್ದಿತು. ಆದ್ದರಿಂದ ಗಿಳಿಯನ್ನು ಬಂಧಿಸಿದುದರಿಂದ ಅದರ ಇಚ್ಛೆಯನ್ನೂ ಬಂಧಿಸದಂತಾಯಿತು. ಮಹಾಶ್ವೇತಾಯಾಃ ಅವಲೋಕನಂ (ಷ. ತ. ಸ.) ತಸ್ಯ ಮನೋರಥಾಃ (ಷ. ತ. ಸ.)ತೈಃ ಸಮಂ—ಕೂಡಿಯೇ. ಸಾರ್ಧಂ *with* ದಾರು ಪಂಜರೇ– ಕಟ್ಟಿಗೆಯಿಂದ ಮಾಡಿದ ಪಂಜರದಲ್ಲಿ, ದಾರುಣಃ ಪಂಜರಂ (ಷ. ತ. ಸ.) ತಸ್ಮಿನ್ । ಅರ್ಗಲಿತದ್ವಾರಾ—ಬಾಗಿಲ ಮುಚ್ಚಿ. ಅರ್ಗಲಿತಂ ದ್ವಾರಂ ಯಯಾ, ಸಾ (ಬ. ಸ.) ಅರ್ಗಲಿತ (ವಿ)— ಅಗಳೀ ಹಾಕಿದ. ದಾರು

ಪಂಜರವನ್ನು ವರ್ಣಿಸುವ ನಾಲ್ಕು ವಿಶೇಷಣ ಪದಗಳಿವೆ. ಧಾವಮಾನ.... ನೀತೇ—ಓಡುವ ಚಾಂಡಾಲ ಬಾಲಕರಿಂದ ತರಲ್ಪಟ್ಟ. ಧಾವಮಾನಾಃ ಚಂಡಾಲ ಬಾಲಕಾಃ (ಷ. ತ. ಸ.) ಧಾ....ಕಾಃ (ಕ. ಸ.) ತೈಃ ಉಪನೀತಂ (ತೃ. ತ.) ತಸ್ಮಿನ್। ಅರ್ಧಾಶ್ಯಾನ...ನದ್ಧೇ— ಅರ್ಧ ಒಣಗಿದ. ತುಂಬ ಕೂದಲುಳ್ಳ, ಮತ್ತು ಕೆಟ್ಟ ನಾರುವ ಆಕಳ ತೊಗಲಿನ ಪಟ್ಟಿಯಿಂದ ಬಿಗಿಯಲ್ಪಟ್ಟ ಆಶ್ಯಾನ—ಒಣಗಿದ. ಆಶ್ಯೈ(೧.ಆ) ಧಾತುವಿನ ಕರ್ಮಣಿ ಭೂ. ಧಾ. ವಿ. ಲೋಮಶ –ಕೂದಲುಳ್ಳ, ದುರ್ಗಂಧಿ –ಕೆಟ್ಟ ವಾಸನೆಯುಳ್ಳ. ಕೆಟ್ಟ ನಾರುವ ಗೋಚರ್ಮ—ಆಕಳ ತೊಗಲು. ವಧ್ರಿಕಾ—ತೊಗಲಿನ ಪಟ್ಟಿ. ಅವನದ್ಧ—ಬಿಗಿಯಲ್ಪಟ್ಟ. ಗೋಃ ಚರ್ಮ ಗೋಚರ್ಮ (ಷ. ತ. ಸ.) ದುಷ್ಟಃ ಗಂಧಃ ದುರ್ಗಂಧಃ (ಕ. ಸ.) ದುರ್ಗಂಧಃ ಅಸ್ಯ ಅಸ್ತಿ ಇತಿ ದುರ್ಗಂಧಿ (ತದ್ಧಿತ), ದುರ್ಗಂಧಿ ಗೋಚರ್ಮ ದು....ರ್ಮ (ಕ. ಸ.) ಅರ್ಧಾಶ್ಯಾನಂ(ಅರ್ಧಂ ಆಶ್ಯಾನಂ) ಲೋಮಶಂ ಚ ದುರ್ಗಂಧಿ ಗೋಚರ್ಮ ಅರ್ಧಾ.. .... ಚರ್ಮ (ಕ. ಸ.)। ತಸ್ಯ ವಧ್ರಿಕಾ (ಷ. ತ. ಸ.) ತಯಾ ಅವನದ್ಧಂ (ತೃ. ತ.)। ತಸ್ಮಿನ್। ದೃಢಬದ್ಧ.... ಪಾತ್ರೇ—ಕಟ್ಟಿಗೆಯ ಕುಡಿಯುವ ಪಾತ್ರೆ ಹಾಗೂ ಊಟದ ಪಾತ್ರೆಯನ್ನು ಬಿಗಿಯಾಗಿ ಕಟ್ಟಿದ. ಪಾನಂ ಚ ಭೋಜನಂ ಚ ಪಾನಭೋಜನೇ (ದ್ವ. ಸ.) ತಯೋಃ ಪಾತ್ರೇ (ಷ.ತ.ಸ.) ಪಾ........ ತ್ರೇ (ಷ. ತ. ಸ.)। ದೃಢಂ ಬದ್ಧೇ ದೃಢಬದ್ಧೇ (ಕ. ಸ.)। ದಾರುಣಾ ನಿರ್ಮಿತೇ ದಾರುಮಯೇ (ತದ್ಧಿತ)। ದೃಢಬದ್ಧೇ ದಾರುಮಯೇ ಪಾನಭೋಜನ ಪಾತ್ರೇ ಯಸ್ಮಿನ್ ತತ್ (ಬ. ಸ.) ತಸ್ಮಿನ್। ದೃಢಬದ್ಧ— ಗಟ್ಟಿಯಾಗಿ ಕಟ್ಟಿದ ದಾರು (ನ)—ಕಟ್ಟಿಗೆ. ಊಟ ಮಾಡಲು ಒಂದು ಹಾಗೂ ಕುಡಿಯಲು ಒಂದು, ಹೀಗೆ ಎರಡು ಕಟ್ಟಿಗೆಯ ಪಾತ್ರೆಗಳು ಪಂಜರದಲ್ಲಿದ್ದವು. ಮನಾಗು....ದ್ವಾರೇ— ಸ್ವಲ್ಪ ತೆರೆದ ಬಾಗಿಲವುಳ್ಳ. ಮನಾಕ್ (ಅ)—ಸ್ವಲ್ಪ. ಉದ್ಘಾಟಿತ—ತೆರೆಯಲ್ಪಟ್ಟ. ಮನಾಕ್ ಉದ್ಘಾಟಿತಂ ದ್ವಾರಂ ಯಸ್ಯ ತತ್ (ಬ. ಸ.) ತಸ್ಮಿನ್। ಉದ್ಘಾಟಿತ— ಉತ್+ಘಟ್ (೧೦. ಉ.) ಧಾತುವಿನ ಕರ್ಮಣಿ ಭೂ. ಧಾ. ವಿ. ನಿರ್ವೃತಃ— ಸುಖಿ ಸುಖವುಳ್ಳವ. ಯಥಾ.... ತಿಷ್ಠ–ನಿನಗೆ ಸೌಖ್ಯವಾಗುವಂತೆ ಇಲ್ಲಿ ಈಗ ಇರು. ಇತಿ ಅಭಿದಾಯ–ಹೀಗೆ ನುಡಿದು ತೂಷ್ಣೀಂ–ಸುಮ್ಮನೆ. **ಅಸ್ಥಾತ್**— ನಿಂತಳು. ಸ್ಥಾ (೧. ಪ.) ಧಾತುವಿನ ತೃತೀಯ ಭೂತಕಾಲ (*Aorist*) ತೃ. ಪು. ಏ. ವ.

**ಸಾಲು ೨೪.** ತಥಾ ಸಂರುದ್ಧಃ— ಆ ರೀತಿಯಾಗಿ ಪಂಜರದಲ್ಲಿ ಬಂಧಿಸಲ್ಪಟ್ಟ (ನಾನು) ಮಹಾಸಂಕಟೇ – ದೊಡ್ಡ ಸಂಕಟದಲ್ಲಿ. ದೊಡ್ಡ ವಿಪತ್ತಿನಲ್ಲಿ. ಸಂಕಟಂ – ವಿಪತ್ತು. ಮಹತ್ ಸಂಕಟಂ ಮಹಾಸಂಕಟಂ (ಕ. ಸ) ತಸ್ಮಿನ್। ಆವೇದಿತಾತ್ಮಾವಸ್ಥಃ—ನನ್ನ ಅವಸ್ಥೆಯನ್ನು ಹೇಳಿದ. ಆತ್ಮನಃ ಅವಸ್ಥಾ ಆತ್ಮಾವಸ್ಥಾ (ಷ. ತ. ಸ.) ಆವೇದಿತಾ ಆತ್ಮಾವಸ್ಥಾ ಯೇನ ಸಃ (ಬ. ಸ.) ಶಿರಸಾ ಪ್ರಣಿಪತ್ಯ —ತಲೆಬಾಗಿ ನಮಸ್ಕರಿಸಿ ಅರ್ಥಾತ್ ಸಾಷ್ಟಾಂಗ ನಮಸ್ಕಾರ ಮಾಡಿ. ಯದಿ ಏನಾಂ ಮುಕ್ತ್ಯೈ ವಿಜ್ಞಾಪಯಾಮಿ— ಇವಳನ್ನು ಬಂಧವಿಮೋಚನೆಗೆ ಬೇಡಿಕೊಂಡರೆ. ಈ ಪಂಜರದಿಂದ ನನ್ನನ್ನು ಬಿಟ್ಟುಬಿಡಲು ಬಿನ್ನಯಿಸಿಕೊಂಡರೆ.

**ಪುಟ ೨೭** ಯಃ ಏವಮೇ.... ಭವತಿ—ಯಾವ (ಮಾತನಾಡುವ) ಗುಣವು (ಈ ವರೆಗೆ) ದೋಷಭಾವ ತಾಳಿ ನನ್ನ ಬಂಧನಕ್ಕೆ ಕಾರಣವಾಗಿದೆಯೋ ಅದೇ ಬೆಳೆಯುವದು. ಎಂದರೆ, ಗಿಳಿಗೆ ಮನುಷ್ಯರಂತೆ ಮಾತನಾಡಲು ಬರುತ್ತಿತ್ತು. ಇದು ಅದರಲ್ಲಿದ್ದ ಹೆಚ್ಚಿನ ಗುಣ. ಆದರೆ ಈ ಗುಣದಿಂದ ಲಾಭವಾಗದೆ ಹಾನಿಯೇ ತಟ್ಟಿತು. ಏಕೆಂದರೆ, ಮಾತನಾಡಲು ಬರುತ್ತದೆ ಎಂದು ತಿಳಿದು ಆ ಚಾಂಡಾಲ ಕನ್ಯೆ ವೈಶಂಪಾಯನ ಗಿಳಿಯನ್ನು ಬಂಧಿಸಿದ್ದಳು. ಆದ್ದರಿಂದ ಅವಳೊಡನೆ ಮಾತನಾಡುವದರಿಂದ ಲಾಭವಾಗದು. ಪ್ರತ್ಯುತ ದೋಷ ಅಭಿವೃದ್ಧಿ ಹೊಂದುವದು. ದೋಷಸ್ಯ ಭಾವಃ ದೋಷತಾ (ತದ್ಧಿತ) ಆಪದ್ಯ—ಹೊಂದಿ. ಆ+ಪದ್ (ಳ. ಆ.) ಧಾತುವಿನ ಲ್ಯಬಂತಾವ್ಯಯ, ಸಂವರ್ಧಿತಃ ಭವತಿ—ಬೆಳಿಸಲ್ಪಟ್ಟದ್ದು ಆಗುವದು. ಸಂವರ್ಧಿತ-ಸಂ+ವೃಧ್ (೧. ಆ) ಧಾ. ಪ್ರಯೋಜಕ ಕರ್ಮಣಿ ಭೂ.ಧಾ.ವಿ. (ಪು) ಪ್ರ. ಏ. ವ. ಜಲ್ಪತಿ—ಬಡಬಡಿಸುತ್ತದೆ. ಅಹಂ ಅನಯಾ ಗ್ರಾಹಿತಃ— ನಾನು ಇವಳಿಂದ ಹಿಡಿಯಿಸಲ್ಪಟ್ಟಿದ್ದೇನೆ. ಇಯಂ ಮಾಂ ಗ್ರಾಹಿತವತೀ (ಕರ್ತರಿ) **ಗ್ರಾಹಿತಃ**—ಗ್ರಹ್ (೯. ಪ.) ಧಾತುವಿನ ಪ್ರಯೋಜಕರೂಪದ ಕರ್ಮಣಿ ಭೂ. ಧಾ. ವಿ. (ಪು) ಪ್ರ. ಏ. ವ. ಮದೀಯ—ನನ್ನ. ಮದೀಯಯಾ ಬಂಧನಪೀಡಯಾ ಅಸ್ಯಾಃ ಕಾ ಪೀಡಾ—ನನಗಾಗುವ ಬಂಧನ ದುಃಖದಿಂದ ಇವಳಿಗಾವ ದುಃಖವಾಗುವದು ? ನಾಹಂ.... ಮುಂ. ಏಕೆಂದರೆ ನಾನು ಇವಳಿಗೆ ಯಾವ ರೀತಿಯಿಂದಲೂ ಆಪ್ತನಲ್ಲ. ಅಥ—ರೆ. *If*. ಮೌನ ತಾಳಿ ಕುಳಿತರೆ; ಬೇರೆ ಉದಾ—ಅಥ ಕೌತುಕಂ, ಆವೇದಯಾಮಿ। ಅಥ ಮರಣಂ ಅವಶ್ಯಮೇವ ಜಂತೋಃ। ತತ್ರಾಪಿ— ಆ ಸಂದರ್ಭದಲ್ಲಿಯೂ

ಮೌನ ತಾಳಿ ಕುಳಿತರೂ, ಆಗ. ಶಾಠ್ಯ ಪ್ರಕುಪಿತಾ—ನನ್ನ ಠಕ್ಕತನದಿಂದ ಸಿಟ್ಟಿಗೆದ್ದ. ಶಾಠ್ಯೇನ ಪ್ರಕುಪಿತಾ (ತೃ. ತ.) ಕದಾಚಿತ್—ಒಂದು ವೇಳೆ. ಅತಃ ಅಪಿ ಅಧಿಕಾಂ ಅವಸ್ಥಾಂ ಮಾಂ ಪ್ರಾಪಯತಿ—ನನ್ನನ್ನು ಇದಕ್ಕೂ ಹೆಚ್ಚಿನ ದುಃಖಾವಸ್ಥೆಗೆ ಗುರಿಮಾಡುವಳು. (ಪ್ರಯೋಜಕ) ಅಹಂ ಅತೋಽಪ್ಯಧಿಕಾಮವಸ್ಥಾಂ ಪ್ರಾಪ್ನೋಮಿ (ಮೂಲವಾಕ್ಯ) ಪ್ರಾಪಯತಿ—ಪ್ರ+ಆಪ್ (೫. ಪ.) ಧಾತುವಿನ ಪ್ರಯೋಜಕ ರೂಪದ ವ.ತೃ.ಪು.ಏ.ವ. ಹಿ—ಏಕೆಂದರೆ. ನೃಶಂಸತಮಾ—ಅತ್ಯಂತ ನೀಚ. ಅಥವಾ—ಅಥವಾ, *or rather* **ವರಂ.... ನ**—ಲೇಸು. *better than*. ಉದಾ—ವರಮೇಕೋ ಗುಣೀಪುತ್ರೋ ನ ಚ ಮೂರ್ಖಶತಾನ್ಯಪಿ। ವರಮದ್ಯ ಕಪೋತಂ ನ ಪುನಃ ಶ್ವಃ ಮಯೂರಃ ವರಮಿತೋ.... ತಾ—ಚಾಂಡಾಲರೊಡನೆ ಮಾತುಕಥೆಯಾಡುವದಕ್ಕಿಂತ' ಇದಕ್ಕೂ ಹೆಚ್ಚಿನ ಸಂಕಟಕ್ಕೀಡಾಗುವದು ಲೇಸು. ಇತೋಽಪಿ—ಇದಕ್ಕಿಂತಲೂ ಅಧಿಕಂ ಉಪಜಾತಂ—ಹೆಚ್ಚಾಗಿ ಉಂಟಾದ (ಸಂಕಟ) ಚಾಂಡಾಲೈಃ ಸಹ ವಿಮಿಶ್ರಿತಾವಾಕ್—ಅಂತ್ಯಜರೊಡನೆ ಮಾತುಕಥೆ, ವಾಚ್ (ಸ್ತ್ರೀ) ಮಾತು, ನಾನು ಮಾತನಾಡುವದು, ಅದಕ್ಕೆ ಅವರು ಉತ್ತರ ಕೊಡುವದು. ಮರಳಿ ನನ್ನ ಮಾತು, ಅವರ ಉತ್ತರ ಹೀಗೆ ಚಾಂಡಾಲರೊಡನೆ ಬೆರೆತ (*mixed*) ಮಾತುಕಥೆ ಅಪಿಚ—ಮೇಲಾಗಿ *moreover*. ಮೌನ ತಾಳಿದರೆ ಆಗುವ ಲಾಭಗಳ ನಿರೂಪಣೆ ಇನ್ನು ಮುಂದೆ ಇದೆ. ಗೃಹೀತಮೌನಂ—ಮೌನ ತಾಳಿದ (ನನ್ನನ್ನು), ಗೃಹೀತಂ ಮೌನಂ ಯೇನ ಸಃ (ಬ. ಸ.) ತಂ। ನಿರ್ವೇದಃ—ತಿರಸ್ಕಾರ, ನಿರಾಶೆ, ನಾನು ಅವಳೊಡನೆ ಮಾತನಾಡದೆ ಇರುವದರಿಂದ ಅವಳಿಗೆ ನನ್ನ ಬಗ್ಗೆ ತಿರಸ್ಕಾರ ಹುಟ್ಟುವದು. ಅದರಿಂದ ನಿರಾಶಳಾಗಿ ನನ್ನನ್ನು ಬಿಡುವ ಸಂಭವವಿದೆ. ವದಂಸ್ತುಪುನಃ=ವದನ್+ತು ಪುನಃ—ಆದರೆ ಮಾತನಾಡಿದರೆ ಮಾತ್ರ. ಅನಯಾ ಅಹಂ ನ ಮೋಕ್ಷವ್ಯಃ ಏವ—ಇಯಂ ಮಾಂ ನ ಮುಂಚೇತ್ ಏವ (ಕರ್ತರಿ) ಇವಳಿಂದ ನಾನು ಬಿಡುಗಡೆ ಹೊಂದಲಿಕ್ಕಿಲ್ಲ. (ಬಿಡಲ್ಪಡಲಿಕ್ಕಿಲ್ಲ). ಅಪಿ ಚ—ಮೇಲಾಗಿ. ಇದಲ್ಲದೆ ಅಯಂ ಸರ್ವಃ ಏವ ಅನಿಯತೇಂದ್ರಿಯತ್ವಸ್ಯ ಏವ ದೋಷಃ— ಇದೆಲ್ಲವೂ ಇಂದ್ರಿಯಗಳನ್ನು ನಿಗ್ರಹಿಸದೆ ಇರುವದರ ದೋಷವು ಎಂದರೆ ಅದರ ದುಷ್ಟ ಪರಿಣಾಮವು. ಅನಿಯತೇಂದ್ರಿಯತ್ವಸ್ಯ—ಇಂದ್ರಿಯ ನಿಗ್ರಹಿಸದೆ ಇರುವದರ ನ ನಿಯತಾನಿ ಅನಿಯತಾನಿ (ನ. ತ.) ಅನಿಯತಾನಿ ಇಂದ್ರಿಯಾಣಿ ಯಸ್ಯ ಅನಿಯತೇಂದ್ರಿಯಃ (ಬ. ಸ.)। ತಸ್ಯ ಭಾವಃ (ತದ್ಧಿತ)। ತಸ್ಯ

'ಅಯಂ ಸರ್ವಃ' ಇದೆಲ್ಲವೂ, ಎಂದರೆ ಯಾವದು ಎಂಬುದನ್ನು ಮೊದಲು ಹೇಳಿದೆ. ದಿವ್ಯಲೋಕಭ್ರಂಶಃ–ಸ್ವರ್ಗಲೋಕದಿಂದ ಜಾರಿಬಿದ್ದುದು. ಎಂದರೆ ಸ್ವರ್ಗಲೋಕ ಬಿಟ್ಟು ಪುಂಡರೀಕನಾಗಿ ಹುಟ್ಟಿದುದು ದಿವ್ಯಃ ಲೋಕಃ ದಿವ್ಯಲೋಕಃ (ಕ. ಸ.) ತಸ್ಮಾತ್ ಭ್ರಂಶಃ (ಷ. ತ. ಸ.) ಮರ್ತ್ಯಲೋಕೇ ಜನ್ಮ–ಸಾವಿಗೀಡಾದ ಮನುಷ್ಯರ ಲೋಕದಲ್ಲಿ ಹುಟ್ಟುವದು ಎಂದರೆ ವೈಶಂಪಾಯನನಾಗಿ ಭೂಮಿಯ ಮೇಲೆ ಹುಟ್ಟಿದುದು. ಮರ್ತ್ಯಾನಾಂ ಲೋಕಃ ಮರ್ತ್ಯಲೋಕಃ (ಷ. ತ. ಸ.) ತಸ್ಮಿನ್ । ತಿರ್ಯಗ್ಜಾತೌ. ಪಶುಪಕ್ಷಿಗಳ ಕೆಳದರ್ಜೆಯ ಜಾತಿಯಲ್ಲಿ ಸೇರುವದು (ಬೀಳುವದು). ಎಂದರೆ ಗಿಳಿಯಾಗಿ ಹುಟ್ಟುವದು. ತಿರ್ಯಚಾಮ್ ಜಾತಿಃ ತಿರ್ಯಗ್ಜಾತಿಃ (ಷ.ತ.ಸ.) । ತಸ್ಯಾಂ। ಚಾಂಡಾಲ ಹಸ್ತಗಮನ–ಚಾಂಡಾಲರ ಕೈ ಸೇರುವದು ಎಂದರೆ ಚಾಂಡಾಲನ ಬಲೆಯಲ್ಲಿ ಸಿಕ್ಕು ಅವನ ಕೈವಶವಾದುದು. ಪಂಜರ ಬಂಧದುಃಖಂ–ಪಂಜರದಲ್ಲಿ ಬಂಧಿಸಲ್ಪಟ್ಟ ದುಃಖ, ಪಂಜರೇ ಬಂಧಃ (ಸ. ತ.) ತಸ್ಯ ದುಃಖಂ (ಷ. ತ. ಸ.) । ತತ್ ಏಕಯಾ ವಾಚಾಕಿಂ–ಒಂದು ಮಾತಿನಿಂದೇನು ಪ್ರಯೋಜನ ? ವಾಗಿಂದ್ರಿಯವೊಂದನ್ನೇ ನಿಯಂತ್ರಿಸಿದರೆ ಆಗುವದೇನು ? ಕಿಂ-ಏನು ಪ್ರಯೋಜನ. ಏನು ಉಪಯೋಗ. ಈ ಅರ್ಥವಲ್ಲಿ ಅದು ತೃತೀಯಾ ವಿಭಕ್ತಿ ತೆಗೆದುಕೊಳ್ಳುತ್ತದೆ. ಉದಾ—ಕ್ಷಾಂತಿಶ್ಚೇತ್ ವಚನೇನ ಕಿಂ। ಸುಕವಿತಾ ಯದ್ಯಸ್ತಿ ರಾಜ್ಯೇನ ಕಿಂ। ಸರ್ವೇಂದ್ರಿಯಾಣಿ–ಎಲ್ಲ ಇಂದ್ರಿಯಗಳನ್ನು ಸರ್ವಾಣಿ ಇಂದ್ರಿಯಾಣಿ(ಕ.ಸ)। ನಿಯಾಮಯಾಮಿ–ನಿಗ್ರಹಿಸುವೆ. ನಿ+ಯಮ್ (೧. ಪ.) ಧಾ. ಪ್ರಯೋಜಕ ವ.ತೃ ಪು.ಏ.ವ.

**ಸಾಲು ೧೨** ಆಲಪ್ಯಮಾನಃ, ಆತರ್ಜ್ಯಮಾನಃ, ಆಹನ್ಯಮಾನಃ, ತ್ರುಟ್ಯಮಾನಃ— ಇವು ಅನುಕ್ರಮವಾಗಿ ಆ+ಲಪ್ (೧ ಪ), ಆ+ತರ್ಜ್ (೧ ಪ), ಆ+ಹನ್ (೨ ಪ), ತ್ರುಟ್ (೬ ಪ) ಧಾತುಗಳ ಕರ್ಮಣಿ ವ. ಧಾ. ವಿ. (ಪು.) ಪ್ರ. ಏ. ವ. ಮಾತನಾಡಲ್ಪಟ್ಟರೂ, ಬೆದರಿಸಲ್ಪಟ್ಟರೂ, ಹೊಡೆಯಲ್ಪಟ್ಟರೂ, ಕೊಯ್ಯಲ್ಪಟ್ಟರೂ (ಅರ್ಥ ಅನುಕ್ರಮವಾಗಿಯೇ ಕೊಡಲಾಗಿದೆ.) ಬಲಾತ್ – ಬಲಾತ್ಕಾರದಿಂದ. ಉಚ್ಚೈಃ — ಗಟ್ಟಿಯಾಗಿ. ಚೀತ್ಕಾರಃ— ಚೀರುವದು ಉಪನೀತೇಪಿ— ತರಲ್ಪಟ್ಟರೂ ಉಪ+ನೀ (೧ ಪ) ಧಾತುವಿನ ಕರ್ಮಣಿ ಭೂ. ಧಾ. ವಿ. (ನ) ಸ ಏ. ವ. **ಪಾನಾಶನಂ**—ಪೇಯ ಹಾಗೂ ಭಕ್ಷ್ಯ ವಸ್ತುಗಳು ಪಾನಂ ಚ ಅಶನಂ ಚ ಏತಯೋಃ ಸಮಾಹಾರಃ ಪಾನಾಶನಂ ( ಸಮಾಹಾರ ದ್ವಂದ್ವ ). ಇಲ್ಲಿ ಸತಿ

ಸಪ್ತಮೀ ಪ್ರಯೋಗ ಇದ್ದುದರಿಂದ ಪಾನಾಶನೇ ಎಂದು ಸಪ್ತಮೀ ವಿಭಕ್ತಿ ಉಪಯೋಗಿಸಲಾಗಿದೆ. **ಅನಶನೇನ**—ಉಪವಾಸದಿಂದ ತಿನ್ನದಲಿ ನ ಅಶನಂ ಅನಶನಂ ( ನ. ತ. ) ತೇನ। **ಅತ್ಯವಾಹಯಂ**— ಕಳೆದೆನು. ಅತಿ+ವಹ್ (೧ ಪ) ಧಾತುವಿನ ಪ್ರಯೋಜಕ ರೂಪದ ಪ್ರ. ಭೂ. ಪ್ರ. ಪು. ಏ. ವ. ಅನ್ಯೇದ್ಯುಃ— ಮರುದಿನ. ಅಶನಕಾಲೇ ಅತಿಕ್ರಾಮತಿ ( ಸತಿ ) ಮೇ ಹೃದಯೇ ದೂಯಮಾನೇ (ಸತಿ)—ಇವು ಸತಿ ಸಪ್ತಮಿಯ ಪ್ರಯೋಗ ಗಳು. ಊಟದ ವೇಳೆ ಮೀರುತ್ತಿರಲು, ಮತ್ತು ನನ್ನ ಹೃದಯ ಕಳವಳಗೊಳ್ಳು ತ್ತಿರಲು **ದೂಯಮಾನೇ** ದು (೫ ಪ.) ಧಾತುವಿನ ಕರ್ಮಣಿ ವ. ಧಾ. ವಿ. (ನ) ಸ. ಏ. ವ. ಸಾ ಫಲಾನಿ ಪಾನೀಯಂ ಚ ಉಪನೀಯ ಮಾಂ ಅವೋ ಚತ್—ಎಂಬುದು ವಾಕ್ಯದ ಮುಖ್ಯಭಾಗ. ಅವಳು ಹಣ್ಣು ಮತ್ತು ನೀರು ತಂದು ನನಗೆ ಮಾತನಾಡಿದಳು. **ಅವೋಚತ್**—ವಚ್ (೨ ಪ) ಧಾತುವಿನ ತೃ. ಭೂ. ತೃ. ಪು. ಏ. ವ. ಸ್ವಪಾಣಿನಾ ತನ್ನ ಕೈಯಿಂದ ಸ್ವಸ್ಯ ಪಾಣಿಃ (ಷ. ತ. ಸ.) ತೇನ। ಸುರಭಿಶೀತಲಂ—ಸುವಾಸನೆಯುಳ್ಳ ಹಾಗೂ ತಂಪಾದ ಸುರಭಿ ಶೀತಲಂ ಚ ( ಕ. ಸ. ) ಅಪ್ರತಿಪನ್ನ ತದುಪಭೋಗಂ (ಮಾಂ)— ಅವುಗಳನ್ನು ಸೇವಿಸದೆ ಇರುವ ನನಗೆ ತೇಷಾಂ ಉಪಭೋಗಃ (ಷ. ತ. ಸ.)। ನ ಪ್ರತಿಪ್ರನ್ನಃ ಅಪ್ರತಿಪನ್ನಃ ( ನ. ತ. ) ಅಪ್ರತಿಪನ್ನಃ ತದುಪಭೋಗಃ ಯೇನ ಸಃ (ಬ. ಸ.) ತಂ। ಆರೋಪಿತಲೋಚನಾ— ( ನನ್ನಲ್ಲಿ ) ದೃಷ್ಟಿ ಯನ್ನಿಟ್ಟವಳು ಆರೋಪಿತೇ ಲೋಚನೇ ಯಯಾ ಸಾ (ಬ. ಸ.) ಸ್ನಿಹ್ಯಂತೀ ಇವ—ಪ್ರೀತಿಸುವಳೋ ಎನ್ನುವಂತೆ ಸ್ನಿಹ್ಯಂತೀ—ಸ್ನಿಹ್ (೪ ಪ) ಧಾತು ವಿನ ವ. ಧಾ. ವಿ. (ಸ್ತ್ರೀ) ಪ್ರ. ಏ. ವ.

**ಸಾಲು ೧೮** ಕ್ಷುತ್ಪಿಪಾಸಾರ್ದಿತಾನಾಂ— ಹಸಿವೆ ನೀರಡಿಕೆಗಳಿಂದ ಬಳಲಿದ. ಕ್ಷುತ್ ಚ ಪಿಪಾಸಾ ಚ ಕ್ಷುತ್ಪಿಪಾಸೇ (ದ್ವಂದ್ವ) ತಾಭ್ಯಾಂ ಅರ್ದಿತಾಃ (ತೃ. ತ.) ತೇಷಾಂ ನಿರ್ವಿಚಾರಚಿತ್ತವೃತ್ತೀನಾಂ— ಯೋಗ್ಯಾ ಯೋಗ್ಯ ವಿಚಾರವಿಲ್ಲದ ಮನಸ್ಸುಳ್ಳ. ನಿರ್ಗತಃ ವಿಚಾರಃ ಯಸ್ಯಾಃ ಸಾ ನಿರ್ವಿ ಚಾರಾ ( ಬ. ಸ. ) ನಿರ್ವಿಚಾರಾ ಚಿತ್ತವೃತ್ತಿಃ (ಚಿತ್ತಸ್ಯ ವೃತ್ತಿಃ ಷ. ತ. ಸ.) ಯೇಷಾಂ ತೇ (ಬ. ಸ.) ತೇಷಾಂ ವಿಚಾರ—ಸಾರಾಸಾರ ವಿಚಾರ, ಯೋಗ್ಯಾ ಯೋಗ್ಯ ವಿಚಾರ. ಉಪನತೇಷು.... .... ನ ಸಂಭವತ್ಯೇವ— ತಂದ ಆಹಾರ ಸ್ವೀಕರಿಸದೆ ಇರುವುದು ಕೂಡುವದೇ ಇಲ್ಲ. ಅನುಪಯೋಗಃ ಉಪಯೋಗಿ

ಸದೆ ಇರುವುದು. ಸೇವಿಸದೆ ಇರುವದು. ನ ಉಪಯೋಗಃ— ( ನ. ತ. ) ತತ್+ಯದಿ+ ಏವಂ ತ....ಧಃ ವಿಧಃ– ಏವಂ ವಿಧಃ— ಈ ಬಗೆಯ (ನೀನು) ಭೋಜ್ಯಾಭೋಜ್ಯ ವಿವೇಕಕಾರೀ— ತಿನ್ನಲು ಯೋಗ್ಯವಾದ ಪದಾರ್ಥ ಯಾವದು ? ತಿನ್ನಲು ಅಯೋಗ್ಯವಾದುದು ಯಾವದು ? ಎಂದು ಪದಾರ್ಥ ಗಳನ್ನು ಬಿಂಗಡಿಸುವವ ವಿವೇಕಃ– ವಿವೇಕಬುದ್ಧಿ *distinction discrimination*. ಭೋಜ್ಯಂ ಚ ಅಭೋಜ್ಯಂ ಚ ಭೋಜ್ಯಾಭೋಜ್ಯೇ (ದ್ವಂದ್ವ) ತಯೋಃ ವಿವೇಕಃ (ಷ. ತ. ಸ.) ತಂ ಕರೋತಿ ಇತಿ ( ಉಪ. ತ.) ಪೂರ್ವಜಾತಿಸ್ಮರಃ— ಹಿಂದಿನ ಜಾತಿಯ ಸ್ಮರಣೆಯುಳ್ಳವ ಪೂರ್ವಾ ಜಾತಿಃ ಪೂರ್ವಜಾತಿಃ (ಕ. ಸ.) ತಸ್ಯಾಃ ಸ್ಮರಃ ಯಸ್ಯ ಸಃ (ಬ. ಸ.) ತಾಂ ಸ್ಮರತಿ ಇತಿ ( ಉಪ. ತ. ) ಭಕ್ಷ್ಯಾ...................... ತೇ — ತಿನ್ನಲು ಯೋಗ್ಯ ಹಾಗೂ ಅಯೋಗ್ಯ ವಸ್ತುಗಳನ್ನು ವಿಂಗಡಿಸುವ ವಿವೇಕಬುದ್ಧಿಯಿಲ್ಲದ ಕೆಳದರ್ಜೆಯ ಜಾತಿಯಲ್ಲಿರುವ ನಿನಗೆ. ಭಕ್ಷ್ಯಾ ಭಕ್ಷ್ಯಯೋಃ (ಷ. ತ. ಸ.) ವಿವೇಕೇನ ರಹಿತಾ (ತೃ. ತ.) ತಸ್ಯಾಂ। ತಿರ್ಯಗ್ ಜಾತೌ ವರ್ತಮಾನಸ್ಯ ತೇ ಅಭಕ್ಷ್ಯಂ ಕಿಂ, ಯತ್ ( ಯೇನ ಕಾರಣೇನ ) ನ ಭಕ್ಷಯಸಿ. ಎಂದು ಅನ್ವಯ. ಕೆಳದರ್ಜೆಯ ಜಾತಿಯಲ್ಲಿ ಹುಟ್ಟಿದ (ಇರುವ) ನಿನಗೆ ತಿನ್ನಲು ಅಯೋಗ್ಯವಾದ ವಸ್ತುವಾದರೂ ಯಾವದು ? ಏಕೆಂದರೆ ನೀನು ( ನಾವು ಕೊಟ್ಟದ್ದನ್ನು ) ತಿನ್ನುವದಿಲ್ಲ. ಯೇನ ಚ ಉತ್ಕೃಷ್ಟತವಾಂ— ಯೇನ ( ತ್ವಯಾ ) ಯಾವ ನಿನ್ನಿಂದ ಉಚ್ಚಜಾತಿಯನ್ನು ಪಡೆದ ಯಾವ ನೀನು ಕೆಳದರ್ಜೆಯ ಜಾತಿಯಲ್ಲಿ ಹುಟ್ಟುವಂತಹ ( ಕೆಟ್ಟ ) ಕೆಲಸವನ್ನು ಮಾಡಿದೆಯೋ ಅದೇ ಆ ನೀನು ( ಈಗ ) ಬೇರೆ ಏನನ್ನು ಯೋಚಿಸುವೆ. ಅಪರಂ ಕಿಂ ವಿಚಾರಯಸಿ— ಬೇರೆ ಏನನ್ನು ಯೋಚಿಸುವೆ ? ವಿಚಾರಯಸಿ— ವಿ+ಚರ್ (೧ ಪ) ಧಾತುವಿನ ಪ್ರಯೋಜಕ ರೂಪದ ವ. ದ್ವಿ. ಪು. ಏ. ವ. ಪ್ರಥಮಮೇವ— ಮೊದಲೇ. ಆತ್ಮಾ ವಿವೇಕೇ ನ ಸ್ಥಾಪಿತಃ (ಕರ್ಮಣಿ)— ಆತ್ಮಾನಂ ವಿವೇಕೇ ನ ಸ್ಥಾಪಿತವಾನ್ (ಕರ್ತರಿ) ನಿನ್ನನ್ನು ನೀನು ಮೊದಲು ವಿವೇಕ ಮಾರ್ಗದಲ್ಲಿ ಇರಿಸಲಿಲ್ಲ. ಸ್ಥಾಪಿತಃ— ಸ್ಥಾ ( ೧ ಪ ) ಧಾತುವಿನ ಪ್ರಯೋಜಕ ರೂಪದ ಕರ್ಮಣಿ ಭೂ. ಧಾ. ವಿ. (ಪು) ಪ್ರ. ಏ. ವ. ಅಧುನಾ — ಈಗ. ಸ್ವಕರ್ಮ — ನಿನ್ನ ಕೆಲಸ. ಉಪಾತ್ತ — ಬಂದ. ಜಾತಿ ಸದೃಶಂ — ಜಾತಿಗೆ ತಕ್ಕಂತೆ. ಆಚರತಃ ತೇ — ಆಚರಿಸುವ ನಿನಗೆ ಸ್ವಸ್ಯ

ಕರ್ಮ ಸ್ವಕರ್ಮ (ಷ. ತ. ಸ.) ತೇನ ಉಪಾತ್ತಾ (ತೃ. ತ.) ಸ್ವ ....... ತ್ತಾ ಜಾತಿಃ ಸ್ವ .... .... ಜಾತಿಃ ( ಕ. ಸ. ) ತಸ್ಯಾಃ ಸದೃಶಂ ( ಷ. ತ. ಸ. ) ಯೇಷಾಂ ನಿಯಮಃ ಅಸ್ತಿ – ಯಾರಿಗೆ ನಿಯಮವಿದೆಯೋ

**ಪುಟ ೨೮** ತೇಷಾಂ ಅಪಿ– ಅವರಿಗೂ ಕೂಡ. ಪ್ರಾಣಾನಾಂ ಸಂಧಾರಣಂ – ಪ್ರಾಣಧಾರಣೆ ಮಾಡುವದು, ಜೀವ ಉಳಿಸಿಕೊಳ್ಳುವದು, ಪ್ರಾಣ ಶಬ್ದವು ಯಾವಾಗಲೂ ಬ. ವ. ದಲ್ಲಿ ಉಪಯೋಗಿಸಲ್ಪಡುತ್ತದೆ. ಭಕ್ಷ್ಯಾಭಕ್ಷ್ಯ ವಸ್ತುಗಳ ನಿಯಮವನ್ನಿಟ್ಟುಕೊಂಡವರು ಕೂಡ, ಆಪತ್ಸಮಯದಲ್ಲಿ ನಿಷಿದ್ಧ ಪದಾರ್ಥಗಳನ್ನು ತಿಂದು ಪ್ರಾಣ ಉಳಿಸಕೊಳ್ಳಬಹುದೆಂದು ನಿಯಮವಿದೆ. ನೀನಂತೂ ಕೆಳದರ್ಜೆಯ ಗಿಳಿ ಎಂದ ಮೇಲೆ ಪ್ರಾಣಧಾರಣೆ ಮಾಡಲು ಏನೂ ವಿಚಾರ ಮಾಡದೆ ನೀನು ಈ ಹಣ್ಣು ಸ್ವೀಕರಿಸಬೇಕು. ಎಂದು ಆ ಚಾಂಡಾಲ ಕನ್ಯೆಯ ಭಾವ. ಕಿಂಪುನಃ ತ್ವಾದೃಶಸ್ಯ – ನಿನ್ನಂಥವನ ವಿಷಯವಾಗಿಯಂತೂ ಏನು ಹೇಳುವದು ತು. ಮಾ. ಚಾಣಕ್ಯೇನ ಆಹೂತಸ್ಯ ನಿರ್ದೋಷಸ್ಯ ಅಪಿ ಶಂಕಾ ಜಾಯತೇ ಕಿಂ ಪುನಃ ಸದೋಷಸ್ಯ। ನ ಚ ಈದೃಶಂ ಮುಂ.— ತಿನ್ನಲು ಅಯೋಗ್ಯವಾದ, ಪದಾರ್ಥವನ್ನೇ ನಾನು ತಂದಿಲ್ಲ ಎಂದು ಅವಳ ವಾದ. ಚಾಂಡಾಲಾಶನಶಂಕಾ–ಚಾಂಡಾಲರ ಆಹಾರ ತಿಂದ ಸಂಶಯ. ಆ ಸಂಶಯ ಹುಟ್ಟುವಂತಹ ಆಹಾರವನ್ನೇ ನಾನು ತಂದಿಲ್ಲ ಎಂದು ಹೇಳುತ್ತಾಳೆ. ಚಾಂಡಾಲಾನಾಂ ಅಶನಂ ( ಷ. ತ. ಸ.) ತಸ್ಯ ಶಂಕಾ (ಷ. ತ. ಸ.) । ಫಲಾನಿತು—ಹಣ್ಣುಗಳಾದರೆ ತು– ಆದರೆ. ಇದು ವಾಕ್ಯದ ಆರಂಭದಲ್ಲಿ ಬರುವದಿಲ್ಲ; ಕಿಂತು, ಪರಂತು—ಈ ಅವ್ಯಯಗಳು ಮಾತ್ರ ಯಾವಾಗಲೂ ವಾಕ್ಯದ ಆರಂಭದಲ್ಲಿಯೇ ಇರುತ್ತವೆ. ತತೋಪಿ – ಅವರಿಂದಲೂ ಕೂಡ ಚಾಂಡಾಲರಿಂದಲೂ. ಪ್ರತಿಗೃಹ್ಯಂತೇ + ಏವ = ಪ್ರತಿಗೃಹ್ಯಂತಯ್ + ಏವ = ಪ್ರತಿಗೃಹ್ಯಂತ ಏವ. ನಿಶ್ಚಯವಾಗಿ ಸ್ವೀಕರಿಸಲ್ಪಡುತ್ತವೆ. ಪಾನೀಯಂ – ನೀರು. ಚಾಂಡಾಲರ ಪಾತ್ರೆಯಿಂದ ನೆಲದ ಮೇಲೆ ಬಿದ್ದ ನೀರು, ಹಣ್ಣುಗಳನ್ನು ಬೇಕಾದವರಿಂದ ಪಡೆದು ತಿನ್ನಬಹುದು. ನೀರಾದರೂ ಶುದ್ಧವಾದುದು; ಹೊಲೆಯನ ಪಾತ್ರೆಯಿಂದ ನೆಲದ ಮೇಲೆ ಬಿದ್ದ ನೀರು ಸಹ ಶುದ್ಧ ಎಂದು ಶಾಸ್ತ್ರಬಲ್ಲವರು ಹೇಳುತ್ತಾರೆ. 'ನೀರು ಸ್ವಾಭಾವಿಕವಾಗಿ ಶುದ್ಧವು ಅದಕ್ಕೆ ಬೆಂಕಿ ತಗಲಿದರಂತೂ ( ಎಂದರೆ ಬಿಸಿನೀರು ) ಹೇಳುವದೇನು ?' ಎಂದು ಮುಂತಾಗಿ ವಚನಗಳಿವೆ. ತತ್ – ಆದ್ದರಿಂದ ಆತ್ಮಾನಂ – ನಿನ್ನನ್ನು – ಕ್ಷುಧಾ ಪಿಪಾಸಯಾ ವಾ – ಹಸಿವೆ ಇಲ್ಲವೆ

ನೀರಡಿಕೆಯಿಂದ ( ಕ್ಷುಧ್ ( ಸ್ತ್ರೀ) – ಹಸಿವೆ ) ಕಿಮರ್ಥಂ ಪಾತಯಸಿ –ಏಕೆ ಬಳಲಿಸುವೆ ? ಪಾತಯಸಿ – ಪತ್ (೧ ಪ). ಧಾತುವಿನ ಪ್ರಯೋಜಕ ರೂಪದ ವ. ದ್ವಿ. ಪು. ಏ. ವ. ಮುನಿಜನೋಚಿತಾನಿ– ಮುನಿಗಳಿಗೆ ಯೋಗ್ಯ ವಾದ. ಮುನಿಜನಸ್ಯ ಉಚಿತಾನಿ ( ಷ. ತ. ಸ. ) ವನಫಲಾನಿ – ಅಡವಿಯ ಹಣ್ಣುಗಳು. ವನಸ್ಯ ಫಲಾನಿ ( ಷ. ತ. ಸ. )

**ಸಾಲು ೭** ಚಾಂಡಾಲ ಜಾತ್ಯನುಚಿತೇನ— ಚಾಂಡಾಲ ಜಾತಿಗೆಸಲ್ಲದ ಚಾಂಡಾಲಾಂ ಜಾತಿಃ ಚಾಂಡಾಲಜಾತಿಃ ( ಷ. ತ. ಸ. ) ತಸ್ಯಾಃ ಅನುಚಿತಂ [ ನ ಉಚಿತಂ ಅನುಚಿತಂ ನ. ತ. ] ಚಾ.... ....ತಂ ( ಷ. ತ. ಸ. ) ತೇನ ವಚಸ್ (ನ)— ಮಾತು. ವಿಸ್ಮಿತಾಂತರಾತ್ಮಾ— ಆಶ್ಚರ್ಯಗೊಂಡ ಮನ ಸ್ಸುಳ್ಳ. ವಿಸ್ಮಿತಃ ಅಂತರಾತ್ಮಾ ಯಸ್ಯ ಸಃ (ಬ. ಸ.) ತಥಾ ಇತಿ–ಹಾಗೆಯೇ ಆಗಲಿ, ಒಳ್ಳೇದು ಪ್ರತಿಪದ್ಯ–ಒಪ್ಪಿ ಪ್ರತಿ + ಪದ್ ( ೪ ಆ ) ಧಾತುವಿನ ಲ್ಯಬಂತಾವ್ಯಯ. ಶಾಪನಿಘ್ನಃ'–ಶಾಪಾಯತ್ತಃ' ಟೀಕಾ. ಶಾಪೇ ನಿಘ್ನಃ( ಸ. ತ. ಸ.) ನಿಘ್ನ ಅಧೀನ [ ಅಧೀನ ವಾಚಕ ಶಬ್ದಗಳು ಸಪ್ತಮೀ ವಿಭಕ್ತಿ ತೆಗೆದು ಕೊಳ್ಳುತ್ತವೆ. ಉದಾ: —ತ್ವಯ್ಯಾಯತ್ತಂ,ಕೃಷಿಫಲಮಿತಿ'(ಮೇಘದೂತ ೧೬] ಶಾಪಾಧೀನನಾದುದರಿಂದ ಶಾಪಕ್ಕೆ ಒಳಪಟ್ಟಿದ್ದರಿಂದ *being under the influence of a curse*' ಘೃಣಾ— ತಿರಸ್ಕಾರ ಜುಗುಪ್ಸೆ. ಅರ್ಥಾತ್ ಇಲ್ಲಿ ಜೀವದ ಬಗ್ಗೆ ಇದ್ದ ತಿರಸ್ಕಾರ. ಜೀವಿತ ತೃಷ್ಣಯಾ— ಜೀವದ ಆಶೆ ಯಿಂದ ಜೀವಿತಸ್ಯ ತೃಷ್ಣಾ ಜೀವಿತ ತೃಷ್ಣಾ ( ಷ. ತ. ಸ. ) ತಯಾ । ಕ್ಷುತ್ಪಿ ಪಾಸೋಪಶಮಾಯ— ಹಸಿವೆ ಮತ್ತು ನೀರಡಿಕೆ ಶಾಂತಗೊಳಿಸಲು. ಕ್ಷುತ್ ಚ ಪಿಪಾಸಾ ಚ ಕ್ಷುತ್ಪಿಪಾಸೇ ( ದ್ವಂದ್ವ ) ತಯೋಃ ಉಪಶಮಃ ಕ್ಷುತ್ಪಿ ಪಾಸೋಪಶಮಃ (ಷ. ತ. ಸ. ) ತಸ್ಮೈ. ಅಶನ ಕ್ರಿಯಾಂ — ತಿನ್ನುವ ಕೆಲಸ. ಅಶನಸ್ಯ ಕ್ರಿಯಾ ಅಶನಕ್ರಿಯಾ (ಷ. ತ. ಸ.) ತಾಂ । ಅಂಗೀಕೃತ ವಾನ್— ಸ್ವೀಕರಿಸಿದೆನು. ಅಂಗೀ+ಕೃ ( ೮ ಉ ) ಧಾತುವಿನ ಕರ್ತರಿ ಭೂ. ಧಾ. ವಿ. ( ಪು ). ಪ್ರ. ಏ. ವ. ಅಶನಕ್ರಿಯಾಮಂಗೀಕೃತವಾನಸ್ಮಿ (ಕರ್ತರಿ)–(ಮಯಾ) ಅಶನಕ್ರಿಯಾ ಅಂಗೀಕೃತಾ ( ಕರ್ಮಣಿ ) ಮೌನಂ ತು—ಆದರೆ ಮೌನವನ್ನು. ನ ಅತ್ಯಾಕ್ಷಂ—ಬಿಡಲಿಲ್ಲ. **ಅತ್ಯಾಕ್ಷಂ**— ತ್ಯಜ್ (೧ ಪ.) ಧಾತುವಿನ ತೃತೀಯ ಭೂತಕಾಲ ಪ್ರ. ಪು. ಏ. ವ.

# EXERCISES.

೫. **ಅಭ್ಯಾಸಕ್ಕಾಗಿ ಪ್ರಶ್ನೆಗಳು:—**

೧. **ಭಾಷಾಂತರಿಸಿರಿ:—** (i) ಉತ್ಪನ್ನೋತ್ಪತನಸಾಮರ್ಥ್ಯಶ್ಚ.... .... ಅಗಚ್ಛಂ ( ಪುಟ ೨೮ ಸಾಲು ೩–೧೪ ) (ii) ಚಿರಾದಿವಚ .... .... ಅದ್ರಾಕ್ಷಂ ( ಪುಟ ೨೮ ಸಾಲು ೧೪–೧೯ ) (iii) ಇತ್ಯೇತಾನಿ.... ....ಅಗಚ್ಛತ್ . ( ಪು. ೨೫–೨೬ ಸಾಲು ೬ ಪೂರ್ಣ ) (iv) ಅಹಂ ತು.... .... ಅಸ್ಥಾತ್ (ಪುಟ ೨೬ ೨ನೇ ಪ್ಯಾರಾ). (v) ಕ್ಷುತ್ಪಿಪಾಸಾರ್ದಿತಾನಾಂ.... ....ದೋಷಃ (ಪುಟ ೨೭–ಸಾಲು ೧೮–೨೫)

೨. **ವಿಗ್ರಹಿಸಿ ಸಮಾಸಗಳ ಹೆಸರು ಹೇಳಿರಿ :—** ಶುಕರೂಪಧಾರಿಣಃ; ನಿರಾಗಸಾ; ಅಕಾಲಕ್ಷೇಪಕ್ಷಮಂ; ಕ್ರೂರಕರ್ಮಾ; ಜನ್ಮಾಂತರೇ; ಅಂತರಾತ್ಮಾ; ಕೃತಾಶಂಸಂ; ಪಾನಾಶನಂ; ಉನ್ಮುಕ್ತಾಧ್ವಶ್ರಮಕ್ಲಮಃ; ಪುಂಡರೀಕಹತಕ; ಅಭ್ಯರ್ಥನಾದೀನಂ; ಅನಶನೇನ.

೩. **ರೂಪ ಗುರುತಿಸಿರಿ:—**ಸಂವರ್ಧ್ಯಮಾನಃ; **ಅದ್ರಾಕ್ಷಂ**; ಅನುಭಾವಿತೇನ; ಉಕ್ತವಾನ್; ಪ್ರಾಪಯಾಮಿ; ಶೀರ್ಣ; ಪರಾಪತ್ಯ; ಕೃಥಾಃ ಅಭಿದಧಾನಃ; ಮೂರ್ಧ್ನಿ; ಅಸ್ಥಾತ್; ತ್ರುಟ್ಯಮಾನಃ;ಅತ್ಯವಾಹಯಂ;ಅವೋಚತ್; ಅಂಗೀಕೃತವಾನ್; ಅತ್ಯಾಕ್ಷಂ ।

೪. **ಲಘು ಟಿಪ್ಪಣಿ ಬರೆಯಿರಿ:—** ಪಕ್ವಣಃ; ಮ್ಲೇಚ್ಛಜಾತಿಃ; ಜಾತಿಸ್ಮರಃ ಮುನಿಃ; ಪ್ರತ್ಯವಾಯಃ; ಲೋಕಪಾಲಾಃ; ಪರಮಾಣುಃ;

೫. **ವಾಕ್ಯಗಳಲ್ಲಿ ಉಪಯೋಗಿಸಿರಿ :—** ಕೃತಂ; ಪ್ರ+ಭೂ; ಅಹೋ; ಧಿಕ್; ಅಪಿನಾಮ, ವರಂ ...ನ;

೬. **ಪ್ರಯೋಗ ಬದಲಿಸಿರಿ:—**(i) ಮಯಾದೂರಂ ಗಂತವ್ಯಮ್; (ii) ಪ್ರಥಮಮೇವ ಆತ್ಮಾ ವಿವೇಕೇ ನ ಸ್ಥಾಪಿತಃ । (iii) ಮುಂಚತು ಮಾಮಿದಾನೀಂ ಭದ್ರಮುಖಃ ।

೭. **ಸಂಧಿ ಬಿಡಿಸಿರಿ:—** ನಿಕುಂಜಸ್ಯೋಪರ್ಯಾತ್ಮಾನಂ । ತನ್ನಿಃತೋಸಿ । ಜಲ್ಪತೀತ್ಯೇವಾಹಮನಯಾ ।

# ಪದ್ಯ ವಿಭಾಗ

## ೧. ಪತಿವ್ರತಾ ಸಾವಿತ್ರೀ

೧. **ಕವಿ ಹಾಗೂ ಕಾವ್ಯ:**— ಈ ಪಾಠವನ್ನು ಮಹಾಭಾರತದ ವನಪರ್ವ ದೊಳಗಿಂದ ಆಯ್ದುಕೊಳ್ಳಲಾಗಿದೆ.

**ವ್ಯಾಸ:**—ಮಹಾಭಾರತದ ಕರ್ತೃ ವ್ಯಾಸರು. ಇವರ ತಂದೆ ಪರಾಶರರು ತಾಯಿ ಸತ್ಯವತೀದೇವಿ. ಇನ್ನೂ ಕನ್ಯಾವಸ್ಥೆಯಲ್ಲಿ ಇರುವಾಗ್ಗೆಯೇ ಸತ್ಯವತಿಯು ಒಂದು ದ್ವೀಪವಲ್ಲಿ ವ್ಯಾಸರನ್ನು ಹೆತ್ತಳಂತೆ. ಹುಟ್ಟಿದಾಗ ಮಗುವಿನ ಬಣ್ಣ ಕಪ್ಪು ಇದ್ದಿತು. ಹೀಗೆ ಮಗುವಿನ ಬಣ್ಣ ಕಪ್ಪು ಇದ್ದು, ಅದು ಒಂದು ದ್ವೀಪದಲ್ಲಿ ಹುಟ್ಟಿದ್ದರಿಂದ ಅದಕ್ಕೆ **ಕೃಷ್ಣದ್ವೈಪಾಯನ** ಎಂದು ಹೆಸರಿಡಲಾಯಿತು. ವ್ಯಾಸರು ಉಗ್ರತಪಸ್ವಿಗಳು ಎಂದು ಹೆಸರು ಪಡೆದಿದ್ದಾರೆ. ತಾಯಿಯ ಆಜ್ಞೆಯ ಮೇರೆಗೆ ಇವರು ಧೃತರಾಷ್ಟ್ರ, ಪಂಡು ಹಾಗೂ ವಿದುರರ ಜನ್ಮಕ್ಕೆ ಕಾರಣರಾದರಂತೆ. ಮಹಾಭಾರತವನ್ನು ಒರೆ ದವರು ಈ ಕೃಷ್ಣದ್ವೈಪಾಯನರೇ (ವ್ಯಾಸ) ಬ್ರಹ್ಮದೇವನಿಂದ ವರಪಡೆದು ಮಹಾಭಾರತ ( ಜಯ ) ಬರೆದರು. ಇವರು ಹೇಳುತ್ತ ಹೋದಹಾಗೆ ಗಣಪತಿಯು ಮಹಾಭಾರತವನ್ನು ಬರೆದನೆಂದು ಪ್ರತೀತಿ ಇದೆ. ಮಹಾಭಾರತ ವಲ್ಲದೆ ೧೮ ಉಪಪುರಾಣಗಳನ್ನೂ, ಬ್ರಹ್ಮಸೂತ್ರಗಳನ್ನೂ ಇವರೇ ಬರೆದರು. ಇವರು ಕಾಲಕ್ರಮದಲ್ಲಿ ಅಖಂಡವೇದರಾಶಿಯನ್ನು ಸುವ್ಯವಸ್ಥಿತಗೊಳಿಸಿದ್ದ ರಿಂದ ಇವರಿಗೆ **ವೇದವ್ಯಾಸ** ಎಂಬ ಹೆಸರು ಬಂದಿತು. ಮುಂದೆ ಜಗತ್ತಿನಲ್ಲಿ ಇವರು ವೇದವ್ಯಾಸ ಅಥವಾ ವ್ಯಾಸರೆಂದೇ ಪ್ರಸಿದ್ಧರಾದರು. ಬಾದರಾಯಣ ಎಂಬ ಮೂರನೆಯ ಹೆಸರೂ ಇವರಿಗೆ ಉಂಟು. ಇವರು ಪರಮಾತ್ಮನ ಅವ ತಾರ ಎಂದು ಆಸ್ತಿಕರ ನಂಬಿಗೆ.

**ಕಾಲ:**— ಐತಿಹಾಸಿಕ ದೃಷ್ಟಿಯಿಂದ ಮಹಾಭಾರತದ ಕಾಲವನ್ನು ಸ್ಥೂಲವಾಗಿ ಕ್ರಿ. ಶ. ಪೂ. ೧೦೦೦ ಎಂದು ಇಟ್ಟುಕೊಳ್ಳಬಹುದು.

**ಗ್ರಂಥದ ವಿಷಯ (*Contents*):**— ಮಹಾಭಾರತದಲ್ಲಿ ಕೌರವ ಪಾಂಡವರ ಕಥೆ ಚಿತ್ರಿಸಲ್ಪಟ್ಟಿದೆ. ಕುರುವಂಶದ ಧೃತರಾಷ್ಟ್ರ, ಪಂಡು ಎಂಬ

ರಾಜಪುತ್ರರಲ್ಲಿ ಧೃತರಾಷ್ಟ್ರನು ಹುಟ್ಟು ಕುರುಡನಾದ್ದರಿಂದ ಪಾಂಡುವೇ ಪಟ್ಟ ವೇರಿದನು. ಧೃತರಾಷ್ಟ್ರನ ೧೦೧ ಮಕ್ಕಳು ಕೌರವರೆಂದೂ, ಪಂಡುವಿನ ೫ ಮಕ್ಕಳು ಪಾಂಡವರೆಂದೂ ಪ್ರಸಿದ್ಧರಾದರು. ದಾಯಾದಿಗಳಾದ ಕೌರವ-ಪಾಂಡವರಲ್ಲಿ ದ್ವೇಷವು ಕಾಲಕ್ರಮದಿಂದ ಹೆಚ್ಚುತ್ತ ಹೋಯಿತು. ಪಾಂಡವರ ಪ್ರಾಬಲ್ಯವನ್ನು ಕಂಡು ಸಹನವಾಗದೇ ಮತ್ಸರಿಗಳಾದ ಕೌರವರು ಪಾಂಡವರ ರಾಜ್ಯವನ್ನು ಎತ್ತಿಹಾಕಬೇಕೆಂದು ಹೊಂಚುಹಾಕಿದರು. ಕೊನೆಗೆ ಜೂಜಿನಲ್ಲಿ ಸೋಲಿಸಿ ಅವರ ರಾಜ್ಯವನ್ನು ಸೆಳೆದುಕೊಂಡು ಅವರನ್ನು ೧೨ ವರುಷ ವನವಾಸ ಹಾಗೂ ೧ ವರುಷ ಅಜ್ಞಾತವಾಸಕ್ಕೆ ಅಟ್ಟಿದರು. ೧೩ ವರುಷದ ಅವಧಿ ಮುಗಿದ ನಂತರ ರಾಜ್ಯಮರಳಿ ಕೊಡಬೇಕೆಂದು ಪಾಂಡವರು ಕೌರವರನ್ನು ಅನೇಕ ಸಲ ಕೇಳಿದರು. ಆದರೆ ರಾಜ್ಯ ದೊರೆಯಲಿಲ್ಲ. ರಾಜ್ಯವೇಕೆ, ೫ ಹಳ್ಳಿಗಳನ್ನು ಕೂಡ ಕೊಡಲು ಕೌರವರು ನಿರಾಕರಿಸುವರು. ಹೀಗಾಗಿ ಅನಿವಾರ್ಯವಾಗಿ ಯುದ್ಧ ಜರುಗಿತು. ಯುದ್ಧದಲ್ಲಿ ಕೌರವರು ಸೋತರು ಹಾಗೂ ಪಾಂಡವರು ವಿಜಯಶಾಲಿಗಳಾದರು. ಪಾಂಡವರಲ್ಲಿ ಹಿರಿಯನಾದ ಯುಧಿಷ್ಠಿರನು ಪಟ್ಟವೇರಿದನು.

ಮಹಾಭಾರತದ ಕಥೆಯನ್ನು ಸ್ಥೂಲವಾಗಿ ಕೆಳಗಿನ ಶ್ಲೋಕದಲ್ಲಿ ಸಂಗ್ರಹಿಸಲಾಗಿದೆ.

ಆದೌ ಪಾಂಡವಧಾರ್ತರಾಷ್ಟ್ರಜನನಂ ಲಾಕ್ಷಾಗೃಹೇ ದಾಹನಂ
ದ್ಯೂತೇ ಶ್ರೀಹರಣಂ ವನೇವಿಹರಣಂ ಮತ್ಸ್ಯಾಲಯೇ ವರ್ಧನಂ ।
ಲೀಲಾಗೋಗ್ರಹಣಂ ರಣೇವಿತರಣಂ ಸಂಧಿಕ್ರಿಯಾಜೃಂಭಣಂ
ಭೀಷ್ಮದ್ರೋಣ ಸುಯೋಧನಾದಿಮಥನಂ ಹ್ಯೇತನ್ಮಹಾಭಾರತಮ್ ॥

ಮಹಾಭಾರತದಲ್ಲಿ (೧) ಆದಿಪರ್ವ (೨) ಸಭಾಪರ್ವ (೩) ವನಪರ್ವ (೪) ವಿರಾಟಪರ್ವ (೫) ಉದ್ಯೋಗಪರ್ವ (೬) ಭೀಷ್ಮಪರ್ವ (೭) ದ್ರೋಣಪರ್ವ (೮) ಕರ್ಣಪರ್ವ (೯) ಶಲ್ಯಪರ್ವ (೧೦) ಸೌಪ್ತಿಕಪರ್ವ (೧೧) ಸ್ತ್ರೀಪರ್ವ (೧೨) ಶಾಂತಿಪರ್ವ (೧೩) ಅನುಶಾಸನಪರ್ವ (೧೪) ಅಶ್ವಮೇಧ ಪರ್ವ (೧೫) ಆಶ್ರಮ-ವಾಸಿಕಪರ್ವ (೧೬) ಮೌಸಲಪರ್ವ (೧೭) ಮಹಾಪ್ರಸ್ಥಾನಪರ್ವ (೧೮) ಸ್ವರ್ಗಾರೋಹಣ ಪರ್ವ ಎಂಬ ೧೮ ಪರ್ವಗಳಿವೆ. ಇವಲ್ಲದೆ ಹರಿವಂಶ ಎಂಬುದೂ ಮಹಾಭಾರತದ ಭಾಗವೆಂದು ಹೇಳಲಾಗುತ್ತದೆ. ಆದರೆ ಇದು ಪ್ರಕ್ಷಿಪ್ತ ಭಾಗವೆಂದು ಕೆಲವರ

ಮಹಾಭಾರತದಲ್ಲಿ ಒಟ್ಟು ೧ ಲಕ್ಷ ಶ್ಲೋಕಗಳಿವೆ.

ಮಹಾಭಾರತದಲ್ಲಿ ಒಂದೇ ಕಥೆಯನ್ನು ಹೇಳದೆ ಅದಕ್ಕೆ ಪೋಷಕವಾಗಿ ಹಾಸುಹೊಕ್ಕಾಗಿ ಹೆಣೆದುಕೊಂಡಿರುವ ಹಲವು ಉಪಕಥೆಗಳೂ ಉಪಾಖ್ಯಾನಗಳೂ ಬಂಧಿವೆ. ಧರ್ಮ, ರಾಜನೀತಿ ಮುಂತಾದ ಜಟಿಲ ವಿಷಯಗಳ ಬಗ್ಗೆ ಅಲ್ಲಲ್ಲಿ ಉಪದೇಶಗಳೂ ಚರ್ಚೆಗಳೂ ಕಂಡುಬರುತ್ತವೆ. ನೀತಿಬೋಧೆ, ತತ್ವಬೋಧೆಗಳೂ ಉಂಟು. ಭಗವದ್ಗೀತೆ ಹಾಗೂ ವಿಷ್ಣು ಸಹಸ್ರನಾಮ ಸ್ತೋತ್ರಗಳು ಮಹಾಭಾರತದ ಉತ್ಕೃಷ್ಟ ಭಾಗಗಳು. ಹೀಗೆ ಮಹಾಭಾರತದಲ್ಲಿ ಅನೇಕ ವಿಷಯಗಳಿದ್ದರೂ ಮೂಲಕಥೆಗೆ ಎಲ್ಲಿಯೂ ಕುಂದು ಉಂಟಾಗಿಲ್ಲ. ಮೇಲಾಗಿ ಇದರಲ್ಲಿ ಬರುವ ಪಾತ್ರಗಳಾದರೂ ತುಂಬಾ ಜೀವ ಕಳೆಯಿಂದ ತುಂಬಿದ ಗುಣಗಳ ಆದರ್ಶವಾದ ಸಜೀವ ಪಾತ್ರಗಳು. ಮಹಾಭಾರತದ ಶೈಲಿ ಸರಲವೂ ಸುಂದರವೂ ಇದೆ. ಉದ್ದುದ್ದ ಸಮಾಸಗಳಿಲ್ಲ. ಸಣ್ಣ ಸಣ್ಣ ಸುಲಭ ವಾಕ್ಯಗಳಲ್ಲಿ ಅರ್ಥಗರ್ಭಿತವಾದ ಮಾತುಗಳನ್ನು ಹೇಳಲಾಗುತ್ತದೆ. ನಿರೂಪಿಸುವ ವಿಷಯ ಕಥೆಯೇ ಇರಲಿ, ವರ್ಣನೆಯೇ ಇರಲಿ, ನೀತಿತತ್ವವೇ ಇರಲಿ, ಅದನ್ನು ವಿವರಿಸುವ ಕ್ರಮ ನಿಜವಾಗಿಯೂ ಮೋಹಕವಾಗಿರುತ್ತದೆ. ವಿಷಯ ಪ್ರತಿಪಾದನೆ ನಿರರ್ಗಲವಾಗಿ ಸಾಗುತ್ತದೆ.

**ಗ್ರಂಥದ ಮಹಿಮೆ** :— ಮಹಾಭಾರತದ ಮಹಿಮೆ ನಿಜವಾಗಿಯೂ ಅಗಾಧವಾದುದು. ಪ್ರಪಂಚದ ಎಲ್ಲ ವಿಷಯಗಳನ್ನೊಳಗೊಂಡ ಈ ಮಹಾಭಾರತವು ಹಿಂದೂ ಜನರ ಪರಮ ಪವಿತ್ರ ಗ್ರಂಥವಾಗಿದೆ. ೫ನೆಯ ವೇದವೆಂದು ಗೌರವಿಸಲ್ಪಡುತ್ತದೆ. ಇದರಲ್ಲಿ ಇದ್ದುದನ್ನೇ ಬೇರೆಡೆಯಲ್ಲಿ ಹೇಳಿದೆಯೆಂದೂ, ಇದರಲ್ಲಿ ಇಲ್ಲದೆ ಇದ್ದುದು ಬೇರೆ ಎಲ್ಲಿಯೂ ಇಲ್ಲವೆಂದು ಇದರ ಮಹಿಮೆಯನ್ನು ಕೊಂಡಾಡಲಾಗಿದೆ. (ತು. ಮಾ. ಯದಿಹಾಸ್ತಿ ತದನ್ಯತ್ರ ಯನ್ನೇ ಹಾಸ್ತಿ ನ ಕುತ್ರಚಿತ್) ಹಿಂದೆ ಒಮ್ಮೆ ಎಲ್ಲ ದೇವತೆಗಳೂ ಒಂದೆಡೆ ಕೂಡಿ ಭಾರತ ಹಾಗೂ ನಾಲ್ಕು ವೇದಗಳನ್ನು ತೂಗಿ ನೋಡಿದರಂತೆ. ಆಗ ಭಾರತವು ವೇದಗಳಿಗಿಂತ ಭಾರವಾಗಿ ತೋರಿತು. ಕೇವಲ ಒಜ್ಜೆಯ ದೃಷ್ಟಿಯಿಂದಲ್ಲದೆ ಮಹತ್ವ (ಘನತೆ–*greatness*) ದ ದೃಷ್ಟಿಯಿಂದಲೂ ಅದು ನಾಲ್ಕು ವೇದಗಳನ್ನು ಮಿಕ್ಕಿತಂತೆ. ಹೀಗಾಗಿ ಇದಕ್ಕೆ ಮಹಾಭಾರತ ಎಂದು ಹೆಸರು ಬಂದಿತು. (ಮಹತ್ತ್ವಾತ್ ಭಾರವತ್ತ್ವಾಚ್ಚ ಮಹಾಭಾರತ ಮುಚ್ಯತೇ)

ಮನುಷ್ಯನಿಗೆ ಅವಶ್ಯವಾಗಿರುವ ಎಲ್ಲ ವಿಷಯಗಳ (ಐಹಿಕ ಹಾಗೂ ಪಾರಮಾರ್ಥಿಕ) ವಿವೇಚನೆ ಹಾಗೂ ವಿವರಣೆ ಮಹಾಭಾರತದಲ್ಲಿದೆ. ಹೀಗೆ

ಎಲ್ಲ ವಿಷಯಗಳ ಜ್ಞಾನದಿಂದೊಡಗೂಡಿದ ಇಂತಹ ಅಗಾಧ ಗ್ರಂಥವನ್ನು ರಚಿಸಿದ ವ್ಯಾಸರು ತುಂಬಾ ಪ್ರತಿಭಾವಂತರೇ ಸರಿ. ವ್ಯಾಸೋಚ್ಛಿಷ್ಟಂ ಜಗತ್ಸರ್ವಂ ' ಎಂಬ ಉಕ್ತಿ ನಿಜವಾಗಿ ವ್ಯಾಸರಿಗೆ ಅನ್ವರ್ಥಕವಾಗಿದೆ.

**ಕಥಾಸಂದರ್ಭ:—** ವನಪರ್ವದಲ್ಲಿ ಮುಖ್ಯವಾಗಿ, ಪಾಂಡವರು ೧೨ ವರ್ಷ ವನವಾಸವನ್ನು ಹೇಗೆ ಕಳೆದರೆಂಬುದುನ್ನು ನಿರೂಪಿಸಲಾಗಿದೆ.

ಪಾಂಡವರು ಕಾಮ್ಯಕವನದಲ್ಲಿರುತ್ತಿರುವಾಗ ಮಾರ್ಕಂಡೇಯ ಮಹರ್ಷಿಗಳು ಅವರೆಡೆಗೆ ಬಂದರು. ಆಗ ಪಾಂಡವರು ಅವರನ್ನು ಬಹು ಆದರ ಪೂರ್ವಕವಾಗಿ ಸತ್ಕರಿಸಿ ಅವರ ಬಾಯಿಂದ ಅನೇಕ ಪವಿತ್ರ ಕಥೆಗಳನ್ನು ಕೇಳಲಪೇಕ್ಷಿಸಿದರು. ಮಾರ್ಕಂಡೇಯರಾದರೂ ಇದಕ್ಕೆ ಸಂತೋಷದಿಂದ ಒಪ್ಪಿಕೊಂಡು, ಪುಣ್ಯ ಕಥೆ ಹೇಳುತ್ತ, ನೀತಿ ತತ್ವಗಳನ್ನು ಬೋಧಿಸುತ್ತ ಪಾಂಡವರಿಗುಂಟಾದ ಕ್ಲೇಶವನ್ನು ದೂರ ಮಾಡಿದರು. ಹೀಗಿರುವಾಗ, ಒಮ್ಮೆ ಧರ್ಮರಾಜನು ಅವರಿಗೆ ' ಸ್ವಾಮೀ, ನಾನು ನನಗೋಸ್ಕರ, ಇಲ್ಲವೆ ರಾಜ್ಯ ಕಳೆದುಕೊಂಡ ಬಗ್ಗೆ, ಇಲ್ಲವೆ ತಮ್ಮಂದಿರಿಗಾಗಿ ಶೋಕಪಡುವದಿಲ್ಲ. ಆದರೆ ಈ ಪತಿವ್ರತೆಯಾದ ದ್ರೌಪದಿಯು ಅನೇಕ ಸಂಕಷ್ಟಗಳಿಗೆ ಈಡಾಗಬೇಕಾಯಿತೆಂದು ನಾನು ವ್ಯಸನ ಪಡುತ್ತಿದ್ದೇನೆ. ದ್ರೌಪದಿಯಂತೆ ದುಃಖಪಟ್ಟ ಸ್ತ್ರೀಯನ್ನು ನೀವು ಈ ಮೊದಲು ಎಲ್ಲಿಯಾದರೂ ಕಂಡುದು ಇಲ್ಲವೆ ಕೇಳಿದುದು ಉಂಟೇ ? ' ಎಂದು ಪ್ರಶ್ನೆಮಾಡಿದನು. ಅದಕ್ಕೆ ಮಾರ್ಕಂಡೇಯರು ಉತ್ತರರೂಪವಾಗಿ ಪತಿವ್ರತಾಮಾಹಾತ್ಮ್ಯ ಪರ್ವವೆಂದು ಹೆಸರಾದ ಸಾವಿತ್ರ್ಯು ಪಾಖ್ಯಾನವನ್ನು ವಿವರಿಸಿದರು. ಆ ಸಾವಿತ್ರಿಯ ಕಥೆಯು ೭ ಅಧ್ಯಾಯಗಳನ್ನೊಳಗೊಂಡಿದೆ. ಅವುಗಳಲ್ಲಿ ಮಹತ್ತ್ವವೂ ಮನೋಹರವೂ ಆದ ೫ನೇ ಅಧ್ಯಾಯದ ಮೊದಲಿನ ೬೧ ಶ್ಲೋಕಗಳನ್ನು ಮಾತ್ರ ಪಠ್ಯಪುಸ್ತಕದಲ್ಲಿ ಆಯ್ದುಕೊಳ್ಳಲಾಗಿದೆ.

**ಸಾವಿತ್ರಿಯ ಕಥೆ ಹಾಗೂ ಪಾಠದ ಸಾರಾಂಶ:—**

ಸಾವಿತ್ರಿಯು ಅಶ್ವಪತಿರಾಜನ ಮಗಳು. ಸಾವಿತ್ರೀದೇವಿಯ ಅನುಗ್ರಹದಿಂದ ಹುಟ್ಟಿದ್ದರಿಂದ ಇವಳಿಗೆ ಸಾವಿತ್ರಿಯೆಂದು ಹೆಸರಿಡಲಾಯಿತು. ತಂದೆಯ ಅನುಮತಿಯಿಂದ ಇವಳು ಸತ್ಯವಾನನೆಂಬ ಗಂಡನನ್ನು ತಾನೇ ಹುಡುಕಿಕೊಂಡಳು. ಸತ್ಯವಾನನು ಅರಣ್ಯವಾಸಿಯಾದ ಕುರುಡನಾದ ಮಗನು. ನಾರದನು ಇವಳಿಗೆ ಸತ್ಯವಾನನು ಒಂದು ವರ್ಷ

ದಲ್ಲಿಯೇ ಸಾಯುವನೆಂದು ಹೇಳಿದ್ದರೂ ಇವಳು ಅವನನ್ನೇ ಆರಿಸಿದಳು. ಮುಂದೆ ಆತನನ್ನು ಮದುವೆಯಾಗಿ ವನದಲ್ಲಿ ಅವನ ಸಂಗಡ ಇರಹತ್ತಿದಳು. ಅವನನ್ನು ಅವಳು ಒಂದು ಕ್ಷಣ ಸಹ ಅಗಲುತ್ತಿರಲಿಲ್ಲ. ಅವನು ಸಾಯುವ ಮೊದಲು, ಮೂರುದಿನ ಅವಳು ಉಪವಾಸದಿಂದಿದ್ದಳು. ಅವನ ಮರಣವು ತೀರ ಸಮೀಪಿಸಿದಾಗ ಒಂದು ದಿನ ಆತನು ಕಟ್ಟಿಗೆಯನ್ನು ತರಬೇಕೆಂದು ಅರಣ್ಯಕ್ಕೆ ತೆರಳಿದನು. ಆಗ ಸಾವಿತ್ರಿಯು ಅವನನ್ನು ಹಿಂಬಾಲಿಸಿದಳು ಕಟ್ಟಿಗೆಯನ್ನು ಕಡಿಯುವಾಗ ಬೆವೆತು ತಲೆಶೂಲಿಯಿಂದ ಬಳಲಹತ್ತಿದನು. ಆಗ ಸಾವಿತ್ರಿಯು ಅವನ ತಲೆಯನ್ನು ತನ್ನ ತೊಡೆಯಮೇಲಿಟ್ಟುಕೊಂಡು ಕುಳಿತಳು. ಮುಂದೆ ತುಸು ಹೊತ್ತಿನಲ್ಲಿಯೇ ಬದಿಯಲ್ಲಿ ನಿಂತ ಯಮನನ್ನು ನೋಡಿದಳು. ಯಮನು ಸತ್ಯವಾನನ ಜೀವವನ್ನು ಒಯ್ಯಲಿಕ್ಕೆ ಬಂದಿದ್ದನು. ಸಾವಿತ್ರಿಯು ಯಮನನ್ನು ಹಿಂಬಾಲಿಸಿದಳು. ಹಾದಿಯಲ್ಲಿ ಅವನ ಸಂಗಡ ವಿನಯದಿಂದ ಮಾತನಾಡಿ ಆತನ ಮನ ಒಲಿಸಿ ಸತ್ತ ಗಂಡನ ಪ್ರಾಣವನ್ನು ಉಳಿಸಿ ಯಮನಿಂದ ಮತ್ತೆ ಕೆಲವು ವರಗಳನ್ನು ಪಡೆದಳು.

## ಅನ್ವಯ, ಭಾಷಾಂತರ ಹಾಗೂ ಟೀಕೆ-ಟಿಪ್ಪಣಿಗಳು.

### पतिव्रता सावित्री

### ೧. ಪತಿವ್ರತೆಯಾದ ಸಾವಿತ್ರಿ

**ಪುಟ ೨೯** ಶ್ಲೋ ೧. ಅನ್ವಯ:— **ಮಾರ್ಕಂಡೇಯಃ ಉವಾಚ**— ಅಥ ಭಾರ್ಯಾಸಹಾಯಃ ವೀರ್ಯವಾನ್ ಸಃ (ಸತ್ಯವಾನ್) ಫಲಾನಿ ಆದಾಯ ಕಠಿನಂ ಪೂರಯಾಮಾಸ । ತತಃ ಕಾಷ್ಠಾನಿ ಅಪಾಟಯತ್।

ಭಾಷಾಂತರ:— ಮಾರ್ಕಂಡೇಯನು (ಧರ್ಮರಾಜನಿಗೆ) ಅಂದನು:— ಬಳಿಕ ಹೆಂಡತಿಯಿಂದೊಡಗೂಡಿದ ಶೂರ ಸತ್ಯವಾನನು ಹಣ್ಣುಗಳನ್ನು ತೆಗೆದುಕೊಂಡು (ಅವುಗಳಿಂದ) ಬುಟ್ಟಿಯನ್ನು ತುಂಬಿದನು. ನಂತರ ಕಟ್ಟಿಗೆ ಕಡಿದನು.

ಟಿಪ್ಪಣಿ:— ಪತಿವ್ರತಾ-ಪತಿವ್ರತೆ. ಪತಿಃ ವ್ರತಂ ಯಸ್ಯಾಃ ಸಾ (ಬ. ಸ.) (ವ್ರತಂ-ಭಕ್ತಿಯ ವಸ್ತು *(object of devotion or faith'-Apte's dictionary)* ಸಾವಿತ್ರೀ- ಅಶ್ವಪತಿ ರಾಜನ ಮಗಳು ಸಾವಿತ್ರೀ ದೇವಿಯ ಅನುಗ್ರಹದಿಂದ ಹುಟ್ಟಿದ್ದರಿಂದ ಇವಳಿಗೆ ಸಾವಿತ್ರೀ ಎಂದು ಹೆಸರಿಡಲಾಯಿತು. ಪತಿವ್ರತಾ ಶಿರೋಮಣಿಯಾದ ಇವಳು ಯಮನ

ಮನವೊಲಿಸಿ ಸತ್ತ ಗಂಡನ (ಸತ್ಯವಾನನ) ಪ್ರಾಣ ಉಳಿಸಿ ಮುಂದೆ ಅಖಂಡ ದಾಂಪತ್ಯ ಸೌಖ್ಯವನ್ನುಪಭೋಗಿಸಿದಳು. ಅವಳು ಗಂಡನ ಪ್ರಾಣರಕ್ಷಣೆ ಮಾಡಿದ ಬಗೆ ಯಾವದು ಎಂಬುದನ್ನೇ ಈ ಪಾಠದಲ್ಲಿ ಹೇಳಲಾಗಿದೆ. [ ಈ ಸಾವಿತ್ರೀ ಕಥೆಯನ್ನು ಮಾರ್ಕಂಡೇಯ ಮಹರ್ಷಿಗಳು ಧರ್ಮರಾಜನಿಗೆ ಹೇಳುತ್ತಿದ್ದಾರೆ.]

ಮಾರ್ಕಂಡೇಯಃ— ಮೃಕಂಡೋಃ ಅಪತ್ಯಂ ಪುಮಾನ್ (ತದ್ಧಿತ) ಮೃಕಂಡು ಮುನಿಯ ಮಗನಾದ ಮಾರ್ಕಂಡೇಯನು, ಇವನು ಮಾರ್ಕಂಡೇಯ ಪುರಾಣವನ್ನು ಬರೆದಿದ್ದಾನೆ. ಉವಾಚ—ಅಂದನು. ವಚ್ (೨. ಪ.) ಧಾತುವಿನ ದ್ವಿ. ಭೂ. ತೃ. ಪು. ಏ. ವ.

ಅಥ— ಬಳಿಕ-ನಂತರ ತರುವಾಯ. ಭಾರ್ಯಾಸಹಾಯಃ— ಭಾರ್ಯಾ ಸಹಾಯಃ ಯಸ್ಯ ಸಃ (ಬ. ಸ.) ಹೆಂಡತಿ ಜೊತೆಗಾರಳಾದವ. ಸಹಾಯಃ—ಗೆಳೆಯ. ಜೊತೆಗಾರ ಸಹಾಯ ಮಾಡುವವ. *friend-companion*. (ಸಾಹಾಯ್ಯಂ—ಸಹಾಯ *help*). ವೀರ್ಯವಾನ್— ವೀರ್ಯಂ ಅಸ್ಯ ಅಸ್ತಿ ಇತಿ (ತದ್ಧಿತ) ಶೂರ, ಸಃ—ಅವನು. ಸಾವಿತ್ರಿಯ ಪತಿಯಾದ ಸತ್ಯವಾನನು. ಆದಾಯ–ತೆಗೆದುಕೊಂಡು. ಆ+ದಾ (೧ಪ.೩ಉ) ಧಾತುವಿನ ಲ್ಯಬಂತಾವ್ಯಯ). ಕಠಿನಂ–ಬುಟ್ಟಿ. ಕರಂಡಿಗೆ. ಪೂರಯಾಮಾಸ-ತುಂಬಿದನು. ಪೂರ್ (೧೦. ಉ.) ಧಾತುವಿನ ಅಮ್‌ಯುಕ್ತ ಪರೋಕ್ಷ ಭೂತಕಾಲ ತೃ. ಪು. ಏ. ವ. ಕಾಷ್ಠಂ—ಕಟ್ಟಿಗೆ. ಅಪಾಟಯತ್–ಕಡಿದನು. ಪಟ್ (೧೦. ಉ.) ಧಾತುವಿನ ಪ್ರ. ಭೂ. ತೃ. ಪು. ಏ. ವ.

೨. ಅನ್ವಯ:— ಕಾಷ್ಠಂ ಪಾಟಯತಃ ತಸ್ಯ ಸ್ವೇದಃ ಸಮಜಾಯತ ವೈ। ತೇನ ವ್ಯಾಯಾಮೇನ ಚ ಶಿರಸಿ ವೇದನಾ ಜಜ್ಞೇ।

ಭಾಷಾಂತರ:– ಆತನು ಕಟ್ಟಿಗೆಯನ್ನು ಕಡಿಯುತ್ತಿರುವಾಗ (ಮೈಯಲ್ಲಿ) ಬೆವರು ಹುಟ್ಟಿತು. ಮತ್ತು ಆ ಶ್ರಮದಿಂದ ತಲೆಶೂಲಿ ಎದ್ದಿತು ( ತಲೆನೋವು ಉಂಟಾಯಿತು).

ಟಿಪ್ಪಣಿ:— ಪಾಟಯತಃ–ಕಡಿಯುತ್ತಿರುವಾಗ. ಪಟ್ (೧೦.ಉ) ಧಾತುವಿನ ವ. ಧಾ. ವಿ. (ಪು) ಷ. ಏ. ವ. ಪಾಟಯತಃ ತಸ್ಯ–ಸತಃ ಷಷ್ಠೀ ಪ್ರಯೋಗ. ವಿವರಣೆಗಾಗಿ ಗದ್ಯಭಾಗದ ಪುಟ ೭–೮ ನೋಡಿರಿ: ಸ್ವೇದಃ– ಬೆವರು. ಸಮಜಾಯತ–ಹುಟ್ಟಿತು. ಸಮ್+ಜನ್ (೪. ಆ.) ಧಾತುವಿನ ಪ್ರ. ಭೂ. ತೃ. ಪು. ಏ. ವ. ವೈ–ಪಾದಪೂರಕ ಅವ್ಯಯ. ವ್ಯಾಯಾಮಃ–

ಶ್ರಮ. *exertion.* ಶಿರಸ್ (ನ)–ತಲೆ. ವೇದನಾ–ನೋವು ಜಜ್ಞೇ–ಜನ್ (೪. ಆ.) ಧಾತುವಿನ ದ್ವಿ. ಭೂ. ತೃ ಪು. ಏ. ವ.

೩. ಅನ್ವಯಃ— ಶ್ರಮಪೀಡಿತಃ ಸಃ ಪ್ರಿಯಾಂ ಭಾರ್ಯಾಂ ಅಭಿಗಮ್ಯ ಉವಾಚ। ಸತ್ಯವಾನ್ ಉವಾಚ। ಅನೇನ ವ್ಯಾಯಾಮೇನ ಮಮ ಶಿರಸಿ ವೇದನಾ ಜಾತಾ।

ಭಾಷಾಂತರ:— ಶ್ರಮದಿಂದ ಆಯಾಸಗೊಂಡ ಅವನು (ತನ್ನ) ಪ್ರೀತಿಯ ಹೆಂಡತಿಯ ಬಳಿಗೆ ಹೋಗಿ ಅಂದನು. (ಸತ್ಯವಾನನು ಅಂದನು) 'ಈ ಶ್ರಮದಿಂದ ನನಗೆ ತಲೆಶೂಲೆ ಎದ್ದಿದೆ.'

ಟಿಪ್ಪಣಿ:— ಶ್ರಮಪೀಡಿತಃ—ಶ್ರಮದಿಂದ ಆಯಾಸಗೊಂಡ; ಬಳಲಿದ ಶ್ರಮೇಣ ಪೀಡಿತಃ (ತೃ. ತ.) ಅಭಿಗಮ್ಯ–ಬಳಿಗೆ ಹೋಗಿ. ಅಭಿ+ಗಮ್ (೧. ಪ) ಧಾತುವಿನ ಲ್ಯಬಂತಾವ್ಯಯ. ಅನೇನ–ಇದರಿಂದ. ಇದಂ (ಪು) ಶಬ್ದದ ತೃ. ಏ. ವ. ಜಾತಾ–ಹುಟ್ಟಿದೆ. ಉಂಟಾಗಿದೆ. ಎದ್ದಿದೆ. ಜನ್ (೪. ಆ.) ಧಾತುವಿನ ಕರ್ಮಣಿ ಭೂ. ಧಾ. ವಿ. (ಸ್ತ್ರೀ) ಪ್ರ. ಏ. ವ. ಮಾರ್ಕಂಡೇಯರು ಧರ್ಮರಾಜನಿಗೆ ಕಥೆ ಹೇಳುತ್ತಿದ್ದಾರೆ. ಆಗ ಸತ್ಯವಾನನು ಸಾವಿತ್ರಿಗೆ ಹೀಗೆ ಅಂದನು ಎಂದು ತಿಳಿಸುವದಕ್ಕಾಗಿ 'ಸತ್ಯವಾನ್ ಉವಾಚ' ಎಂದು ಶ್ಲೋಕದ ಮಧ್ಯದಲ್ಲಿ ಕೊಡಲಾಗಿದೆ. ಸತ್ಯವಾನ್–ದ್ಯುಮತ್ಸೇನನ ಮಗ. ಸಾವಿತ್ರಿಯ ಗಂಡ. ಇವನು ಹಾಗೂ ಇವನ ತಂದೆ-ತಾಯಿಗಳು ಯಾವಾಗಲೂ ಸತ್ಯ ಮಾತಾಡುತ್ತಿದ್ದರಿಂದ ಇವನಿಗೆ ಸತ್ಯವಾನ್ (ಸತ್ಯಂ ಅಸ್ಯ ಅಸ್ತಿ ಇತಿ ತದ್ಧಿತ). ಎಂದು ಹೆಸರು ಬಂದಿತು. ತು.ಮಾ.:— "ಸತ್ಯಂ ವದತ್ಯಸ್ಯ ಪಿತಾ ಸತ್ಯಂ ಮಾತಾ ಪ್ರಭಾಷತೇ। ಸ್ವಯಂ ಸತ್ಯಂ ಪ್ರಭಾಷೇತ ಸತ್ಯವಾನಿತಿ ತೇನ ಸಃ"

೪. ಅನ್ವಯ:—ಮಿತಭಾಷಿಣಿ ಸಾವಿತ್ರಿ, ಅಂಗಾನಿ ಹೃದಯಂ ಚ ಏವ ದೂಯತಿ ಇವ। ಆತ್ಮಾನಂ ಅಸ್ವಸ್ಥಂ ಇವ ಲಕ್ಷಯೇ ಚ।

ಭಾಷಾಂತರ:— ಮಿತವಾಗಿ ಮಾತನಾಡುವ ಸಾವಿತ್ರಿಯೇ, (ನನ್ನ) ಅವಯವಗಳು ಮತ್ತು ಎದೆ ನೋಯುತ್ತಿವೆ. ಮತ್ತು ನನ್ನ ಮೈಯಲ್ಲಿ ನೆಟ್ಟಗಿಲ್ಲದಂತೆ ಎನಿಸುತ್ತದೆ.

ಟಿಪ್ಪಣಿ:—ಮಿತಭಾಷಿಣಿ— ಮಿತಂ ಭಾಷತೇ ಇತಿ (ಸ್ತ್ರಿಯಾಂ) ಮಿತಭಾಷಿಣೀ (ಉ. ತ.)। ತಸ್ಯಾಃ ಸಂಬೋಧನಂ। ದೂಯತಿ—ದೂ (೪ ಆ)

ಧಾತುವಿನ ವ. ತೃ. ಪು. ಏ. ವ. ದೂ ಧಾತು ಆತ್ಮನೇ ಪದವಿದೆ. ಆದರೆ ಇಲ್ಲಿ ಪರಸ್ಮೈಪದದಲ್ಲಿ ಉಪಯೋಗಿಸಲಾಗಿದೆ. ಆದ್ದರಿಂದ ಇದು 'ಆರ್ಷ' **ಇಲ್ಲವೆ ಅನಿಯಮಿತ** ರೂಪ ಅಂಗಾನಿ ದೂಯಂತೇ ಹೃದಯಂ ದೂಯತೇ ಎಂದು ಅರ್ಥಮಾಡಬೇಕು. ಆತ್ಮಾನಂ ಅಸ್ವಸ್ಥಂ ಲಕ್ಷಯೇ–ಮೈಯಲ್ಲಿ ಅಸ್ವಾಸ್ಥ್ಯವಿದ್ದಂತೆ ನನಗೆ ಎನಿಸುತ್ತದೆ. *I think myself unwell* ನ ಸ್ವಸ್ಥಃ ಅಸ್ವಸ್ಥಃ (ನ. ತ.) ತಂ ! ಲಕ್ಷಯೇ—ನನಗೆ ಎನಿಸುತ್ತದೆ, ನಾನು ತಿಳಿಯುವೆ. ಲಕ್ಷ್ (೧೦ ಉ.) ಧಾತುವಿನ ವ. ಪ್ರ. ಪು. ಏ. ವ.

೫. ಅನ್ವಯ:— ಕಲ್ಯಾಣಿ, ಅಹಂ ಇದಂ ಶಿರಃ ಶೂಲೈಃ ವಿದ್ಧಂ ಇವ ಸಂಲಕ್ಷಯಾಮಿ। ಸ್ಥಾತುಂ ಮೇ ಶಕ್ತಿಃ ನ ಅಸ್ತಿ। ತತ್ ಸ್ವಪ್ತುಂ ಇಚ್ಛೇ।

ಭಾಷಾಂತರ:– ಸುಮಂಗಲೆಯೇ, (ನನ್ನ) ಈ ತಲೆಯು ಬಾಣಗಳಿಂದ ಚುಚ್ಚಲ್ಪಡುತ್ತಿರುವದೋ ಎನ್ನುವಂತೆ (ನನಗೆ) ಎನಿಸುತ್ತದೆ. ನನಗೆ ನಿಲ್ಲಲು ಶಕ್ತಿ ಇಲ್ಲ ಆದ್ದರಿಂದ ಮಲಗಲು ಇಚ್ಛಿಸುತ್ತೇನೆ.

ಟಿಪ್ಪಣೆ:— ಕಲ್ಯಾಣಿ–ಸುಮಂಗಲೆಯೇ, ಮಂಗಲ (ಶುಭ) ವನ್ನುಂಟು ಮಾಡುವವಳೇ, ಶೂಲಃ—ಬಾಣ. ವಿದ್ಧಂ—ಚುಚ್ಚಲ್ಪಟ್ಟ ವ್ಯಧ್. (೪ ಪ.) ಧಾತುವಿನ ಕರ್ಮಣಿ ಭೂ. ಧಾ. ವಿ. (ನ) ಪ್ರ. ಏ. ವ. ಸಂಲಕ್ಷಯಾಮಿ ಸಂ + ಲಕ್ಷ್ (೧೦ ಉ. ) ಧಾತುವಿನ ವ. ಪ್ರ. ಪು. ಏ. ವ. ನಾನು ತಿಳಿಯುತ್ತೇನೆ. ನನಗೆ ಎನಿಸುತ್ತದೆ. ಸ್ವಪ್ತುಂ—ಮಲಗಲು ಸ್ವಪ್ (೨ ಪ) ಧಾತುವಿನ ತುಮಂತಾವ್ಯಯ. ಇಚ್ಛೇ––ಬಯಸುವೆ. ಇಷ್ (೬ಪ) ಧಾತುವಿನ ವ. ಪ್ರ. ಪು. ಏ. ವ. (ಆರ್ಷರೂಪ) ಶುದ್ಧರೂಪವು ಇಚ್ಛಾಮಿ.

೬. ಅನ್ವಯ:—ಸಾ ಸಾವಿತ್ರೀ ಭರ್ತಾರಂ ಉಪಗಮ್ಯ ಸಮಾಸಾದ್ಯ ಚ, ಅಸ್ಯ ಶಿರಃ ಉತ್ಸಂಗೇ ಕೃತ್ವಾ ಮಹೀತಲೇ ನಿಷಸಾದ।

ಭಾಷಾಂತರ:–ಆ ಸಾವಿತ್ರಿಯು ಗಂಡನೆಡೆಗೆ ಹೋಗಿ, ಆತನನ್ನು ಆಶ್ರಯಿಸಿ (ಹೊಂದಿ) ಅವನ ತಲೆಯನ್ನು (ತನ್ನ) ತೊಡೆಯ ಮೇಲೆ ಇಟ್ಟುಕೊಂಡು ನೆಲದ ಮೇಲೆ ಕುಳಿತಳು.

ಟಿಪ್ಪಣೆ:— ಭರ್ತೃ (ಪು)—ಗಂಡ. ಉಪಗಮ್ಯ, ಸಮಾಸಾದ್ಯ–ಬಳಿಗೆ ಹೋಗಿ ಆತನನ್ನು ಹೊಂದಿ. ಇವು ಅನುಕ್ರಮವಾಗಿ ಉಪ+ಗಮ್ (೧ ಪ) ಹಾಗೂ ಸಮ್ ಆ+ಸದ್ (೧. ಪ.) ಇದರ ಪ್ರಯೋಜಕದ ಲ್ಯಬಂತಾವ್ಯಯ

ಗಳಿವೆ. ಉತ್ಸಂಗಃ — ತೊಡೆ. ನಿಷಸಾದ— ಕುಳಿತಳು. ನಿ+ಸದ್ (೧ ಪ.) ಧಾತುವಿನ ದ್ವಿ. ಭೂ. ತೃ. ಪು. ಏ. ವ. ಮಹೀತಲಂ- ಭೂಮಿ.

**ಟೀಪ್ರು:**- ಡಾ. ಪಿ. ಎಲ್. ವೈದ್ಯ ಇವರು 'ಸಾ ಸಾವಿತ್ರೀ ಭರ್ತಾರಂ ಸಮಾಸಾದ್ಯ ಉಪಗಮ್ಯ ಚ' ಎಂದು ಅನ್ವಯ ಇಟ್ಟುಕೊಂಡು, ಸಾವಿತ್ರಿಯು ಗಂಡನೆಡೆಗೆ ಹೋಗಿ ಆತನ ಸ್ಥಿತಿಯನ್ನರಿತುಕೊಂಡು (Savitri having approached her husband and knowing his condition) ಎಂಬುದಾಗಿ ಅರ್ಥಮಾಡಿದ್ದಾರೆ, ಇದಾದರೂ ಸಮಂಜಸ ಅರ್ಥ, ಆದ್ದರಿಂದ ಹಾಗೆ ಅರ್ಥಮಾಡಬಹುದು.

**ಪುಟ ೩೦.** ೭. ಅನ್ವಯ:— ತತಃ ಸಾ ತಪಸ್ವಿನೀ ನಾರದವಚಃ ವಿಮೃಶಂತೀ ತಂ ದಿವಸಂ, ವೇಲಾಂ, ಮೂಹೂರ್ತಂ, ಕ್ಷಣಂ ಚ ಯುಯೋಜಹ।

ಭಾಷಾಂತರ:-ಬಳಿಕ ಆ ದೀನ ಸಾವಿತ್ರಿಯು (ಅಥವಾ ಆ ತಪಸ್ವಿನಿಯು) ನಾರದರ ಮಾತನ್ನು ವಿಮರ್ಶಿಸುತ್ತ, (ಅವರು ಹೇಳಿದ) ಆ ದಿವಸ, ಸಮಯ ಮುಹೂರ್ತ ಮತ್ತು ಕ್ಷಣವನ್ನು ಯೋಚಿಸಿದಳು.

ಟಿಪ್ಪಣಿ:— ತಪಸ್ವಿನೀ — ದೀನೆ, ಅನಾಥೆ (*poor helpless*) ಅಥವಾ ತಪಸ್ಸನ್ನಾಚರಿಸುವವಳು. ನಾರದವಚಃ ವಿಮೃಶಂತೀ—ನಾರದರು ಹೇಳಿದ ಮಾತನ್ನು ವಿಮರ್ಶಿಸುತ್ತ, ಎಂದರೆ ಕೂಲಂಕಷವಾಗಿ ಅದರ ವಿಮರ್ಶೆ (ಪರೀಕ್ಷೆ) ಮಾಡುತ್ತ. ಸಾವಿತ್ರಿಯು ಗಂಡನನ್ನು ಆರಿಸಿಕೊಂಡು ಬಂದು ತನ್ನ ತಂದೆಗೆ ಅದನ್ನು ತಿಳಿಸುವ ಸಮಯದಲ್ಲಿ ನಾರದರು ಅಲ್ಲಿಗೆ ಬಂದಿದ್ದರು. ಅವರು ಸತ್ಯವಾನನು ಸಾವಿತ್ರಿಗೆ ಅನುರೂಪ ವರನಾದರೂ, ಅವನಲ್ಲಿ ಒಂದು ದೊಡ್ಡ ದೋಷವಿದ್ದುದರಿಂದ ಅವನನ್ನು ವರಿಸಬಾರದೆಂದು ಹೇಳಿದರು. ಆ ದೋಷವೆಂದರೆ, ಅವನ ಅಲ್ಪಾಯುಷ್ಯ. ಅವನು ಅಂದಿನಿಂದ ಒಂದು ವರ್ಷಕ್ಕೆ ಸಾಯುವವನಾಗಿ ನಾರದರು ಹೇಳಿದ್ದರು. ಆದರೆ ದೃಢನಿಶ್ಚಯವುಳ್ಳ ಸಾವಿತ್ರಿಯು ತನ್ನ ನಿಶ್ಚಯದಿಂದ ಕದಲಲಿಲ್ಲ. ಸತ್ಯವಾನನಲ್ಲಿ ಒಮ್ಮೆ ಮನಸ್ಸಿಟ್ಟಿದ್ದರಿಂದ ಅವನನ್ನೇ ವರಿಸುವದಾಗಿ ಹಟ ತೊಟ್ಟು, ಅದರಂತೆ ಆತನನ್ನೇ ಮದುವೆಯಾದಳು. ಆದರೆ ಅವಳ ಮನಸ್ಸಿನಲ್ಲಿ ಯಾವಾಗಲೂ ಒಳಗಿಂದೊಳಗೆ ನಾರದರ ಮಾತು ಕಟಿಯುತ್ತಿತ್ತು. ಆದ್ದರಿಂದ ಅಂದು ಅವಳಿಗೆ ನಾರದರ ಮಾತು ಒಮ್ಮೆಲೆ ನೆನಪಾಯಿತು. ಕೂಡಲೆ ಅದರ ಮಾತಿನ ಮೇರೆಗೆ ಪತಿಯ ಮರಣಕಾಲವನ್ನು ಯೋಚಿಸತೊಡಗಿದಳು. ನಾರದಸ್ಯ ವಚಃ ನಾರದವಚಃ (ಷ. ತ. ಸ.) ತತ್। ವಿಮೃಶಂತೀ – ವಿ+

ಮೃಶ್ (೬. ಪ.) ಧಾತುವಿನ ವ. ಧಾ. ವಿ. (ಸ್ತ್ರೀ) ಪ್ರ. ಏ. ವ. ವೇಲಾ— ವೇಳೆ. ಮರಣಕಾಲ. ಮುಹೂರ್ತಃ—೪೮ ಮಿನಿಟುಗಳ ಕಾಲ [೨ ಗಳಿಗೆಯ ಅವಧಿ. ೧ ಗಳಿಗೆ (ಘಟಿಕಾ)=೨೪ ಮಿನಿಟು] ಕ್ಷಣಃ (ಣಂ)—೪ ನಿಮಿಷಗಳ (ಮಿನಿಟು) ಅವಧಿ. ಯುಯೋಜ—ಯೋಚಿಸಿದಳು. ಎಣಿಕೆ ಹಾಕಿದಳು. 'ಅನುಚಿಂತಿತವತೀ' ಟೀಕಾ ಯುಜ್ (೭. ಉ.) ಧಾತುವಿನ ದ್ವಿ. ಭೂ. ತೃ. ಪು. ಏ. ವ. ಹ—ಪಾದಪೂರಕ ಅವ್ಯಯ. ಚ. ವೈ. ತು. ಹಿ. ಹ. ಸ್ಮ. ಮುಂತಾದವುಗಳನ್ನು ಅನೇಕಸಲ, ಶ್ಲೋಕದ ಮಾತ್ರೆಗಳು ಪೂರ್ಣವಾಗುವದಕ್ಕಾಗಿ ಉಪಯೋಗಿಸುತ್ತಾರೆ. ಆಗ ಇವುಗಳಿಗೆ ಅರ್ಥವಾಗುವದಿಲ್ಲ.

೮–೯ ಅನ್ವಯ:— ಮುಹೂರ್ತಾತ್ ಏವ ರಕ್ತವಾಸಸಂ, ಬದ್ಧ ಮೌಲಿಂ, ಆದಿತ್ಯಸಮತೇಜಸಂ ವಪುಷ್ಮಂತಂ, ಶ್ಯಾಮಾವದಾತಂ, ರಕ್ತಾಕ್ಷಂ, ಪಾಶಹಸ್ತಂ, ಭಯಾವಹಂ, ಸತ್ಯವತಃ ಪಾರ್ಶ್ವೇ ಸ್ಥಿತಂ, ತಮೇವ ನಿರೀಕ್ಷಂತಂ ಚ, ಪುರುಷಂ (ಸಾ) ಅಪಶ್ಯತ್ ।

ಭಾಷಾಂತರ:— (ಮರು)ಕ್ಷಣದಲ್ಲಿಯೇ, ಕೆಂಪುಬಟ್ಟೆಯನ್ನುಟ್ಟ, (ಶಬ್ದಶಃ ಕೆಂಪು ಬಟ್ಟೆಯುಳ್ಳ), ಕಿರೀಟ ಧರಿಸಿದ, ಸೂರ್ಯನಂತೆ ಪ್ರಕಾಶಮಯವಾದ ದೇಹವುಳ್ಳ, ಹೊಳೆಯುವ ಕಪ್ಪು ಬಣ್ಣ ಹಾಗೂ ಕೆಂಪು ಕಣ್ಣುಗಳುಳ್ಳ, ಕೈಯಲ್ಲಿ ಪಾಶ (ಹಗ್ಗ) ಹಿಡಿದ, ಅಂಜಿಕೆಯುನ್ನುಂಟುಮಾಡುವ, ಸತ್ಯವಾನನ ಬದಿಯಲ್ಲಿಯೇ ನಿಂತ ಹಾಗೂ ಆತನನ್ನೇ ನಿರೀಕ್ಷಿಸುತ್ತಿದ್ದ ಮನುಷ್ಯನನ್ನು (ಸಾವಿತ್ರಿಯು) ಕಂಡಳು.

ಟಿಪ್ಪಣಿ:— ರಕ್ತವಾಸಸಂ—ಕೆಂಪುಬಟ್ಟೆಯುಳ್ಳ. ರಕ್ತ—ಕೆಂಪು. ವಾಸಸ್ (ನ)–ಬಟ್ಟೆ. ರಕ್ತಂ ವಾಸಃ ಯಸ್ಯ ಸಃ (ಬ. ಸ.) ತಂ । ಬದ್ಧ ಮೌಲಿಂ—ಕಿರೀಟ ಧರಿಸಿದ. ಮೌಲಿಃ—ಕಿರೀಟ. ಬದ್ಧಃ ಮೌಲಿಃ ಯೇನ ಸಃ (ಬ. ಸ.) ತಂ । ಆದಿತ್ಯಃ—ಸೂರ್ಯ. **ಆದಿತ್ಯೇನ** ಸಮಂ ತೇಜಃ ಯಸ್ಯ ಸಃ ಆದಿತ್ಯ ಸಮತೇಜಾಃ (ಬ. ಸ.) ತಂ ವಪುಷ್ಮಂತಂ—ದೇಹವುಳ್ಳ. ವಪುಃ ಅಸ್ಯ ಅಸ್ತಿ ಇತಿ ವಪುಷ್ಮಾನ್ (ತದ್ಧಿತ) ತಂ । ಶ್ಯಾಮಾವದಾತಂ— ***'of glossy or bright dark colour'*** ಶ್ಯಾಮ—ಕಪ್ಪು. ಅವದಾತ–ಶುದ್ಧ. ಶುಭ್ರ, ಪ್ರಕಾಶಿಸುವ, ಹೊಳೆಯುವ. ಶ್ಯಾಮಶ್ಚಾಸೌ ಅವದಾತಶ್ಚ ಶ್ಯಾಮಾವದಾತಃ (ಕ. ಸ.) । ತಂ । **ರಕ್ತಾಕ್ಷಂ**—ರಕ್ತೇ ಅಕ್ಷಿಣೀ ಯಸ್ಯ ಸಃ (ಬ. ಸ.) ತಂ । ಕೆಂಗಣ್ಣುಳ್ಳ. ಪಾಶಹಸ್ತಂ—ಕೈಯಲ್ಲಿ ಪಾಶ

(ಹಗ್ಗ)ವುಳ್ಳ. ಪಾಶಃ - ಹಗ್ಗ ಬಲೆ. ಪಾಶಃ— ಹಸ್ತೇ ಯಸ್ಯ ಸಃ (ಬ.ಸ.) ತಂ। ಭಯಾವಹಂ— ಅಂಜಿಕೆಯನ್ನುಂಟುಮಾಡುವ. ಭಯಂ ಆವಹತಿ ಇತಿ ಭಯಾವಹಃ (ಉಪ.ತ) ತಂ। ಪಾರ್ಶ್ವೇ—ಬದಿಯಲ್ಲಿ. ನಿರೀಕ್ಷಂತಂ—ಆರ್ಷರೂಪ. ಶುದ್ಧರೂಪ ನಿರೀಕ್ಷಮಾಣಂ ನಿರ್ + ಈಕ್ಷ್ (೧. ಆ) ಧಾತುವಿನ ವ. ಧಾ. ವಿ. (ಪು) ದ್ವಿ. ಏ. ವ.

೧೦. ಅನ್ವಯ:— ತಂ ದೃಷ್ಟ್ವಾ (ಸಾ) ಸಹಸಾ ಉತ್ಥಾಯ ಭರ್ತುಃ ಶಿರಃ ಶನೈಃ ನ್ಯಸ್ಯ, ಹೃದಯೇನ ಪ್ರವೇಪತೀ, ಕೃತಾಂಜಲಿಃ ಉವಾಚ।

ಭಾಷಾಂತರ:— ಅವನನ್ನು ನೋಡಿ, (ಸಾವಿತ್ರಿಯು) ಕೂಡಲೇ ಎದ್ದು, ಗಂಡನ ತಲೆಯನ್ನು ಮೆಲ್ಲನೆ (ಕೆಳಗೆ) ಇಟ್ಟು, ಮನದಲ್ಲಿ ನಡುಗುತ್ತ, ಕೈಜೋಡಿಸಿ ಮಾತನಾಡಿದಳು.

ಟಿಪ್ಪಣಿ:— ಸಹಸಾ—ಒಮ್ಮೆಲೆ. ಉತ್ಥಾಯ—ಉತ್+ಸ್ಥಾ (೧.ಪ) ಧಾತುವಿನ ಲ್ಯಬಂತಾವ್ಯಯ. ಶನೈಃ—ಮೆಲ್ಲನೆ. ನ್ಯಸ್ಯ—ಇಟ್ಟು. ನಿ+ಅಸ್ (೪. ಪ) ಧಾತುವಿನ ಲ್ಯಬಂತಾವ್ಯಯ. ಪ್ರವೇಪತೀ—ನಡಗುತ್ತ. ಆರ್ಷರೂಪ. ಶುದ್ಧರೂಪವು ಪ್ರವೇಪಮಾನಾ. ಪ್ರ+ವೇಪ್ (೧. ಆ) ಧಾತುವಿನ ವ. ಧಾ. ವಿ. (ಸ್ತ್ರೀ.) ಪ್ರ. ಏ. ವ. ಕೃತಾಂಜಲಿಃ — ಕೈಜೋಡಿಸಿ. ಬೊಗಸೆಯೊಡ್ಡಿ. (ಅಂಜಲಿಃ—ಬೊಗಸೆ) ಕೃತಃ ಅಂಜಲಿಃ ಯಯಾ ಸಾ (ಬ. ಸ.)

೧೧. ಅನ್ವಯ:—ದೇವೇಶ, ತ್ವಾ ದೈವತಂ ಅಭಿಜಾನಾಮಿ। ಹಿ ಏತತ್ ವಪುಃ ಅಮಾನುಷಂ। ಕಃ ತ್ವಂ, ಕಿಂ ಚ ಚಿಕೀರ್ಷಸಿ (ಇತಿ) ಕಾಮಯಾ ಬ್ರೂಹಿ।

ಭಾಷಾಂತರ:— ದೇವತೆಗಳ ದೊರೆಯೇ, ನೀನು ದೇವತೆಯೆಂದು ನಾನು ತಿಳಿಯುತ್ತೇನೆ; ಏಕೆಂದರೆ ಈ (ನಿನ್ನ) ದೇಹವು ಅಮಾನುಷವಾಗಿದೆ. (ಮನುಷ್ಯರಿಗೆ ಸಲ್ಲುವಂತಹದಲ್ಲ). (ಆದ್ದರಿಂದ) ನೀನು ಯಾರು ? ಮತ್ತು ಏನು ಮಾಡಲು ಇಚ್ಛಿಸುತ್ತೀ (ಎಂಬುದನ್ನು) ದಯಮಾಡಿ ಹೇಳು.

ಟಿಪ್ಪಣಿ:— ದೇವೇಶ–ದೇವತೆಗಳ ಒಡೆಯನೇ, ದೇವಾನಾಂ ಈಶಃ ದೇವೇಶಃ (ಷ. ತ. ಸ.)। ತಸ್ಯ ಸಂಬೋಧನಂ। ದೈವತಂ—ದೇವತೆ. ಅಭಿಜಾನಾಮಿ — ಭಾವಿಸುತ್ತೇನೆ, ತಿಳಿಯುತ್ತೇನೆ. ಹಿ — ಏಕೆಂದರೆ. ವಪುಸ್ (ನ)—ದೇಹ. ಅಮಾನುಷಂ—ನ ಮಾನುಷಂ (ನ. ತ.) ಅಮಾನುಷವಾದ. ಮನುಷ್ಯಜಾತಿಗೆ ಸಲ್ಲದ. ಅರ್ಥಾತ್ ದಿವ್ಯ. ಚಿಕೀರ್ಷಸಿ—

ಮಾಡಲಿಚ್ಛಿಸುವಿ. ಕೃ (೮. ಉ) ಧಾತುವಿನ ಇಚ್ಛಾರ್ಥಕ ದ್ವಿ. ಪು. ಏ. ವ. ಕಾಮಯಾ—ಇಚ್ಛೆಯಮೇರೆಗೆ, ದಯಮಾಡಿ. '*at your will; if you are pleased*'.

**ಯಮಃ ಉವಾಚ:—**

೧೨. ಅನ್ವಯ:— ಶುಭೇ, ಸಾವಿತ್ರಿ, ತ್ವಂ ಪತಿವ್ರತಾ ತಥೈವ ತಪೋಽನ್ವಿತಾ ಚ ಅಸಿ । ಅತಃ ತ್ವಾಂ ಅಭಿಧಾಸ್ಯಾಮಿ । (ತ್ವಂ) ಮಾಂ ಯಮಂ ವಿದ್ಧಿ ।

ಭಾಷಾಂತರ:— ಸುಮಂಗಲೆಯೇ, ಸಾವಿತ್ರಿಯೇ, ನೀನು ಪತಿವ್ರತೆಯೂ ತಪಸ್ವಿನಿಯೂ ಇರುವೆ. ಆದ್ದರಿಂದ ನಿನ್ನೊಡನೆ ಮಾತನಾಡುವೆ. ನಾನು ಯಮನೆಂದು ತಿಳಿ.

ಟಿಪ್ಪಣಿ:— ಪತಿವ್ರತಾ—ಪತಿವ್ರತೆ. ಪತಿಃ ವ್ರತಂ ಯಸ್ಯಾಃ ಸಾ. (ಬ. ಸ.) ವ್ರತಂ—ಭಕ್ತಿಯ ಸಾಧನ ಅಥವಾ ವಿಷಯ. '*object of devotion or faith' Apte.*' ತಪೋಽನ್ವಿತಾ—ತಪಸ್ವಿನೀ. ತಪಸ್ಸಿನಿಂದ ಕೂಡಿಕೊಂಡವಳು. ತಪಸಾ ಅನ್ವಿತಾ (ತೃ. ತ.) ಅಭಿಧಾಸ್ಯಾಮಿ— ಹೇಳುವೆ. ಅಭಿ+ಧಾ (೩. ಉ) ಧಾತುವಿನ ದ್ವಿ. ಭ. ಪ್ರ. ಪು. ಏ. ವ. ವಿದ್ಧಿ—ವಿದಾ (೨. ಪ) ಧಾತುವಿನ ಆಜ್ಞಾರ್ಥ ದ್ವಿ. ಪು. ಏ ವ.

೧೩. ಅನ್ವಯ:— ಅಯಂ ತೇ ಭರ್ತಾ ಸತ್ಯವಾನ್ ಪಾರ್ಥಿವಾತ್ಮಜಃ ಕ್ಷೀಣಾಯುಃ (ಅಸ್ತಿ) । ಅಹಂ ತಂ ಬದ್ಧ್ವಾ ನೇಷ್ಯಾಮಿ । ಏತತ್ ಮೇ ಚಿಕೀರ್ಷಿತಂ ವಿದ್ಧಿ ।

ಭಾಷಾಂತರ:— ಅರಸುಮಗನಾದ, ಈ ನಿನ್ನ ಗಂಡ ಸತ್ಯವಾನನ ಆಯುಷ್ಯವು ತೀರಿದೆ. ನಾನು ಅವನನ್ನು ಕಟ್ಟಿ ಒಯ್ಯುವೆ ಇದು ನಾನು ಮಾಡಲಿಚ್ಛಿಸುವದು ಎಂದು ತಿಳಿ.

ಟಿಪ್ಪಣಿ:— ಪಾರ್ಥಿವಾತ್ಮಜಃ—ಪಾರ್ಥಿವಸ್ಯ ಆತ್ಮಜಃ (ಷ.ತ.ಸ.) ಅರಸುಮಗ. ರಾಜಕುಮಾರ. ದ್ಯುಮತ್ಸೇನ ಅರಸನ ಮಗ. (ದ್ಯುಮತ್ಸೇನನು ರಾಜ್ಯವನ್ನು ಕಳೆದುಕೊಂಡದ್ದರಿಂದ, ಹೆಂಡತಿ ಹಾಗೂ ಮಗನೊಡನೆ ಅಡವಿಯಲ್ಲಿ ವಾಸಿಸುತ್ತಿದ್ದನು.) ಕ್ಷೀಣಾಯುಃ—ಆಯುಷ್ಯವು ತೀರಿದವ. ಕ್ಷೀಣಂ ಆಯುಃ ಯಸ್ಯ ಸಃ (ಬ. ಸ.) ಬದ್ಧ್ವಾ—ಕಟ್ಟಿ. ಬಂಧ್ (೯. ಪ) ಧಾತುವಿನ ಲ್ಯಬಂತಾವ್ಯಯ. ನೇಷ್ಯಾಮಿ—ನೀ (೧ ಪ) ಧಾತುವಿನ ದ್ವಿ.ಭ.ಪ್ರ.ಪು.ಏ.ವ.

ಏ. ವ. ಚಿಕೀರ್ಷಿತಂ—ಮಾಡಬಯಸಿದುದು. ಕೃ (ಌ. ಉ) ಧಾತುವಿನ ಇಚ್ಛಾರ್ಥಕ ಕರ್ಮಣಿ ಭೂ. ಧಾ. ವಿ. (ನ) ಪ್ರ. ಏ. ವ.

**ಸಾವಿತ್ರೀ ಉವಾಚ:—**

೧೪. ಅನ್ವಯ:— ಭಗವನ್, ತವ ದೂತಾಃ ಮಾನವಾನ್ ನೇತುಂ ಆಗಚ್ಛಂತಿ ಕಿಲ ಇತಿ ಶ್ರೂಯತೇ । ಪ್ರಭೋ, ಭವಾನ್ ಕಸ್ಮಾತ್ ಸ್ವಯಂ ಆಗತಃ ಅಸಿ ।

ಭಾಷಾಂತರ:— ಪೂಜ್ಯನೆ, ನಿನ್ನ ದೂತರು ಮನುಷ್ಯರನ್ನೊಯ್ಯಲು ಬರುತ್ತಾರೆಂದು ನಾನು ಕೇಳಿದ್ದೇನೆ. ಎಲೈ ಪ್ರಭುವೆ, ನೀನೇ ಸ್ವತಃ ಏಕೆ ಬಂದಿರುವೆ ?

ಟಿಪ್ಪಣಿಗಳು:— ನೇತುಂ—ಒಯ್ಯಲು. ನೀ (೧. ಪ) ಧಾತುವಿನ ಲ್ಯಬಂತಾವ್ಯಯ. ಕಿಲ—ಅವ್ಯಯ. (i) ನಿಜವಾಗಿಯೂ (ii) ಹೀಗೆ ಹೇಳಲಾಗುತ್ತದೆ. ಉದಾ:– ಅರ್ಹತಿ ಕಿಲ ಕಿತವಃ ಉಪದ್ರವಂ । ಬಭೂವ ಯೋಗೀ ಕಿಲ ಕಾರ್ತವೀರ್ಯಃ । ಶ್ರೂಯತೇ (ನನ್ನಿಂದ) ಕೇಳಲ್ಪಟ್ಟಿದೆ. ಅಥವಾ ಎಂದು ಕೇಳಲ್ಪಡುತ್ತದೆ. ಎಂದು ಪ್ರಸಿದ್ಧವಿದೆ. ಭವಾನ್— ನೀನು. ಆದರಾರ್ಥವಿದ್ದು ತ್ವಂ ಎಂದು ಅರ್ಥ ಆಗುತ್ತದೆ. ಆದ್ದರಿಂದ ಕ್ರಿಯಾಪದ ತೃ. ಪು. ಇರಬೆ ದ್ವಿ. ಪು. ಇದೆ. ಭವಾನ್ ಅಸ್ತಿ ಇದರ ಬದಲು ಭವಾನ್ ಅಸಿ ಎಂದಿದೆ. ಕಸ್ಮಾತ್—ಏಕೆ.

**ಮಾರ್ಕಂಡೇಯಃ ಉವಾಚ:—**

ಮಾರ್ಕಂಡೇಯನು (ಧರ್ಮರಾಜನಿಗೆ) ಅಂದನು.

೧೫. ಅನ್ವಯ:— ಇತಿ ಉಕ್ತಃ ಭಗವಾನ್ ಪಿತೃರಾಜಃ ತತ್ಪ್ರಿಯಾರ್ಥಂ ಸ್ವಚಿಕೀರ್ಷಿತಂ ಯಥಾವತ್ ತಾಂ ಆಖ್ಯಾತುಂ ಪ್ರಚಕ್ರಮೇ ।

ಭಾಷಾಂತರ:— ಹೀಗೆ ನುಡಿಯಲ್ಪಟ್ಟ ಪಿತೃಗಳ ಒಡೆಯನಾದ ಆ ಯಮನು, ಅವಳಿಗೆ ಹಿತ (ಉಪಕಾರ) ಮಾಡುವದಕ್ಕೋಸ್ಕರ ತಾನು ಮಾಡಬಯಸಿದುದನ್ನು ಇದ್ದಕ್ಕಿದ್ದಹಾಗೆ ಅವಳಿಗೆ ಹೇಳಲಾರಂಭಿಸಿದನು. ಪಿತೃರಾಜಃ—ಪಿತೄಣಾಂ ರಾಜಾ (ಷ. ತ. ಸ.) ಪಿತೃಗಣದ ಒಡೆಯನಾದ ಯಮ. ಪಿತೃರಾಜಃ ಎಂದು ಯಮನ ಒಂದು ಹೆಸರು. ತತ್ಪ್ರಿಯಾರ್ಥಂ— ಅವಳಿಗೆ ಪ್ರಿಯವಾದುದನ್ನು ಮಾಡಲು ಅರ್ಥಾತ್ ಅವಳಿಗೆ ಉಪಕಾರ-

ಮಾಡುವದಕ್ಕೋಸ್ಕರ. '*with a view to oblige her*' *P. C. Roy*. ತಸ್ಯಾಃ ಪ್ರಿಯಾರ್ಥಂ. ಸ್ವಚಿಕೀರ್ಷಿತಂ— ತಾನು ಮಾಡಬಯಸಿದುದನ್ನು. ಯಥಾವತ್ – ಇದ್ದಕ್ಕಿದ್ದಂತೆ. ಇದ್ದಹಾಗೆ. '*truly*' ಆಖ್ಯಾತುಂ — ಹೇಳಲು. ಪ್ರಚಕ್ರಮೆ — ಆರಂಭಿಸಿದನು. ಪ್ರ+ಕ್ರಮ್ (೧. ಆ) ಧಾತುವಿನ ಪ್ವಿ. ಭೂ. ಕೃ. ಪ್ರ. ಏ. ವ.

೧೬. ಅನ್ವಯ:— ಧರ್ಮಸಂಯುಕ್ತಃ ರೂಪವಾನ್ ಗುಣಸಾಗರಃ ಚ ಅಯಂ ಮತ್ಪುರುಷೈಃ ನೇತುಂ ಅನರ್ಹಃ ಚ । ಅತಃ ಸ್ವಯಂ ಆಗತಃ ಅಸ್ಮಿ ।

ಭಾಷಾಂತರ:— ಧಾರ್ಮಿಕನೂ, ಸುರೂಪಿಯೂ, ಸದ್ಗುಣಗಳ ನಿಧಿಯೂ ಆದ ಇವನನ್ನು ನನ್ನ ದೂತರು ಒಯ್ಯಲು ಅಯೋಗ್ಯರು. ಆದ್ದರಿಂದ ನಾನೇ ಸ್ವತಃ ಬಂದಿದ್ದೇನೆ.

ಟಿಪ್ಪಣೆ:— ಧರ್ಮಸಂಯುಕ್ತಃ — ಧಾರ್ಮಿಕ. ಧರ್ಮೇಣ-ಸಂಯುಕ್ತಃ (ತೃ. ತ.) ಗುಣಸಾಗರಃ – ಗುಣಗಳಿಗೆ ಸಮುದ್ರದಂತಿದ್ದ, ಗುಣಗಳ ನಿಧಿಯಾದ. ಗುಣಾನಾಂ ಸಾಗರಃ (ಷ. ತ.ಸ.) ನ ಅರ್ಹಃ — ಅಯೋಗನು, ನನ್ನ ದೂತರಿಂದ ಒಯ್ಯಲ್ಪಡಲು ಅಯೋಗ್ಯನು. ಪುರುಷಃ — ಮನುಷ್ಯ, ದೂತ. ಮಮ ಪುರುಷಾಃ ಮತ್ಪುರುಷಾಃ (ಷ.ತ.ಸ.) ತೈಃ ಮತ್ಪುರುಷೈಃ.

**ಪುಟ ೩೧.** ೧೭. ಅನ್ವಯ:— ತತಃ ಯಮಃ ಪಾಶಬದ್ಧಂ ವಶಂ ಗತಂ ಅಂಗುಷ್ಠಮಾತ್ರಂ ಪುರುಷಂ ಸತ್ಯವತಃ ಕಾಯಾತ್ ಬಲಾತ್ ನಿಶ್ಚಕರ್ಷ ।

ಭಾಷಾಂತರ:— ಬಳಿಕ ಯಮನು ಪಾಶದಿಂದ (ಹಗ್ಗ) ಬಿಗಿಯಲ್ಪಟ್ಟ, (ತನ್ನ) ಕೈವಶವಾದ, ಹೆಬ್ಬೆರಳಿನಷ್ಟು ಆಕಾರವುಳ್ಳ ಜೀವನನ್ನು ಸತ್ಯವಾನನ ದೇಹದಿಂದ ಬಲಾತ್ಕಾರದಿಂದ ಸೆಳೆದನು.

ಟಿಪ್ಪಣಿ:— ಪಾಶಬದ್ಧಂ – ಪಾಶೇನ ಬದ್ಧಃ (ತೃ. ತ.), ತಂ. ಹಗ್ಗದಿಂದ ಬಿಗಿಯಲ್ಪಟ್ಟ. **ಅಂಗುಷ್ಠಮಾತ್ರಂ**–ಹೆಬ್ಬೆರಳಿನಷ್ಟು ಆಕಾರವುಳ್ಳ (ಜೀವ). ಅಂಗುಷ್ಠಸ್ಯ ಇವ ಮಾತ್ರಾ (*volume*) ಯಸ್ಯ ಸಃ ಅಂಗುಷ್ಠಮಾತ್ರಃ (ಬ. ಸ.) ತಂ. ಜೀವನ ಪರಿಮಾಣ ಆ ಆ ಜೀವಿಯ ಹೆಬ್ಬರಳಿನಷ್ಟಿರುತ್ತದೆ ಹಾಗೂ ಈ ಜೀವ ಹೃದಯ ಗುಹೆಯಲ್ಲಿ, ವಾಸಮಾಡಿ-

ಕೊಂಡಿರುತ್ತಾನೆ ಎಂಬ ಉಪನಿಷತ್ತುಗಳು ಸಾರುತ್ತವೆ. ತು ಮಾ.— ಅಂಗುಷ್ಠಮಾತ್ರಃ ಪುರುಷಃ ಮಧ್ಯ ಆತ್ಮನಿ ತಿಷ್ಠತಿ' 'ಅಂಗುಷ್ಠಮಾತ್ರಃ ಪುರುಷೋ ಹೃದ್ದೇಶೇಯಃ ಪ್ರತಿಷ್ಠಿತಃ'। ನಿಶ್ಚಕರ್ಷ—ಜಗ್ಗಿದನು. ಸೆಳೆದನು. ನಿಸ್+ಕೃಷ್ (೧. ಪ) ಧಾತುವಿನ ದ್ವಿ. ಭೂ. ತೃ.ಪು.ಏ.ವ. ಕಾಯಾತ್— ದೇಹದಿಂದ. ಬಲಾತ್—*forcibly*

೧೮. ಅನ್ವಯ:— ತತಃ ಸಮುದ್ಧೃತಪ್ರಾಣಂ ಗತಶ್ವಾಸಂ ಹತ-ಪ್ರಭಂ ನಿರ್ವಿಚೇಷ್ಟಂ ತತ್ ಶರೀರಂ ಅಪ್ರಿಯದರ್ಶನಂ ಬಭೂವ।

ಭಾಷಾಂತರ:— ಬಳಿಕ ಪ್ರಾಣ ಹೊರಟುಹೋದ (ಹೀರಲ್ಪಟ್ಟ), ಶ್ವಾಸೋಚ್ಛ್ವಾಸವಿಲ್ಲದ, ಕಾಂತಿಹೀನ ಹಾಗೂ ನಿಶ್ಚೇಷ್ಟವಾದ (ಚಲನೆಯಿಲ್ಲದ) ಆ ದೇಹವು ನೋಡಲಸಹ್ಯವಾಯಿತು.

ಟಿಪ್ಪಣಿ:— ಸಮುದ್ಧೃತಪ್ರಾಣಂ—ಹೀರಲ್ಪಟ್ಟ ಪ್ರಾಣವುಳ್ಳ, ಪ್ರಾಣ ಹೊರಟುಹೋದ. ಸಮುದ್ಧೃತಾಃ ಪ್ರಾಣಾಃ ಯಸ್ಮಾತ್ ತತ್ (ಬ. ಸ.) ಗತಶ್ವಾಸಂ—ಶ್ವಾಸವು ಹೋದ. ಶ್ವಾಸೋಚ್ಛ್ವಾಸವು ಬಂದಾದ. ಗತಃ ಶ್ವಾಸಃ ಯಸ್ಮಾತ್ ತತ್ (ಬ. ಸ.) ಹತಪ್ರಭಂ—ಕಾಂತಿಹೀನವಾದ. ಹತಾ ಪ್ರಭಾ ಯಸ್ಯ ತತ್ (ಬ. ಸ.) ನಿಶ್ಚೇಷ್ಟಂ—ಚಲನವಲನ ವ್ಯಾಪಾರವಿಲ್ಲದ. ನಿರ್ಗತಾ ಚೇಷ್ಟಾ ಯಸ್ಮಾತ್ ತತ್ (ಬ.ಸ.) ಅಪ್ರಿಯದರ್ಶನಂ—ನೋಡಲಸಹ್ಯವಾದುದು. ನ ಪ್ರಿಯಂ ಅಪ್ರಿಯಂ (ನ. ತ.) ಅಪ್ರಿಯಂ ದರ್ಶನಂ ಯಸ್ಯ ತತ್ (ಬ.ಸ.) ಬಭೂವ—ಆಯಿತು. ಭೂ (೧.ಪ) ಧಾತುವಿನ ದ್ವಿ. ಭೂ. ತೃ. ಪು. ಏ. ವ. ದೇಹಕ್ಕೆ ಜೀವದಿಂದಲೇ ಶೋಭೆ ಇರುತ್ತದೆ. ಆದ್ದರಿಂದ ಜೀವಹೋದ ಕ್ಷಣವೇ ದೇಹದ ಎಲ್ಲ ವ್ಯಾಪಾರ ನಿಂತು ಅದು ನೆಲಕ್ಕೆ ಉರುಳುತ್ತದೆ.

೧೯–೨೦. ಅನ್ವಯ:— ತತಃ ಯಮಃ ತು ತಂ ಬದ್ಧ್ವಾ ದಕ್ಷಿಣಾ-ಮುಖಃ ಪ್ರಯಾತಃ। ನಿಯಮವ್ರತಸಂಸಿದ್ಧಾ ಮಹಾಭಾಗಾ ಪತಿವ್ರತಾ ದುಃಖಾರ್ತಾ ಚ ಸಾವಿತ್ರೀ ಚ ಯಮಂ ಏವ ಅನ್ವಗಚ್ಛತ।

ಭಾಷಾಂತರ:— ಬಳಿಕ ಯಮನಾದರೋ ಆ ಜೀವನನ್ನು ಕಟ್ಟಿ, ದಕ್ಷಿಣದ ಕಡೆಗೆ ಮುಖಮಾಡಿಕೊಂಡು ಹೊರಟನು. (ಆಗ) ವ್ರತ–ನಿಯಮಗಳಿಂದ (ಅಥವಾ ವ್ರತನಿಯಮಗಳಲ್ಲಿ) ಸಿದ್ಧಿಪಡೆದ, ಪೂಜ್ಯಳೂ (ಸುದೈವಿ) ಪತಿವ್ರತೆಯೂ ಆದ ದುಃಖಗೊಂಡ ಸಾವಿತ್ರಿಯು ಯಮನನ್ನೇ ಹಿಂಬಾಲಿಸಿದಳು.

ಟಿಪ್ಪಣಿ: — ದಕ್ಷಿಣಾಮುಖಃ — ದಕ್ಷಿಣದಿಕ್ಕಿಗೆ ಮುಖಮಾಡಿಕೊಂಡು ದಕ್ಷಿಣಸ್ಯಾಂ ಮುಖಂ ಯಸ್ಯ ಸಃ (ಬ. ಸ.) ಯಮನು ದಕ್ಷಿಣ ದಿಕ್ಕಿನಲ್ಲಿರುತ್ತಾನೆಂದು ಪುರಾಣಗಳು ಹೇಳುತ್ತವೆ. ಪ್ರಯಾತಃ — ಹೋದನು. ನಿಯಮವ್ರತಸಂಸಿದ್ಧಾ — (i) ಶೌಚ ಮುಂತಾದ ನಿಯಮ ಹಾಗೂ ಚಾಂದ್ರಾಯಣ ಮೊದಲಾದ ವ್ರತಗಳಿಂದ ಸಿದ್ಧಿಪಡೆದ. (ii) ಶೌಚ ಮುಂತಾದ ನಿಯಮ ಹಾಗೂ ಚಾಂದ್ರಾಯಣ ಮೊದಲಾದ ವ್ರತಗಳಲ್ಲಿ ಸಿದ್ಧಿಪಡೆದ. ನಿಯಮಾಃ ವ್ರತಾಃ ಚ ನಿಯಮವ್ರತಾಃ (ದ್ವಂದ್ವ) ತೈಃ, ತೇಷು ವಾ ಸಂಸಿದ್ಧಾ (ಸಮ್ಯಕ್ ಸಿದ್ಧಾ-ಕ. ಸ.) ತೃ । ಸ. ತ. **ನಿಯಮಃ** — ಆಚರಿಸಲೇ ಬೇಕೆಂಬ ನಿರ್ಬಂಧವಿಲ್ಲದ ಧಾರ್ಮಿಕ ವಿಧಾನ. ನಿಯಮಗಳನ್ನು ಪಾಲಿಸುವದರಿಂದ ದೇಹಶುದ್ಧಿಯಾಗಿ ತದ್ದ್ವಾರಾ ಜ್ಞಾನಗಳಿಸಲು ಸುಲಭವಾಗುವದು. ಜ್ಞಾನದಿಂದ ಮೋಕ್ಷವು ದೊರೆಯುವದು. ಈ ನಿಯಮಗಳು ಮುಖ್ಯವಾಗಿ ೧೦ ಇವೆ. ಅವುಗಳನ್ನು ಕೆಳಗಿನ ಶ್ಲೋಕದಲ್ಲಿ ಹೇಳಲಾಗಿದೆ.

ಶೌಚಮಿಜ್ಯಾ ತಪೋ ದಾನಂ ಸ್ವಾಧ್ಯಾಯೋಪಸ್ಥನಿಗ್ರಹಃ ।
ವ್ರತಮೌನೋಪವಾಸಂಚ ಸ್ನಾನಂ ಚ ನಿಯಮಾ ದಶ ॥

**ವ್ರತಃ** (ತಂ) — ವ್ರತ, ಭಕ್ತಿ ಇಲ್ಲವೆ ಇಂದ್ರಿಯ ನಿಗ್ರಹವೇ ಪ್ರಾಮುಖ್ಯವುಳ್ಳ ಧಾರ್ಮಿಕ ವಿಧಿ. ವ್ರತಗಳನ್ನಾಚರಿಸುವದರಿಂದ ಅಂತಃಕರಣ ಶುದ್ಧಿಯಾಗಿ, ಜ್ಞಾನ ದೊರಕಿಸಲು ತುಂಬಾ ಸಹಾಯವಾಗುತ್ತದೆ. ಪುರಾಣಗಳಲ್ಲಿ ಅನೇಕ ವ್ರತಗಳನ್ನು (ಕೃಚ್ಛ್ರ, ಚಾಂದ್ರಾಯಣ ಮು.) ಹೇಳಿರುವದರಿಂದ ಅವುಗಳ ಸಂಖ್ಯೆಗೆ ಮಿತಿಯೇ ಇಲ್ಲದಾಗಿದೆ. ಇತ್ತೀಚೆಗೆ ಸತ್ಯನಾರಾಯಣ-ವ್ರತ. ಮುಂತಾದವುಗಳನ್ನು ಕೂಡ ವ್ರತಗಳ ಮಾಲಿಕೆಯಲ್ಲಿ ಸೇರಿಸಲಾಗಿದೆ. ಮಹಾಭಾಗಾ — ಸುದೈವಿಯಾದ. ಮಹಾನ್ ಭಾಗಃ (ಭಾಗಧೇಯಂ) ಯಸ್ಯಾಃ ಸಾ (ಬ. ಸ.) ದುಃಖಾರ್ತಾ — ದುಃಖೇನ ಆರ್ತಾ (ತೃ. ತ.) ದುಃಖದಿಂದ ಬಳಲುವ, ಅನ್ವಗಚ್ಛತ — ಅನುಸರಿಸಿದಳು. ಅನ್ವಗಚ್ಛತ್. ಅನು+ಗಮ್ (೧. ಪ) ಧಾತುವಿನ ಪ್ರ. ಭೂ. ತೃ. ಪು. ಏ. ವ.

**ಯಮಃ ಉವಾಚ** :— ಯಮನು ಅಂದನು :

೨೧. ಅನ್ವಯ:—ಸಾವಿತ್ರಿ, ನಿವರ್ತ, ಗಚ್ಛ । ಅಸ್ಯ ಔರ್ಧ್ವದೇಹಿಕ ಕುರುಷ್ವ । ತ್ವಯಾ ಭರ್ತುಃ ಆನೃಣ್ಯಂ ಕೃತಂ । ಯಾವತ್ ಗಮ್ಯಂ ತ್ವಯ ಗತಂ ।

ಭಾಷಾಂತರ:— ಸಾವಿತ್ರಿಯೇ, ಹಿಂತಿರುಗಿ ಹೋಗು, ಇವನ ಉತ್ತರ ಕ್ರಿಯೆಯನ್ನು ಮಾಡು. ಗಂಡನ ಋಣವನ್ನು ತೀರಿಸಿರುವೆ. (ನಿನಗೆ) ಶಕ್ಯವಿದ್ದಷ್ಟು ಬಂದಿರುವೆ.

ಟಿಪ್ಪಣೆ:— **ನಿವರ್ತ** — ಆರ್ಷರೂಪ. ನಿವರ್ತಸ್ವ ಎಂಬುದು ಶುದ್ಧ ರೂಪ. ನಿ+ವೃತ್ (೧. ಆ) ಧಾತುವಿನ ಆಜ್ಞಾರ್ಥ ದ್ವಿ. ಪು. ಏ. ವ. ಔರ್ಧ್ವದೇಹಿಕಂ — ಸತ್ತ ಮೇಲೆ ಮಾಡುವ ಕ್ರಿಯೆ. ಉತ್ತರ ಕ್ರಿಯೆ. ಊರ್ಧ್ವಂ ದೇಹಾತ್ ಊರ್ಧ್ವದೇಹಃ । ತಸ್ಮೈ ಸಾಧು (ತದ್ಧಿತ) ತ್ವಯಾ ಭರ್ತುಃ ಆನೃಣ್ಯಂ ಕೃತಂ (ಕರ್ಮಣಿ)—ತ್ವಂ ಭರ್ತುಃ ಆನೃಣ್ಯಂ ಕೃತವತೀ (ಕರ್ತರಿ) ಗಂಡನ ಋಣ ತೀರಿಸಿರುವೆ. ಗಂಡನು ಹೆಂಡತಿಯನ್ನು ಪ್ರೀತಿಸುತ್ತಾನೆ. ಹೆಂಡತಿಯಾದರೋ ಅವನ ಉಪಕಾರವನ್ನು ಪತಿಭಕ್ತಿ, ಪತಿನಿಷ್ಠೆ, ಪತಿಶುಶ್ರೂಷೆ (ಸೇವೆ) ಮುಂತಾದವುಗಳಿಂದ ತೀರಿಸುತ್ತಾಳೆ. ಆನೃಣತಾ— ಆನೃಣ್ಯಂ — ಋಣವಿಮೋಚನೆ (ಋಣವೆಂದರೆ ಸಾಲ ಪ್ರತಿಯೊಬ್ಬನಿಗೂ ದೇವ ಋಣ, ಋಷಿ ಋಣ, ಪಿತೃಋಣ ಎಂಬ ೩ ಋಣಗಳಿರುತ್ತವೆ. ಆದ್ದ-ರಿಂದ ದೇವತೆ, ಋಷಿ ಹಾಗೂ ಪಿತೃಗಳಿಗೆ ಸಲ್ಲಬೇಕಾದ ಧಾರ್ಮಿಕ ವಿಧಿಗಳನ್ನು ಆಚರಿಸಿ ಆ ಆ ಋಣದಿಂದ ಮನುಷ್ಯನು ಮುಕ್ತನಾಗಬೇಕು) ಸಾವಿತ್ರಿಯಾದರೋ ಗಂಡನನ್ನು ಅತಿಶಯವಾಗಿ ಪ್ರೀತಿಸಿ, ಅವನಲ್ಲಿ ಅತ್ಯಂತ ನಿಷ್ಠೆ ಇಟ್ಟು ಪರಿಪರಿಯಿಂದ ಅವನ ಶುಶ್ರೂಷೆ ಮಾಡಿದಳು. ಆದ್ದರಿಂದ ಅವಳು ಗಂಡನ ಋಣವನ್ನು ತೀರಿಸಿದಂತಾಗಿದೆ ಎಂದು ಯಮನು ಹೇಳುತ್ತಾನೆ. ಯಾವತ್ ಗಮ್ಯಂ— ಹೋಗಲು ಶಕ್ಯವಿದ್ದಷ್ಟು ಯಾವತ್‌ಗಮ್ಯಂ ತ್ವಂ ಗತವತೀ (ಕರ್ತರಿ).

**ಸಾವಿತ್ರೀ ಉವಾಚ:**—ಸಾವಿತ್ರಿಯು ಅಂದಳು.

೨೨. ಅನ್ವಯ:— ಯತ್ರಮೇ ಭರ್ತಾ ನೀಯತೇ, ಸ್ವಯಂ ವಾಯತ್ರ ಗಚ್ಛತಿ, ಮಯಾ ತತ್ರ ಗಂತವ್ಯಂ । ಏಷಃ ಸನಾತನಃ ಧರ್ಮಃ ।

ಭಾಷಾಂತರ:— ನನ್ನ ಗಂಡನನ್ನು ಎಲ್ಲಿ ಒಯ್ಯಲಾಗುವದೋ (ಒಯ್ಯಲ್ಪಡುವನೋ) ಅಥವಾ ಸ್ವತಃ ಎಲ್ಲಿ ಹೋಗುವನೋ, ಅಲ್ಲಿ ನಾನು ಹೋಗಬೇಕು. ಇದು ಪರಂಪರಾಗತವಾದ ಧರ್ಮವು.

ಟಿಪ್ಪಣೆ:—ನೀಯತೇ—ಒಯ್ಯಲ್ಪಡುತ್ತಾನೆ. ನೀ (೧.ಪ) ಧಾತುವಿನ ಕರ್ಮಣಿ ವ. ಕಾ. ತೃ. ಪು. ಏ. ವ. ಮಯಾ ಗಂತವ್ಯಂ ( ಕರ್ಮಣಿ ) —

ಅಹಂ ಗಚ್ಛೇಯಂ (ಕರ್ತರಿ) ಗಂತವ್ಯಂ ಗಮ್ (೧.ಪ) ಧಾತುವಿನ ಕರ್ಮಣಿ ವಿಧ್ಯರ್ಥ ಧಾ. ವಿ. (ನ) ಪ್ರ. ಏ. ವ. ಸನಾತನ— ಹಳೆಯ ಪರಂಪರಾಗತ ವಾದ.

೨೩. ಅನ್ವಯ:— ತಪಸಾ, ಗುರುಭಕ್ತ್ಯಾ, ಭರ್ತುಃ ಸ್ನೇಹಾತ್, ವ್ರತೇನ, ತವ ಚ ಪ್ರಸಾದೇನ ಏವ ಮೇ ಗತಿಃ ಅಪ್ರತಿಹತಾ।

ಭಾಷಾಂತರ:—(ನಾನು ಮಾಡಿದ) ತಪಸ್ಸು ಹಾಗೂ ವ್ರತಗಳಿಂದ, ಹಿರಿಯರಲ್ಲಿ (ತೋರಿದ) ಭಕ್ತಿಯಿಂದ, ಗಂಡನ ಮೇಲಿನ ಪ್ರೀತಿಯಿಂದ ಹಾಗೂ ನಿನ್ನ ಅನುಗ್ರಹದಿಂದಲೂ ನನ್ನ ಮಾರ್ಗಕ್ಕೆ (ಶಬ್ದಶಃ, ನನ್ನ ಬರುವಿಕೆಗೆ) ತಡೆಯಿಲ್ಲ.

ಟಿಪ್ಪಣಿ:— ತಪಸಾ – ಈ ವರೆಗೆ ಆಚರಿಸುತ್ತಿದ್ದ ತಪಸ್ಸು, ವ್ರತೇನ– ಸಾವಿತ್ರಿಯು ಉಪವಾಸ ವ್ರತವನ್ನು ಕೈಕೊಂಡಿದ್ದಳು. ಆಗ ೩ ದಿನಗಳವರೆಗೆ ಉಪವಾಸವಿದ್ದಳು. ಅಂದು ಸೂರ್ಯಾಸ್ತವಾದ ಬಳಿಕ ಉಪವಾಸ ಮುರಿದು ಪಾರಣೆ ಮಾಡಬೇಕಾಗಿತ್ತು. ಗುರುಭಕ್ತ್ಯಾ— ಗುರುಷು ಭಕ್ತಿಃ (ಷ.ತ.ಸ) ತಯಾ–ಅತ್ತೆ ಮಾವಂದಿರು ಹಾಗೂ ಇತರ ಹಿರಿಯರ ವಿಷಯವಾಗಿ ತೋರಿದ ಭಕ್ತಿ, ಭರ್ತುಃ ಸ್ನೇಹಾತ್—(i) ಗಂಡನ ಮೇಲಿನ ಪ್ರೀತಿ (ii) ಗಂಡನು ನನ್ನ ಮೇಲೆ ತೋರಿದ ಪ್ರೀತಿ. ಮೇಗತಿಃ ಅಪ್ರತಿಹತಾ— ನನ್ನ ಮಾರ್ಗವು ನಿರಾತಂಕವಾಗಿದೆ. '*my course is unimpeded.*' ನ ಪ್ರತಿಹತಾ ಅಪ್ರತಿಹತಾ (ನ. ತ.)

೨೪ ಅನ್ವಯ:—ತತ್ತ್ವಾರ್ಥದರ್ಶಿನಃ ಬುಧಾಃ ಮೈತ್ರಂ ಸಾಪ್ತಪದಂ ಪ್ರಾಹುಃ । ಮಿತ್ರತಾಂ ಚ ಪುರಸ್ಕೃತ್ಯ ಕಿಂಚಿತ್ ವಕ್ಷ್ಯಾಮಿ । ತತ್ ಶ್ರುಣು

ಭಾಷಾಂತರ :— ಏಳು ಹೆಜ್ಜೆ ಕೂಡಿ ನಡೆಯುವದರಿಂದ (ಅಥವಾ ೭ ಶಬ್ದಗಳನ್ನು ಮಾತಾಡುವದರಿಂದ) ಗೆಳೆತನ ಉಂಟಾಗುತ್ತದೆಂದು ನಿಜವಾದ ಜ್ಞಾನವುಳ್ಳ (ಅಥವಾ ಸತ್ಯವನ್ನರಿತ) ಜ್ಞಾನಿಗಳು ಹೇಳುತ್ತಾರೆ ಆದ್ದರಿಂದ ಈ ಗೆಳೆತನವನ್ನು ಮುಂದಿಟ್ಟುಕೊಂಡು ಸ್ವಲ್ಪ ಮಾತನಾಡುವೆನು. ಅದನ್ನು ಕೇಳು.

ಟಿಪ್ಪಣಿ:—ಮೈತ್ರಂ—ಆರ್ಷರೂಪ. ಶುದ್ಧರೂಪವು ಮೈತ್ರೀ ಎಂಬುದಾಗಿದೆ. ಗೆಳೆತನ ಎಂದು ಅರ್ಥ. **ಸಾಪ್ತಪದಂ**—ಸಪ್ತಾನಾಂ ಪದಾನಾಂ ಇದಂ ಸಾಪ್ತಪದಂ (ತದ್ಧಿತ) (i) ಏಳು ಹೆಜ್ಜೆ ಕೂಡಿ ನಡೆಯುವ

ದರಿಂದ ಗೆಳೆತನವುಂಟಾಗುತ್ತದೆಂದು ಹಿಂದೂ ಜನರ ನಂಬಿಕೆ ಇದೆ. ಅಂತೆಯೇ ವಿವಾಹ ಪದ್ಧತಿಯಲ್ಲಿ ಸಪ್ತಪದೀ ( ಸಪ್ತಾನಾಂ ಪದಾನಾಂ ಸಮಾಹಾರಃ ದ್ವಿಗು.ಸ.) ಸಮಾರಂಭ (ಎಂದರೆ, ಅಗ್ನಿಯ ಸನ್ನಿಧಿಯಲ್ಲಿ ಗಂಡಹೆಂಡಂದಿರು ಕೂಡಿ ಏಳು ಹೆಜ್ಜೆ ನಡೆಯುವದು) ಮುಗಿದ ನಂತರವೇ ವಿವಾಹವು ಪೂರ್ಣ ವಾಗಿ ಸಾಂಗವಾದಂತಾಗುವದು. ಗಂಡಹೆಂಡಂದಿರು ಈ ರೀತಿ ಅಗ್ನಿಯ ಸಮ್ಮುಖದಲ್ಲಿ ಏಳು ಹೆಜ್ಜೆ ಕೂಡಿ ನಡೆಯುವದರಿಂದ ಅವರಲ್ಲಿ ಪರಸ್ಪರ ಪರಿಚಯ, ಗೆಳೆತನ ಹಾಗೂ ಸಲಿಗೆ ಹುಟ್ಟುತ್ತವೆ. ( ತು. ಮಾ. ' ಸಖಾ ಭವ ಸಪ್ತಪದೀ' ಎಂದು ವರನು ವಧುವಿಗೆ ಅಂದು, ಅವಳೊಡನೆ ಏಳು ಹೆಜ್ಜೆ ನಡೆಯುವನು). (ii) ಅಥವಾ 'ಪದ' ಎಂದರೆ ಶಬ್ದ, ಮಾತು ಎಂದೂ ಇಟ್ಟುಕೊಳ್ಳಬಹುದು. ಪರಸ್ಪರರು ಏಳು ಶಬ್ದ ಮಾತನಾಡುವದರಿಂದ ಗೆಳೆತನವುಂಟಾಗುತ್ತದೆಂಬ ಕಲ್ಪನೆ ಇದೆ. ಅಂತೆಯೇ ದಿಲೀಪನು ಮಾಯಾ ಸಿಂಹಕ್ಕೆ ' ನಾವಿಬ್ಬರೂ ಈ ವರೆಗೆ ಕೂಡಿ ಮಾತನಾಡಿದುದರಿಂದ ಗೆಳೆಯ ರಾಗಿದ್ದೇವೆ. ' ಎಂದು ಅನ್ನುತ್ತಾನೆ ) ತು. ಮಾ. ಸಂಬಂಧಮಾಭಾಷಣ ಪೂರ್ವಮಾಹುಃ । — ಸಾವಿತ್ರಿಯು ಯಮನೊಡನೆ ಕೆಲವು ಹೆಜ್ಜೆ ನಡೆದು ಕೆಲವೊಂದು ಮಾತುಗಳನ್ನಾಡಿದುದರಿಂದ ಅವರಿಬ್ಬರಲ್ಲಿ ಸ್ನೇಹ ಇಲ್ಲವೆ ಸೌಹಾರ್ದ ಉಂಟಾಗಿದೆಯೆಂದೂ ಅದಕ್ಕಾಗಿ ತನ್ನ ಪ್ರಾರ್ಥನೆಯನ್ನು ಕೇಳ ಬೇಕೆಂದೂ ಯಮುನಿಗೆ ಬಿನ್ನಯಿಸಿಕೊಳ್ಳುತ್ತಾಳೆ. ತತ್ತ್ವಾರ್ಥದರ್ಶಿನಃ ತತ್ತ್ವಸ್ಯ ಅರ್ಥಃ ತತ್ತ್ವಾರ್ಥಃ (ಷ. ತ. ಸ.) ತಂ ಪಶ್ಯಂತಿ ಇತಿ (ಉಪ. ತ.) ತತ್ತ್ವಗಳ ಅರ್ಥವನ್ನರಿತ ತತ್ತ್ವಾರ್ಥ ಎಂದರೆ, ಮೂಲಭೂತ ಸತ್ಯ ಅಥವಾ ನಿಜವಾದ ವಸ್ತುರೂಪ ಎಂದೂ ಅರ್ಥವಾಗುವದು. ಈ ಸತ್ಯ ಇಲ್ಲವೆ ಯಥಾ ರ್ಥವನ್ನರಿತವರೇ ತತ್ತ್ವಾರ್ಥ ಬಲ್ಲವರು. ವಕ್ಷ್ಯಾಮಿ — ವಚ್ (೨ ಪ.) ಧಾತುವಿನ ದ್ವಿ. ಭ. ಪ್ರ. ಪು. ಏ. ವ. ಶೃಣು — ಕೇಳು ಶ್ರು (೫ಉ) ಧಾತು ವಿನ ಆಜ್ಞಾರ್ಥ ದ್ವಿ. ಪು. ಏ. ವ.

೨೫–೨೬ ಅನ್ವಯ: — ಅನಾತ್ಮವಂತಃ [ಅಜಿತೇಂದ್ರಿಯಾಃ] ವನೇ (ಗ್ರಾಮೇ ವಾ) ಧರ್ಮಂ [ಯಜ್ಞಾದಿರೂಪಂ], ವಾಸಂ [ಗುರುಕುಲವಾಸಂ ಬ್ರಹ್ಮಚರ್ಯಂ] ಪರಿಶ್ರಮಂ [ಪರಿತ್ಯಾಗರೂಪಮಾಶ್ರಮಂ ಸನ್ಯಾಸಂ] ಚ ನ ಚರಂತಿ। ವಿಜ್ಞಾನತಃ [ಆತ್ಮವಿಜ್ಞಾನಾಯ] ಧರ್ಮಂ ಉದಾಹರಂತಿ। ತಸ್ಮಾತ್ ಸಂತಃ ಧರ್ಮಂ ಪ್ರಧಾನಂ ಆಹುಃ।

ವಯಂ ಸರ್ವೇ ಸತಾಂಮತೇನ (ದಂಭಾದಿರಹಿತಶ್ರದ್ಧಯಾ ಸಮ್ಯಕ್ ಅನುಷ್ಠಿತೇನ) ಏಕಸ್ಯ ಧರ್ಮೇಣ (ಗೃಹಸ್ಥಾಶ್ರಮಧರ್ಮೇಣ) ತಂ ಮಾರ್ಗಂ (ಜ್ಞಾನಮಾರ್ಗಂ) ಪ್ರಪನ್ನಾಃ ಸ್ಮಃ। (ಧರ್ಮಂ ಚ ವಾಸಂ ಚ ಪರಿಶ್ರಮಂ ಚ ಇತ್ಯೇತೇಷಾಂ ಮಧ್ಯೇ) ದ್ವಿತೀಯಂ (ನೈಷ್ಠಿಕಂ ಗುರುಕುಲವಾಸಂ), ತೃತೀಯಂ (ಪಾರಿವ್ರಾಜ್ಯಂ) ಚ ಮಾ ವಾಂಛೇ। ತಸ್ಮಾತ್ ಸಂತಃ ಧರ್ಮಂ ಪ್ರಧಾನಂ ಆಹುಃ।

ಭಾಷಾಂತರ:— ಇಂದ್ರಿಯಗಳನ್ನು ನಿಗ್ರಹಿಸದಿದ್ದವರು ಅಡವಿಯಲ್ಲಿ [ಇಲ್ಲವೆ ಊರಲ್ಲಿ] (ಯಜ್ಞಯಾಗಾದಿರೂಪವಾದ) ಗೃಹಸ್ಥ ಹಾಗೂ ವಾನ-ಪ್ರಸ್ಥ ಧರ್ಮವನ್ನು (ಗುರುಕುಲವಾಸ ರೂಪವಾದ) ಬ್ರಹ್ಮಚರ್ಯವನ್ನು ಮತ್ತು (ತ್ಯಾಗರೂಪವಾದ) ಸನ್ಯಾಸಧರ್ಮವನ್ನು ಆಚರಿಸಲಾರರು. (ಜಿತೇಂದ್ರಿಯರಾದವರೇ ಈ ನಾಲ್ಕು ಆಶ್ರಮ ಧರ್ಮಗಳನ್ನು ಆಚರಿಸ ಬಲ್ಲರು ಎಂದು ಅಭಿಪ್ರಾಯ). ಧರ್ಮವು ಆತ್ಮಜ್ಞಾನಕ್ಕೋಸ್ಕರ, ಎಂದರೆ ನಿಜವಾದ ಜ್ಞಾನ ಹುಟ್ಟಿಸುವದಕ್ಕಾಗಿಯೇ, ಇದೆ ಎಂದು (ಬಲ್ಲವರು) ಹೇಳುತ್ತಾರೆ. ಆದ್ದರಿಂದ ಸಜ್ಜನರು ಧರ್ಮವೇ (ಎಲ್ಲ ಪದಾರ್ಥಗಳಲ್ಲಿ) ಮುಖ್ಯವಾದದ್ದೆಂದು ಹೇಳುವರು.

ನಾವೆಲ್ಲರೂ ಸಜ್ಜನರಿಗೆ ಇಷ್ಟವಾದ ರೀತಿಯಂತೆ (ಎಂದರೆ ಬಾಹ್ಯಾ-ಡಂಬರರಹಿತ ಭಕ್ತಿಯಿಂದ) (ಗೃಹಸ್ಥ) ಧರ್ಮ ಒಂದರಿಂದಲೇ (ಎಂದರೆ, ಗೃಹಸ್ಥ ಧರ್ಮವೊಂದರ ಪರಿಪಾಲನೆಯಿಂದಲೇ) ಆ ಮಾರ್ಗವನ್ನು ಎಂದರೆ ಜ್ಞಾನವನ್ನು ಪಡೆದಿದ್ದೇವೆ. ಎರಡನೆಯದನ್ನು ಹಾಗೂ ಮೂರನೆಯದನ್ನು (ಎಂದರೆ ಬ್ರಹ್ಮಚರ್ಯ ಹಾಗೂ ಸನ್ಯಾಸಧರ್ಮವನ್ನು) ನಾನು ಅಪೇಕ್ಷಿಸು-ವದಿಲ್ಲ. ಆದ್ದರಿಂದ ಸಜ್ಜನರು (ಎಲ್ಲ ಪದಾರ್ಥಗಳಲ್ಲಿ) ಧರ್ಮವೇ ಮುಖ್ಯ-ವಾದದ್ದೆಂದು ಹೇಳುವರು.

ಅಥವಾ

೨೫–೨೬ ಅನ್ವಯ:— ನಾನಾ ಆತ್ಮವಂತಃ (ಬಹವೋ ಜನಾಃ) ವನೇ ಧರ್ಮಂ (ಅನುಷ್ಠಾನರೂಪಂ) ವಾಸಂ (ವಸತಿಂ) ಪರಿಶ್ರಮಂ ಚ(ತಪಶ್ಚರಣ ರೂಪಂ) ಚರಂತಿ। (ತೇ ಸರ್ವೇ) ವಿಜ್ಞಾನತಃ (ಏವ) ಧರ್ಮಂ (ಕಾರ್ಯಾ ಕಾರ್ಯರೂಪಂ) ಉದಾಹರಂತಿ (ಉಪದಿಶಂತಿ)। ತಸ್ಮಾತ್ ಸಂತಃ ಧರ್ಮಂ (ಕಾರ್ಯಾಕಾರ್ಯರೂಪಂ) ಪ್ರಧಾನಂ ಆಹುಃ॥

ಏಕಸ್ಯ (ಶ್ರೇಷ್ಠಸ್ಯ) ಸತಾಂ ಮತೇನ ಧರ್ಮೇಣ ಸರ್ವೇ (ಅಸ್ಮಾದೃಶಾಃ ಸಾಧಾರಣಾ ಲೌಕಿಕಾಶ್ಚ ಜನಾಃ) ತಂ ಮಾರ್ಗಂ (ಧರ್ಮರೂಪಂ) ಅನುಪ್ರಪನ್ನಾಃ। (ಅಹಂ) ದ್ವಿತೀಯಂ (ಪುರುಷಾರ್ಥಂ ಅರ್ಥಾಖ್ಯಂ) ತೃತೀಯಂ ಚ (ಕಾಮಾಖ್ಯಂ) ಮಾ ವೈ (ನೈವ) ವಾಂಛೇ (ವಾಂಛಾಮಿ)।

ಭಾಷಾಂತರ:— ಅಡವಿಯಲ್ಲಿ ಬಹಳ ಜನರು ಧಾರ್ಮಿಕ ವಿಧಿಗಳನ್ನು ಮಾಡುತ್ತಾರೆ. (ಅಲ್ಲಿ) ವಾಸಿಸುತ್ತಾರೆ ಮತ್ತು ತಪಸ್ಸನ್ನಾಚರಿಸುತ್ತಾರೆ. ಅವರೆಲ್ಲರು ವಿಜ್ಞಾನದಿಂದಲೇ ಧರ್ಮವನ್ನು ಉಪದೇಶಿಸುತ್ತಾರೆ. ಆದ್ದರಿಂದ ಧರ್ಮವೇ ಶ್ರೇಷ್ಠವೆಂದು ಜ್ಞಾನಿಗಳು ಹೇಳುತ್ತಾರೆ.

ನಮ್ಮಂತಹ ಎಲ್ಲ ಸಾಮಾನ್ಯ ಜನರು ಸಜ್ಜನರಿಗೆ ಸಮ್ಮತವಾದ (ಶ್ರೇಷ್ಠ ಜನರ) ಮಾರ್ಗವನ್ನು ಅನುಸರಿಸುತ್ತಾರೆ. ನಾನು ಎರಡನೆಯದನ್ನು (ಅರ್ಥರೂಪ ಪುರುಷಾರ್ಥ) ಹಾಗೂ ಮೂರನೆಯದನ್ನು (ಕಾಮರೂಪ ಪುರುಷಾರ್ಥ) ಇಚ್ಛಿಸುವದಿಲ್ಲ.

ಟಿಪ್ಪಣಿ:— ಈ ಎರಡು ಶ್ಲೋಕಗಳು ನಿಜವಾಗಿಯೂ ಕ್ಲಿಷ್ಟ ಇವೆ. ಬೇರೆ ಬೇರೆ ಜನರು ಬೇರೆ ರೀತಿಯಿಂದ ಈ ಶ್ಲೋಕಗಳ ಅರ್ಥ ಮಾಡುತ್ತಾರೆ. ಅವುಗಳಲ್ಲಿ ಮುಖ್ಯವಾದ ಎರಡು ಅರ್ಥಗಳನ್ನು ಮೇಲೆ ಕೊಡಲಾಗಿದೆ. ೧ನೆಯ ಅರ್ಥ ನೀಲಕಂಠೀ ಟೀಕಾಕ್ಕೆ ಅನುಗುಣವಾಗಿ ಇದೆ. ಎರಡನೆಯ ಅರ್ಥ ಡಾಕ್ಟರ ಪಿ. ಎಲ್. ವೈದ್ಯರ ವಿವರಣೆಯ ಮೇರೆಗೆ ಇದೆ.

೧ನೆಯ ರೀತಿ:— ಇಂದ್ರಿಯಗಳನ್ನು ನಿಗ್ರಹಿಸದೆ ಇದ್ದವರಿಗೆ ಅಡವಿಯಲ್ಲಿ ಇಲ್ಲವೆ ಊರಲ್ಲಿ ಬ್ರಹ್ಮಚರ್ಯ, ಗೃಹಸ್ಥ, ವಾನಪ್ರಸ್ಥ ಹಾಗೂ ಸನ್ಯಾಸ ಧರ್ಮಗಳಲ್ಲಿ ಯಾವದನ್ನೂ ಪಾಲಿಸಲು ಆಗುವದಿಲ್ಲ. ಜಿತೇಂದ್ರಿಯರಾದವರೇ ಇಂಥ ಧರ್ಮಗಳನ್ನು ಆಚರಿಸಬಲ್ಲರು. ಅಂತಹ ಧರ್ಮವು ಆತ್ಮಜ್ಞಾನವನ್ನುಂಟುಮಾಡುವದರಿಂದ, ಧರ್ಮವೇ ಮುಖ್ಯವೆಂದು ದೊಡ್ಡವರು ಹೇಳುವರು. ಮೇಲೆ ಹೇಳಿದ ಧರ್ಮಗಳಲ್ಲಿ ಬ್ರಹ್ಮಚರ್ಯ, ಸನ್ಯಾಸ ಈ ಎರಡು ಧರ್ಮಗಳನ್ನು ನಾವು ಅಪೇಕ್ಷಿಸದೆ ಸತ್ಪುರುಷರಿಗೆ ಅಭಿಮತವಾದ ಗೃಹಸ್ಥ ಧರ್ಮವೊಂದನ್ನೇ ಆಶ್ರಯಿಸಿಕೊಂಡು ಜ್ಞಾನವನ್ನು ಸಂಪಾದಿಸತಕ್ಕವರು. ಆದ್ದರಿಂದ ಈ ಆಶ್ರಮ ಧರ್ಮವು ದೊಡ್ಡದೆಂದು ತಿಳಿದವರು ಹೇಳುವರು. ದಂಪತಿಗಳಾದ ನಮ್ಮಿಬ್ಬರಲ್ಲಿ ನನ್ನ ಪತಿಯನ್ನು

ನೀನು ಒಯ್ದು ನಮ್ಮ ಗೃಹಸ್ಥ ಧರ್ಮವು ನಷ್ಟವಾಗುವಂತೆ ಮಾಡಬೇಡ' ಎಂದು ಸಾವಿತ್ರಿ ಯಮನಿಗೆ ಬೇಡಿಕೊಳ್ಳುತಾಳೆ.

ಅನಾತ್ಮವಂತಃ— ಇಂದ್ರಿಯಗಳನ್ನು ನಿಗ್ರಹಿಸದೆ ಇದುವವರು. ನ ಆತ್ಮವಂತಃ (ನ. ತ) ಆತ್ಮವಾನ್ ಎಂದರೆ ಜಿತೇಂದ್ರಿಯನು. 'ವಶೇಹಿ-ಯಸ್ಯೇಂದ್ರಿಯಾಣಿ ತಸ್ಯ ಪ್ರಜ್ಞಾ ಪ್ರತಿಷ್ಠಿತಾ' ಎಂದು ಗೀತೆಯಲ್ಲಿ ಶ್ರೀಕೃ-ಷ್ಣನು ಹೇಳಿದ ಮೇರೆಗೆ, ಇಂದ್ರಿಯಗಳನ್ನು ನಿಯಂತ್ರಿಸುವವರಿಗೆ ಮಾತ್ರ ಜ್ಞಾನೋದಯವಾಗಿ ಚತುರಾಶ್ರಮಗಳ ಧರ್ಮ ಪರಿಪಾಲನೆ ಸಾಧ್ಯವಿದೆ. ಮಿಕ್ಕವರಿಗೆ ಇದು ಸಾಧ್ಯವಿಲ್ಲ. ಅವರು ಅಡವಿಯಲ್ಲಿದ್ದರೂ, ವಿಷಯಗಳ ಕಡೆಗೆ ಮನಸ್ಸು ಹರಿಯುವದರಿಂದ ಧರ್ಮಪರಿಪಾಲನೆ ಆಗದು. (೨೫ನೇ ಶ್ಲೋಕದ ೧ನೇ ಸಾಲಿನಲ್ಲಿದ್ದ ಧರ್ಮ ಶಬ್ದಕ್ಕೆ ಯಜ್ಞಯಾಗಾದಿರೂಪ ಧರ್ಮ ಎಂದು ಅರ್ಥ ಯಜ್ಞಗಳನ್ನು ಮಾಡುವಾಗ ಸಹಧರ್ಮಚಾರಿಣಿ-ಯಾದ ಹೆಂಡತಿಯ ಅವಶ್ಯಕತೆ ಇರುವದರಿಂದ, ಧರ್ಮ ಪದದಿಂದ ಗೃಹಸ್ಥ ಹಾಗೂ ವಾನಪ್ರಸ್ಥ ಧರ್ಮಗಳು ಸೂಚಿತವಾಗುತ್ತವೆ. ವಾಸ ಎಂದರೆ ಗುರುಕುಲವಾಸ; ಅರ್ಥಾತ್ ಬ್ರಹ್ಮಚರ್ಯಧರ್ಮ. ಪರಿಶ್ರಮ ಎಂದರೆ ತ್ಯಾಗರೂಪ ಸನ್ಯಾಸ.)

ಧರ್ಮದ ಉದ್ದೇಶವೆಂದರೆ ಜ್ಞಾನಲಾಭ. ಆತ್ಮಜ್ಞಾನ ದೊರಕಿಸಿ-ಕೊಡುವದೇ ಧರ್ಮದ ಮುಖ್ಯ ಧ್ಯೇಯ. (ವಿಜ್ಞಾನತಃ = ವಿಜ್ಞಾನಾಯ. ವಿಶೇಷ ಜ್ಞಾನಕ್ಕಾಗಿ, ಆತ್ಮಜ್ಞಾನಕ್ಕಾಗಿ. ಚತುರ್ಥೀ ವಿಭಕ್ತಿಯ ಅರ್ಥ-ದಲ್ಲಿಯೂ ತಸ್ ಪ್ರತ್ಯಯ ಬರುತ್ತದೆ).

ಆದರೆ ಈ ಜ್ಞಾನ ಪಡೆಯಲು ನಾಲ್ಕೂ ಆಶ್ರಮ ಧರ್ಮಗಳನ್ನು ಕೂಡಿಯೇ ಪಾಲಿಸಬೇಕೆಂಬ ನಿರ್ಬಂಧವಿಲ್ಲ. ಒಂದರಿಂದಲೂ ಕಾರ್ಯ-ವಾಗಬಹುದು. ಮುಖ್ಯವಾಗಿ ಆತ್ಮಜ್ಞಾನವಾಗಬೇಕು. ಆದ್ದರಿಂದ ಸಾವಿ-ತ್ರಿಯು ನಾಲ್ಕು ಆಶ್ರಮಗಳಲ್ಲಿ ಗೃಹಸ್ಥಾಶ್ರಮವನ್ನು ಸ್ವೀಕರಿಸಿದ್ದಾಳೆ. ಆ ಗೃಹಸ್ಥ ಧರ್ಮವೊಂದನ್ನೇ ಬಾಹ್ಯಾಡಂಬರವಿಲ್ಲದ ಭಕ್ತಿಪುರಸ್ಸರವಾಗಿ ಆಚರಿ-ಸಿದ್ದರಿಂದ ಜ್ಞಾನ ಪಡೆದಿದ್ದಾಳೆ. (ಸರ್ವೇ=ಸರ್ವೇ ವಯಂ ಏಕಸ್ಯ ಧರ್ಮೇಣ=ಗೃಹಸ್ಥಾಶ್ರಮ ಧರ್ಮೇಣ ತಂ ಮಾರ್ಗಂ=ಜ್ಞಾನಮಾರ್ಗಂ ಪ್ರಪನ್ನಾಃ=ಪ್ರಾಪ್ತಾಃ ಸ್ಮಃ) ಕಾರಣ ಅವಳು ಬ್ರಹ್ಮಚರ್ಯ ಇಲ್ಲವೆ ಸನ್ಯಾಸ ಧರ್ಮವನ್ನು ಬಯಸುವದಿಲ್ಲ. (ಧರ್ಮ, ವಾಸ, ಪರಿಶ್ರಮಗಳಲ್ಲಿ ಎರಡನೆ-ಯದನ್ನು ಎಂದರೆ ಬ್ರಹ್ಮಚರ್ಯ, ೩ನೆಯದನ್ನು ಎಂದರೆ ಸನ್ಯಾಸವನ್ನು

ಮೊವಾಂಛೇ= ನ ವಾಂಛಾಮಿ). ಆದುದರಿಂದ ಸತ್ಯವಾನನನ್ನು ತೆಗೆದು-ಕೊಂಡು ಹೋಗಿ ಅವಳ ಗೃಹಸ್ಥಾಶ್ರಮ ಧರ್ಮಕ್ಕೆ ಚ್ಯುತಿ ಉಂಟು ಮಾಡ-ಬಾರದೆಂದು ಸಾವಿತ್ರಿಯು ಯಮನಿಗೆ ಪರಿಪರಿಯಿಂದ ಬೇಡಿಕೊಳ್ಳುತ್ತಾಳೆ.

೨ನೆಯ ರೀತಿ:— ಧರ್ಮ ಆಚರಿಸುವದಕ್ಕಾಗಿ ಬೇರೆ ಬೇರೆ ಜನರು ಅಡವಿಯನ್ನಾಶ್ರಯಿಸುವರು. ಅಡವಿಯಲ್ಲಿ ಕೆಲವರು ಧಾರ್ಮಿಕ ವಿಧಿಗಳ-ನ್ನಾಚರಿಸುವರು; ಕೆಲವರು ಅಡವಿಯಲ್ಲಿಯೇ ವಾಸಮಾಡಿಕೊಂಡಿರುವರು; ಮತ್ತೆ ಕೆಲವರು ತಪಸ್ಸನ್ನಾಚರಿಸುವರು. ಆದರೆ ಬೇರೆ ಬೇರೆ ಮಾರ್ಗ ಅವಲಂಬಿಸಿದ ಇವರೆಲ್ಲರೂ ಜ್ಞಾನದಿಂದಲೇ ಧರ್ಮವೆಂಬ ಮಾತನ್ನು ಉಪದೇಶಿಸುತ್ತಾರೆ. ಅಂತೆಯೇ ಧರ್ಮವು ಶ್ರೇಷ್ಠವಾದದ್ದು. (ನಾನಾತ್ಮ-ವಂತಃ ಎಂಬ ಪದವನ್ನು ನಾನಾ ಆತ್ಮವಂತಃ ಎಂದು ಬಿಡಿಸಬೇಕು. ಬಹಳ ಜನರು ಎಂದು ಅರ್ಥ. ನಾನಾ—ಬಹಳ. ಆತ್ಮವಂತಃ—ಆತ್ಮವುಳ್ಳ ಜನರು ಧರ್ಮಂ—ವ್ರತನಿಯಮಗಳ ಅನುಷ್ಠಾನರೂಪವಾದ ಧರ್ಮ. ವಾಸಂ—ವಾಸಮಾಡಿಕೊಂಡಿರುವದು. ಪರಿಶ್ರಮಂ—ಪ್ರಯಾಸಕರವಾದ ತಪಸ್ಸು. ವಿಜ್ಞಾನತಃ—ಜ್ಞಾನದಿಂದ. ಆತ್ಮಜ್ಞಾನದಿಂದಲೇ).

ಧರ್ಮ ಗಳಿಸಲು ಅನೇಕ ಮಾರ್ಗಗಳಿದ್ದರೂ, ಸಾಮಾನ್ಯ ಮನುಷ್ಯ-ರಾದ ನಾವು ಶ್ರೇಷ್ಠಜನರ ಮಾರ್ಗವನ್ನು ಅನುಸರಿಸಬೇಕು. ಏಕೆಂದರೆ ಇದುವೇ ಸಜ್ಜನರಿಗೆ ಸಮ್ಮತವಾಗಿರುತ್ತದೆ. ಪುರುಷಾರ್ಥಗಳಲ್ಲಿ (ಧರ್ಮ, ಅರ್ಥ, ಕಾಮ, ಮೋಕ್ಷ) ಎರಡನೆಯದಾದ ಅರ್ಥ ಹಾಗೂ ೩ನೆಯದಾದ ಕಾಮ ಇವುಗಳನ್ನು ನಾನು ಅಪೇಕ್ಷಿಸುವದಿಲ್ಲ (ಏಕಸ್ಯ=ಶ್ರೇಷ್ಠಸ್ಯ. ಸತಾಂ-ಮತೇನ—ಸಜ್ಜನರಿಗೆ ಸಮ್ಮತವಾದ. ಸರ್ವೇ— ನಮ್ಮಂಥ ಸಾಧಾರಣ ಲೌಕಿಕರು. ತಂ ಮಾರ್ಗಂ ಪ್ರಪನ್ನಾಃ— ಆ ಧರ್ಮಮಾರ್ಗವನ್ನು ಆಶ್ರಯಿ ಸಿದ್ದೇವೆ. ದ್ವಿತೀಯಂ ತೃತೀಯಂ ಚ:— ಧರ್ಮ, ಅರ್ಥ, ಕಾಮ, ಮೋಕ್ಷ ಎಂಬ ಪುರುಷಾರ್ಥಗಳಲ್ಲಿ ೨ನೆಯದಾದ ಅರ್ಥ ಹಾಗೂ ೩ನೆಯದಾದ ಕಾಮ ಇವುಗಳನ್ನು ಮಾಏವ ವಾಂಛೇ—ನೈವ ವಾಂಛಾಮಿ. ಬಯಸು-ವದೇ ಇಲ್ಲ.)

ಆದ್ದರಿಂದ ಪ್ರಸ್ತುತ ಸಂದರ್ಭದಲ್ಲಿ, ನಾನು ಸಜ್ಜನರು ಹಾಕಿಕೊಟ್ಟ ಮೇಲ್ಪಂಕ್ತಿಯನ್ನೇ ಅನುಸರಿಸುವೆ. ಹೆಂಡತಿಯು ಗಂಡನನ್ನು ಸರ್ವವಿಧ-ದಿಂದ ಎಲ್ಲ ಪರಿಸ್ಥಿತಿಗಳಲ್ಲಿಯೂ ಅನುಸರಿಸಬೇಕೆಂದು ಮಹಾತ್ಮರ ಅಭಿಪ್ರಾಯವಿದೆ. ಆದ್ದರಿಂದ ಪತಿಯನ್ನು ಅನುಸರಿಸುವದೊಂದನ್ನು ಬಿಟ್ಟು

ಬೇರೆ ಏನನ್ನೂ ನಾನು ಕೋರುವದಿಲ್ಲ. ಕಾರಣ, ನಾನು ನನ್ನ ಪತಿಯನ್ನು ಹಿಂಬಾಲಿಸತಕ್ಕವಳೇ. ಹಿಂತಿರುಗಿ ಹೋಗು ಎಂಬ ನಿನ್ನ ಸಲಹೆ ನನಗೆ ಮಾನ್ಯವಿಲ್ಲ.—ಹೀಗೆ ಸಾವಿತ್ರಿಯ ಹಾರ್ದಿಕ ಅಭಿಪ್ರಾಯವಿದೆ.

**ಪುಟ ೩೨.** ೨೭. ಅನ್ವಯ:— ಯಮಃ ಉವಾಚ:— ಅನಿಂದಿತೇ, ನಿವರ್ತ। ತವ ಸ್ವರಾಕ್ಷರವ್ಯಂಜನ ಹೇತುಯುಕ್ತಯಾ ಅನಯಾ ಗಿರಾ ತುಷ್ಟಃ ಅಸ್ಮಿ। ಇಹ, ಅಸ್ಯ ಜೀವಿತಂ ವಿನಾ ತೇ ಸರ್ವಂ ವರಂ ದದಾನಿ। ವರಂ ವೃಣೀಷ್ವ।

ಭಾಷಾಂತರ:— ದೋಷರಹಿತ (ಅವಯವಗಳುಳ್ಳವ)ಳೇ, ಹಿಂತಿರುಗು. (ಉದಾತ್ತಾದಿ) ಸ್ವರ, (ಅಕಾರಾದಿ) ಅಕ್ಷರ, (ಕಕಾರಾದಿ) ವ್ಯಂಜನಗಳಿಂದೊಡಗೂಡಿದ ಹಾಗೂ ಸಯುಕ್ತಿಕವಾದ (ಹೇತುಗರ್ಭಿತವಾದ) ನಿನ್ನ ಈ ಮಾತಿನಿಂದ ನಾನು ಸಂತುಷ್ಟದಾಗಿದ್ದೇನೆ. ಈಗ, ಇವನ ಜೀವವೊಂದನ್ನು ಬಿಟ್ಟು (ನಿನಗೆ) ಎಲ್ಲ ವರ ಕೊಡುವೆನು. ಆದ್ದರಿಂದ ವರವನ್ನು ಬೇಡಿಕೋ.

ಟಿಪ್ಪಣಿ:— ಅನಿಂದಿತೇ—ನಿಂದೆಗೆ ಅಪಾತ್ರಳೇ. ದೋಷರಹಿತಳೇ, ದೋಷರಹಿತ ಅವಯವಗಳುಳ್ಳವಳೇ. ನಿವರ್ತ—ನಿವರ್ತಸ್ವ ಎಂಬುದು ಶುದ್ಧರೂಪ. ನಿ+ವೃತ್ (೧. ಆ) ಧಾತುವಿನ ಆಜ್ಞಾರ್ಥ ದ್ವಿ. ಪು. ಏ. ವ. ಸ್ವರಾ........ಯುಕ್ತಯಾ. (i) ಸ್ವರಾಃ ಅಕ್ಷರಾಣಿ, ವ್ಯಂಜನಾನಿ ಹೇತವಃ ಚ ಸ್ವರಾ........ಹೇತವಃ (ದ್ವಂದ್ವ) ತೈಃ ಯುಕ್ತಾ (ತೃ. ತ.) ತಯಾ। ಸ್ವರ, ಅಕ್ಷರ, ವ್ಯಂಜನ, ಹಾಗೂ ಯುಕ್ತಿಗಳಿಂದೊಡಗೂಡಿದ (ii) ಸ್ವರಾಃ ಅಕ್ಷರಾಣಿ ಚ ಸ್ವರಾಕ್ಷರಾಣಿ (ದ್ವಂದ್ವ) ತೇಷಾಂ ವ್ಯಂಜನೇನ ಹೇತುನಾ ಚ ಯುಕ್ತಃ (ತೃ. ತ.) ಸ್ವರ ಮತ್ತು ಅಕ್ಷರಗಳ ವ್ಯಂಗ್ಯಾರ್ಥ ಹಾಗೂ ಯುಕ್ತಿಗಳಿಂದ ಕೂಡಿದ ಮಾತಿನಿಂದ. **ಗಿರಾ** - ಗಿರ್ (ಸ್ತ್ರೀ) ಶಬ್ದದ ತೃ. ಏ. ವ. ದದಾನಿ—ಕೊಡುವೆ. ದಾ (೩. ಉ) ಧಾತುವಿನ ಆಜ್ಞಾರ್ಥ ಪ್ರ. ಪು. ಏ.ವ. ವೃಣೀಷ್ವ—ವೃ (೧.೫,೯.ಉ) ಧಾತುವಿನ ಆಜ್ಞಾರ್ಥ ದ್ವಿ. ಪು. ಏ.ವ. ವರಂ ವೃಣೀಷ್ವ (ಕರ್ತರಿ)—ವರಃ ವ್ರಿಯತಾಂ (ಕರ್ಮಣಿ).

೨೮. ಅನ್ವಯ:— ಸಾವಿತ್ರೀ ಉವಾಚ:— ಮಮ ಶ್ವಶುರಃ, ಸ್ವರಾಜ್ಯಾತ್ ಚ್ಯುತಃ, ವಿನಷ್ಟ ಚಕ್ಷುಃ, ವನವಾಸಂ ಆಶ್ರಿತಃ ಆಶ್ರಮೇ (ಅಸ್ತಿ)। ತವ ಪ್ರಸಾದಾತ್ ಸಃ ಲಬ್ಧಚಕ್ಷುಃ ಬಲವಾನ್ ಜ್ವಲನಾರ್ಕಸನ್ನಿಭಃ ಚ ನೃಪಃ ಭವೇತ್।

ಭಾಷಾಂತರ:— ನನ್ನ ಮಾವನು ರಾಜ್ಯಭ್ರಷ್ಟನಾಗಿ, ಕಣ್ಣು ಕಳೆದು ಕೊಂಡು, ವನವಾಸ(ಅಡವಿಯಲ್ಲಿರುವದು)ವನ್ನಾಶ್ರಯಿಸಿ, ಆಶ್ರಮದಲ್ಲಿದ್ದಾನೆ. ನಿನ್ನ ಅನುಗ್ರಹದಿಂದ ಅವನು ಕಣ್ಣುಪಡೆದು, ಅಗ್ನಿಸೂರ್ಯರಿಗೆ ಸಮಾನ ವಾದ ಕಾಂತಿಯುಳ್ಳ ಬಲಿಷ್ಠ ರಾಜನಾಗಲಿ.

ಟಿಪ್ಪಣಿ:— ಶ್ವಶುರಃ—ಮಾವ. ಸ್ವಸ್ಯ ರಾಜ್ಯಂ ಸ್ವರಾಜ್ಯಂ (ಷ.ತ.ಸ.) ತಸ್ಮಾತ್ ಚ್ಯುತಃ ಸ್ವರಾಜ್ಯಚ್ಯುತಃ (ಪಂ.ತ.ಸ.)-ತನ್ನ ರಾಜ್ಯದಿಂದ ಭ್ರಷ್ಟನಾದ. ವಿನಷ್ಟಚಕ್ಷುಃ—ಕಣ್ಣು ಕಳೆದುಕೊಂಡವನ. ವಿನಷ್ಟೇ ಚಕ್ಷುಷೀ ಯಸ್ಯ ಸಃ (ಬ. ಸ.) ಲಬ್ಧಚಕ್ಷುಃ— ಕಣ್ಣು ಪಡೆದವ. ಲಬ್ಧೇ ಚಕ್ಷುಷೀ ಯೇನ ಸಃ (ಬ. ಸ.) ಜ್ವಲನಾರ್ಕಸನ್ನಿಭಃ—ಅಗ್ನಿ-ಸೂರ್ಯರಿಗೆ ಸಮಾನನಾದ. ಜ್ವಲನಃ—ಅಗ್ನಿ. ಅರ್ಕಃ-ಸೂರ್ಯ. ಜ್ವಲನಃ ಚ ಅರ್ಕಃ ಚ ಜ್ವಲನಾರ್ಕೌ (ದ್ವಂದ್ವ ಸ.)ತಾಭ್ಯಾಂ (ತಯೋಃ ವಾ)ಸನ್ನಿಭಃ (ತೃ.ಷ.ತ.ಸ.) ಭವೇತ್— ಆಗಲಿ. ಭೂ (೧. ಪ) ಧಾತುವಿನ ವಿಧ್ಯರ್ಥ ತೃ. ಪು. ಏ. ವ.

೨೯. ಅನ್ವಯ:— ಯಮಃ ಉವಾಚ:— ಅನಿಂದಿತೇ, ಯಥಾ ತ್ವಯಾ ಉಕ್ತಂ ತಥಾ ತೇ ಅಹಂ ತಂ ವರಂ ದದಾನಿ। ತತ್ ತಥಾ ಚ ಭವಿತಾ। ಅಧ್ವನಾ ತವ ಗ್ಲಾನಿಂ ಇವ ಉಪಲಕ್ಷಯೇ। ನಿವರ್ತ ಗಚ್ಛಸ್ವ। ತೇ ಶ್ರಮಃ ನ ಭವೇತ್।

ಭಾಷಾಂತರ:— ಯಮನು ಅಂದನು. ದೋಷರಹಿತ (ಅವಯವ ಗಳುಳ್ಳವ)ಳೇ, ನೀನು ಹೇಳಿದಂತೆ ನಾನು ನಿನಗೆ ಆ ವರ ಕೊಡುವೆನು. ಅದು ಹಾಗೆಯೇ (ಫಲಕಾರಿ) ಆಗುವದು. ನಿನಗೆ ದಾರಿಯ ದಣುವಾಗಿದೆಯೆಂದು ತೋರುತ್ತದೆ. ತಿರುಗಿ ಹೋಗು. ನಿನಗೆ ಶ್ರಮವಾಗಕೂಡದು.

ಟಿಪ್ಪಣಿ:— **ಭವಿತಾ** — ಆಗುವದು. ಭೂ (೧. ಪ) ಧಾತುವಿನ ಪ್ರ. ಭ. ತೃ. ಪು. ಏ. ವ. ಅಧ್ವನ್— (ಪು)—ದಾರಿ. ಗ್ಲಾನಿಃ—ಪರಿಶ್ರಮ. ಆಯಾಸ. ಉಪಲಕ್ಷಯೇ—ನಾನು ಕಾಣುತ್ತೇನೆ, ನನಗೆ ತೋರುತ್ತದೆ.

೩೦. ಅನ್ವಯ:— ಸಾವಿತ್ರೀ ಉವಾಚ:— ಭರ್ತೃಸಮೀಪತಃ, ಮೇ ಶ್ರಮಃ ಕುತಃ। ಯತಃ ಹಿ, ಭರ್ತಾ, ಸಾ ಗತಿಃ ಧ್ರುವಾ ಹಿ ಮಮ। ಯತಃ ಪತಿಂ ನೇಷ್ಯಸಿ ತತ್ರ ಮೇ ಗತಿಃ। ಸುರೇಶ, ಭೂಯಃ ಚ ಮೇ ವಚಃ ನಿಬೋಧ।

ಭಾಷಾಂತರ:— ಸಾವಿತ್ರಿಯು ಅಂದಳು:— ಗಂಡನ ಸಮೀಪದಲ್ಲಿ-ರುವ ನನಗೆ ಶ್ರಮವೆಲ್ಲಿಂದ (ಆಗುವದು) ? [ಶ್ರಮವೆಲ್ಲಿಯದು ?] ಏಕೆಂದರೆ,

ಗಂಡನು ಎಲ್ಲಿ ಇರುವನೋ, ಅಲ್ಲಿಯೇ ನಾನು ಹೋಗುವದು ನಿಶ್ಚಿತ-ವಾದುದು. ನನ್ನ ಗಂಡನನ್ನು ಎಲ್ಲಿ ಒಯ್ಯುವಿಯೋ ಅಲ್ಲಿ ನಾನೂ ಬರುವೆ. ದೇವತೆಗಳ ಒಡೆಯನೇ, ಮತ್ತೆ ನನ್ನ ಮಾತುಕೇಳು.

ಟಿಪ್ಪಣಿ:—ಯತಃ ಭರ್ತಾ—ಗಂಡನು ಎಲ್ಲಿರುವನೋ. ಸಾ ಗತಿಃ—ತತ್ರೈವ ಗಮನಂ. ಟೀಕಾ. ಅಲ್ಲಿಯೇ ಹೋಗುವದು. ಧ್ರುವಾ—ನಿಶ್ಚಯವಾದುದು. 'ನಿಶ್ಚಿತಾ.' ಹಿ—ಏಕೆಂದರೆ. ನೇಷ್ಯಸಿ--ಒಯ್ಯುವಿ. ನೀ (೧. ಪ) ಧಾತುವಿನ ದ್ವಿ. ಭ. ದ್ವಿ. ಪು. ಏ. ವ. ನಿಬೋಧ—ಅರಿ, ತಿಳಿದುಕೋ. ನಿ + ಬುಧ್ (೧. ಪ) ಧಾತುವಿನ ಆಜ್ಞಾರ್ಥ ದ್ವಿ. ಪು. ಏ. ವ.

೩೧. ಅನ್ವಯ: — ಸತಾಂ ಸಕೃತ್ ಸಂಗತಂ ಅಪಿ ಪರಂ ಈಪ್ಸಿತಂ । ತತಃ (ಸಕೃತ್ಸಂಗತಾತ್) ಪರಂ (ಸತ್ಪುರುಷಃ) ಮಿತ್ರಂ (ಭವತಿ ಇತಿ) ಪ್ರಚಕ್ಷತೇ । ಸತ್ಪುರುಷೇಣ ಚ ಸಂಗತಂ ನ ಅಫಲಂ । ತತಃ ಸತಾಂ ಸಮಾ-ಗಮೇ ಸನ್ನಿವಸೇತ್ ।

ಭಾಷಾಂತರ:— ಒಮ್ಮೆಯಾದರೂ ಸಜ್ಜನರ ಸಹವಾಸದಲ್ಲಿರುವದು ಬಹಳೇ ಇಷ್ಟವಾದದ್ದು. ಬಳಿಕ ( ಒಮ್ಮೆ ಸಮಾಗಮವಾದನಂತರ ) ಸತ್ಪುರುಷನು ಗೆಳೆಯನಾಗುತ್ತಾನೆ ಎಂದು ಹೇಳುತ್ತಾರೆ. ಸಜ್ಜನರ ಸಹ-ವಾಸವು ನಿಷ್ಫಲವಾಗಲಾರದು. ಆದ್ದರಿಂದ (ಮನುಷ್ಯನು) ಸಜ್ಜನರ ಸಹ-ವಾಸದಲ್ಲಿರಬೇಕು.

ಟಿಪ್ಪಣಿ:—ಪಠ್ಯ ಪುಸ್ತಕದಲ್ಲಿ. ಸತ್ಕೃತ್ ಎಂದು ತಪ್ಪು ಅಚ್ಚಾಗಿದೆ. ಅದು ಸಕೃತ್ ಎಂದು ಇರಬೇಕು. ಮೂಲ ಪುಸ್ತಕದಲ್ಲಿ ಸಕೃತ್ ಎಂದು ಇದೆ. ವಿದ್ಯಾರ್ಥಿಗಳು ಅವಶ್ಯವಿದ್ದ ತಿದ್ದುಪಡಿ ಮಾಡಿಕೊಳ್ಳಬೇಕು. ಸಕೃತ್—ಒಮ್ಮೆ. ಪರಂ ಈಪ್ಸಿತಂ – ಬಹಳ ಇಷ್ಟವಾದದು. ತತಃ—ಬಳಿಕ, ಒಮ್ಮೆ ಸಹವಾಸವಾದನಂತರ. ಪರಂ ಮಿತ್ರಂ ( ಭವತಿ ) – ಆ ಸಜ್ಜನ ಮನುಷ್ಯನು ಗೆಳೆಯನಾಗುತ್ತಾನೆ. **ಅಥವಾ** ಮಿತ್ರಂ ತತಃ ಪರಂ ಈಪ್ಸಿತಂ—(ಸಜ್ಜನರೊಡನೆ) ಗೆಳೆತನವು ಅದಕ್ಕೂ ಹೆಚ್ಚು ಇಷ್ಟವಾದುದು. **ಪ್ರಚಕ್ಷತೇ**—(ಎಂದು) ಹೇಳುವರು. ಪ್ರ + ಚಕ್ಷ್ (೨. ಆ) ಧಾತುವಿನ ವ. ಕಾ. ತೃ. ಪು. ಬ. ವ. ಸಮಾಗಮಃ — ಸಹವಾಸ, ಭೆಟ್ಟಿ. ಸನ್ನಿವಸೇತ್—ಇರ-ತಕ್ಕದ್ದು. ವಾಸಿಸಬೇಕು. ಸಮ್ + ನಿ + ವಸ್ (೧. ಪ) ಧಾತುವಿನ ವಿಧ್ಯರ್ಥ ತೃ. ಪು. ಏ. ವ. ಅಫಲಂ—ನಿಷ್ಫಲ ಇಲ್ಲವೆ ವ್ಯರ್ಥವಾದುದು. ಅವಿದ್ಯಮಾನಂ ಫಲಂ ಯಸ್ಯ ತತ್ (ಬ. ಸ.)

೩೨. ಅನ್ವಯ:— ಯಮಃ ಉವಾಚ:—ಭಾಮಿನಿ, ಯತ್ ತ್ವಯಾ ಉಕ್ತಂ (ತತ್) ವಚನಂ ಹಿತಾಶ್ರಯಂ, ಮನೋಽನುಕೂಲಂ, ಬುಧಬುದ್ಧಿವರ್ಧನಂ ಚ (ವರ್ತತೇ)। (ಅತಃ) ಅಸ್ಯ ಸತ್ಯವತಃ ಜೀವಿತಂ ವಿನಾ ಪುನಃ ದ್ವಿತೀಯ ವರಂ ವರಯಸ್ವ।

ಭಾಷಾಂತರ:—ಸುಂದರಿಯೇ, ನೀನು ಆಡಿದಮಾತು ಹಿತಕರವೂ, ಮನೋಹರವೂ, ಜಾಣರ ಬುದ್ಧಿಯನ್ನು (ಕೂಡ) ಬೆಳಿಸುವಂತಹದೂ (ಇದೆ) (ಆದ್ದರಿಂದ) ಸತ್ಯವಾನನ ಜೀವವೊಂದನ್ನು ಬಿಟ್ಟು ಮತ್ತೆ ಎರಡನೆಯ ವರ ಬೇಡು.

ಟಿಪ್ಪಣಿ:—ಭಾಮಿನಿ – ಸುಂದರಿಯೇ. ಹಿತಾಶ್ರಯಂ – ಹಿತಕರವಾದುದು ಅಥವಾ ಯುಕ್ತಿಗೆ ಅನುಕೂಲವಾದುದು. 'ಯುಕ್ತ್ಯನುಕೂಲಂ' —ಟೀಕಾ. ಮನೋಽನುಕೂಲಂ – ಮನಸಃ ಅನುಕೂಲಂ (ಷ. ತ. ಸ.) ಮನೋಹರ, ಮನರಂಜಕ. ಬುಧಬುದ್ಧಿವರ್ಧನಂ—ಜಾಣರ ಬುದ್ಧಿಯನು ಬೆಳಿಸುವಂತಹದು. ಬುಧಾನಾಂ ಬುದ್ಧಿಃಬುಧಬುದ್ಧಿಃ (ಷ.ತ.ಸ.) ತಸ್ಯಾಃ ವರ್ಧನಂ (ಷ.ತ.ಸ.) ಮೊದಲನೆಯ ವರವನ್ನು ಪಡೆಯುವಾಗ ಸಾವಿತ್ರಿಯು ಆಶ್ರಮಧರ್ಮದ ಬಗ್ಗೆ ಮಾತನಾಡಿ ತನ್ನ ಜಾಣ್ಮೆ ತೋರಿಸಿದ್ದಳು. ಈಗ ಸಜ್ಜನರ ಸಹವಾಸದ ಮಹಿಮೆಯ ವಿಷಯವಾಗಿ ತರ್ಕಬದ್ಧರೀತಿಯಿಂದ ಮಾತನಾಡಿ ಎರಡನೆಯ ವರ ಸಂಪಾದಿಸಿದಳು. ವರಯ – ಬೇಡಿಕೋ, ವೃ (೧೦.ಉ) ಧಾತುವಿನ ಆಜ್ಞಾರ್ಥ ದ್ವಿ. ಪು. ಏ. ವ.

೩೩. ಅನ್ವಯ:—ಸಾವಿತ್ರೀ ಉವಾಚ:— ಪುರಾ ಮೇ ಧೀಮತಃ ಶ್ವಶುರಸ್ಯ ರಾಜ್ಯಂ ಹೃತಂ। ಸಃ ಪಾರ್ಥಿವಃ ಸ್ವಂ ಏವ (ರಾಜ್ಯಂ) ಲಭತಾಂ ಯಥಾ ಚ ಮೇ ಗುರುಃ ಸ್ವಧರ್ಮಾನ್ ನ ಜಹ್ಯಾತ್ (ತಥಾ) ತೇ ದ್ವಿತೀಯಂ ವರಂ ವರಯಾಮಿ।

ಭಾಷಾಂತರ:— ಸಾವಿತ್ರಿಯು ಅಂದಳುಃ— ಹಿಂದಕ್ಕೆ ನನ್ನ ಬುದ್ಧಿವಂತ ಮಾವನು ರಾಜ್ಯವನ್ನು ಕಳೆದುಕೊಂಡನು. (ರಾಜ್ಯವು ಅಪಹರಿಸಲ್ಪಟ್ಟಿತು). ಆ ಅರಸನು ( ಈಗ ) ತನ್ನ ರಾಜ್ಯವನ್ನೇ ( ಮರಳಿ ) ಪಡೆಯಲಿ ಮತ್ತು ಅವನು (ರಾಜ್ಯಪರಿಪಾಲಿಸುವ) ತನ್ನ ಧರ್ಮವನ್ನು ಬಿಡಬಾರದು. ಹೀಗೆ ಎರಡನೆಯ ವರವನ್ನು ನಾನು ಬೇಡುತ್ತೇನೆ.

ಟಿಪ್ಪಣಿ:— ಪಾರ್ಥಿವಃ – ಅರಸ. ಗುರುಃ – ಹಿರಿಯ, ಹಿರಿಯನಾದ ಮಾವ. ಜಹ್ಯಾತ್ – ಹಾ (೩.ಪ) [ಬಿಡು] ಧಾತುವಿನ ವಿಧ್ಯರ್ಥ ತೃ. ಪು.

ಏ. ವ. ದ್ಯುಮತ್ಸೇನನು ಪುನಃ ರಾಜನಾಗಿ ಪ್ರಜಾಪಾಲನೆಯ ಕೆಲಸದಿಂದ ಚ್ಯುತನಾಗಬಾರದೆಂದು ಸಾವಿತ್ರಿಯು ಯಮನಿಗೆ ಬಿನ್ನಯಿಸುತ್ತಾಳೆ.

೩೪. ಅನ್ವಯ:— ಯಮಃ ಉವಾಚ:— ನೃಪಾತ್ಮಜೇ, ನೃಪಃ ಸ್ವಂ ರಾಜ್ಯಂ ಏವ ಅಚಿರಾತ್ ಪ್ರತಿಪತ್ಸ್ಯತೇ । ಸ್ವಧರ್ಮಾತ್ ಚ ನ ಪರಿಹೀಯತೇ । ಮಯಾ (ತೇ) ಕಾಮೇನ ಕೃತೇನ, ನಿವರ್ತ, ಗಚ್ಛಸ್ವ । ತೇ ಶ್ರಮಃ ನ ಭವೇತ್ ।

ಭಾಷಾಂತರ:— ಯಮನು ಅಂದನು:— ಅರಸುಮಗಳೇ, ಅರಸನು, ತನ್ನ ರಾಜ್ಯವನ್ನೇ ಬೇಗ ಪಡೆಯುವನು ಮತ್ತು ತನ್ನ ಕೆಲಸ ಬಿಡುವದಿಲ್ಲ. ನಾನು ನಿನ್ನ ಇಚ್ಛೆಯನ್ನು ಪೂರ್ಣಮಾಡಿದ ಕಾರಣ, ಹಿಂತಿರುಗಿ ಹೋಗು, ನಿನಗೆ (ಹೆಚ್ಚು) ದಣಿವಾಗಬಾರದು.

ಟಿಪ್ಪಣಿ:— ಪ್ರತಿಪತ್ಸ್ಯತೇ–ಪಡೆಯುವನು. ಪ್ರತಿ+ಪದ್ (೪. ಆ) ಧಾತುವಿನ ದ್ವಿ. ಭ. ತೃ. ಪು. ಏ, ವ. ಅಚಿರಾತ್ – ಬೇಗನೆ. ಶೀಘ್ರವಾಗಿ ಪರಿಹೀಯತೇ – ಪರಿ+ಹಾ (೩.ಪ) ಧಾತುವಿನ ಕರ್ಮಣಿ ವ. ಕಾ. ತೃ. ಪು. ಏ. ವ. ರಾಜ್ಯಪರಿಪಾಲನೆಯ ಕಾರ್ಯದಿಂದ ಚ್ಯುತನಾಗುವದಿಲ್ಲ. ಕೃತೇನ ಕಾಮೇನ ಮಯಾ – ನಾನು ನಿನ್ನ ಇಚ್ಛೆಪೂರ್ಣಮಾಡಿದುದರಿಂದ. ಗಚ್ಛಸ್ವ=ಗಚ್ಛ. ಗಮ್ (೧. ಪ) ಧಾತುವಿನ ಆಜ್ಞಾರ್ಥ ದ್ವಿ. ಪು. ಏ. ವ.

**ಪುಟ ೩೩.** ೩೫. ಅನ್ವಯ:— ಸಾವಿತ್ರೀ ಉವಾಚ:— ದೇವ, ಏತಾಃ ಪ್ರಜಾಃ ತ್ವಯಾ ನಿಯಮೇನ ಸಂಯತಾಃ । ನಿಯಮ್ಯ ಚ ಏತಾಃ ನಿಕಾಮಯಾ ನಯಸೇ । ತತಃ ತವ ಯಮತ್ವಂ ವಿಶ್ರುತಂ । ಮಯಾ ಈರಿತಾಂ ಇಮಾಂ ಚ ಗಿರಂ ನಿಬೋಧ ।

ಭಾಷಾಂತರ:— ಸಾವಿತ್ರಿಯು ಅಂದಳು:– ದೇವಾ, ಈ ಪ್ರಜೆಗಳನ್ನು ನೀನು ನಿಯಮಗಳಿಂದ ನಿಗ್ರಹಿಸುವೆ. ಹೀಗೆ ನಿಗ್ರಹಿಸಿ (ಬಳಿಕ) ಅವರಿಗೆ, (ಅವರವರ ಸತ್ಕರ್ಮದ ಫಲವಾದ) ಇಚ್ಛಿತ ವಸ್ತುವನ್ನು ಕೊಡುವೆ [ಅಥವಾ, ಹೀಗೆ ಅವರನ್ನು ನಿಗ್ರಹಿಸಿ, ನಿನ್ನ ಇಚ್ಛೆಗನುಸಾರವಾಗಿ ಅವರನ್ನು ಆಳುವಿ ] ಆದ್ದರಿಂದ ನಿನಗೆ ಪ್ರಸಿದ್ಧವಾದ ಯಮ ಶಬ್ದವು (ಬಂದಿದೆ). ನಾನು ಆಡುವ ಈ ಮಾತು ಕೇಳು.

ಟಿಪ್ಪಣಿ:— ತ್ವಯಾ ನಿಯಮೇನ ಸಂಯತಾಃ— ನಿಯಮಗಳಿಂದ ಅವರನ್ನು ನಿಗ್ರಹಿಸುವೆ. ಯಮನಾದರೋ ಮರಣಹೊಂದಿದ ಜನರಿಗೆ ಶಿಕ್ಷೆಯನ್ನು ಕೆಲವೊಂದು ನಿಯಮಗಳಿಗನುಸಾರವಾಗಿ (ನಿಯಮೇನ) ಕೊಡುವನು.

ಆ ನಿಯಮಗಳ ಮೇರೆಯನ್ನು ಮೀರಿ ಶಿಕ್ಷಿಸುವದಿಲ್ಲ. ಯಾವ ಯಾವ ಪಾಪಗಳಿಗೆ ಎಷ್ಟೆಷ್ಟು ಶಿಕ್ಷೆಯೆಂದು ಆ ನಿಯಮಗಳಲ್ಲಿ ಹೇಳಿದೆಯೋ ಅಷ್ಟೇ ಶಿಕ್ಷೆಯನ್ನು ಯಮಧರ್ಮರಾಜನು ವಿಧಿಸುವನು. ನಿಯಮಃ— *Rules* ನಿಯಮ್ಯ ಚ ಮುಃ- (i) ನೀಲಕಂಠೀ ಟೀಕಾಕ್ಕೆ ಅನುಗುಣವಾದ ಅರ್ಥ. ಹೀಗೆ ಜನರಿಗೆ ಶಿಕ್ಷೆ ವಿಧಿಸಿ, ನಂತರ ಅವರಿಗೆ ಅವರವರ ಸತ್ಕರ್ಮದ ಮೇರೆಗೆ ಇಚ್ಛಿತ ವಸ್ತುವನ್ನು ಕೊಡುವೆ. 'ನಿಕಾಮಯಾ ಕಾಮಿತೇನ ಅರ್ಥೇನ ನಯಸೇ ಸಂಯೋಜಯಸಿ. ಯಾತನಾಂತೇ ಸತ್ಕರ್ಮ ಫಲಮಪಿ ತಾಭ್ಯಃ ದದಾಸಿ ಟೀಕಾ. ( ನಿಷ್ಕಾಮ ಕರ್ಮಮಾಡಿದ ಜ್ಞಾನಿಗಳಾದರೋ ಯಮಲೋಕಕ್ಕೆ ಬರುವದೇ ಇಲ್ಲ; ಅವರು ಯಮನ ಅಧೀನರಲ್ಲ) (ii) ಡಾ॰. ಪಿ. ಎಲ್ ವೈದ್ಯರ ಮತ. ಹೀಗೆ ಅವರನ್ನು ನಿಗ್ರಹಿಸಿ, ನಿನ್ನ ಇಚ್ಛೆಗೆ ಅನುಸಾರವಾಗಿ ಅವರನ್ನು ಆಳುವಿ. *having restrained them thus you lead or govern them* (ನಯಸೆ) *at your free will* (ನಿಕಾಮಯಾ) *-Dr. P. L. Vaidya.*

ಯಮ— ನಿಗ್ರಹಿಸುವವ. 'ಯಚ್ಛತಿ ಪ್ರಜಾಃ ಇತಿ ಯಮಃ' ಯಮಸ್ಯ ಭಾವಃ ಯಮತ್ವಂ (ತದ್ಧಿತ). ವಿಶ್ರುತ-ಪ್ರಸಿದ್ಧವಾದ ಈರಿತಾಂ-ನುಡಿಯಲ್ಪಟ್ಟ ಈರ್ (೧೦.ಪ) ಧಾತುವಿನ ಕರ್ಮಣಿ ಭೂ. ಧಾ ವಿ. (ಸ್ತ್ರೀ) ದ್ವಿ. ಏ. ವ.

೩೬ ಅನ್ವಯ:— ಮನಸಾ ಗಿರಾ ಕರ್ಮಣಾ ಚ ಸರ್ವಭೂತೇಷು ಅದ್ರೋಹಃ, ಅನುಗ್ರಹಃ ದಾನಂ ಚ ಸತಾಂ ಸನಾತನಃ ಧರ್ಮಃ ।

ಭಾಷಾಂತರ :— ಮನಸ್ಸಿನಿಂದ, ಮಾತಿನಿಂದ ಮತ್ತು ಕೃತಿಯಿಂದ ಎಲ್ಲ ಪ್ರಾಣಿಗಳಿಗೆ ದ್ರೋಹ ಬಗೆಯದಿರುವದು, (ಅವರ ಮೇಲೆ) ದಯೆ ತೋರುವದು ಹಾಗೂ ( ಅವರಿಗೆ ಅವರವರ ತಕ್ಕ ) ದಾನ ಮಾಡುವದು— ಇದು ಸಜ್ಜನರ ಪರಂಪರಾಗತ ಧರ್ಮವು.

ಟಿಪ್ಪಣಿ:— ಅದ್ರೋಹಃ—ನ ದ್ರೋಹಃ (ನ. ತ.) ದ್ರೋಹ ಬಗೆಯದಿರುವದು. ಅವರನ್ನು ಅಪಾಯಕ್ಕೆ ಈಡು ಮಾಡದಿರುವದು. (*not to injure them*, ಸರ್ವಭೂತೇಷು— ಎಲ್ಲ ಪ್ರಾಣಿಗಳ ಮೇಲೆ. ಸರ್ವಾಣಿ ಭೂತಾನಿ (ಕ. ಸ.) ತೇಷು. ತನ್ನ ಮೇಲೆಯೂ ಯಮನು ದಯೆ ತೋರಿಸಬೇಕೆಂದು ಸಾವಿತ್ರಿಯ ಮನೋಭಿಪ್ರಾಯವಿದೆ.

೩೭ ಅನ್ವಯ :—ಅಯಃ ಲೋಕಃ ಚ ಪ್ರಾಯಃ ಏವಂ। ಮನುಷ್ಯಾಃ ಶಕ್ತಿಪೇಶಲಾಃ। ಸಂತಃ ಪ್ರಾಪ್ತೇಷು ಅಮಿತ್ರೇಷು ಅಪಿ ದಯಾಂ ಕುರ್ವತೇ ಏವ।

ಭಾಷಾಂತರ:— ಈ ಜನರು ಸಾಮಾನ್ಯವಾಗಿ ಇದರಂತೆ ( ಎಂದರೆ ಈ ನನ್ನ ಗಂಡನಂತೆ ಅಲ್ಪ ಆಯುಷ್ಯವುಳ್ಳವರು. (ಮತ್ತು) ಮನುಷ್ಯರು ಅಲ್ಪ-ಶಕ್ತಿಯುಳ್ಳವರು. ಸಜ್ಜನರಾದರೋ ( ತಮ್ಮೆಡೆಗೆ ಶರಣಾಗತರಾಗಿ) ಬಂದ ವೈರಿಗಳ ಮೇಲೆ ಸಹ ದಯೆ ತೋರಿಸುತ್ತಾರೆ.

ಟಿಪ್ಪಣೆ:—ಏವಂ—ಹೀಗೆ. ಇದರಂತೆ. ಎದುರಿಗಿದ್ದ ಈ ಸತ್ಯವಾನನಂತೆ ಅಲ್ಪಾಯುಗಳು. ಶಕ್ತಿಪೇಶಲಾಃ—ಅಲ್ಪ ಶಕ್ತಿಯುಳ್ಳವರು. ಶಕ್ತಿ ಮತ್ತು ಕೌಶಲ್ಯ ಇಲ್ಲದವರು. 'ಶಕ್ತಿಕೌಶಲಹೀನಾಃ ಟೀಕಾ. ಪೇಶಲ – ಅಲ್ಪ. ಶಕ್ತ್ಯಾ ಪೇಶಲಾಃ (ತೃ. ತ.)। ಸಂತಃ ಮುಂ.—ಸಾಮಾನ್ಯ ಮನುಷ್ಯರು ಈ ರೀತಿ ಅಲ್ಪಾಯುಗಳೂ, ಅಲ್ಪಶಕ್ತಿಯುಳ್ಳವರೂ ಇರುವರು; ಆದರೆ ಸಜ್ಜನರು ಮಾತ್ರ ಶರಣಾಗತರಾಗಿ ಬಂದ ವೈರಿಗಳ ಮೇಲೆ ಸಹ ದಯೆ ತೋರಿ ತಮ್ಮ ಘನತೆಯನ್ನು ವ್ಯಕ್ತಗೊಳಿಸುತ್ತಾರೆ. ವೈರಿಗಳ ಮೇಲೆಯೂ ದಯೆ ತೋರುವ ರೆಂದ ಮೇಲೆ ನನ್ನಂತಹ ದೀನರ ವಿಷಯವಾಗಿ ಅದೆಷ್ಟು ದಯೆ ತೋರಿಸ ಬೇಡ. ಅರ್ಥಾತ್ ಸಜ್ಜನನಾದ ನೀನು ಅನಾಥಳಾದ ನನ್ನಮೇಲೆ ದಯೆ ತೋರು ಎಂದು ಸಾವಿತ್ರಿಯ ಇಂಗಿತಾರ್ಥವಿದೆ. ಹೀಗೆ ಸತ್ಪುರುಷರ ದಯಾ ಗುಣದ ಬಗ್ಗೆ ಮಾತನಾಡಿ ೩ನೆಯ ವರ ಪಡೆಯುತ್ತಾಳೆ.

೩೮ ಅನ್ವಯ:—ಯಮಃ ಉವಾಚ:—ಶುಭೇ, ಪಿಪಾಸಿತಸ್ಯ ಯಥಾ ಪಯಃ (ತೃಪ್ತಿಕರಂ) ಭವೇತ್ ತಥಾ ತ್ವಯಾ ಇದಂ ವಾಕ್ಯಂ ಸಮೀರಿತಂ। ಅಸ್ಯ ಸತ್ಯವತಃ ಜೀವಿತಂ ವಿನಾ ಪುನಃ ಇಹ ಯತ್ ಇಚ್ಛಸಿ, ವರಂ ವೃಣೀಷ್ವ.

ಭಾಷಾಂತರ:— ಯಮನು ಅಂದನು:–ಸುಮಂಗಲೆಯೇ, ನೀರಡಿಸಿ-ದವನಿಗೆ ನೀರು (ತೃಪ್ತಿಕರ) ಆಗುವಂತೆ, ನೀನು ಈ ಮಾತು ಆಡಿದೆ. ಈ ಸತ್ಯವಾನನ ಜೀವವನ್ನುಳಿದು ಮತ್ತೆ ಬೇಕಾದ ವರವನ್ನು ಬೇಡು.

ಟಿಪ್ಪಣೆ:— ಪಿಪಾಸಿತ—ನೀರಡಿಸಿದ. ಪಾ (೧. ಪ.) ಧಾತುವಿನ ಇಚ್ಛಾರ್ಥಕ ಕರ್ಮಣಿ ಭೂ. ಧಾ. ವಿ. ಪಯಃ—ನೀರು. ಯಥಾ ಇದರ ಮುಂದೆ ತೃಪ್ತಿಕರಂ ಎಂಬ ಶಬ್ದವು ಗುಪ್ತವಿದೆ ಎಂದು ತಿಳಿಯಬೇಕು. ಸಮೀರಿತಂ—ಮಾತನಾಡಿದ.

೩೯ ಅನ್ವಯ:— ಸಾವಿತ್ರೀ ಉವಾಚ— ಪೃಥಿವೀಪತಿಃ, ಮಮಪಿತಾ ಅನಪತ್ಯಃ। ಪಿತುಃ ಯತ್ ಔರಸಂ ಕುಲಸ್ಯ ಸಂತಾನಕರಂ ಪುತ್ರಶತಂ ಭವೇತ್ ತಥಾ ತೇ ಏತತ್ ತೃತೀಯಂ ವರಂ ವರಯಾಮಿ।

ಭಾಷಾಂತರ:— ಅರಸನಾದ ನನ್ನ ತಂದೆಗೆ (ಗಂಡು) ಮಕ್ಕಳಿಲ್ಲ (ನನ್ನ) ತಂದೆಗೆ ವಂಶವನ್ನು ಬೆಳಿಸುವ ೧೦೦ ಔರಸ ಮಕ್ಕಳು ಆಗುವಂತೆ ಈ ೩ನೆಯ ವರವನ್ನು ಬೇಡಿಕೊಳ್ಳುತ್ತೇನೆ.

ಟಿಪ್ಪಣೆ:— ಅನಪತ್ಯಃ—ಮಕ್ಕಳಿಲ್ಲದವ. ನ ವಿದ್ಯತೇ ಅಪತ್ಯಂ ಯಸ್ಯ ಸಃ (ಬ. ಸ.) ಅಪತ್ಯಂ—ಮಗ. ಔರಸಂ—ಹೊಟ್ಟೆಯಿಂದ ಹುಟ್ಟಿದ ಉರಸಃ ಭವಂ(ತದ್ಧಿತ)ತು.ಮಾ. 'ಸ್ವೇ ಕ್ಷೇತ್ರೇ ಸಂಸ್ಕೃತಾಯಾಂತು ಸ್ವಯ-ಮುತ್ಪಾದಯೆದ್ಧೀಯವಮ್। ತವೌರಸಂ ವಿಜಾನೀಯಾತ್ಪುತ್ರಂ ಪ್ರಾಥಮ-ಕಲ್ಪಿಕಂ.'

೪೦ ಅನ್ವಯ:— ಯಮಃ ಉವಾಚ:- ಶುಭೇ, ತೇ ಪಿತುಃ ಸುವ-ರ್ಚಸಂ, ಕುಲಸ್ಯ ಸಂತಾನಕರಂ, ಸುತಾನಾಂ ಶತಂ ಅಸ್ತು ಹಿ। ನರಾಧಿಪಾ-ತ್ಮಜೇ, (ಮಯಾ) ಕೃತೇನ ಕಾಮೇನ। ನಿವರ್ತ। ತ್ವಂ ದೂರಂ ಪಥಃ ಆಗತಾ।

ಭಾಷಾಂತರ: - **ಯಮನು ಅಂದನು:**— ಸುಮಂಗಲೆಯೇ ನಿನ್ನ ತಂದೆಗೆ ಒಳ್ಳೇ ವರ್ಚಸ್ವಿಗಳಾದ (ತೇಜಃ ಪುಂಜರಾದ), ವಂಶವನ್ನು ಬೆಳೆ-ಯಿಸುವ ನೂರು ಮಕ್ಕಳು ಆಗಲಿ. (ನಾನು) ನಿನ್ನ ಇಚ್ಛೆ ಪೂರೈಸಿದ್ದೇನೆ. (ಆದ್ದರಿಂದ) ಹಿಂತಿರುಗು. ನೀನು ಬಹಳ ದಾರಿ (ನಡೆದು) ಬಂದಿರುವೆ.

ಟಿಪ್ಪಣೆ:— ಸುವರ್ಚಸಂ—ಒಳ್ಳೆಯ ವರ್ಚಸ್ಸುಳ್ಳ. ಶೋಭನಂ ವರ್ಚಃ ಯಸ್ಯ ತತ್ (ಬ. ಸ.) ಸುವರ್ಚಃ ಎಂದು ಸಮಾಸ ಆಗಬೇಕಾ-ಗಿತ್ತು. ಆದ್ದರಿಂದ ಇದು ಆರ್ಷ ಪ್ರಯೋಗ. ನರಾಧಿಪಾತ್ಮಜೇ—ಅರಸು ಮಗಳೇ. ನರಾಣಾಂ ಅಧಿಪಃ ನರಾಧಿಪಃ (ಷ. ತ. ಸ.) ತಸ್ಯ ಆತ್ಮಜಾ (ಷ. ತ. ಸ.) ತಸ್ಯಾಃ ಸಂಬೋಧನಂ। ಕೃತೇನ ಕಾಮೇನ— ನಿನ್ನ ಇಚ್ಛೆ ಪೂರ್ಣಮಾಡಿರುವೆನಾದ್ದರಿಂದ. ನಿವರ್ತ=ನಿವರ್ತಸ್ವ ಹಿಂತಿರುಗು ಪಥಃ—ದಾರಿಯನ್ನು ಪಥಿನ್ (ಪು) ಶಬ್ದದ ದ್ವಿ. ಬ. ವ.

೪೧ ಅನ್ವಯ:— ಸಾವಿತ್ರೀ ಉವಾಚ:- ಭರ್ತೃಸನ್ನಿಧೌ ಮಮ ಏತತ್ ನ ದೂರಮ್। ಮೇ ಮನಃ ಹಿ ದೂರತರಂ ಪ್ರಧಾವತಿ। ಅಥ

ವ್ರಜನ್ ಏವ ಸಮುದ್ಯತಾಂ, ಮಯಾ ಉಚ್ಯಮಾನಾಂ ಗಿರಂ ಭೂಯಃ ಏವಚ ಶೃಣು ।

ಭಾಷಾಂತರ: — ಸಾವಿತ್ರಿಯು ಅಂದಳು:– ಪತಿಯ ಸಮೀಪದಲ್ಲಿರುವ ನನಗೆ ಇದು (ಈ ಮಾರ್ಗ) ದೂರವಲ್ಲ. ನನ್ನ ಮನಸ್ಸು ಇದಕ್ಕೂ ದೂರ ಓಡುತ್ತದೆ, ಇನ್ನು ನಡೆಯುತ್ತಿರುವಾಗಲೇ, ಉಚ್ಚರಿಸಲು ಸಿದ್ಧವಾದ ನಾನು ಆಡುವ ಮಾತನ್ನು ಮತ್ತೆ ಕೇಳು.

ಟಿಪ್ಪಣಿ:– ಭರ್ತೃಸನ್ನಿಧೌ–ಗಂಡನ ಸಮೀಪದಲ್ಲಿ. ಭರ್ತುಃ ಸನ್ನಿಧಿಃ ಭರ್ತೃಸನ್ನಿಧಿಃ (ಷ. ತ. ಸ) ತಸ್ಯಾಂ। ವ್ರಜನ್ ಏವ–ನಡೆಯುತ್ತಲೇ. ಸಮುದ್ಯತಾಂ– 'ಉಪಸ್ಥಿತಾಂ. *ready to be uttered*. ಆಡಲು ಸಿದ್ಧವಾದ. ಆಡಲಿದ್ದ. ಉದ್ಯತ–ಸಿದ್ಧವಾದ **ಉಚ್ಯಮಾನಾಂ**- (ನನ್ನಿಂದ) ನುಡಿಯಲ್ಪಟ್ಟ। ನಾನು ಆಡಿದ. ವಚ್ (೨. ಪ) ಧಾತುವಿನ ಕರ್ಮಣಿ ವ. ಧಾ. ವಿ. (ಸ್ತ್ರೀ) ದ್ವಿ. ಏ. ವ.

೪೨ ಅನ್ವಯ:– ತ್ವಂ ವಿವಸ್ವತಃ ಪ್ರತಾಪವಾನ್ ತನಯಃ। ತತಃ ಬುಧೈಃ ವೈವಸ್ವತಃ ಉಚ್ಯಸೇ ಹಿ । ಈಶ್ವರ, ತಾಃ ಪ್ರಜಾಃ ಸಮೇನ ಧರ್ಮೇಣ ಚರಂತಿ। ತತಃ ತವ ಧರ್ಮರಾಜತಾ।

ಭಾಷಾಂತರ:– ನೀನು ವಿವಸ್ವತನ ಶೂರ ಮಗನು. ಆದ್ದರಿಂದ ಪಂಡಿತರು ನಿನಗೆ ವೈವಸ್ವತ ಎನ್ನುವರು. ದೊರೆಯೇ (ದೇವಾ), ಆ ಪ್ರಜೆಗಳು (ಶತ್ರು ಮಿತ್ರರೆಂಬ ಬೇದಭಾವವಿಲ್ಲದೆ) ಸಮನಾಗಿ (ನಿನ್ನ) ಶಾಸನದಂತೆ ನಡೆಯುವರು. ಆದ್ದರಿಂದ ನೀನು ಧರ್ಮರಾಜನು (ಎಂದು ಎನಿಸಿಕೊಳ್ಳುವೆ.)

ಟಿಪ್ಪಣಿ: — ಯಮನಿಗೆ ವೈವಸ್ವತ ಮತ್ತು ಧರ್ಮರಾಜ ಎಂಬ ಹೆಸರುಗಳು ಏಕೆ ಬಂದಿವೆ ಎಂದು ಈ ಶ್ಲೋಕದಲ್ಲಿ ಹೇಳಲಾಗಿದೆ. ಯಮನು ವಿವಸ್ವತನ ಮಗನಾದ್ದರಿಂದ, ವೈವಸ್ವತ ಎಂಬ ಹೆಸರು ಬಂದಿದೆ. ಅದ್ದರಿಂದ ತಂದೆಯಲ್ಲಿಯ ಪ್ರತಾಪ ಮುಂತಾದ ಗುಣಗಳು ಇವನಿಗೂ ಬಂದಿವೆ. ವೈವಸ್ವತಃ—ವಿವಸ್ವತಃ ಅಪತ್ಯಂ ಪುಮಾನ್ (ತದ್ಧಿತ) ವಿವಸ್ವತನ ಮಗ ಯಮನಿಗೆ ಧರ್ಮರಾಜ ಎಂಬ ಇನ್ನೊಂದು ಹೆಸರು ಬರಲು ಕಾರಣವೇನೆಂದರೆ ಅವನು ಪ್ರಜೆಗಳನ್ನು ತನ್ನ ಆಜ್ಞೆಯಂತೆ ನಿಯಂತ್ರಿಸುವನು; ಹಾಗೂ ಪ್ರಜೆಗಳಾದರೂ ಇವನ ಶಾಸನದಂತೆ ನಡೆಯುವರು. **ಧರ್ಮರಾಜಃ**—

ಧರ್ಮೇಣ ಏವ ರಾಜತೇ; ಧರ್ಮಃ ಅಸ್ಯ ರಾಜ್ಯತೇ ಇತಿ ವಾ। ಧರ್ಮದಿಂದಲೇ ಶೋಭಿಸುವವ ಅಥವಾ ಧರ್ಮವು (ಶಾಸನವು) ಇವನಿಗೆ ಶೋಭಿಸುತ್ತದೆ. 'ಸಮೇನ ಶತ್ರು ಮಿತ್ರಾದಿತಾರತಮ್ಯಹೀನೇನ ತವ ಧರ್ಮೇಣ ಪ್ರಶಾಸನೇನ ತಾಃ ಪ್ರಜಾಃ ಚರಂತಿ ತ್ವದಾಜ್ಞಾವಶಗಾ ಇತ್ಯರ್ಥಃ।' ಅತ ಏವ ತವನಾಮ ಧರ್ಮರಾಜಃ ಇತಿ, ಟೀಕಾ.

೪೩. ಅನ್ವಯ:— ಸತ್ಸು ಯಃ ವಿಶ್ವಾಸಃ ಭವತಿ ತಥಾ ಆತ್ಮನಿ ಅಪಿ ನ ಭವತಿ। ತಸ್ಮಾತ್ ಸರ್ವಃ ಸತ್ಸು ವಿಶೇಷೇಣ ಪ್ರಣಯಂ ಇಚ್ಛತಿ।

ಭಾಷಾಂತರ:— ಸಜ್ಜನರಲ್ಲಿ ಎಷ್ಟು ವಿಶ್ವಾಸವಿರುವದೋ ಅಷ್ಟು ವಿಶ್ವಾಸ (ಮನುಷ್ಯನಿಗೆ) ತನ್ನಲ್ಲಿ ಕೂಡ ಇರುವದಿಲ್ಲ. ಆದ್ದರಿಂದ ಎಲ್ಲರೂ ವಿಶೇಷವಾಗಿ ಸಜ್ಜನರಲ್ಲಿ ವಿಶ್ವಾಸವಿಡುವರು (ಅಥವಾ ಸಜ್ಜನರನ್ನು ಪ್ರಾರ್ಥಿಸುವರು.)

ಟಿಪ್ಪಣಿ:— ಪ್ರಣಯಃ – (i) ವಿಶ್ವಾಸ, ನಂಬಿಗೆ. ವಿಸ್ರಂಭಃ. (ii) ಪ್ರಾರ್ಥನೆ, 'ಪ್ರಣಯಂ ಪ್ರಾರ್ಥನಾಂ' ಟೀಕಾ. ವಿಶ್ವಾಸವನ್ನಿಚ್ಛಿಸುವರು. ಅಥವಾ ಪ್ರಾರ್ಥನೆಯನ್ನಿಚ್ಛಿಸುವರು (ಇಚ್ಛತಿ) ಎಂದರೆ ವಿಶ್ವಾಸವಿಡುವರು. ಅಥವಾ ಪ್ರಾರ್ಥಿಸುವರು ಎಂಬ ಅರ್ಥ. ಮುಂದಿನ ಶ್ಲೋಕದ ೭ನೆಯ ನಾಲಿನಲ್ಲಿ ವಿಶ್ವಾಸ ಎಂಬ ಶಬ್ದವಿರುವದರಿಂದ, ಇಲ್ಲಿಯಾದರೂ ಪ್ರಣಯ ಎಂದರೆ ವಿಶ್ವಾಸ ಎಂದು ಅರ್ಥ ಮಾಡುವದೊಳಿತು.

**ಪುಟ ೩೪.** ೪೪. ಅನ್ವಯ:— ಸರ್ವಭೂತಾನಾಂ ಸೌಹೃದಾತ್ ವಿಶ್ವಾಸಃ ನಾಮ ಜಾಯತೇ। ತಸ್ಮಾತ್ ಜನಃ ಸತ್ಸು ವಿಶೇಷೇಣ ವಿಶ್ವಾಸಂ ಕುರುತೇ।

ಭಾಷಾಂತರ:— ಸೌಹಾರ್ದ (ಸ್ನೇಹ) ದಿಂದ ಎಲ್ಲ ಪ್ರಾಣಿಗಳಿಗೆ ವಿಶ್ವಾಸವೆಂಬುದು ಹುಟ್ಟುತ್ತದೆ. ಆದ್ದರಿಂದ ಜನರು ವಿಶೇಷವಾಗಿ ಸಜ್ಜನರಲ್ಲಿ ವಿಶ್ವಾಸವಿಡುವರು.

ಟಿಪ್ಪಣಿ:— ಸೌಹೃದಾತ್–ಸ್ನೇಹದಿಂದ. ಶೋಭನಂ ಹೃದಯಂ ಯಸ್ಯ ಸಃ ಸುಹೃದ್ (ಬ. ಸ.)। ಸುಹೃದಃ ಭಾವಃ ಸೌಹೃದಂ (ತದ್ಧಿತ)। ತಸ್ಮಾತ್। ಸರ್ವಭೂತಾನಾಂ–ಎಲ್ಲ ಪ್ರಾಣಿಗಳಿಗೆ ಸರ್ವಾಣಿ ಭೂತಾನಿ ಸರ್ವಭೂತಾನಿ (ಕ. ಸ.) ತೇಷಾಂ.

೪೫. ಅನ್ವಯ:— ಯಮಃ ಉವಾಚ:— ಅಂಗನೇ, ಯತ್ ವಚನಂ ತೇ (ತ್ವಯಾ) ಉದಾಹೃತಂ ತಾದೃಕ್ (ವಚನಂ) ತ್ವದೃತೇ ಮಯಾ ನ

ಶ್ರುತಮ್ । ಅನೇನ ತುಷ್ಟಃ ಅಸ್ಮಿ । ಅಸ್ಯ ಜೀವಿತಂ ವಿನಾ ಚತುರ್ಥಂ ವರಂ ವರಯಸ್ವ, ಗಚ್ಛ ಚ ।

ಭಾಷಾಂತರ:– ಯಮನು ಅಂದನು:– ಎಲೌ ಸಾಧ್ವಿಯೇ, ನೀನು ಆಡಿದಂತಹ (ಸುಂದರ) ಮಾತನ್ನು ನಿನ್ನ ಹೊರತು ಬೇರೆ ಯಾರಿಂದಲೂ ನಾನು ಕೇಳಿಲ್ಲ. ಇದರಿಂದ ನಾನು ಸಂತುಷ್ಟನಾಗಿದ್ದೇನೆ. (ಆದ್ದರಿಂದ) ಇವನ ಜೀವವನ್ನು ಬಿಟ್ಟು ನಾಲ್ಕನೆಯ ವರವನ್ನು ಬೇಡಿಕೋ.

ಟಿಪ್ಪಣೆ:– ಸಜ್ಜನರ ತಿಳಿ ಹೃದಯದ ಮೂಲಕ, ಅವರಲ್ಲಿ ಎಲ್ಲರಿಗೂ ವಿಶ್ವಾಸ ಹುಟ್ಟುತ್ತದೆಂಬ ಸುಂದರ ಮಾತನ್ನಾಡಿದ ಸಾವಿತ್ರಿಗೆ ಯಮನು ನಾಲ್ಕನೆಯ ವರ ದಯಪಾಲಿಸುವನು. ಅಂಗನಾ–ನಾರೀ, ಸ್ತ್ರೀ. ಉದಾಹೃತೆ–ಉದಾಹರಿಸಲ್ಪಟ್ಟ, ನುಡಿದ. ಋತೇ–ಬಿಟ್ಟು. ಈ ಶಬ್ದವು ಪಂಚಮೀ ವಿಭಕ್ತಿ ತೆಗೆದುಕೊಳ್ಳುತ್ತದೆ. ಉದಾ:– ರಾಮಾದೃತೇ ನ ಕೋಪಿ ರಾವಣಂ ಹಂತುಂ ಶಕ್ತಃ ।

೪೬. ಅನ್ವಯ:– ಸಾವಿತ್ರೀ ಉವಾಚ:– ಮಮ ಆತ್ಮಜಂ, ತಥಾ ಸತ್ಯವತಃ ಔರಸಂ, ಉಭಾಭ್ಯಾಂ (ಸಂಭೂತಂ), ಕುಲೋದ್ವಹಂ, ಬಲ-ವೀರ್ಯಶಾಲಿನಾಂ ಸುತಾನಾಂ ಶತಂ, (ತತ್) ಇದಂ ತೇ ಚತುರ್ಥಂ ವರಂ ವರಯಾಮಿ ।

ಭಾಷಾಂತರ:– ಸಾವಿತ್ರಿಯು ಅಂದಳು:– ನನ್ನ ಹೊಟ್ಟೆಯಿಂದ ಹುಟ್ಟಿದ, ಸತ್ಯವಾನನ ಔರಸರಾದ, (ಹೀಗೆ) ನಮ್ಮೀರ್ವರಿಂದ (ಉತ್ಪನ್ನರಾದ), ವಂಶವನ್ನು ಬೆಳೆಯಿಸುವ, ಶಕ್ತಿ–ಶೌರ್ಯಗಳುಳ್ಳ ನೂರು ಮಕ್ಕಳು (ಆಗ ಬೇಕು) ಎಂದು ನಿನಗೆ ನಾಲ್ಕನೆಯ ವರವನ್ನು ಬೇಡುದೆನು.

ಟಿಪ್ಪಣೆ:– ಸತ್ಯವಾನನ ಜೀವವನ್ನು ಸಾವಿತ್ರಿಯು ಬೇಡುವಂತಿರಲಿಲ್ಲ. ಆದ್ದರಿಂದ ಅದನ್ನು ನೇರವಾಗಿ ಬೇಡದೆ ಪರ್ಯಾಯದಿಂದ ಬೇಡುತ್ತಾಳೆ. ಆತ್ಮಜಃ–ಮಗ, ತನ್ನಿಂದ ಹುಟ್ಟಿದವ. ಸತ್ಯವತಃ ಔರಸಂ–ಸತ್ಯವಂತನ ಹೊಟ್ಟೆಯ ಮಗ. ಕೇವಲ ತನ್ನ ಮಗ (ಆತ್ಮಜಃ) ಎಂದು ಹೇಳಿದ್ದರೆ ಧೃತರಾಷ್ಟ್ರ ಮೊದಲಾದವರು ಹುಟ್ಟಿದಂತೆ ಸಾವಿತ್ರಿಯಲ್ಲಿ 'ನಿಯೋಗ' ಪದ್ಧತಿಯಿಂದ ಮಕ್ಕಳು ಹುಟ್ಟಬಹುದಾಗಿತ್ತು. ಆದರೆ ಅವಳಿಗೆ ಇದು ಇಷ್ಟವಿರಲಿಲ್ಲ. ಆದ್ದರಿಂದ ಸತ್ಯವಾನನಿಂದಲೇ ತನಗೆ ಮಕ್ಕಳಾಗಬೇಕೆಂದು 'ಸತ್ಯವತಃ ಔರಸ' ಎಂದು ಹೇಳುತ್ತಾಳೆ. ಉಭಾಭ್ಯಾಂ–ಹೀಗೆ ನಮ್ಮೀರ್ವರಿಂದ

ಹುಟ್ಟಿದ. ಕುಲೋದ್ವಹಂ–ಕುಲವನ್ನು ಬೆಳೆಯಿಸುವ. ಕುಲಂ ಉದ್ವಹತಿ ಇತಿ (ಉಪ. ತ.) ಈ ರೀತಿ ಸಾವಿತ್ರಿಯು ತನ್ನ ಚಾತುರ್ಯದಿಂದ ಯಮನನ್ನು ಶಬ್ದಜಾಲದಲ್ಲಿ ಹಿಡಿಯುವಳು.

೪೭. ಅನ್ವಯು:– ಯಮಃ ಉವಾಚ:– ಅಬಲೇ, ಪ್ರೀತಿಕರಂ, ಬಲವೀರ್ಯಶಾಲಿನಾಂ ಸುತಾನಾಂ ಶತಂ ತವ ಭವಿಷ್ಯತಿ । ನೃಪಾತ್ಮಜೇ, ತೇ ಪರಿಶ್ರಮಃ ನ ಭವೇತ್ । ನಿವರ್ತ। ತ್ವಂ ದೂರಂ ಪಥಃ ಆಗತಾ।

ಭಾಷಾಂತರ:– ಯಮನು ಅಂದನು:– ಬಲಹೀನಳೇ, ಸಂತೋಷವನ್ನುಂಟು ಮಾಡುವ ಹಾಗೂ ಶಕ್ತಿಶೌರ್ಯಗಳುಳ್ಳ ನೂರು ಮಕ್ಕಳು ನಿನಗೆ ಆಗುವರು. ರಾಜಪುತ್ರಿಯೇ, ನಿನಗೆ ಶ್ರಮವಾಗಬಾರದು; ಹಿಂತಿರುಗು. ನೀನು ದೂರ ದಾರಿ ಬಂದಿರುವೆ.

ಟಿಪ್ಪಣಿ:– ಸಾವಿತ್ರಿಯ ಶಬ್ದಜಾಲವನ್ನರಿಯದ ಯಮನು ಆಗಲಿ ಎಂದು ಒಪ್ಪುತ್ತಾನೆ. ಹೀಗೆ ಒಪ್ಪುವದರಿಂದ ಸತ್ಯವಾನನ ಜೀವವನ್ನು ಕೊಟ್ಟಂತೆ ಆಯಿತೆಂಬುದರ ಅರಿವು ಅವನಿಗೆ ಇನ್ನೂ ಹುಟ್ಟಿಲ್ಲ. ಪ್ರೀತಿಕರಂ–ಸಂತೋಷವನ್ನುಂಟುಮಾಡುವ. ಪ್ರೀತ್ಯಾಃ ಕರಃ (ಪ ತ.) ಅಬಲೇ – ಬಲಹೀನಳೇ, ನ ವಿದ್ಯತೆ ಬಲಂ ಯಸ್ಯಾಃ ಸಾ ಅಬಲಾ (ಬ.ಸ.) ತಸ್ಯಾಃ ಸಂಬೋಧನಂ ।

೪೮. ಅನ್ವಯು:– ಸಾವಿತ್ರೀ ಉವಾಚ:– ಸದಾ ಸತಾಂ ಶಾಶ್ವತಧರ್ಮವೃತ್ತಿಃ । ಸಂತಃ ನ ಸೀದಂತಿ, ನ ವ್ಯಥಂತಿ ಚ । ಸತಾಂ ಸದ್ಭಿಃ ಸಂಗಮಃ ಅಫಲಃ ನಾಸ್ತಿ । ಸಂತಃ ಸದ್ಭ್ಯಃ ಭಯಂ ನ ಅನುವರ್ತಂತಿ ।

ಭಾಷಾಂತರ:– ಸಾವಿತ್ರಿಯು ಅಂದಳು:– ಯಾವಾಗಲೂ ಸಜ್ಜನರು ಶಾಶ್ವತವಾದ ಧರ್ಮವನ್ನನುಸರಿಸುವರು. ಅವರು ಹಾಳಾಗುವದಿಲ್ಲ ಮತ್ತು ದುಃಖಪಡುವದಿಲ್ಲ. ಸಜ್ಜನರಿಗೆ ಸಜ್ಜನರೊಡನೆ ಆದ ಸಮಾಗವು ನಿಷ್ಫಲವಾಗುವದಿಲ್ಲ. ಸಜ್ಜನರು ಸಜ್ಜನರಿಂದ ಭಯಪಡುವದಿಲ್ಲ.

ಟಿಪ್ಪಣಿ:– ನೂರು ಮಕ್ಕಳಾಗುವರೆಂದು ಯಮನು ಕೊಟ್ಟ ವರದಿಂದ ಸಾವಿತ್ರಿಗೆ ಸಂತೋಷವಾಗಿತ್ತು. ಆದರೆ ‘ ನಿನ್ನ ಗಂಡನು ಸತ್ತಿದ್ದಾನೆ; ನಿನಗೆ ಮಕ್ಕಳಾಗುವ ಬಗೆ ಹೇಗೆ; ’ ಎಂದು ಯಮನು ವಿಚಾರಿಸಬಾರದೆಂದು, ಮನಸ್ಸಿನಲ್ಲಿ ಆಲೋಚಿಸಿ, ಕೊಟ್ಟ ಮಾತಿನಂತೆ ನಡೆಯಬೇಕೆಂದು ಸಾವಿತ್ರಿಯು

ಯಮನಿಗೆ ಹೇಳುತ್ತಾಳೆ. ಅದಕ್ಕಾಗಿ ಅವಳು ಸಜ್ಜನರನ್ನು ವರ್ಣಿಸಿ, ಅವರಂತೆ ಯಮನಾದರೂ ವರ್ತಿಸಬೇಕೆಂದು ಅಪ್ರತ್ಯಕ್ಷವಾಗಿ ಸೂಚಿಸುತ್ತಾಳೆ.

ಶಾಶ್ವತಧರ್ಮವೃತ್ತಿಃ— ಶಾಶ್ವತಃ ಧರ್ಮಃ ಶಾಶ್ವತಧರ್ಮಃ (ಕ. ಸ.) ತಸ್ಮಿನ್ ವೃತ್ತಿಃ (ಸ. ತ.) ಶಾಶ್ವತವಾದ ಧರ್ಮದಲ್ಲಿ ಇರುವದು. '*standing by the eternal law*' *Dr. P. L. Vaidya* ಅಫಲಃ— ವ್ಯರ್ಥವಾದುದು. ನ ವಿದ್ಯತೇ ಫಲಂ ಯಸ್ಯ ಸಃ (ಬ. ಸ) ವ್ಯಥಂತಿ ಮತ್ತು ಅನುವರ್ತಂತಿ ಇವು ಅನುಕ್ರಮವಾಗಿ ವ್ಯಥಂತೇ ಮತ್ತು ಅನುವರ್ತಂತೇ ಇವುಗಳ ಆರ್ಷರೂಪಗಳು.

**ಟೀಪು:**— ಸಾವಿತ್ರಿಯು ಸಜ್ಜನರ ಸಾಮಾನ್ಯ ಸ್ವರೂಪವನ್ನು ವರ್ಣಿಸಿದ್ದರೂ ಅದು ಸಜ್ಜನರಾದ ಯಮ ಮತ್ತು ತನಗೆ ಅನ್ವಯಿಸುವದು. ಅದ್ದರಿಂದ ಅವಳ ಇಂಗಿತಾರ್ಥವು ಕೆಳಗಿನಂತಿದೆ.

ಸಜ್ಜನಳಾದ ನನಗೆ ಪತಿಯಿಂದಲೇ (ಸತ್ಯವಾನ) ಮಕ್ಕಳು ಹುಟ್ಟತಕ್ಕದ್ದು ಎಂಬುದು ಶಾಶ್ವತವಾದ ಧರ್ಮವು. ನಿಮ್ಮಂತಹ ಸಜ್ಜನರು ವರವನ್ನು ಕೊಟ್ಟು ಮುಂದೆ ಆ ವಿಷಯವಾಗಿ ಚಿಂತೆ ಇಲ್ಲವೆ ದುಃಖಪಡುವದಿಲ್ಲ; ಅವರು ಅದನ್ನು ಸಾಧಿಸಿಯೇ ತೀರುವರು. ಈಗ, ಸುಜನನಾದ ನಿನ್ನೊಡನೆ ಸಾಧ್ವಿಯಾದ ನನಗೆ ಉಂಟಾದ ಸಮಾಗಮವು ನಿಷ್ಫಲವಾಗಲಾರದು. ಮೇಲಾಗಿ ನನಗೆ ಸುಜನನಾದ ನಿನ್ನಿಂದ ಪತಿವಿರಹ ಮೊದಲಾದ ಅನಿಷ್ಟಗಳುಂಟಾಗುವದೆಂಬ ಅಂಜಿಕೆಯೇ ಇಲ್ಲ.

೪೯. ಅನ್ವಯ:— ರಾಜನ್, ಸಂತಃ ಸತ್ಯೇನ ಸೂರ್ಯಂ ನಯಂತಿ, ಸಂತಃ ಭೂಮಿಂ ತಪಸಾ ಧಾರಯಂತಿ, ಸಂತಃ ಭೂತಭವ್ಯಸ್ಯ ಗತಿಃ। ಸತಾಂ ಮಧ್ಯೇ ಸಂತಃ ನ ಅವಸೀದಂತಿ।

ಭಾಷಾಂತರ:— ಯಮರಾಜನೇ, ಸಜ್ಜನರು ಸತ್ಯದಿಂದ (ನಿರಾಧಾರವಾದ ಆಕಾಶದಲ್ಲಿ) ಸೂರ್ಯನನ್ನು ನಡೆಯಿಸುವರು. ಹಾಗೂ ತಪಸ್ಸಿನಿಂದ ಭೂಮಿಯನ್ನು ಧಾರಣ ಮಾಡುವರು *(Support)* ಸಜ್ಜನರೇ ಭೂತಭವಿಷ್ಯತ್ತುಗಳಿಗೆ ಆಧಾರ (ಅಥವಾ ಅವರೇ ಗತಿಪ್ರದರು). ಆದ್ದರಿಂದ ಸಜ್ಜನರು ಸತ್ಪುರುಷರ ಮಧ್ಯದಲ್ಲಿ ತವಕ (ದುಃಖ) ಗೊಳ್ಳುವದಿಲ್ಲ.

ಟಿಪ್ಪಣಿ:— ಭೂತಭವ್ಯಸ್ಯ— ಭೂತಂ ಚ ಭವ್ಯಂ (ಭವಿಷ್ಯಂ) ಚ ಏತಯೋಃ ಸಮಾಹಾರಃ ಭೂತಭವ್ಯಂ (ಸಮಾಹಾರ ದ್ವಂದ್ವ) ತಸ್ಯ। ಗತಿಃ—

ಆಧಾರ ಇಲ್ಲವೆ ಗತಿಪ್ರದರು. ನ ಅವಸೀದಂತಿ—ಕುಸಿಯುವದಿಲ್ಲ. ದುಃಖಪಡುವದಿಲ್ಲ. ಸಜ್ಜನರು ಸತ್ಪುರುಷರ ಮಧ್ಯದಲ್ಲಿ ತವಕಗೊಳ್ಳದಿರುವಂತೆ ಸುಜನನಾದ ನಿನ್ನೊಡನೆ ಇದ್ದ ಸಾಧ್ವಿಯಾದ ನನಗಾದರೂ ಪತಿವಿರಹವಾಗುವ ದೆಂಬ ದುಃಖವಿಲ್ಲ ಎಂದು ಸಾವಿತ್ರಿಯ ಮನೋಭಾವ.

೫೦. ಅನ್ವಯ:— ಪರಾರ್ಥಂ ಕುರ್ವಾಣಾಃ ಸಂತಃ ಇದಂ (ಪರೋಪಕರಣಂ) ಆರ್ಯಜುಷ್ಟಂ, ಶಾಶ್ವತಂ ವೃತ್ತಂ ಇತಿ ವಿಜ್ಞಾಯ ಪ್ರತಿ ಕ್ರಿಯಾಃ ನ ಅವೇಕ್ಷಂತಿ ।

ಭಾಷಾಂತರ:— ಪರೋಪಕಾರ ಮಾಡುವದನ್ನು (ಹಿಂದಿನ) ಪೂಜ್ಯರು (ಸುಜನರು) ಸ್ವೀಕರಿಸಿರುವರೆಂದೂ, ಅದು (ಸತ್ಪುರುಷರ) ಶಾಶ್ವತವಾದ ರೀತಿಯೆಂದೂ ಅರಿತುಕೊಂಡು, ಪರೋಪಕಾರಮಾಡುವ ಸುಜನರು ಪ್ರತ್ಯುಪ ಕಾರವನ್ನು ನಿರೀಕ್ಷಿಸುವದಿಲ್ಲ.

ಟಿಪ್ಪಣಿ:— ಆರ್ಯಜುಷ್ಟಂ—ಆರ್ಯರು ಆಶ್ರಯಿಸಿದ. ಪೂಜ್ಯರು ಅಂಗೀಕರಿಸಿದ ಆರ್ಯೈಃ ಜುಷ್ಟಂ(ತೃ.ತ.) ಇದಂ—ಇದು. ಪರೋಪಕಾರ ಎಂದು ಅರ್ಥ. ನ ಅವೇಕ್ಷಂತಿ—ನಿರೀಕ್ಷಿಸುವದಿಲ್ಲ. ಪಠ್ಯಪುಸ್ತಕದಲ್ಲಿ ಅವೇಕ್ಷ್ಯಂತಿ ಎಂದು ತಪ್ಪು ಮುದ್ರಿತವಾಗಿದೆ. ಅದು ಅವೇಕ್ಷಂತಿ ಎಂದು ಇರಬೇಕು. ಮೂಲ ಪುಸ್ತಕದಲ್ಲಿ ಅವೇಕ್ಷಂತಿ ಎಂಬುದಾಗಿಯೇ ಇದೆ. ಪ್ರತಿಕ್ರಿಯಾ—ಪ್ರತ್ಯುಪಕಾರ. ಅವೇಕ್ಷಂತಿ ಇದು ಅವೇಕ್ಷಂತೇ ಇದರ ಆರ್ಷರೂಪ. ಸಜ್ಜನರು ಪ್ರತ್ಯುಪಕಾರವನ್ನು ಅಪೇಕ್ಷಿಸುವದಿಲ್ಲವಾದ್ದರಿಂದ ಸುಜನನಾದ ನೀನು 'ನಾನು ಮರಳಿ ಹೋಗುವ' ಪ್ರತ್ಯುಪಕಾರವನ್ನು ನಿರೀಕ್ಷಿಸಬೇಡ ಎಂದು ಸೂಚ್ಯವಾಗಿ ಹೇಳುತ್ತಾಳೆ.

೫೧ ಅನ್ವಯ:— ಸತ್ಪುರುಷೇಷು ಪ್ರಸಾದಃ ನ ಮೋಘಃ, ಅರ್ಥಃ ಚ ನ ನಶ್ಯತಿ, ಮಾನಃ ಅಪಿ ನ ನಶ್ಯತಿ। ಯಸ್ಮಾತ್ ಏತತ್ (ತ್ರಿತಯಂ) ಸತ್ಸು ನಿತ್ಯಂ ನಿಯತಂ, ತಸ್ಮಾತ್ ಸಂತಃ ರಕ್ಷಿತಾರಃ ಭವಂತಿ ।

ಭಾಷಾಂತರ:— ಸಜ್ಜನರಿಗೆ ಮಾಡಿದ ಅನುಗ್ರಹವು (ಉಪಕಾರ) ವ್ಯರ್ಥವಾಗುವದಿಲ್ಲ; (ಇದರಿಂದ) ದುಡ್ಡು ಹಾಳಾಗುವದಿಲ್ಲ; ಮಾನಹಾನಿಯೂ ಆಗುವದಿಲ್ಲ. ಇದು (ಅನುಗ್ರಹ, ದುಡ್ಡು ಮತ್ತು ಮಾನ) ಸಜ್ಜನರಲ್ಲಿ ಯಾವಾಗಲೂ ಇರುವದರಿಂದ ಸಜ್ಜನರು (ಎಲ್ಲರ) ರಕ್ಷಕರು ಆಗುವರು.

ಅಥವಾ

ಸಜ್ಜನರ ಅನುಗ್ರಹವು ವ್ಯರ್ಥವಾಗದು; ಅವರಲ್ಲಿ ಮಾಡಿದ ಬಿನ್ನಹವು ನಿಷ್ಫಲವಾಗುವದಿಲ್ಲ (ನಾಶಹೊಂದುವದಿಲ್ಲ), (ಅವರು ನಮ್ಮ ಇಚ್ಛೆಗಳನ್ನು ಪೂರ್ಣಮಾಡಬಹುದೆಂಬ) ನಿರೀಕ್ಷೆಯೂ ವ್ಯರ್ಥವಾಗದು. (ಅಥವಾ ಬಿನ್ನಹ ಮಾಡಿದಾಗ ಮಾನಭಂಗ ಆಗುವದಿಲ್ಲ) ಸಜ್ಜನರಲ್ಲಿ (ಈ ಎಲ್ಲ ಗುಣಗಳು) ಯಾವಾಗಲೂ ನಿಶ್ಚಯವಾಗಿ ಇರುವದರಿಂದ ಅವರು (ಎಲ್ಲರ) ರಕ್ಷಕರು ಆಗುತ್ತಾರೆ.

ಟಿಪ್ಪಣಿ:— (i) ಬಡವನ ಅನುಗ್ರಹದಿಂದ ದುಡ್ಡು ದೊರೆಯುವದಿಲ್ಲ; ಶ್ರೀಮಂತರ ಅನುಗ್ರಹದಿಂದ ಮಾನಭಂಗವಾಗುವದು; ನೀಚರಲ್ಲಿಯಾದರೋ ಅನುಗ್ರಹವೇ ಇರುವದಿಲ್ಲ. ಆಗರೆ ಸಜ್ಜನರ ಅನುಗ್ರಹದಿಂದ ಹಣ ಹಾಗೂ ಮಾನ ದೊರೆಯುತ್ತವೆ. ಹೀಗೆ ಅನುಗ್ರಹ, ದುಡ್ಡು ಮತ್ತು ಮಾನ ಈ ಮೂರೂ ಒಂದೆಡೆಯಲ್ಲಿ ಯಾವಾಗಲೂ ನೆಲಿಸಿರುವ ಸ್ಥಳವೆಂದರೆ ಸುಜನರು. ಆದ್ದರಿಂದ ಆ ಸಜ್ಜನರಿಂದಲೇ ಎಲ್ಲರ ರಕ್ಷಣೆ ಆಗುವದು. ಎಂದು ಈ ಶ್ಲೋಕದ ತಾತ್ಪರ್ಯ.

(ii) ಅರ್ಥಃ— ಬಿನ್ನಹ ಪ್ರಾರ್ಥನೆ. 'ಸತ್ಪುರುಷೇಷು ಕೃತಾ ಅಭ್ಯರ್ಥನಾ ನ ನಿಷ್ಫಲಾ ಭವತಿ' ಮಾನಃ— ನಿರೀಕ್ಷಣೆ (*expectation*).

೫೨ ಅನ್ವಯ :— ಯಮಃ ಉವಾಚ:— ಪತಿವ್ರತೇ, ಯಥಾ ಯಥಾ ಧರ್ಮಸಂಹಿತಂ ಮನೋಽನುಕೂಲಂ, ಸುಪದಂ, ಮಹಾರ್ಥವತ್ ಭಾಷಸಿ, ತಥಾ ತಥಾ ತ್ವಯಿ ಮೇ ಉತ್ತಮಾ ಭಕ್ತಿಃ। ಅಪ್ರತಿಮಂ ವರಂ ವೃಣೀಷ್ವ.

ಭಾಷಾಂತರ:— ಯಮನು ಅಂದನು:— ಪತಿವ್ರತೆಯೇ, ನೀನು ಧರ್ಮದಿಂದ ಕೂಡಿದ, ಮನಸ್ಸಿಗೆ ಬೇಕಾದ, ಒಳ್ಳೆಯ ಶಬ್ದಗಳುಳ್ಳ, ಒಳ್ಳೆ ಅರ್ಥವತ್ತಾದ ಮಾತುಗಳನ್ನಾಡಿದ ಹಾಗೆ ನಿನ್ನಲ್ಲಿ ನನಗೆ ಹೆಚ್ಚು ಪ್ರೀತಿ (ಹುಟ್ಟುವದು). ಶ್ರೇಷ್ಠ (ಅಸದೃಶವಾದ) ವರವನ್ನು ಬೇಡು.

ಟಿಪ್ಪಣಿ:— ಭಾಷಸಿ = ಭಾಷಸೇ। ಧರ್ಮಸಂಹಿತಂ — ಧರ್ಮದಿಂದ ಕೂಡಿದ. ಧರ್ಮೇಣ ಸಂಹಿತಂ (ಸಂಬದ್ಧಂ). (ತೃ. ತ.) ಮಹಾರ್ಥವತ್— ಬಹಳ ಅರ್ಥವುಳ್ಳ, ಅಪ್ರತಿಮಂ —ಅಸದೃಶವಾದ. ನ ವಿದ್ಯತೇ ಪ್ರತಿಮಾ ಯಸ್ಯಸಃ (ಬ. ಸ.) ತಂ। ಶ್ರೇಷ್ಠ ಎಂದು ಅಭಿಪ್ರಾಯ.

**ಪುಟ ೩೫.** ೫೪. ಅನ್ವಯ:— ಮಾನದ, ಯಥಾ ಅನ್ಯೇಷು ವರೇಷು (ಇವ), ತೇ (ತ್ವತ್ತಃ) ಅಪವರ್ಗಃ (ಪುತ್ರಫಲಪ್ರಾಪ್ತಿಃ) ಸುಕೃ-

ತಾತ್ ವಿನಾ (ಸಮೀಚೀನಾತ್ ದಾಂಪತ್ಯಯೋಗಾತ್ ಋತೇ) ನ ಕೃತಃ (ಭವತಿ), ತಥಾ, ಅಯಂ ಸತ್ಯವಾನ್ ಜೀವತು ಇತಿ ವರಂ ವೃಣೇ। ಏವಂ, ಪತಿಂ ವಿನಾ ಅಹಂ ಮೃತಾ ಏವ.

ಭಾಷಾಂತರ:— ಸನ್ಮಾನ ಕೊಡುವವನೇ, ಇತರ ವರಗಳಲ್ಲಿಯಂತೆ ಮಕ್ಕಳಾಗತಕ್ಕ ವರವು ಪತಿಯ ಸಹವಾಸವಿಲ್ಲದೆ ಸಿದ್ಧಿಸುವದಿಲ್ಲವಾದ್ದರಿಂದ, ಸತ್ಯವಾನನು ಬದುಕಲಿ ಎಂದು ವರ ಬೇಡುವೆನು. ಹೀಗೆ, ಪತಿ. ಇಲ್ಲದಲಿ ನಾನು (ಇದ್ದರೂ) ಸತ್ತಂತೆಯೇ.

ಅಥವಾ

ಅನ್ವಯ:— ಹೇ ಮಾನದ, ಯಥಾ ಮಮ ಸುಕೃತಾತ್ ವಿನಾ (ಸುಕೃತಸ್ಯ ಅಭಾವೇನ) ಅನ್ಯೇಷು ವರೇಷು ಅಪವರ್ಗಃ (ಅಪವಾದಃ, ವಿನಾ ಪುನಃ ಸತ್ಯವತೋಽಸ್ಯ ಜೀವಿತಂ ಇತ್ಯೇವಂ ರೂಪಃ) ತೇ (ತ್ವಯಾ) ಕೃತಃ, ತಥಾ (ಅಸ್ಮಿನ್ ಪಂಚಮೇ ವರೇ) ನ ಕೃತಃ। (ತಸ್ಮಾತ್) ಅಯಂ ಸತ್ಯ-ವಾನ್ ಜೀವತು (ಇತಿ) ವರಂ ವೃಣೇ। ಏವಂ, ಪತಿಂ ವಿನಾ ಅಹಂ ಮೃತಾ ಏವ।

ಭಾಷಾಂತರ:— ಸನ್ಮಾನ ಕೊಡುವವನೇ, ನನ್ನ ಸುದೈವದಿಂದ, ಇತರ ವರಗಳಲ್ಲಿ (ಸತ್ಯವಾನನ ಜೀವವೊಂದನ್ನು ಬಿಟ್ಟು ಎಂದು) ಅಪವಾದ (*exception*) ಮಾಡಿದಂತೆ (ಈ ೫ನೆಯ ವರದಲ್ಲಿ, ಅಪವಾದ) ಮಾಡಿಲ್ಲ ವಾದ್ದರಿಂದ, ಸತ್ಯವಾನನು ಬದುಕಲಿ ಎಂದು ವರ ಬೇಡಿಕೊಳ್ಳುತ್ತೇನೆ. ಹೀಗೆ ಗಂಡನಿಲ್ಲದೆ, ನಾನು (ಇದ್ದರೂ) ಸತ್ತಂತೆಯೇ

ಟಿಪ್ಪಣಿ:— ಮಾನದ—ಮಾನ ಕೊಡುವವನೇ. ಮಾನಂ ದದಾತಿ ಇತಿ ಮಾನದಃ (ಉಪ.ತ). ತಸ್ಯ ಸಂಬೋಧನಂ. ಇತರರಿಗೂ. ಅವರವರಿಗೆ ತಕ್ಕಂತೆ ಮಾನ ಕೊಡುವವನೇ ಮೃತಾ ಏವ—ಪತಿ ಇಲ್ಲದಲೆ ನಾನು ಜೀವಿಸಿ-ದರೆ ಅದು ಸತ್ತಂತೆಯೇ ಸರಿ. ಆದ್ದರಿಂದ ಹಾಗೆ ಆಗಕೂಡದು.

(i) ೧ನೆಯ ಅರ್ಥ. ಹೆಚ್ಚಾಗಿ ನೀಲಕಂಠೀ ಟೀಕಾಕ್ಕೆ ಅನುಗುಣ-ವಾದುದು. ಅಪವರ್ಗಃ—ಇದರ ನಿಜವಾದ ಅರ್ಥ ಮೋಕ್ಷ. ಎಂದರೆ ಸುಖಪ್ರಾಪ್ತಿ. ಆದ್ದರಿಂದ ಲಾಕ್ಷಣಿಕವಾಗಿ, ಸುಖ ದೊರೆಯುವ ಸಾಧನ ಎಂದು ಅರ್ಥ ಮಾಡಲಾಗಿದೆ. ಈ ಸುಖಸಾಧನವು ಪುತ್ರಪ್ರಾಪ್ತಿಯಿಂದ ಆಗುವದು, ಆದ್ದರಿಂದ ಇಲ್ಲಿ ಅಪವರ್ಗ ಎಂದರೆ ಮಕ್ಕಳಾಗುವದು ಎಂಬ

ಅರ್ಥ. ಸುಕೃತಂ—ಪುಣ್ಯ. ಇಲ್ಲಿ ದಾಂಪತ್ಯ ಜೀವನವೆಂಬ ಪುಣ್ಯ, ಗಂಡ-ನೊಂದಿಗೆ ಕೂಡಿ ಇರುವ ಪುಣ್ಯ, (ಪತಿಸಾಹಚರ್ಯ) ಎಂದು ಅರ್ಥ ಮಾಡಬೇಕು. [ಟೀಕಾದಲ್ಲಿ ವರೇಷು ಎಂದರೆ ಭರ್ತೃಷು ಎಂದು ಇಟ್ಟು ಕೊಂಡು ಅರ್ಥವನ್ನು ಮುಂದುವರಿಸಲಾಗಿದೆ. ಆದರೆ ಅದು ಸಮಂಜಸ-ವೆಂದು ತೋರುವದಿಲ್ಲ].

(ii) ೨ನೆಯ ಅರ್ಥ— ಡಾ. ಪಿ. ಎಲ್. ವೈದ್ಯರ ವಿವರಣೆಯಂತೆ. **ಈ ಅರ್ಥವು ಹೆಚ್ಚು ಸಮಂಜಸವೆಂದು ತೋರುತ್ತದೆ.** ಇಲ್ಲಿ ಅಪ-ವರ್ಗ ಎಂದರೆ ಅಪವಾದ ಎಂದು ಅರ್ಥಮಾಡಿದುದು ಕೋಶಾರ್ಥಕ್ಕೆ ಅನುಸಾರಿಯಾಗಿದೆ. ಸುಕೃತಂ ಎಂದರೆ ಪುಣ್ಯ ಎಂದು ಸರಳ ಅರ್ಥ ಮಾಡಲಾಗಿದೆ.

೫೪ ಅನ್ವಯ:—ಭರ್ತೃವಿನಾಕೃತಾ (ಅಹಂ) ಸುಖಂ ನ ಕಾಮಯೇ। ಭರ್ತೃವಿನಾ ಕೃತಾ ಅಹಂ ದಿವಂ ನ ಕಾಮಯೇ । ಭರ್ತೃವಿನಾಕೃತಾ ಅಹಂ ಶ್ರಿಯಂ ನ ಕಾಮಯೇ । ಭರ್ತೃಹೀನಾ ಜೀವಿತುಂ ನ ವ್ಯವಸಾಮಿ।

ಭಾಷಾಂತರ:—ಗಂಡನಿಲ್ಲದಲೆ (ಪತಿರಹಿತಳಾದ) ನಾನು, ಸುಖವನ್ನು ಬಯಸುವದಿಲ್ಲ, ಸ್ವರ್ಗವನ್ನು ಬಯಸುವದಿಲ್ಲ. ಮತ್ತು ಸಂಪತ್ತನ್ನೂ ಬಯ ಸುವದಿಲ್ಲ. ಗಂಡನಿಲ್ಲದ ನಾನು ಬದುಕಲು ಮನಸ್ಸು ಮಾಡಲಾರೆ. ( ಅಥವಾ ಸಾಧ್ಯವಿಲ್ಲ).

ಟಿಪ್ಪಣೆ:—ಭರ್ತೃವಿನಾಕೃತಾ—ಗಂಡನಿಂದ ಅಗಲಿದ. ವಿನಾಕೃ—ಅಗಲು. ಭರ್ತ್ರಾ ವಿನಾಕೃತಾ (ತೃ ತ.) ದಿವಂ— ಸ್ವರ್ಗವನ್ನು ಶ್ರಿಯಂ—ಸಂಪತ್ತನ್ನು **ವ್ಯವಸಾಮಿ**=ವ್ಯವಸ್ಯಾಮಿ. ವಿ+ಅವ+ಸೋ(೪.ಪ) ಧಾತುವಿನ ವ. ಪ್ರ. ಪು. ಏ. ವ. ಅನಿಯಮಿತ ಅಥವಾ ಆರ್ಷರೂಪ. ನ ವ್ಯವಸಾಮಿ—ಸಾಧ್ಯವಿಲ್ಲ. ನ ಶಕ್ನೋಮಿ. ಅಥವಾ ಮನಸ್ಸು ಮಾಡಲಾರೆ.

೫೫ ಅನ್ವಯ:— ತ್ವಯಾ ಏವ ಮಮ ಶತಪುತ್ರತಾ ವರಾತಿಸರ್ಗಃ ದತ್ತಃ । ಪತಿಃ ತ್ವಯಾ ಹ್ರಿಯತೇ ಚ । ಅಯಂ ಸತ್ಯವಾನ್ ಜೀವತು ಇತಿ ವರಂ ವೃಣೇ । ತವ ಏವ ವಚನಂ ಸತ್ಯಂ ಭವಿಷ್ಯತಿ ಏ

ಭಾಷಾಂತರ :—ನೀನೇ ನೂರು ಮಕ್ಕಳಾಗುವ ವರ ಕೊಟ್ಟಿರುವೆ (ವರದಾನ ಮಾಡಿರುವೆ ) (ಮತ್ತು) ಗಂಡನನ್ನು ನೀನೇ ಒಯ್ಯುತ್ತಲಿರುವೆ. (ಆದ್ದರಿಂದ) ಈ ಸತ್ಯವಾನನು ಬದುಕಲಿ ಎಂದು ವರ ಬೇಡುತ್ತೇನೆ. (ಇದರಿಂದ) ನಿನ್ನ ಮಾತೇ ಸತ್ಯವಾಗುವದು.

ಟಿಪ್ಪಣೆ:— ವರಾತಿಸರ್ಗಃ—ವರದಾನ. ಅತಿಸರ್ಗಃ=ದಾನಂ ವರಸ್ಯ ಅತಿಸರ್ಗಃ ( ಷ. ತ. ಸ. ) ಶತಪುತ್ರತಾ— ನೂರು ಮಕ್ಕಳಾಗುವದು. ಹ್ರಿಯತೇ—ಒಯಲ್ಪಡುತ್ತಾನೆ. ಹೃ (೧ ಪ.) ಧಾತುವಿನ ಕರ್ಮಣಿ ವ.ಕಾ. ತೃ. ಪು. ಏ. ವ. ತ್ವಯಾ ವರಾತಿಸರ್ಗಃ ದತ್ತಃ ಪತಿಃ ಚ ಹ್ರಿಯತೇ (ಕರ್ಮಣಿ)— ತ್ವಂ ವರಾತಿಸರ್ಗಂ ದತ್ತವಾನ್ ಪತಿಂ ಚ ಹರಸಿ (ಕರ್ತರಿ) ತವೈವ ವಚನಂ ಸತ್ಯಂ ಭವಿಷ್ಯತಿ—ಎಂದರೆ ನಿನ್ನ ಮಾತೇ ಸತ್ಯವಾಗುವದು.

ಮಾರ್ಕಂಡೇಯಃ ಉವಾಚ:— ಮಾರ್ಕಂಡೇಯನು ( ಧರ್ಮರಾಜನಿಗೆ) ಅಂದನು :—

೫೬ ಅನ್ವಯ:—ತತಃ ತಥಾ ಇತಿ ಉಕ್ತ್ವಾ ಪ್ರಹೃಷ್ಟಾತ್ಮಾ ವೈವಸ್ವತಃ ಯಮಃ ಧರ್ಮರಾಜಃ ತಂ ಪಾಶಂ ಮುಕ್ತ್ವಾ ಸಾವಿತ್ರೀಂ ಇದಂ ಅಬ್ರವೀತ್।

ಭಾಷಾಂತರ:— ಬಳಿಕ 'ಹಾಗೆಯೇ ( ನೀನು ಹೇಳಿದಂತೆ ) ಆಗಲಿ' ಎಂದು ಅಂದು ಹರ್ಷಗೊಂಡ, ವಿವಸ್ವತನ ಮಗನಾದ ಯಮಧರ್ಮರಾಜನು ಆ ಪಾಶವನ್ನು (ಬಲೆ, ಹಗ್ಗ) ಬಿಚ್ಚಿ ಸಾವಿತ್ರಿಗೆ ಹೀಗೆ (ಇದನ್ನು) ಅಂದನು.

ಟಿಪ್ಪಣೆ:—ತಥೇತಿ—ಹಾಗೆಯೇ ಆಗಲಿ, ಒಳ್ಳೇದು ಉಕ್ತ್ವಾ—ಮಾತನಾಡಿ. ವಚ್ (೨ ಪ.) ಧಾತುವಿನ ಲ್ಯಬಂತಾವ್ಯಯ. ಪ್ರಹೃಷ್ಟಾತ್ಮಾ—ಸಂತೋಷಗೊಂಡು. ಪ್ರಹೃಷ್ಟಃ ಆತ್ಮಾ ಯಸ್ಯ ಸಃ (ಬ.ಸ.)। ವೈವಸ್ವತಃ–ವಿವಸ್ವತನ ಮಗ. ವಿವಸ್ವತಃ ಅಪತ್ಯಂ ಪುಮಾನ್ (ತದ್ಧಿತ).

೫೭ ಅನ್ವಯ:—ತವ (ತ್ವಯಾ) ನೇಯಃ ಸಃ ಅರೋಗಃ ಸಿದ್ಧಾರ್ಥಃ ಚ ಭವಿಷ್ಯತಿ। ತ್ವಯಾ ಸಾರ್ಧಂ ಸಃ ಚತುರ್ವರ್ಷಶತಾಯುಃ ಅವಾಪ್ಸ್ಯತಿ।

ಭಾಷಾಂತರ:— ನಿನ್ನಿಂದ ಒಯ್ಯಲ್ಪಡಬಹುದಾದ ಇವನು ನಿರೋಗಿಯೂ ಕೃತಕೃತ್ಯನೂ ಆಗುವನು. ಅವನು ನಿನ್ನೊಡನೆ ನಾಲ್ಕುನೂರು ವರ್ಷ ಆಯುಷ್ಯ ಪಡೆಯುವನು.

ಟಿಪ್ಪಣೆ:—ತವ=ತ್ವಯಾ ನೇಯ—ಒಯ್ಯಲು ಯೋಗ್ಯ. ನೀ (೧.ಪ) ಧಾತುವಿನ ಕರ್ಮಣಿ ವಿಧ್ಯರ್ಥ ಧಾ.ಸಾ.ವಿ. ಅರೋಗಃ–ನಿರೋಗಿ, ನ ವಿದ್ಯತೇ ರೋಗಃ ಯಸ್ಯ ಸಃ(ಬ.ಸ)ಚತುರ್ವರ್ಷ ಶತಾಯುಃ. ೪೦೦ವರ್ಷ ಆಯುಷ್ಯ, (ಆಯುಸ್–ಆಯುಷ್ಯ.) ವರ್ಷಾಣಾಂ ಶತಾನಿ ವರ್ಷಶತಾನಿ (ಷ. ತ. ಸ.) ಚತುರ್ಣಾಂ ವರ್ಷಶತಾನಾಂ ಸಮಾಹಾರಃ ಚತುರ್ವರ್ಷಶತಂ (ದ್ವಿಗು) ತನ್ಮಿತಂ ಆಯುಃ ಚತುರ್ವರ್ಷಶತಾಯುಃ(ಮ.ಪ.ಲೊ.ತ)ಅವಾಪ್ಸ್ಯತಿ–ಪಡೆ

ಯುವಸು ಅವ+ ಆಪ್ (೫.ಪ) ಧಾತುವಿನ ದ್ವಿ.ಭ.ತೃ.ಪು.ಏ.ವ. ಸಾರ್ಧಂ— ಸಹ, ಕೂಡಿಕೊಂಡು.

೫೮. ಅನ್ವಯ:— ಸತ್ಯವಾನ್ ಧರ್ಮೇಣ ಯಜ್ಞೈಃ ಇಷ್ಟ್ವಾ ಲೋಕೇ ಖ್ಯಾತಿಂ ಗಮಿಷ್ಯತಿ । ತ್ವಯಿ ಏವ ಪುತ್ರಶತಂ ಜನಯಿಷ್ಯತಿ ಚ ।

ಭಾಷಾಂತರ:— ಸತ್ಯವಾನನು ವಿಧಿಪೂರ್ವಕವಾಗಿ ಯಜ್ಞಗಳನ್ನು ಮಾಡಿ ಜಗತ್ತಿನಲ್ಲಿ ಪ್ರಸಿದ್ಧಿ ಪಡೆಯುವನು ಮತ್ತು ನಿನ್ನಲ್ಲಿಯೇ ನೂರು ಮಕ್ಕಳನ್ನು ಹುಟ್ಟಿಸುವನು.

ಟಿಪ್ಪಣಿ:— ಧರ್ಮೇಣ ಯಜ್ಞೈಃ ಇಷ್ಟ್ವಾ— ವಿಧಿಪೂರ್ವಕವಾಗಿ ಯಜ್ಞಗಳನ್ನು ಮಾಡಿ. **ಇಷ್ಟ್ವಾ**— ಯಜ್ (೧ ಪ.) ಧಾತುವಿನ ಲ್ಯಬಂತಾವ್ಯಯ. ಧರ್ಮೇಣ ಶಬ್ದವನ್ನು ಖ್ಯಾತಿಂ ಶಬ್ದದೊಂದಿಗೂ ತೆಗೆದುಕೊಳ್ಳಬಹುದು. ಎಂದರೆ ಧರ್ಮೇಣ ಖ್ಯಾತಿಂ ಗಮಿಷ್ಯತಿ – ಧರ್ಮಕಾರ್ಯದಿಂದ ಪ್ರಸಿದ್ಧಿ ಪಡೆಯುವನು ಅಥವಾ ಧರ್ಮಕಾರ್ಯಕ್ಕಾಗಿ ಪ್ರಸಿದ್ಧನಾಗುವನು. ಗಮಿಷ್ಯತಿ–ಗಮ್ (೧.ಪ) ಧಾತುವಿನ ದ್ವಿ. ಭ. ತೃ ಪು. ಏ; ವ. ಜನಯಿಷ್ಯತಿ-ಜನ್ (೪.ಆ)ಧಾತುವಿನ ಪ್ರಯೋಜಕರೂಪದ ದ್ವಿ.ಭ.ತೃ.ಪು.ಏ.ವ. ಹುಟ್ಟಿಸುವನು.

೫೯ ಅನ್ವಯ:— ಇಹ ತೇ ಸರ್ವೇ ಅಪಿ ಕ್ಷತ್ರಿಯಾಃ ರಾಜಾನಃ ಪುತ್ರಪೌತ್ರಿಣಃ ಶಾಶ್ವತಾಃ ತ್ವನ್ನಾಮಧೇಯಾಃ, ಖ್ಯಾತಾಃ ಚ ಭವಿಷ್ಯಂತಿ.

ಭಾಷಾಂತರ:–ಇಲ್ಲಿ, ಆ ಎಲ್ಲ ಕ್ಷತ್ರಿಯ ರಾಜರು ಮಕ್ಕಳು–ಮೊಮ್ಮಕ್ಕಳುಳ್ಳವರಾಗಿ ಚಿರಕಾಲ ( ' ಸಾವಿತ್ರ ಸಾವಿತ್ರ ' ಎಂಬು ) ಎಂದು ನಿನ್ನ ಹೆಸರಿನಿಂದ ಪ್ರಸಿದ್ಧರಾಗುವರು.

ಟಿಪ್ಪಣಿ :— ತೇ — ಅವರು. ಆ ನಿನ್ನ ೧೦೦ ಮಕ್ಕಳು ಪುತ್ರಪೌತ್ರಿಣಃ– ಮಕ್ಕಳು-ಮೊಮ್ಮಕ್ಕಳುಳ್ಳವರು. ಪುತ್ರಾಃ ಪೌತ್ರಾಃ ಚ ಪುತ್ರಪೌತ್ರಾಃ ದ್ವಂದ್ವ ಪುತ್ರ–ಪೌತ್ರಾಃ ಸಂತಿ ಏಷಾಂ ಇತಿ ಪುತ್ರಪೌತ್ರಿಣಃ (ತದ್ಧಿತ), ತ್ವನ್ನಾಮ-ಧೇಯಾಃ— ನಿನ್ನ ಹೆಸರುಳ್ಳವರು. ಅರ್ಥಾತ್ ಸಾವಿತ್ರ ಎಂದು ಹೆಸರು-ಳ್ಳವರು. ತವ ನಾಮಧೇಯಂ ಯೇಷಾಂ ತೇ (ಬ.ಸ.) ಹಿಂದಕ್ಕೆ ವಂಶದ ಹೆಸರು ಪ್ರಸಿದ್ಧನಾದ ತಂದೆ ಇಲ್ಲವೆ ಪ್ರಸಿದ್ಧಳಾದ ತಾಯಿಯಿಂದ ಬರು-ತ್ತಿತ್ತು; ಈಗಲಾದರೋ ನಿನ್ನ ವಂಶವು ನಿನ್ನ ಹೆಸರಿನಿಂದಲೇ ಪ್ರಸಿದ್ಧ-ವಾಗುವದು.

೬೦. ಅನ್ವಯ:— ತೇ ಪಿತುಃ ಚ, ತವ ಮಾತರಿ ಮಾಲವ್ಯಾಂ ಪುತ್ರಶತಂ ಭವಿತಾ । ಮಾಲವಾ ನಾಮ ತೇ ಕ್ಷತ್ರಿಯಾಃ ಭ್ರಾತರಃ ತ್ರಿದಶೋಪಮಾಃ ಪುತ್ರಪೌತ್ರಿಣಃ ಶಃಶ್ವತಾಃ ಭವಿಷ್ಯಂತಿ ।

ಭಾಷಾಂತರ:— ನಿನ್ನ ತಂದೆಗೆ ನಿನ್ನ ತಾಯಿಯಾದ ಮಾಲವಿಯಲ್ಲಿ ನೂರು ಮಕ್ಕಳು ಆಗುವರು. ಮಾಲವ ಎಂಬ ಹೆಸರುಳ್ಳ ನಿನ್ನ ಕ್ಷತ್ರಿಯ ಸಹೋದರರು ದೇವತೆಗಳಿಗೆ ಸಮಾನರೂ, ಮಕ್ಕಳು—ಮೊಮ್ಮಕ್ಕಳು ಉಳ್ಳವರೂ ಆಗಿ ಚಿರಕಾಲ ಉಳಿಯುವರು. (ಅಥವಾ ಪ್ರಸಿದ್ಧರಾಗುವರು).

ಟಿಪ್ಪಣಿ:— ಮಾಲವ್ಯಾಂ — ಮಾಲವೀ ದೇವತೆಯಲ್ಲಿ. ಇವಳು ಸಾವಿತ್ರಿಯ ತಾಯಿ. ಮಾಲವಾಃ – ಮಾಲವರು. ಮಾಲವೀದೇವಿಯ ಸಂಬಂಧಿಕರು. ಮಾಲವ್ಯಾಃ ಇಮೇ ಮಾಲವಾಃ (ತದ್ಧಿತ) ಮಾಲವ ಎಂಬ ವಂಶದ ಹೆಸರಾದರೂ ತಾಯಿಯಾದ ಮಾಲವೀದೇವಿಯಿಂದ ಪ್ರಾಪ್ತವಾಯಿತು. ಕ್ಷತ್ರಿಯಾಃ — ಕ್ಷತಾತ್ ತ್ರಾಯತೇ ಇತಿ ಕ್ಷತ್ರಃ (ಉಪ.ತ.) ಆಪತ್ತಿನಿಂದ ರಕ್ಷಿಸುವ ಕ್ಷತ್ರಿಯರು. ತ್ರಿದಶೋಪಮಾಃ— ದೇವತೆಗಳಿಗೆ ಸಮಾನರು. (ತ್ರಿದಶಾಃ—ದೇವತೆಗಳು; ಉಪಮಾ—ಹೋಲಿಕೆ) ತ್ರಿದಶೈಃ ಉಪಮಾ ಯೇಷಾಂ ತೇ (ಬ.ಸ.) ದೇವತೆಗಳ ಹೋಲಿಕೆಯುಳ್ಳವರು. **ತ್ರಿದಶಾಃ**:— ದೇವತೆಗಳು (i) ತಿಸ್ರಃ ದಶಾಃ ಯೇಷಾಂ ತೇ (ಬ. ಸ.) ಬಾಲ್ಯ, ಕೌಮಾರ, ಯೌವನ ಎಂಬ ಮೂರೇ ಅವಸ್ಥೆಯುಳ್ಳ ದೇವತೆಗಳು. ಅವರಿಗೆ ನಾಲ್ಕನೆಯದಾದ ವಾರ್ಧಕ್ಯ (ಮುಪ್ಪು) ಅವಸ್ಥಾ ಇರುವದಿಲ್ಲ. (ii) ಯಾವಾಗಲೂ ೩ನೆಯದಾದ ಯೌವನಾವಸ್ಥೆಯುಳ್ಳ ದೇವತೆಗಳು. (iii) ತ್ರೀನ್ ಆಧ್ಯಾತ್ಮಿಕಾದೀನ್ ತಾಪಾನ್ ದಶಂತಿ ಇತಿ. ಆಧ್ಯಾತ್ಮಿಕ, ಆಧಿದೈವಿಕ, ಆಧಿಭೌತಿಕ ಎಂಬ ಮೂರು ತಾಪಗಳನ್ನು ತಮ್ಮ ತಪೋಬಲದಿಂದ ಪರಿಹರಿಸಿಕೊಂಡ ದೇವತೆಗಳು. (iv) ದೇವತೆಗಳ ಸಂಖ್ಯೆ ಸ್ಥೂಲವಾಗಿ ೩೦, ಎಂದರೆ ಮೂರು ಹತ್ತು (೩ × ೧೦), ತ್ರಿ—ದಶ ಇರುವದರಿಂದ ಅವರಿಗೆ ತ್ರಿದಶಾಃ ಎಂಬ ಹೆಸರು ಬಂದಿದೆ. ಶಾಶ್ವತಾ ಭವಿಷ್ಯಂತಿ — ಚಿರಕಾಲ ಉಳಿಯುವರು. ಅರ್ಥಾತ್ ಪ್ರಸಿದ್ಧರಾಗುವರು. ಶಾಶ್ವತ (ವಿ) ಚಿರಕಾಲೀನ *eternal*.

೬೧. ಅನ್ವಯ:— ಪ್ರತಾಪವಾನ್ ಧರ್ಮರಾಜಃ ತಸ್ಯೈ ಏವಂ ವರಂ ದತ್ವಾ, ಸಾವಿತ್ರೀಂ ನಿವರ್ತಯಿತ್ವಾ ಸ್ವಂ ಭವನಂ ಏವ ಯಯೌ

ಭಾಷಾಂತರ:— ಪರಾಕ್ರಮಿಯಾದ ಯಮಧರ್ಮರಾಜನು ಅವಳಿಗೆ (ಸಾವಿತ್ರಿಗೆ) ಈ ರೀತಿಯಾಗಿ ವರ ಕೊಟ್ಟು, ಅವಳನ್ನು (ಸಾವಿತ್ರಿಯನ್ನು) ಕಳುಹಿಸಿ, ತನ್ನ ಮನೆಗೆ (ಲೋಕಕ್ಕೆ) ಹೋದನು.

ಟಿಪ್ಪಣಿ:— ನಿವರ್ತಯಿತ್ವಾ - ಹಿಂತಿರುಗಿಸಿ. ಕಳಿಸಿ. ನಿ + ವೃತ್ (೧. ಆ) ಧಾತುವಿನ ಪ್ರಯೋಜಕರೂಪದ ಲ್ಯಬಂತಾವ್ಯಯ. ಭವನಂ–ಮನೆ, ಅರ್ಥಾತ್ ಯಮಲೋಕ. ಯಯೌ - ಹೋದನು. ಯಾ ( ೨.ಪ ) ಧಾತುವಿನ ದ್ವಿ. ಭೂ. ತೃ. ಪು. ಏ. ವ.

—ಮಹಾಭಾರತದ ವನಪರ್ವದಲ್ಲಿ (ಅಧ್ಯಾಯ ೨೯೭)

## EXERCISES.

**ಙ. ಅಭ್ಯಾಸಕ್ಕಾಗಿ ಪ್ರಶ್ನೆಗಳು:—**

೧. **ಕನ್ನಡಕ್ಕೆ ಪರಿವರ್ತಿಸಿರಿ:**—(i) ಶ್ಲೋಕ ೭–೧೧; ೧೭–೧೯ (ii) ಶ್ಲೋಕ ೨೨–೨೬; (iii) ಶ್ಲೋಕ ೪೮–೫೧

೨. **ವಿಗ್ರಹಿಸಿ ಸಮಾಸಗಳ ಹೆಸರು ಹೇಳಿರಿ**–ಭಾರ್ಯಾಸಹಾಯಃ ಬದ್ಧಮೌಲಿಃ; ರಕ್ತಾಕ್ಷಂ; ಶ್ಯಾಮಾವದಾತಂ; ಅಂಗುಷ್ಠಮಾತ್ರಂ; ಕೃತಾಂಜಲಿಃ; ಅನಪತ್ಯಃ; ದಕ್ಷಿಣಾಮುಖಃ; ಕುಲೋದ್ವಹಂ.

೩. **ರೂಪ ಗುರುತಿಸಿರಿ:**— ಪಾಟಿಯತಃ; ಚಿಕೀರ್ಷಿತಂ; ಗಿರಾ; ಪ್ರತಿಪತ್ಸ್ಯತೇ; ಪಿಪಾಸಿತಸ್ಯ; ನಿರೀಕ್ಷಂತಂ; ನಿವರ್ತಯಿತ್ವಾ.

೪. **ಲಘು ಟಿಪ್ಪಣಿ ಬರೆಯಿರಿ:**— ಅಂಗುಷ್ಠಮಾತ್ರಂ ಪುರುಷಂ; ವೈವಸ್ವತಃ; ಯಮಃ; ಧರ್ಮರಾಜಃ; ಸಾಪ್ತಪದಂ; ತ್ರಿದಶಾಃ; ಮಾಲವಾ.

೫. **ವಾಕ್ಯಗಳಲ್ಲಿ ಉಪಯೋಗಿಸಿರಿ:**— ಅಥ, ಯಥಾ .... ತಥಾ ನಾಮ.

೬. **ಪ್ರಯೋಗ ಬದಲಿಸಿರಿ:**— (i) ಪ್ರಹೃಷ್ಟಾತ್ಮಾ, ಸಾವಿತ್ರೀಂ ಇದಂ ಅಬ್ರವೀತ್ । (ii) ಕೃತಂ ಭರ್ತುಸ್ತ್ವಯಾನೃಣ್ಯಂ (iii) ತ್ವಯಾ ವರಾತಿಸರ್ಗಃ ದತ್ತಃ ತ್ವಯೈವ ಚ ಹ್ರಿಯತೇ ಮೇ ಪತಿಃ ।

೭. **ಸಂಧಿ ಬಿಡಿಸಿರಿ:**— (i) ವಪುರೇತದ್ಧ್ಯಮಾನುಷಂ; (ii) ಲಬ್ಧಚಕ್ಷುರ್ಭವೇನ್ನೃಪಸ್ತವ । (iii) ಪ್ರಜಾಸ್ತ್ವಯೈತಾಃ

# ೨. ರಘುರಾಘವಾ

೧. **ಕವಿ ಹಾಗೂ ಕಾವ್ಯ:**— ಈ ಪಾಠವನ್ನು ಕಾಲಿದಾಸನ ರಘುವಂಶದ ೮ನೇ ಸರ್ಗದಿಂದ ಆಯ್ದುಕೊಳ್ಳಲಾಗಿದೆ. ಕಾಲಿದಾಸನ ವಿವರಗಳಿಗಾಗಿ ಗದ್ಯಭಾಗದ ೬ನೇ ಪಾಠ ನೋಡಿರಿ.

**ಕಥಾಸಂದರ್ಭ:**— ರಘುವಂಶದಲ್ಲಿ ಸೂರ್ಯವಂಶದ ಅಯೋಧ್ಯೆಯ ಅರಸರ ವೃತ್ತಾಂತವಿದೆ. ಈ ವಂಶದ ಮೊದಲನೆಯ ರಾಜನು ಸೂರ್ಯ-ಪುತ್ರನಾದ ಮನು. ಇದೇ ವಂಶದಲ್ಲಿ ರಘುರಾಜನೆಂಬ ಪ್ರಸಿದ್ಧ ಅರಸನು ಆಗಿಹೋದನು. ಈತನು ತನ್ನ ಮಗನಾದ ಅಜನಿಗೆ ರಾಜ್ಯವನ್ನೊಪ್ಪಿಸಿ ಮುನಿವೃತ್ತಿಯನ್ನು ಸ್ವೀಕರಿಸುತ್ತಾನೆ. ಹೊಸ ಅರಸನಾದ ಅಜರಾಜನು ತನ್ನ ರಾಜ್ಯಕಾರಭಾರವನ್ನು ಒಳ್ಳೇ ನ್ಯಾಯದಿಂದ ನಡಿಸುತ್ತಾನೆ. ತನ್ನ ಪ್ರಜೆಗಳನ್ನು ಪ್ರೀತಿಯಿಂದ ಆಳುತ್ತಾನೆ. ಆತನು ತನ್ನ ರಾಜ್ಯದ ಸುಧಾರಣೆಯ ಸಲುವಾಗಿ ಹೆಚ್ಚು ಲಕ್ಷ್ಯಕೊಡುತ್ತಾನೆ. ಶಾಂತರೀತಿಯಿಂದ ರಾಜ್ಯವಾಳಿ ಪ್ರಜೆಗಳ ಪ್ರೀತಿಯನ್ನು ಸಂಪಾದಿಸುತ್ತಾನೆ. ಆತನ ತಂದೆಯಾದ ರಘು-ರಾಜನು ಊರಹೊರಗೆ ಆಶ್ರಮದಲ್ಲಿದ್ದು ಇಂದ್ರಿಯಗಳನ್ನು ನಿಗ್ರಹಿಸಿ ಯೋಗಾಭ್ಯಾಸವನ್ನು ಮಾಡಿ ಮೋಕ್ಷಸಾಧನೆಯನ್ನು ಮಾಡುತ್ತಾನೆ. ಈ ಪಾಠದಲ್ಲಿ ಮಗ ಮತ್ತು ತಂದೆ ಇವರಿಬ್ಬರ ಶುದ್ಧವಾದ ಪ್ರವೃತ್ತಿ ಮತ್ತು ನಿವೃತ್ತಿಮಾರ್ಗ-ಗಳ ವರ್ಣನೆ ಇದೆ.

**ಪಾಠದ ಸಾರಾಂಶ:**— ರಘುರಾಜನು ಮುದುಕನಾಗಲು, ಮನೆತನದ ಸಂಪ್ರದಾಯದ ಮೇರೆಗೆ ರಾಜ್ಯ ಹಾಗೂ ಸಂಪತ್ತನ್ನು ಮಗನಾದ ಅಜನಿಗೆ ಒಪ್ಪಿಸಿ ತಾನು ಮುನಿವೃತ್ತಿಯನ್ನು ಸ್ವೀಕರಿಸಿ ಅಡವಿಗೆ ಹೊರಡಲು ಸಿದ್ಧನಾ-ಗುವನು. ಆದರೆ ಅಜನು ತನ್ನನ್ನು ಬಿಟ್ಟು ಹೋಗಬಾರದೆಂದು ಪರಿಪರಿಯಿಂದ ಪ್ರಾರ್ಥನೆಮಾಡಿಕೊಂಡಿದ್ದರಿಂದ ರಘು ಅಡವಿಗೆ ಮಾತ್ರ ಹೋಗುವದಿಲ್ಲ. ಅವನು ಎಲ್ಲ ಇಂದ್ರಿಯಗಳನ್ನು ನಿಗ್ರಹಿಸಿ ವಿಷಯವಾಸನೆಬಿಟ್ಟು ಪಂಚಪ್ರಾಣಗಳನ್ನು ನಿರೋಧಿಸಿ, ತತ್ವಜ್ಞಾನವೆಂಬ ಅಗ್ನಿಯಿಂದ ಎಲ್ಲ ಕರ್ಮಗಳನ್ನು ಸುಟ್ಟು ಸಮಾಧಿಯೋಗವನ್ನಾಶ್ರಯಿಸಿ ಪರಮಾತ್ಮನ ಸಾಕ್ಷಾತ್ಕಾರ ಪಡೆದನು. ಮೋಕ್ಷ ಸಂಪಾದನೆಯೇ ಅವನ ಗುರಿಯಾಗಿತ್ತು.

ಅಜನಾದರೋ ತನಗೆ ಬಂದ ರಾಜ್ಯವನ್ನು ತಂದೆಯ ಆಜ್ಞಾಪರಿಪಾಲನೆಯೆಂದು ಸ್ವೀಕರಿಸಿದನು. ಅವನು ಪಟ್ಟಕ್ಕೆ ಬಂದೊಡನೆ ಮಂತ್ರಿಗಳೊಡನೆ ಆಲೋಚಿಸಿ, ಶತ್ರುಗಳ ವಿರೋಧೀ ಚಟುವಟಿಕೆಗಳನ್ನು ನಿಲ್ಲಿಸಿ, ಎಲ್ಲ ಮಾಂಡಲಿಕ ರಾಜರನ್ನು ತನ್ನ ಅಂಕಿತದಲ್ಲಿಟ್ಟುಕೊಂಡನು. ಅವನು ತೀರ ತೀಕ್ಷ್ಣ ಇಲ್ಲವೆ ತೀರ ಮೃದು ಇರದೆ ಸುವರ್ಣ ಮಧ್ಯಮಮಾರ್ಗವನ್ನವಲಂಬಿಸಿದ್ದನು. ತಂದೆಯ ಎಲ್ಲ ಗುಣಗಳೂ ಅವನಲ್ಲಿದ್ದವು. ಜೊತೆಗೆ ತಾರುಣ್ಯ ಹಾಗೂ ವಿನಯಗಳಿದ್ದವು. ಹೀಗಾಗಿ ಅವನು ಬಹುಬೇಗ ಪ್ರಜೆಗಳ ಪ್ರೇಮಾದರಗಳಿಗೆ ಪಾತ್ರನಾದನು ನ್ಯಾಯದಾನ ಹಾಗೂ ಕಾರ್ಯತತ್ಪರತೆಗಳಿಗಾಗಿ ಪ್ರಸಿದ್ಧನಾದನು. ಒಟ್ಟಿನಮೇಲೆ ಜನಪ್ರಿಯನಾಗಿ ಐಹಿಕ ಸಂಪತ್ತನ್ನೆಲ್ಲ ಪಡೆದನು.

## ಅನ್ವಯ, ಭಾಷಾಂತರ ಹಾಗೂ ಟೀಕೆ–ಟಿಪ್ಪಣಿಗಳು.

### रघु राघवौ

### ೨. ರಘುವೂ ಅಜನೂ

**ಪುಟ ೩೬.** ೧. ಅನ್ವಯ:— ಅಥ ಪಾರ್ಥಿವಃ (ರಘುಃ), ಲಲಿತಂ ವಿವಾಹಕೌತುಕಂ ಬಿಭ್ರತಃ ಏವ ತಸ್ಯ (ಅಜಸ್ಯ), ಅಪರಾಂ ಇಂದುಮತೀಂ ಇವ ವಸುಧಾಂ ಅಪಿ ಹಸ್ತಗಾಮಿನೀಂ ಅಕರೋತ್।

ಭಾಷಾಂತರ:– ಬಳಿಕ ರಘುರಾಜನು, ಎರಡನೆಯ ಇಂದುಮತಿಯೋ ಎನ್ನುವಂತಿದ್ದ ಭೂಮಿಯನ್ನೂ ಸಹ, ಅಜನು ಸುಂದರವಾದ ವಿವಾಹಕಂಕಣವನ್ನು ಧರಿಸಿರುವಾಗಲೇ ಅವನ ಕೈಗೆ ಒಪ್ಪಿಸಿದನು.

ಟಿಪ್ಪಣಿ:— ರಘುರಾಘವೌ—ರಘುರಾಘವರು ರಘುಃ ಚ ರಾಘವಃ ಚ (ದ್ವಂದ್ವ) ರಘು ಎಂದರೆ ಸುಪ್ರಸಿದ್ಧನಾದ ರಘುರಾಜ. ರಾಘವಃ— ರಘುರಾಜನ ಮಗನಾದ ಅಜಕುಮಾರ. ರಘೋಃ ಅಪತ್ಯಂ ಪುಮಾನ್(ತದ್ಧಿತ) 'ಪಾರ್ಥಿವಃ ವಸುಧಾಂ ಅಪಿ ಹಸ್ತಗಾಮಿನೀಂ ಅಕರೋತ್' ರಘುರಾಜನು ಭೂಮಿಯನ್ನೂ ಸಹ (ಎಂದರೆ ರಾಜ್ಯವನ್ನೂ ಕೂಡ) ಅಜನ ಕೈಗೆ ಒಪ್ಪಿಸಿದನು. ಎಂಬುದು ವಾಕ್ಯದ ಮುಖ್ಯ ಭಾಗ.

ಅಥಃ— ಬಳಿಕ ತರುವಾಯ, ಅಜನ ವಿವಾಹ ಮಹೋತ್ಸವವಾದ ನಂತರ. ಪಾರ್ಥಿವಃ—ಅರಸ, ರಾಜ. ಇಲ್ಲಿ ರಘುರಾಜ. ಪೃಥಿವ್ಯಾಃ

ಈಶ್ವರಃ ಅಥವಾ ರಾಜಾ (ತದ್ಧಿತ). ವಸುಧಾ—ಭೂಮಿ. ಹಸ್ತಗಾಮಿನೀಂ ಅಕರೋತ್—(ಅಜನ) ಕೈಗೆ ಒಪ್ಪಿಸಿದನು. ಹಸ್ತಂ ಗಚ್ಛತಿ ಇತಿ ಹಸ್ತ-ಗಾಮಿನೀ (ಉಪ.ತ.) ತಾಂ. ಇಂದುಮತಿಯನ್ನಷ್ಟೇ ಅಲ್ಲದೆ ಭೂಮಿಯನ್ನೂ ಕೂಡ. ಅಪರಾಂ ಇಂದುಮತೀಂ ಇವ—ಎರಡನೇ ಇಂದುಮತಿಯೋ ಎನ್ನುವಂತಿದ್ದ. ಇದು ಭೂಮಿಗೆ ವಿಶೇಷಣವಾಗಿದೆ. ಇಂದುಮತಿಯು ರಘುಪುತ್ರನಾದ ಅಜನ ಹೆಂಡತಿಯು. ಭೂಮಿಗೆ ಈ ವಿಶೇಷಣ ಕೊಟ್ಟಿದ್ದರಿಂದ, ಅಜನು ತನ್ನ ಹೆಂಡತಿಯಾದ ಇಂದುಮತಿಯನ್ನು ಪ್ರೀತಿಸುವಂತೆ ಭೂಮಿಯನ್ನಾದರೂ ಪ್ರೀತಿಪೂರ್ವಕವಾಗಿ ರಕ್ಷಿಸಬೇಕಾಗಿತ್ತು ಎಂಬ ಮಾತು ಸೂಚಿತವಾಗುತ್ತದೆ. ಲಲಿತಂ ವಿವಾಹಕೌತುಕಂ ಬಿಭ್ರತಃ ಏವ ತಸ್ಯ—ಅಜನು ಸುಂದರವಾದ ವಿವಾಹ ಮಂಗಲ ಕಂಕಣವನ್ನು (ಮುಂಗೈಯಲ್ಲಿ) ಧರಿಸಿರುವಾಗಲೇ, ಲಲಿತ ಸುಂದರವಾದ. ವಿವಾಹಕೌತುಕಂ—'ವಿವಾಹ ಹಸ್ತಸೂತ್ರಂ' ಟೀಕಾ. ಮದುವೆಯ ಕಂಕಣದಾರ. **ಕೌತುಕ** ಎಂದರೆ ಕಂಕಣದಾರ. ಮದುವೆಯ ಪ್ರಾರಂಭದಲ್ಲಿ ಪವಿತ್ರವಾದ ಕಂಕಣದಾರವನ್ನು ವಧೂವರರ ಮುಂಗೈಗೆ ಕಟ್ಟಲಾಗುವದು. ಈ ದಾರವನ್ನು ಅರಿಷಣದ ನೀರಿನಲ್ಲಿ ಎದ್ದಿ ನಂತರ ಕಟ್ಟುವದರಿಂದ, ಇದರ ಬಣ್ಣ ಹಳದೀ ಇರುತ್ತದೆ. ಈ ದಾರದೊಂದಿಗೆ ಅರಿಷಣ ಬೇರನ್ನೂ (ಪುತ್ರಪ್ರಾಪ್ತಿಯ ಸೂಚಕಾರ್ಥ-ವಾಗಿ) ಕಟ್ಟುವ ರೂಢಿಯುಂಟು. ಈ ಕಂಕಣ ದಾರವನ್ನು ಸಾಮಾನ್ಯವಾಗಿ ಮದುವೆಯಾದ ೩ನೇ ದಿನ ಬಿಚ್ಚಲಾಗುವದು. ಆದರೆ ಇದನ್ನು ವಿವಾಹ-ವಾದ ನಂತರ ೩ ದಿನ ಇಲ್ಲವೆ ೧೨ ದಿನ ಇಲ್ಲವೆ ಪರಮಾವಧಿ ೧೨ ತಿಂಗಳು ಪಾಲಿಸಬೇಕಾದ ಬ್ರಹ್ಮಚರ್ಯವೃತ್ತಿಯ ಸಂಪೂರ್ಣ ಅವಧಿಯಲ್ಲಿಯೂ ಧರಿಸಬಹುದು. ( ವಧೂವರರ ಸಮ್ಮಿಲನ ಸ್ಥಿರವಾಗಿ ಉಳಿಯಬೇಕೆಂದು ಸೂಚಿಸುವದಕ್ಕಾಗಿ ಕಂಕಣದಾರ ಕಟ್ಟುವರು). ಬಿಭ್ರತಃ ಏವ—ಧರಿಸಿರು-ವಾಗಲೇ **ಬಿಭ್ರತಃ** ಇದು ಭೃ (೩. ಉ) ಧಾತುವಿನ ವ. ಧಾ. ವಿ. (ಪು) ಷ. ಏ. ವ. ಇದೆ. ಸಾಮಾನ್ಯವಾಗಿ ರಾಜ್ಯಾಭಿಷೇಕ ವಿವಾಹ ಮಹೋತ್ಸವದ ಸಮಯದಲ್ಲಿಯೇ ಜರುಗುವದಿಲ್ಲ. ಆದರೆ ಇಲ್ಲಿ ಮಾತ್ರ ಅಜಕುಮಾರನಿಗೆ ಮದುವೆಯಾದ ತೀರ ಅತ್ಯಲ್ಪ ಅವಧಿಯಲ್ಲಿಯೇ—ಅವನು ಇನ್ನೂ ಮದು-ವೆಯ, ಕಂಕಣ ದಾರವನ್ನು, ಉಚ್ಚದಿರುವಾಗ ದೊರೆಯಿತು. ಅಂತೆಯೇ 'ಸತಃ ಷಷ್ಠೀ' ಪ್ರಯೋಗ ಉಪಯೋಗಿಸಲಾಗಿದೆ. ಇದರ ವಿವರಣೆಗಾಗಿ ಇದೇ ಗೈಡಿನ ಗದ್ಯಭಾಗದ ೭—೮ ಪುಟ ನೋಡಿರಿ [ರಾಜ್ಯವನ್ನು ಇಷ್ಟೊಂದು

ಅವಸರದಿಂದ ಅಜನ ಸ್ವಾಧೀನ ಪಡಿಸುವ ಕಾರಣವೆಂದರೆ, ರಘುರಾಜನಿಗೆ ಮುನಿವೃತ್ತಿ ಸ್ವೀಕರಿಸುವ ಬಗ್ಗೆ ಇದ್ದ ಉತ್ಕಟ ಇಚ್ಛೆ]

೨ ಅನ್ವಯ:— ನೃಪಸೂನವಃ ಯತ್ ದುರಿತೈಃ ಅಪಿ ಆತ್ಮಸಾತ್ ಕರ್ತುಂ ಪ್ರಯತಂತೇ ಹಿ, ತತ್ ಉಪಸ್ಥಿತಂ (ರಾಜ್ಯಂ) ಅಜಃ ಪಿತುಃ ಆಜ್ಞಾ ಇತಿ ಅಗ್ರಹೀತ್, ಭೋಗತೃಷ್ಣಯಾ (ತು) ನ।

ಭಾಷಾಂತರ:— ರಾಜಕುಮಾರರು ನಿಷಿದ್ಧ ಉಪಾಯಗಳಿಂದಲೂ ಕೂಡ ರಾಜ್ಯವನ್ನು ಸ್ವಾಧೀನಪಡಿಸಿಕೊಳ್ಳಲು ನಿಜವಾಗಿಯೂ ಯತ್ನಿಸುತ್ತಾರೆ. ಆದರೆ ಅಜನಾದರೋ ತನ್ನೆಡೆಗೆ ಬಂದ ರಾಜ್ಯವನ್ನು ತಂದೆಯ ಆಜ್ಞೆಯಿಂದು ಸ್ವೀಕರಿಸಿದನು; (ಆದರೆ) ವಿಷಯೋಪಭೋಗದ ಲಾಲಸೆಯಿಂದಲ್ಲ.

ಟಿಪ್ಪಣಿ:— 'ಅಜಃ ತತ್ (ರಾಜ್ಯಂ) ಅಗ್ರಹೀತ್' ಅಜನು ರಾಜ್ಯವನ್ನು ಸ್ವೀಕರಿಸಿದನು ಎಂಬುದು ವಾಕ್ಯದ ಮುಖ್ಯಾಂಶ **ಅಗ್ರಹೀತ್**— ಸ್ವೀಕರಿಸಿದನು. ತೆಗೆದುಕೊಂಡನು. ಗ್ರಹ್ (೯. ಪ) ಧಾತುವಿನ ತೃ. ಭೂ. ತೃ. ಪು. ಏ. ವ. ೧ನೆಯ ಸಾಲಿನಲ್ಲಿ ರಾಜಕುಮಾರರು ರಾಜ್ಯಸಂಪಾದನೆಗಾಗಿ ಮಾಡುವ ಪ್ರಯತ್ನಗಳ ವರ್ಣನೆ ಇದೆ. ನೃಪಸೂನವಃ— ರಾಜಪುತ್ರರು. ರಾಜಕುಮಾರರು. ನೃಪಾಣಾಂ ಸೂನವಃ (ಷ. ತ. ಸ.) ದುರಿತೈಃ ಅಪಿ— ನಿಷಿದ್ಧ ವ್ಯಾಪಾರ (ಉಪಾಯ) ಗಳಿಂದಲೂ ಕೂಡ. ದುರಿತಂ— ನಿಷಿದ್ಧವ್ಯಾಪಾರ. ಕೆಟ್ಟ ಮಾರ್ಗಗಳೆಂದಮೇಲೆ ಅವು ಎಲ್ಲರಿಗೂ ನಿಷಿದ್ಧವಾದವುಗಳೇ. ಆದ್ದರಿಂದ ಅವು ಎಲ್ಲರಿಂದಲೂ ತ್ಯಾಜ್ಯವಾದವು. ಅದರಲ್ಲಿಯೂ ವಿಶೇಷವಾಗಿ ಜನರನ್ನು ಪಾಲಿಸುವ (ನೄನ್ ಪಾಂತಿ ಇತಿ ನೃಪಾಃ– ಉ. ತ.) ರಾಜರ ಮಕ್ಕಳಿಗೆ ಇವು ಸರ್ವಥಾ ಸಲ್ಲುವದಿಲ್ಲ. ಆದರೂ ಕೂಡ ರಾಜ್ಯ ದೊರೆಯಲೇಬೇಕೆಂಬ ದುರಾಶೆಯಿಂದ ರಾಜಕುಮಾರರು ವಿಷಪ್ರಯೋಗ ಮುಂತಾದ ದುಷ್ಟ ಉಪಾಯಗಳಿಂದ ರಾಜ್ಯಗಳಿಸಲು ಹವಣಿಸುವರು. ತಂದೆ ಇಲ್ಲವೆ ಅಣ್ಣ–ತಮ್ಮಂದಿರ ವಿಷಯವಾಗಿಯೂ ಕೂಡ ವಿಷಪ್ರಾಶನದಂತಹ ನಿಂದ್ಯ ಮಾರ್ಗವನ್ನವಲಂಬಿಸುತ್ತಾರೆ. (ಈ ಮಾತಿನ ಸತ್ಯತೆಯ ಬಗ್ಗೆ ಇತಿಹಾಸದಲ್ಲಿ ಅಲ್ಲಾಉದ್ದೀನ ಔರಂಗಜೇಬ ಮು. ಅನೇಕ ಉದಾಹರಣೆಗಳನ್ನು ಕಾಣಬಹುದು). ಇಷ್ಟೆಲ್ಲ ಅರ್ಥ ನೃಪ ಮತ್ತು ಅಪಿ ಈ ಶಬ್ದಗಳಿಂದ ಹೊರಡುತ್ತದೆ. ಆತ್ಮಸಾತ್ ಕರ್ತುಂ— ಸ್ವಾಧೀನಪಡಿಸಿಕೊಳ್ಳಲು ಕೈವಶಮಾಡಿಕೊಳ್ಳಲು. ಪ್ರಯತಂತೇ— ಪ್ರಯತ್ನಿಸುವರು. ಹಿ— ನಿಶ್ಚಯ

ಸೂಚಕ ಅವ್ಯಯ ('ಹಿ ಹೇತಾವವಧಾರಣೇ' ಅಮರಃ) ಅವರು ಪ್ರಯತ್ನಿಸುವದು ನಿಜ. ಅವರು ನಿಶ್ಚಯವಾಗಿಯೂ ಯತ್ನಿಸುತ್ತಾರೆ. ಆದರೆ ಈ ಅಜನ ವಿಷಯ ಹಾಗಲ್ಲ. ರಾಜ್ಯ ತಾನಾಗಿಯೇ ತಂದೆಯಿಂದ ಬಂದಿತ್ತು. ಉಪಸ್ಥಿತ—ಬಂದ. ಯಾವ ಪ್ರಯತ್ನವೂ ಇಲ್ಲದೆ ಸ್ವತಃ ತಾನಾಗಿಯೆ ಬಂದ ಪಿತುಃ ಆಜ್ಞಾ ಇತಿ—ತಂದೆಯ ಆಜ್ಞೆ ಎಂದು. ವಾಸ್ತವವಾಗಿ ಅಜಕುಮಾರನಿಗೆ ತಂದೆ ಜೀವಂತವಿರುವಾಗ ರಾಜ್ಯವನ್ನಾಳಬೇಕೆಂಬ ಇಚ್ಛೆ ಇರಲಿಲ್ಲ. ಆದರೆ ತಂದೆಯೇ ಅದನ್ನು ಕೊಡಮಾಡಿದ್ದರಿಂದ ಸ್ವೀಕರಿಸಲೇಬೇಕಾಯಿತು. ತಂದೆಯ ಅಪ್ಪಣೆ ಎಂದು ರಾಜ್ಯ ಸ್ವೀಕರಿಸಿದನು. ಇಲ್ಲವಾದರೆ ತಂದೆಯ ಮಾತನ್ನು ನಿರಾಕರಿಸಿದ (ಪಿತುರಾಜ್ಞಾಭಂಗ) ದೋಷಕ್ಕೆ ಗುರಿಯಾಗುತ್ತಿದ್ದನು. ಭೋಗತೃಷ್ಣಾ—ವಿಷಯಭೋಗದ ಲಾಲಸೆ ಭೋಗಸ್ಯ ತೃಷ್ಣಾ (ಷ. ತ. ಸ.) ರಾಜ್ಯ ದೊರಿತರೆ ಮನಬಂದಂತೆ ಇಂದ್ರಿಯಗಳನ್ನು ತೃಪ್ತಿಗೊಳಿಸಲು ಸಾಧ್ಯವಾಗುತ್ತದೆಂಬ ದುಷ್ಟ ಆಶೆ ಅಜಕುಮಾರನಿಗೆ ಎಳ್ಳಷ್ಟೂ ಇರಲಿಲ್ಲ.

೩ ಅನ್ವಯ:— ಅಥರ್ವವಿದಾ ಗುರುಣಾ ಕೃತಕ್ರಿಯಃ ಸಃ ಪರೈಃ ದುರಾಸದಃ ಬಭೂವ । [ತಥಾ ಹಿ,] ಅಸ್ತ್ರತೇಜಸಾ ಸಹಿತಂ ಬ್ರಹ್ಮಯತ್ ಅಯಂ ಪವನಾಗ್ನಿಸಮಾಗಮಃ ಹಿ ।

ಭಾಷಾಂತರ:— ಅಥರ್ವವೇದದಲ್ಲಿ ಬಲ್ಲಿದರಾದ (ಅರಿತ) (ಕುಲ) ಗುರು ವಸಿಷ್ಠರಿಂದ ಅಭಿಷಿಕ್ತನಾದ ಅಜನು ಶತ್ರುಗಳಿಗೆ ಜಯಿಸಲಸಾಧ್ಯನಾದನು. ಏಕೆಂದರೆ, ಕ್ಷಾತ್ರ-ತೇಜದಿಂದ ಕೂಡಿದ ಬ್ರಹ್ಮತೇಜವು ಗಾಳಿ ಕೂಡಿದ ಬೆಂಕಿಯಂತಾಗುತ್ತದೆ.

ಟಿಪ್ಪಣೆ:— ಸಃ (ಅಜಃ) ದುರಾಸದಃ ಬಭೂವ ಎಂಬದು ವಾಕ್ಯದ ಮುಖ್ಯಾಂಶವು ದುರಾಸದ— 'ದುರ್ಧರ್ಷ', (*Unassailable*) ದಾಳೀಮಾಡಲು ಅಥವಾ ಮುಗಿ ಬೀಳಲು ಸಾಧ್ಯವಾಗದ. ಅಜಿಂಕ್ಯ, ದುಃಖೇನ ಆಸಾದ್ಯತೆ ಇತಿ (ಉಪ. ತ.) ಬಭೂವ —ಆದನು ಭೂ (೧.ಪ) ಧಾತುವಿನ ದ್ವಿ. ಭೂ. ತೃ. ಪು. ಏ. ವ. ಪರೈಃ ಅಪಿ— ಶತ್ರುಗಳಿಂದಲೂ ಕೂಡ. ಶತ್ರುಗಳಿಗೆ ಕೂಡ ಅಜಕುಮಾರನ ಮೇಲೆ ಮುಗಿಬೀಳಲು ಸಾಧ್ಯವಾಗಿರಲಿಲ್ಲ. ಅಥರ್ವವಿದಾ ಗುರುಣಾ ಕೃತಕ್ರಿಯಃ—ಅಥರ್ವ ವೇದವನ್ನರಿತ (ವಸಿಷ್ಠಗುರುಗಳಿಂದ ಅಭಿಷಿಕ್ತನಾದ ಕೃತಕ್ರಿಯಃ— ಅಭಿಷೇಕ ಕ್ರಿಯೆ

ಯಾದ ಎಂದರೆ ಅಭಿಷೇಕ ಸಂಸ್ಕಾರವಾದವನು. ಕೃತಾ ಕ್ರಿಯಾ ಯಸ್ಯ ಸಃ (ಬ. ಸ.) ಅಥರ್ವವಿದಾ— ಅಥರ್ವವೇದವನ್ನರಿತ, ಅರ್ಥಾತ್ ಅಥರ್ವ ವೇದವನ್ನು ಚೆನ್ನಾಗಿ ಅರಿತ. ಎಂದರೆ ಅಥರ್ವವೇದದಲ್ಲಿ ಬಲ್ಲಿದನಾದ. ಅಥರ್ವಂ ವೇತ್ತಿ ಇತಿ ಅಥರ್ವವಿದ್ (ಉಪ.ತ.) ತೇನ । ರಾಜನು ಪಟ್ಟಕ್ಕೆ ಕೂಡುವ ಮೊದಲು ಕೆಲವೊಂದು ಯಜ್ಞ-ಯಾಗ ಮುಂತಾದವುಗಳನ್ನು ಮಾಡಬೇಕಾಗುತ್ತಿತ್ತು. ಬಳಿಕ ವಿವಿಧ ಪುಣ್ಯ ಕ್ಷೇತ್ರ ಹಾಗೂ ಪುಣ್ಯ ತೀರ್ಥ ಗಳಿಂದ ತಂದ, ಪುಷ್ಪ, ಸುಗಂಧ ದ್ರವ್ಯ, ಶ್ರೇಷ್ಠ ವನಸ್ಪತಿ ಮುಂತಾದವು ಗಳಿಂದ ಕೂಡಿದ ನೀರಿನಿಂದ, ಸಾಮಾನ್ಯವಾಗಿ ಭಂಗಾರದ ಕೊಡದಲ್ಲಿಯ ನೀರಿನಿಂದ ರಾಜನಿಗೆ ಧಾರೆಯೆರೆಯುತ್ತಿದ್ದರು. ಆಗ ಅಥರ್ವವೇದದ ಮಂತ್ರ ಗಳನ್ನು ಪಠಿಸಬೇಕಾಗುತ್ತಿತ್ತು. ರಾಜನಿಗೆ ದೀರ್ಘ ಆಯುರಾರೋಗ್ಯ, ಅಖಂಡ ರಾಜ್ಯೈಶ್ವರ್ಯ ಮುಂತಾದವನ್ನು ಕೋರಿ ವಿವಿಧ ದೇವತೆಗಳಿಗೆ ರಾಜನ ಯೋಗಕ್ಷೇಮ ಹಾಗೂ ಶತ್ರುನಾಶಗಳ ಬಗ್ಗೆ ಪ್ರಾರ್ಥಿಸಲಾಗುತ್ತಿತ್ತು. [ಅಥರ್ವವೇದವು ಳನೆಯ ವೇದ. ಇತರ ವೇದಗಳಲ್ಲಿರುವಂತೆ ಇಲ್ಲಿಯಾದರೂ ದೇವತಾಸ್ತೋತ್ರಗಳಿವೆ. ಆದರೆ ಈ ಸ್ತೋತ್ರಗಳ ಹೊರತಾಗಿ ಶತ್ರುನಾಶ, ಆತ್ಮರಕ್ಷಣೆ, ಅನಿಷ್ಟ ಪರಿಹಾರ, ಸಂಕಟನಿವಾರಣೆ ಮುಂತಾದವುಗಳ ಉಪಾ ಯಗಳನ್ನೂ ಹೇಳಲಾಗಿದೆ. ] ಅಸ್ತ್ರತೇಜಸಾ—ಅಸ್ತ್ರಾಣಾಂ ತೇಜಃ ಅಸ್ತ್ರ ತೇಜಃ (ಷ. ತ. ಸ.) ತೇನ । ಶಸ್ತ್ರಗಳ ತೇಜಸ್ಸಿನಿಂದ ಅರ್ಥಾತ್ ಶಸ್ತ್ರ ಧರಿ ಸುವ ಕ್ಷತ್ರಿಯರ ತೇಜಸ್ಸಿನಿಂದ ಎಂದರೆ ಕ್ಷಾತ್ರತೇಜದಿಂದ, ಅಜನ ಕ್ಷಾತ್ರ ತೇಜದಿಂದ. ಸಹಿತಂ—ಕೂಡಿದ. ಬ್ರಹ್ಮ-ಬ್ರಹ್ಮತೇಜವು, ವಸಿಷ್ಠ ಮುಂತಾದ ಬ್ರಾಹ್ಮಣರಿಂದ ಪಠಿಸಲ್ಪಟ್ಟ ಅಥರ್ವವೇದ ಮಂತ್ರಗಳ ಮೂಲಕ, ಬ್ರಹ್ಮ ತೇಜವು ಅಜಕುಮಾರನಲ್ಲಿದ್ದ ನೈಸರ್ಗಿಕವಾದ ಕ್ಷಾತ್ರ ತೇಜದೊಂದಿಗೆ ಬೆರೆತಿತ್ತು. ಹೀಗಾಗಿ ಬ್ರಾಹ್ಮ-ಕ್ಷಾತ್ರ ತೇಜಗಳ ಸಮಾಗಮದ ಮೂಲಕ ಅಜನು ಅಜಿಂಕ್ಯನಾದನು. ಅಂತೆಯೇ, ಮನುಸ್ಮೃತಿಯಲ್ಲಿ ಬ್ರಹ್ಮ ಮತ್ತು ಕ್ಷಾತ್ರ ತೇಜಗಳು ಕೂಡಿದರೆ ಪ್ರಭಾವಶಾಲಿಯಾದ ಹೊಸ ತೇಜವುಂಟಾಗುತ್ತ ದೆಂದು ಹೇಳಿದೆ. ತು. ಮಾ.— 'ನಾಕ್ಷತ್ರಂ ಬ್ರಹ್ಮಭವತಿ ಕ್ಷಾತ್ರಂ ನಾಬ್ರಹ್ಮ ವರ್ಧತೇ। ಬ್ರಹ್ಮಕ್ಷತ್ರೇ ತು ಸಂಯುಕ್ತೇ ಇಹಾಮುತ್ರಚ ವರ್ಧತೆ॥ ಪವನಾಗ್ನಿಸಮಾಗಮಃ — ಗಾಳಿಬೆಂಕಿಗಳ ಕೂಡುವಿಕೆ ಪವನಃ ಚ ಅಗ್ನಿಃ ಚ ಪವನಾಗ್ನೀ (ದ್ವಂದ್ವ). ತಯೋಃ ಸಮಾಗಮಃ ( ಷ. ತ. ಸ. ) ಉರಿ ಯುವ ಬೆಂಕಿಗೆ ಗಾಳಿಯ ಸಹಾಯ ದೊರೆತರೆ ಅದು ಇನ್ನಷ್ಟು ಪ್ರಖರವಾಗಿ

ಪ್ರಜ್ವಲಿಸಲಾರಂಭಿಸುತ್ತದೆ. ಇದರಂತೆಯೇ ಬ್ರಹ್ಮ-ಕ್ಷಾತ್ರ ತೇಜಗಳ ಸಂಹತಿ ಯಾದರೂ ಅತ್ಯಂತ ಪ್ರಭಾವಶಾಲಿಯಾಗಿರುತ್ತದೆ.

೪ ಅನ್ವಯ :— ಪ್ರಜಾಃ ತಂ ನವೇಶ್ವರಂ ನಿವೃತ್ತ ಯೌವನಂ ರಘುಂ ಏವ ಅಮನ್ಯಂತ । ಸಃ (ಅಜಃ)ಹಿ ತಸ್ಯ (ರಘೋಃ) ಕೇವಲಾಂ ಶ್ರಿಯಂ ನ ಪ್ರತಿಪೇದೇ (ಕಿಂತು) ಸಕಲಾನ್ ಗುಣಾನ್ (ಅಪಿ ಪ್ರತಿಪೇದೇ)

ಭಾಷಾಂತರ :— ಪ್ರಜೆಗಳು ( ತಮ್ಮ ) ಆ ನೂತನ ಸಾರ್ವಭೌಮನು, ಮರಳಿ ತಾರುಣ್ಯಾವಸ್ಥೆಯನ್ನು ಪಡೆದ ರಘು ಎಂದೇ ಭಾವಿಸಿದರು. ಏಕೆಂದರೆ ಅಜನು ರಘುವಿನ ( ರಾಜ್ಯ ) ಸಂಪತ್ತನ್ನಷ್ಟೇ ಅಲ್ಲದೆ ಆತನ ಸದ್ಗುಣಗಳನ್ನೂ ಪಡೆದಿದ್ದನು.

ಟಿಪ್ಪಣಿ:—ಪ್ರಜಾಃ —ಪ್ರಜೆಗಳು. ಪ್ರಕರ್ಷೇಣ ಜಾಯಂತೇ ಇತಿ (ಉಪ. ತ.) ಅಮನ್ಯಂತ — ತಿಳಿದುಕೊಂಡರು. ಮನ್ — (೪. ಆ) ಧಾತು ವಿನ ಪ್ರ. ಭೂ. ತೃ. ಪು. ಬ. ವ. ತಂ ನವೇಶ್ವರಂ — ಆ ಹೊಸರಾಜ ನಾದ ಅಜನನ್ನು. ನವಃ ಈಶ್ವರಃ ನವೇಶ್ವರಃ (ಕ. ಸ.). ತಂ । ರಘುಂ ಏವ — ರಘು ಎಂದೇ. ರಘು ಮತ್ತು ಅಜ ಇವರೀರ್ವರಲ್ಲಿ ಯಾವ ಭೇದವೂ ಇಲ್ಲವೆಂದು ತಿಳಿದುಕೊಂಡರು. ರಘುರಾಜನನ್ನು ಪ್ರೀತಿಸುವಂತೆ ಅಜ ಕುಮಾರನನ್ನೂ ಪ್ರೀತಿಸತೊಡಗಿದರು ಎಂದು ತಾತ್ಪರ್ಯವು. ನಿವೃತ್ತ ಯೌವನಂ — ಮರಳಿ ತಾರುಣ್ಯ (ತಾರುಣ್ಯಾವಸ್ಥೆ) ಬಂದ. ನಿವೃತ್ತಂ ಯೌವನಂ ಯಂ ಸಃ (ಬ. ಸ.) ತಂ । ಹಿ — ಏಕೆಂದರೆ ಕೇವಲಾಂ ಶ್ರಿಯಂ ನ — (ರಾಜ್ಯ) ಸಂಪತ್ತನ್ನೊಂದೇ ಅಲ್ಲ. ಶ್ರೀಃ — ಸಂಪತ್ತು. ಅಜನು ರಘುವಿನ ರಾಜ್ಯೈಶ್ವರ್ಯವೊಂದನ್ನೇ ಪಡೆಯಲಿಲ್ಲ. ಆದರೆ ಅವನ ಎಲ್ಲ ಸದ್ಗುಣಗಳನ್ನೂ (ಗುಣಾನ್) ಪಡೆದನು. ಪ್ರತಿಪೇದೇ — ಪಡೆದನು. ಪ್ರತಿ + ಪದ್ (೪. ಆ) ಧಾತುವಿನ ದ್ವಿ. ಭೂ. ತೃ. ಪು. ಏ. ವ. ಪ್ರಜಾಃ ತಂ ರಘುಂ ಅಮನ್ಯಂತ (ಕರ್ತರಿ) — ಪ್ರಜಾಭಿಃ ಸಃ ರಘುಃ ಇತಿ ಅಮನ್ಯತ (ಕರ್ಮಣಿ)

೫. ಅನ್ವಯ:— ದ್ವಯಂ ಏವ ಶುಭಂಯುನಾ ದ್ವಿತಯೇನ ಸಂಗತಂ (ಸತ್) ಅಧಿಕಂ ಸುಶುಭೇ । ಪೈತೃಕಂ ಋದ್ಧಂ ಪದಂ ಅಜೇನ, ಅಸ್ಯ ನವಂ ಯೌವನಂ ವಿನಯೇನ ।

ಭಾಷಾಂತರ:— ಎರಡು ವಸ್ತುಗಳು ಬೇರೆ ಎರಡು ಒಳ್ಳೆಯ ವಸ್ತು ಗಳೊಂದಿಗೆ ಕೂಡಿ ಹೆಚ್ಚು (ಸುಂದರವಾಗಿ) ಶೋಭಿಸಿದವು. [ಎಂದರೆ], ಪರಂಪರಾಗತ (ಅಥವಾ ತಂದೆಯ) ಸಮೃದ್ಧ ರಾಜ್ಯವು ಅಜನಿಂದ ಹಾಗೂ

ಅಜನ ನೂತನ ತಾರುಣ್ಯವು (ಅವನ) ವಿನಯ ವರ್ತನೆಯಿಂದ [ಕೂಡಿ ಹೆಚ್ಚು ಶೋಭಿಸಿದವು.]

ಟಿಪ್ಪಣಿ :— ಇಲ್ಲಿ ಮೊದಲು ಒಂದು ಸಾಮಾನ್ಯ ಮಾತನ್ನು ಹೇಳಿ ಅದನ್ನು ಉದಾಹರಣೆಯ ಮೂಲಕ ಸ್ಪಷ್ಟಗೊಳಿಸಲಾಗಿದೆ. ಎರಡು ವಸ್ತುಗಳಿಗೆ ಬೇರೆ ಎರಡು ಒಳ್ಳೆಯ ವಸ್ತುಗಳ ಸಂಪರ್ಕವಾದರೆ, ಚಿನ್ನಕ್ಕೆ ಕುಂದನ ಕೂಡಿಸಿದಂತಾಗಿ ಅವು ಹೆಚ್ಚು ಶೋಭಿಸುವವು.' ದ್ವಯಂ — ಎರಡು ವಸ್ತುಗಳು. ಶುಭಂಯುನಾ — ಶುಭಯುಕ್ತ. ಶುಭದಿಂದ ಕೂಡಿದ ( ಶುಭಂಯುಃ = ಶುಭಾನ್ವಿತಃ ) ದ್ವಿತಯಂ — ಎರಡರ ಗುಂಪು ಜೋಡು. ಇದು ಯಾವಾಗಲೂ ನಪುಂಸಕಲಿಂಗ ಏ. ವ. ಇರುತ್ತದೆ. ಉದಾ. ಮಾತಾ ಪಿತಾ ಚ ಇತಿ ಸ್ವಭಾವಾತ್ ದ್ವಿತಯಂ ಹಿತಂ । ದ್ವಯಂ, ದ್ವಿತಯಂ, ದ್ವಿಕಂ, ಯುಗಂ, ಯುಗ್ಮಂ, ಯುಗಲಂ, ದ್ವಂದ್ವಂ, ಇವೆಲ್ಲ ಸಮಾನಾರ್ಥಕ ಶಬ್ದಗಳು. ಅಧಿಕಂ ಶುಶುಭೇ — ಹೆಚ್ಚು ಶೋಭಿಸಿದವು. ಶುಶುಭೇ — ಶುಭ್ (೧. ಆ) ಧಾತುವಿನ ದ್ವಿ. ಭೂ. ತೃ. ಪು. ಏ. ವ. ೨ನೆಯ ಸಾಲಿನಲ್ಲಿ, ೧ನೇ ಸಾಲಿನಲ್ಲಿ ಹೇಳಿದ ಸಾಮಾನ್ಯ ಮಾತಿನ ವಿವರಣೆ ಇದೆ. ಪೈತೃಕಂ — ತಂದೆಯಿಂದ ಬಂದ ಅಥವಾ ಪರಂಪರಾಗತವಾಗಿ ಬಂದ. (ಪಿತುಃ ಆಗತಂ). ಋದ್ಧಂ – ಸಮೃದ್ಧವಾದ. ಋಧ್ (೪. ಪ.) ಧಾತುವಿನ ಕರ್ಮಣಿ ಭೂ. ಧಾ. ವಿ. (ನ.) ಪ್ರ. ಏ. ವ. ಪದಂ – ರಾಜ್ಯವು ಸುಸಂಪನ್ನ (*prosperous*) ರಾಜ್ಯವು ಅಜನಿಂದ ಕೂಡಿಕೊಂಡು ಹೆಚ್ಚು ಶೋಭಿಸಿತು ಎಂದು ಭಾವ. ಅಸ್ಯ ನವಂ ಯೌವನಂ—ಅಜನ ನೂತನ ತಾರುಣ್ಯವು. ಅಜನು ಅದೇ ತಾನೇ ತಾರುಣ್ಯಾವಸ್ಥೆಯಲ್ಲಿ ಕಾಲಿಟ್ಟಿದ್ದನು. ಆಗಲೇ ಅವನ ವಿವಾಹ ಮಹೋತ್ಸವ ಜರುಗಿತು. ಜೊತೆಗೆ ರಾಜ್ಯಸಿರಿಯೂ ಸಿಕ್ಕಿತು. ಆದರೆ ಇದರಿಂದ ಅವನು ಸೊಕ್ಕಲಿಲ್ಲ. ವಿವೇಕಬುದ್ಧಿಯನ್ನು ಕಳೆಕೊಳ್ಳಲಿಲ್ಲ. ಪ್ರಾಯಃ ತಾರುಣ್ಯದಲ್ಲಿ ಕಂಡು ಬರುವ ಅವಿವೇಕ ಕೃತಿಗಳು ಇವನಿಂದ ಸಂಘಟಿಸಲಿಲ್ಲ. ಆದರೆ ಇದಕ್ಕೆ ವಿರುದ್ಧವಾಗಿ ಅವನು ಅತ್ಯಂತ ವಿನಯದಿಂದ ವರ್ತಿಸಿದನು. ಸೊಕ್ಕು ಬಿಟ್ಟು ಸಭ್ಯತೆ ತೋರಿಸಿದನು. ಇಂದ್ರಿಯಗಳನ್ನು ನಿಗ್ರಹಿಸಿದನು ಹೀಗೆ ಒಳ್ಳೆಯ ಶಿಸ್ತಿನಿಂದ ( *discipline* ) ವರ್ತಿಸಿದನು. ಆದ್ದರಿಂದ, ಹೆಚ್ಚಾಗಿ ಶಕ್ತಿಯುಳ್ಳ ತಾರುಣ್ಯವು ಅವನ ವಿನಯ ವರ್ತನೆಯೊಂದಿಗೆ ಕೂಡಿಕೊಂಡು ಬಹಳೇ ಶೋಭಿಸಿತು. ವಿನಯಃ — ಇಂದ್ರಿಯ ನಿಗ್ರಹ, ಸಭ್ಯವರ್ತನೆ, ಶಿಸ್ತು

(*discipline*). [ಸಮೃದ್ಧ ರಾಜ್ಯ ಹಾಗೂ ನೂತನ ತಾರುಣ್ಯ ಎಂಬ ಎರಡು ವಸ್ತುಗಳು, ಅನುಕ್ರಮವಾಗಿ ಅಜ ಹಾಗೂ (ಅಜನ) ವಿನಯ ಎಂಬ ಬೇರೆ ಎರಡು ಒಳ್ಳೆಯ ವಸ್ತುಗಳೊಡನೆ ಕೂಡಿಕೊಂಡು ಹೆಚ್ಚು ಶೋಭಿಸಿ ದವು. ಎಂದು ಶ್ಲೋಕದ ತಾತ್ಪರ್ಯ. ಈ ಎರಡು ಸಂಹಿತೆ (*union*) ಗಳನ್ನು ಬಿಟ್ಟು ಬೇರೆ ಯಾವದೇ ಎರಡು ವಸ್ತುಗಳ ಯುತಿಯು ಅಷ್ಟೊಂದು ಶೋಭಿಸಲಿಲ್ಲ ಎಂಬ ಭಾವವು ಏವ ಶಬ್ದದಿಂದ ಹೊರಡುತ್ತದೆ.]

೬. ಅನ್ವಯ:— ಸಃ ನೃಪಃ ಭೂಯಸಾ ಖರಃ ನ, (ಭೂಯಸಾ) ಮೃದುಃ ಚ ನ, (ಕಿಂತು) ಪುರಸ್ಕೃತಮಧ್ಯಮಕ್ರಮಃ (ಸನ್) ಪವಮಾನಃ ಪೃಥಿವೀರುಹಾನ್ ಇವ ನೃಪಾನ್ ಅನುದ್ಧರನ್ ನಮಯಾಮಾಸ।

ಭಾಷಾಂತರ:— ಆ ಅರಸನು ಹೆಚ್ಚು ತೀಕ್ಷ್ಣನೂ ಇರಲಿಲ್ಲ, ಹೆಚ್ಚು ಮೃದುವೂ ಇರಲಿಲ್ಲ; (ಆದರೆ) ಮಧ್ಯಮಮಾರ್ಗವನ್ನವಲಂಬಿಸಿ, ಗಾಳಿಯು ಗಿಡಗಳನ್ನು (ಬೇರು ಸಹಿತ) ಕಿತ್ತೊಗೆಯದೆ ಬಾಗಿಸುವಂತೆ ಅವನು (ಮಾಂಡಲಿಕ) ರಾಜರನ್ನು (ಪಟ್ಟದಿಂದ) ತಳ್ಳದೆ ಮಣಿಸಿದನು.

ಟಿಪ್ಪಣೆ:— ನೃಪಃ—ನೄನ್ ಪಾತಿ ಇತಿ (ಉಪ. ತ.) ಅರಸ. ಭೂಯಸಾ—ಹೆಚ್ಚಾಗಿ. ಖರ—ತೀಕ್ಷ್ಣ. ಪುರಸ್ಕೃತಮಧ್ಯಮಕ್ರಮಃ— ನಡುವಿನ ಮಾರ್ಗವನ್ನವಲಂಬಿಸಿದವ. ಪುರಸ್ಕೃತಃ (ಅಂಗೀಕೃತಃ) ಮಧ್ಯಮಃ ಕ್ರಮಃ ಯೇನ ಸಃ (ಬ.ಸ.) ಹೆಚ್ಚು ತೀಕ್ಷ್ಣ ಇಲ್ಲವೆ ಹೆಚ್ಚು ಮೃದು ಇರದೆ ಅವೆರಡೂ ಗುಣಗಳ ನಡುವಿರುವ ಸುವರ್ಣಮಧ್ಯಮ ಮಾರ್ಗವನ್ನು (*golden mean*) ಅವಲಂಬಿಸಿದ್ದನು. ಅರಸನು ಉಗ್ರನಾಗಿದ್ದರೆ ಪ್ರಜೆ ಗಳು ದುಃಖಗೊಳ್ಳುತ್ತಾರೆ ಇಲ್ಲವೆ ಗಾಬರಿಯಾಗುತ್ತಾರೆ; ಮೃದು ಇದ್ದರೆ ಎಲ್ಲರೂ ಅವನನ್ನು ಪೀಡಿಸುತ್ತಾರೆ. ಆದ್ದರಿಂದ ಅವನು ಎರಡೂ ಗುಣಗಳ ಯೋಗ್ಯ ಸಮ್ಮಿಶ್ರಣ ತನ್ನಲ್ಲಿ ಮಾಡಿಕೊಳ್ಳಬೇಕು ಎಂದು ನಾಟ್ಯಾಚಾರ್ಯ ನಾದ ಭರತನ ಮತ. ತು. ಮಾ. ತೀಕ್ಷ್ಣಾದುದ್ವಿಜತೇ ಲೋಕೋ ಮೃದುಃ ಸರ್ವತ್ರ ಬಾಧ್ಯತೇ। ಏವಂ ಬುದ್ಧ್ವಾ ಮಹಾರಾಜ ಮಾ ತೀಕ್ಷ್ಣೋ ಮಾ ಮೃದುರ್ಭವ. ಅಂತೆಯೇ ಅಜನು ಹೆಚ್ಚು ತೀಕ್ಷ್ಣ ಇಲ್ಲವೆ ಹೆಚ್ಚು ಮೃದು ಇರಲಿಲ್ಲ. ಹೀಗೆ ಇದ್ದುಕೊಂಡು, ತನ್ನ ಮಾಂಡಲಿಕ ಅರಸರನ್ನು ಅಂಕಿತದಲ್ಲಿಟ್ಟುಕೊಂಡಿದ್ದನೆಂದು ೨ನೆಯ ಸಾಲಿನಲ್ಲಿ ಹೇಳಲಾಗಿದೆ. ಇವನ್ನು

ತಿಳಿಸಲು ಗಾಳಿಯ ಉದಾಹರಣೆ ಕೊಡಲಾಗಿದೆ. ಪವಮಾನಃ—ಗಾಳಿ. ಈ ಶಬ್ದ ಉಪಯೋಗಿಸುವದರಿಂದ ಅಜನು ಪವಿತ್ರನಾಗಿದ್ದನೆಂಬ ಮಾತು ಸೂಚಿತವಾಗುತ್ತದೆ. ಪೃಥಿವೀರುಹಃ– ಗಿಡ. ಪೃಥಿವ್ಯಾಂ ರೋಹತಿ ಇತಿ (ಉಪ. ತ.) ಅನುದ್ಧರನ್ ಮತ್ತು ನಮಯಾಮಾಸ ಈ ಶಬ್ದಗಳು ಗಾಳಿ ಹಾಗೂ ಅಜ ಇಬ್ಬರಿಗೂ ಅನ್ವಯಿಸುತ್ತವೆ. ನ ಉದ್ಧರನ್ (ನ. ತ.) ಉದ್ಧರನ್ ಇದು ಉತ್ + ಧೃ (೧. ಪ.) ಧಾತುವಿನ ವ. ಧಾ. ವಿ. (ಪು) ಪ್ರ. ಏ. ವ. ನಮಯಾಮಾಸ— ನಮ್ (೧. ಪ) ಧಾತುವಿನ ಪ್ರಯೋಜಕ ರೂಪದ ದ್ವಿ. ಭೂ. ತೃ. ಪು. ಏ. ವ. ಅನುದ್ಧರನ್—(i) (ಬೇರುಸಹಿತ) ಕೀಳದೆ. (ii) (ರಾಜ್ಯದಿಂದ) ಕಿತ್ತೆಸೆಯದೆ. ನಮಯ—(i) ಬಾಗಿಸು. (ii) ಮಣಿಸು.

೭. ಅನ್ವಯ:— ಅಥ ರಘುಃ ಆತ್ಮಜಂ ಪ್ರಕೃತಿಷು ಪ್ರತಿಷ್ಠಿತಂ ವೀಕ್ಷ್ಯ ವಿನಾಶಧರ್ಮಸು ತ್ರಿದಿವಸ್ಥೇಷು ವಿಷಯೇಷು ಅಪಿ ಆತ್ಮವತ್ತಯಾ ನಿಃಸ್ಪೃಹಃ ಅಭವತ್ ।

ಭಾಷಾಂತರ:– ತನ್ನ ಮಗನು ಪ್ರಜೆಗಳಲ್ಲಿ (ಸ್ಥಿರವಾಗಿ) ಬೇರೂರಿದ್ದನ್ನು (*established*) ಕಂಡು, ರಘುರಾಜನು ಅನಿತ್ಯವಾದ (ನಾಶಹೊಂದುವ ಗುಣವುಳ್ಳ) ಸ್ವರ್ಗದಲ್ಲಿರುವ ವಸ್ತುಗಳ ವಿಷಯವಾಗಿಯೂ ಕೂಡ ಆತ್ಮಸಂಯಮನದ ಮೂಲಕ ಆಶೆ ಇಲ್ಲದವನಾದನು.

ಟಿಪ್ಪಣಿ:— ಸಃ ನಿಃಸ್ಪೃಹಃ ಅಭವತ್, (ರಘು ಇಚ್ಛೆ ಇಲ್ಲವೆ ಆಸಕ್ತಿ ಇಲ್ಲದವನಾದನು,) ಎಂಬುದು ವಾಕ್ಯದ ಮುಖಾಂಶ. ನಿಃಸ್ಪೃಹಃ—ಇಚ್ಛೆ ಇಲ್ಲದವ. ನಿರ್ಗತಾ ಸ್ಪೃಹಾ ಯಸ್ಮಾತ್ ಸಃ (ಬ. ಸ.) ವಿನಾಶಧರ್ಮಸು– ನಾಶಹೊಂದುವ ಗುಣವುಳ್ಳ. ಅರ್ಥಾತ್ ಅನಿತ್ಯವಾದ. ವಿನಾಶಃ ಧರ್ಮಃ ಯೇಷಾಂ ತೇ (ಬ. ಸ.) ತೇಷು. ತ್ರಿದಿವಸ್ಥೇಷು—ಸ್ವರ್ಗದಲ್ಲಿರುವ. ತ್ರಿದಿವೇ ತಿಷ್ಠಂತಿ ಇತಿ ತ್ರಿದಿವಸ್ಥಾಃ (ಉಪ. ತ.) ತೇಷು। ತ್ರಿದಿವಂ—ಸ್ವರ್ಗ ತೃತೀಯಾ ದ್ಯೌಃ ತ್ರಿದಿವಂ (ಕ.ಸ.)। ವಿಷಯೇಷು—ವಿಷಯಗಳಲ್ಲಿ. ಶಬ್ದ, ಸ್ಪರ್ಶ, ರೂಪ, ರಸ, ಗಂಧ ಇವು ಅನುಕ್ರಮವಾಗಿ ಪಂಚೇಂದ್ರಿಯಗಳಾದ ಕಿವಿ, ತ್ವಚ, ಕಣ್ಣು, ನಾಲಿಗೆ ಮತ್ತು ಮೂಗು ಇವುಗಳಿಗೆ ವಿಷಯಗಳಾಗಿವೆ. ಆತ್ಮವತ್ತಯಾ—ಆತ್ಮನಿಗ್ರಹದ ಮೂಲಕ ರಘುರಾಜನು ಜಿತೇಂದ್ರಿಯನಾದುದ ರಿಂದ ನಿಶ್ಚಯವಾಗಿಯೂ ನಾಶಹೊಂದುವ ಅನಿತ್ಯ ವಿಷಯಗಳಲ್ಲಿ ಆಸ್ಥೆ

ತಾಳಲಿಲ್ಲ. ಅವನು ಜ್ಞಾನಿಯಾದುದರಿಂದ ಸ್ವರ್ಗದಲ್ಲಿರುವ ಪದಾರ್ಥಗಳೂ ಕೂಡ ನಶ್ವರವೆಂದು ಅರಿತಿದ್ದನು. (ಮೋಕ್ಷದಲ್ಲಿರುವ ಸುಖ ಮುಂತಾದ ಪದಾರ್ಥಗಳು ಮಾತ್ರ ನಿತ್ಯ. ಸ್ವರ್ಗದಲ್ಲಿರುವ ಸುಖ, ಉಪಭೋಗ ಮೊದಲಾದವು ಕೆಲಕಾಲ ಮಾತ್ರ. ಪುಣ್ಯ ತೀರಿದೊಡನೆ ಮನುಷ್ಯನು ಮತ್ತೆ ಭೂಮಿಗೆ ಬರಬೇಕಾಗುತ್ತದೆ. ಹು. ಮಾ. ಕ್ಷೀಣೇ ಪುಣ್ಯೇ ಮೃತ್ಯುಲೋಕಂ ವಿಶಂತಿ). ಆತ್ಮಜಃ—ಮಗ. ಆತ್ಮನಃ ಜಾಯತೇ ಇತಿ (ಉಪ. ತ.) ಪ್ರಕೃತಿಃ—ಪ್ರಜೆ. (ಅಥವಾ ಮಂತ್ರಿ) ಪ್ರತಿಷ್ಠಿತ—*established*. ವೀಕ್ಷ್ಯ—ನೋಡಿ, ಕಂಡು. ವಿ+ಈಕ್ಷ್ (೧. ಆ) ಧಾತುವಿನ ಲ್ಯಬಂತಾವ್ಯಯ.

೮. ಅನ್ವಯ:– ದಿಲೀಪವಂಶಜಾಃ ಹಿ ಪರಿಣಾಮೇ ಗುಣವತ್ಸುತರೋಪಿತಶ್ರಿಯಃ ಪ್ರಯತಾಃ (ಚ ಸಂತಃ) ತರುವಲ್ಕವಾಸಸಾಂ ಸಂಯಮಿನಾಂ ಪದವೀಂ ಪ್ರಪೇದಿರೇ ।

ಭಾಷಾಂತರ:– ಏಕೆಂದರೆ, ದಿಲೀಪನ ವಂಶದವರು ಇಳಿ ವಯಸಿನಲ್ಲಿ (ಮುಪ್ಪಿನಲ್ಲಿ) ಸಂಪತ್ತನ್ನು ಸದ್ಗುಣಗಳುಳ್ಳ ಮಕ್ಕಳಿಗೆ ಒಪ್ಪಿಸಿ, (ತಾವು) ಆತ್ಮಸಂಯಮಿಗಳಾಗಿ, ಗಿಡಗಳ ತೊಗಟೆಗಳೇ ವಸ್ತ್ರವಾಗಿಯುಳ್ಳ ಸನ್ಯಾಸವೃತ್ತಿಯನ್ನು ಕೈಕೊಂಡರು.

ಟಿಪ್ಪಣಿ:— ರಘುರಾಜನು ವಿಷಯಗಳಲ್ಲಿ ಆಸಕ್ತಿ ವಹಿಸದೆ ಇದ್ದುದರಲ್ಲಿ ಆಶ್ಚರ್ಯವೇನೂ ಇಲ್ಲ; ಅದು ಅವನ ಕುಲಧರ್ಮ ಎಂದು ತಿಳಿಸಲು ಈ ಶ್ಲೋಕ ಹೊರಟಿದೆ.

ಹಿ—ಏಕೆಂದರೆ. ದಿಲೀಪವಂಶಜಾಃ—ದಿಲೀಪನ ವಂಶಸ್ಥರು. ವಂಶೇ ಜಾಯತೇ ಇತಿ ವಂಶಜಃ ( ಉಪ. ತ ) ದಿಲೀಪಸ್ಯ ವಂಶಜಾಃ (ಷ. ತ. ಸ) ರಘುವು ದಿಲೀಪನ ಮಗನು. ಪರಿಣಾಮೇ—ವಾರ್ಧಕ್ಯದಲ್ಲಿ. ಮುಪ್ಪಿನ ಸಮಯದಲ್ಲಿ. ಗುಣವತ್ಸುತೇಷು–ಸದ್ಗುಣಿಗಳಾದ ಮಕ್ಕಳಿಗೆ (ಮಕ್ಕಳಲ್ಲಿ) ಹಿರಿಯ ಮಗನೆಂಬ ನಿರ್ಬಂಧವಿಲ್ಲ. ಗುಣಾಃಸಂತಿ ಏಷಾಂ ಇತಿ ಗುಣವಂತಃ (ತದ್ಧಿತ). ಗುಣವಂತಃ ಸುತಾಃ ಗುಣವತ್ಸುತಾಃ (ಕ. ಸ ) । ತೇಷು ರೋಪಿತಶ್ರಿಯಃ—ಸಂಪತ್ತನ್ನು ಒಪ್ಪಿಸಿದವರು. ಗುಣವತ್ಸುತೇಷು ರೋಪಿತಾ ಶ್ರೀಃ ಯೈಃ ತೇ ಗುಣ........ಶ್ರಿಯಃ (ಬ. ಸ) ಪ್ರಯತಾಃ– ಆತ್ಮಸಂಯಮಿಗಳು. ಇಂದ್ರಿಯಗಳನ್ನು ನಿಗ್ರಹಿಸಿದವರು. ಪ್ರ+ಯಮ್ (೧. ಪ) ಧಾತುವಿನ

ಕರ್ಮಣಿ ಭೂ. ಧಾ. ವಿ. (ಪು) ಬ. ವ. ತರುವಲ್ಕವಾಸಸಾಂ— ಗಿಡದ ತೊಗಟೆಗಳೇ ವಸ್ತ್ರವಾಗಿಯುಳ್ಳ. ತರೋಃ ವಲ್ಕಲಾನಿ ತರುವಲ್ಕಲಾನಿ (ಷ. ತ. ಸ.) ತಾನಿ ಏವ ವಾಸಾಂಸಿ ಯೇಷಾಂ ತೇ (ಬ. ಸ.) ತೇಷಾಂ। **ಸಂಯಮಿನಾಂ—** ಯತಿಗಳ, ಮುನಿಗಳ, ಇಂದ್ರಿಯ ನಿಗ್ರಹವುಳ್ಳವರ, ಆತ್ಮಸಂಯಮವುಳ್ಳ ಯತಿಗಳ. ಸಮ್ಯಕ್ ಯಮಃ ಅಸ್ತಿ ಯೇಷಾಂ ಇತಿ ಸಂಯಮಿನಃ (ಬ. ಸ) ತೇಷಾಂ. ಅಥವಾ ಯಮ ನಿಯಮಗಳುಳ್ಳ, ಎಂದರೆ ಅವುಗಳನ್ನು ಪಾಲಿಸುವ. ೧೦ ಮುಖ್ಯ ಯಮಗಳಿವೆ. ಅವುಗಳನ್ನು ಕೆಳಗಿನ ಶ್ಲೋಕದಲ್ಲಿ ಹೇಳಿದೆ. (ಯಮ ಎಂದರೆ ಶರೀರ ಸಾಧನಕ್ಕಾಗಿ ಮಾಡುವ ನಿತ್ಯ ಕರ್ಮ) ಬ್ರಹ್ಮಚರ್ಯಂ ದಯಾ ಕ್ಷಾಂತಿರ್ದಾನಂ ಸತ್ಯಮಕಲ್ಕತಾ। ಅಹಿಂಸಾಽಸ್ತೇಯಮಾಧುರ್ಯೇ ದಮಶ್ಚೇತಿ ಯಮಾಃ ಸ್ಮೃತಾಃ॥ ಪದವೀ—ಸ್ಥಾನ, ವೃತ್ತಿ. ಪ್ರಪೇದಿರೇ—ಪಡೆದರು. ಸ್ವಿಕರಿಸಿದರು. ಪ್ರ+ ಪದ್ (೪. ಆ.) ಧಾತುವಿನ ದ್ವಿ. ಭೂ. ತೃ. ಪು. ಬ. ವ. ಮುಪ್ಪು ಬಂದೊಡನೆ ತಮ್ಮ ಸಕಲ ಐಶ್ವರ್ಯವನ್ನು ಯೋಗ್ಯ ಸದ್ಗುಣಸಂಪನ್ನ ಮಕ್ಕಳಿಗೆ ಒಪ್ಪಿಸಿ, ಇಂದ್ರಿಯಗಳನ್ನು ನಿಗ್ರಹಿಸಿಕೊಂಡು, ರಾಜವಸ್ತ್ರಗಳನ್ನು ಬಿಟ್ಟು ನಾರಿನ ಬಟ್ಟೆ ಧರಿಸಿ ಮುನಿವೃತ್ತಿಯನ್ನು ಸ್ವೀಕರಿಸುವದು ದಿಲೀಪವಂಶದ ಸಂಪ್ರದಾಯವಾಗಿತ್ತು. ದಿಲೀಪನ ಮಗನಾದ ರುಘುವಾದರೂ ಆ ವೃತ್ತಿಯನ್ನು ಈಗ ಕೈಕೊಂಡನು. ಇದು ಅವನ ಕುಲವ್ರತ ಅಥವಾ ಕುಲಧರ್ಮವಾಗಿತ್ತು.

೯ ಅನ್ವಯ:— ಅರಣ್ಯಸಮಾಶ್ರಯೋನ್ಮುಖಂ ಪಿತರಂ ಸುತಃ ವೇಷ್ಟನಶೋಭಿನಾ ಶಿರಸಾ ಪಾದಯೋಃ ಪ್ರಣಿಪತ್ಯ ತಂ ಆತ್ಮನಃ ಅಪರಿತ್ಯಾಗಂ ಅಯಾಚತ.

ಭಾಷಾಂತರ:— ಕಾಡಿಗೆ ಹೊರಡಲು ಸಿದ್ಧನಾದ ತಂದೆಯ ಪಾದಗಳಿಗೆ ಮಗನು ಕಿರೀಟ ಅಥವಾ ರುಮಾಲದಿಂದ ಶೋಭಿಸುವ ತನ್ನ ತಲೆಯಿಂದ ನಮಸ್ಕರಿಸಿ, ತನ್ನನ್ನು ಬಿಟ್ಟು ಹೋಗಬಾರದೆಂದು ಪ್ರಾರ್ಥಿಸಿದನು.

ಟಿಪ್ಪಣೀ— ಸುತಃ ತಂ ಅಪರಿತ್ಯಾಗಂ ಅಯಾಚತ; (ತನ್ನನ್ನು ಬಿಟ್ಟು ಹೋಗಬಾರದೆಂದು ಮಗನು ತಂದೆಗೆ ಪ್ರಾರ್ಥಿಸಿದನು) ಎಂಬುದು ವಾಕ್ಯದ ಮುಖ್ಯ ಭಾಗ. ಯಾಚ್ (೧. ಆ) ಧಾತು ೨ ಕರ್ಮಪದ ತೆಗೆದುಕೊಳ್ಳುತ್ತದೆ. ಇಲ್ಲಿ ತಂ ಮತ್ತು ಅಪರಿತ್ಯಾಗಂ ಎಂಬ ೨ ಕರ್ಮಪದಗಳಿವೆ. ಆ

ಸಮಾಶ್ರಯೋನ್ಮುಖಃ–ಅಡವಿಗೆ ಹೊರಡಲು ಸಿದ್ಧನಾದ. ಅರಣ್ಯೇ ಸಮಾ-ಶ್ರಯಃ (ಸ. ತ.) (ಸಮ್ಯಕ್ ಆಶ್ರಯಃ ಸಮಾಶ್ರಯಃ ಕ. ಸ.) ಅರಣ್ಯ ಸಮಾಶ್ರಯೇ ಉದ್ಗತಂ ಮುಖಂ ಯಸ್ಯ ಸಃ (ಬ. ಸ.) ತಂ । ವೇಷ್ಟನ ಶೋಭಿನಾ ಶಿರಸಾ–ಕಿರೀಟ ಅಥವಾ ರುಮಾಲದಿಂದ ಒಪ್ಪುವ ತಲೆಯಿಂದ. ವೇಷ್ಟನಂ–ಕಿರೀಟ ರುಮಾಲ. (*head dress*) ಕಿರೀಟ ಇಲ್ಲವೆ ರಾಜ-ರುಮಾಲವನ್ನು ಧರಿಸಿದ ಅಜನು ತಂದೆಯ ಪಾದಗಳಿಗೆ ನಮಸ್ಕಾರ ಮಾಡಿ-ದನು ಎಂಬ ಮಾತಿನಿಂದ, ಅಜನು ವೈಯಕ್ತಿಕವಾಗಿ ಅಷ್ಟೇ ಅಲ್ಲದೆ, ಅರ-ಸನ ನಾತೆಯಿಂದಲೂ (*capacity*) ನಮಸ್ಕರಿಸಿ ಬಿನ್ನಯಿಸಿಕೊಂಡನು ಎಂದು ತಿಳಿದು ಬರುತ್ತದೆ. ರಘುರಾಜನು ಮುನಿವೃತ್ತಿಯನ್ನು ಸ್ವೀಕರಿಸಿ-ದ್ದರಿಂದ ಅವನ ಪಾದಗಳಿಗೆ ತನ್ನ ತಲೆಯ ಕೂದಲದ ಸ್ಪರ್ಶವಾಗಬಾರ-ದೆಂದು ಭಾವಿಸಿ ಅಜನು ತಲೆಗೆ ರುಮಾಲು ಸುತ್ತಿಕೊಂಡು ತಂದೆಯ ಪಾದ-ಗಳಿಗೆ ನಮಿಸಿದನೆಂದು ಒಬ್ಬ ಟೀಕಾಕಾರರು ಸೂಚಿಸಿದ್ದಾರೆ. (ವೇಷ್ಟನೇನ ಶೋಭತೆ ಇತಿ ವೇಷ್ಟನಶೋಭಿ (ಉಪ. ತ.).ತೇನ. ಪಾದಯೋಃ ಪ್ರಣಿಪತ್ಯ-ಪಾದಗಳಿಗೆ ಎರಗಿ. ಪ್ರಣಿಪತ್ಯ—ಪ್ರ+ನಿ+ಪತ್ (೧. ಪ) ಧಾತುವಿನ ಲ್ಯಬಂತಾವ್ಯಯ. ಈ ಧಾತು ಸಪ್ತಮೀ ವಿಭಕ್ತಿ ತೆಗೆದುಕೊಳ್ಳುತ್ತದೆ. ಅಪರಿತ್ಯಾಗಂ–ನ ಪರಿತ್ಯಾಗಃ ಅಪರಿತ್ಯಾಗಃ (ನ. ತ.) ತಂ ತನ್ನನ್ನು ಬಿಡಬಾರ ದೆಂದು ತನ್ನನ್ನುಬಿಟ್ಟು ಹೋಗಬಾರದೆಂದು. 'ಮಾಂ ಪರಿತ್ಯಜ್ಯ ನಗಂತವ್ಯಂ ಇತಿ' ಟೀಕಾ.

೧೦. ಅನ್ವಯ:— ಆತ್ಮಜಪ್ರಿಯಃ ರಘುಃ ಅಶ್ರುಮುಖಸ್ಯ ಅಜಸ್ಯ ಈಪ್ಸಿತಂ ಕೃತವಾನ್ । ಕಿಂತು ಸರ್ಪಃ ತ್ವಚಮಿವ, ವ್ಯಪವರ್ಜಿತಾಂ ಶ್ರಿಯಂ ನ ಪ್ರತಿಪೇದೇ ।

ಭಾಷಾಂತರ:— ಮಗನಮೇಲೆ ಮಮತೆಯುಳ್ಳ ರಘುವು ಕಂಬನಿ ಗಳಿಂದ ತುಂಬಿದ ಮುಖವುಳ್ಳ ಅಜನ ಮನೋರಥವನ್ನು ಪೂರೈಸಿದನು. (ಅವನಿಗೆ ಇಷ್ಟವಾದುದನ್ನು ಮಾಡಿದನು.) ಆದರೆ, ಹಾವು ಒಮ್ಮೆ ಬಿಟ್ಟ ಪರೆಯನ್ನು ಪುನಃ ಧರಿಸದೆ ಇರುವಂತೆ (ಒಮ್ಮೆ) ಬಿಟ್ಟುಕೊಟ್ಟ ರಾಜ್ಯೈ-ಶ್ವರ್ಯವನ್ನು ಪುನಃ ಸ್ವೀಕರಿಸಲಿಲ್ಲ.

ಟಿಪ್ಪಣಿ:– ಆತ್ಮಜಪ್ರಿಯಃ – ಮಗನ ಮೇಲೆ ಮಮತೆಯುಳ್ಳವ. ಮಗ ನನ್ನು ಪ್ರೀತಿಸುವ. ಆತ್ಮಜಃ ಪ್ರಿಯಃ ಯಸ್ಯ ಸಃ (ಬ. ಸ) । ಅಶ್ರುಮುಖಸ್ಯ-

ಕಂಬನಿ ತುಂಬಿದ ಮುಖವುಳ್ಳ. ಅಶ್ರೂಣಿ ಮುಖೇ ಯಸ್ಯ ಸಃ ಅಶ್ರುಮುಖಃ (ಬ. ಸ.) ತಸ್ಯ । ಈಪ್ಸಿತಂ – ಇಚ್ಛೆ, ಮನೋರಥ. ಈಪ್ಸಿತಂ— ಇದು ಆಪ್ (೫ ಪ.) ಧಾತುವಿನ ಇಚ್ಛಾರ್ಥಕ ಕರ್ಮಣಿ ಭೂ. ಧಾ. ವಿ. (ನ) ದ್ವಿ. ಏ. ವ. ಕೃತವಾನ್ – ಮಾಡಿದನು. ಮಗನಿಗೆ ಇಷ್ಟವಾದುದನ್ನು ಮಾಡಿ ದನು. ಎಂದರೆ, ' ನನ್ನನ್ನು ಬಿಟ್ಟು (ಅಡವಿಗೆ) ಹೋಗಬೇಡ ' ಎಂಬ ಮಗನ ಮಾತನ್ನು ಮನ್ನಿಸಿ, ಅದರಂತೆ ವರ್ತಿಸಿದನು. ಕೂಡಲೇ ಅಜನನ್ನು ಬಿಟ್ಟು ಅಡವಿಗೆ ಹೋಗಲಿಲ್ಲ ಎಂದು ಅಭಿಪ್ರಾಯ. ಕೃತವಾನ್ ಇದು ಕೃ (೮.ಉ) ಧಾತುವಿನ ಕರ್ತರಿ ಭೂ. ಧಾ. ವಿ. (ಪು) ಪ್ರ ಏ. ವ. ಇದೆ. ರಘುಃ ಈಪ್ಸಿತಂ ಕೃತವಾನ್ (ಕರ್ತರಿ)— ರಘುಣಾ ಈಪ್ಸಿತಂ ಕೃತಂ (ಕರ್ಮಣಿ). ವ್ಯಪವರ್ಜಿತಾಂ ಶ್ರಿಯಂ— ಒಪ್ಪಿಸಿದ ಸಂಪತ್ತನ್ನು ವ್ಯಪ ವರ್ಜಿತಾಂ— ವಿ + ಅಪ + ವೃಜ್ (೧೦. ಉ) ಧಾತುವಿನ ಕರ್ಮಣಿ ಭೂ. ಧಾ. ವಿ. (ಸ್ತ್ರೀ) ದ್ವಿ. ಏ. ವ. ನ ಪ್ರತಿಪೇದೇ— ಮರಳಿ ಸ್ವೀಕರಿಸ ಲಿಲ್ಲ. ಪ್ರತಿಪೇದೇ – ಪ್ರತಿ+ಪದ್ (೪ ಆ) ಧಾತುವಿನ ದ್ವಿ. ಭೂ. ತೃ ಪು. ಏ. ವ. ಸರ್ಪಃ ತ್ವಚಂ ಇವ – ಹಾವು ಪರಿಯನ್ನು ( ಬಿಡುವಂತೆ ) ತ್ವಚ್ (ಸ್ತ್ರೀ) – ಪರಿ. ಹಾವು ಒಮ್ಮೆ ಬಿಟ್ಟ ಪರಿಯನ್ನು ಪುನಃ ಧರಿಸುವದಿಲ್ಲ. ಅದರಂತೆ ರಘುರಾಜನಾದರೂ ಒಮ್ಮೆ ಅಜನಿಗೆ ಕೊಟ್ಟ ರಾಜ್ಯೈಶ್ವರ್ಯವನ್ನು ಪುನಃ ಸ್ವೀಕರಿಸಲಿಲ್ಲ.

**ಟೀಪು:**— ಪಠ್ಯಪುಸ್ತಕದಲ್ಲಿದ್ದ ೧೦ನೇ ಶ್ಲೋಕದಲ್ಲಿ ' ರಘುಶ್ರು ಮುಖಸ್ಯ ' ಎಂದು ತಪ್ಪು ಅಚ್ಚಾಗಿದೆ. ಮೂಲಪುಸ್ತಕದಲ್ಲಿರುವಂತೆ, ಅದು ' ರಘುರಶ್ರುಮುಖಸ್ಯ ' ಎಂದಿರಬೇಕು. ವಿದ್ಯಾರ್ಥಿಗಳು ಅವಶ್ಯ ವಿದ್ದ ಬದಲಾವಣೆ ಮಾಡಿಕೊಳ್ಳಬೇಕು.

೧೧ ಅನ್ವಯ :— ಯತಿ ಪಾರ್ಥಿವಲಿಂಗಧಾರಿಣೌ ರಘುರಾಘವೌ ಅಪವರ್ಗ-ಮಹೋದಯಾರ್ಥಯೋಃ ಧರ್ಮಯೋಃ ಭುವಂ ಗತೌ ಅಂಶೌ ಇವ ಜನೈಃ ದದೃಶಾತೇ ।

ಭಾಷಾಂತರ:—(ಕ್ರಮವಾಗಿ)ಯತಿಯ ಮತ್ತು ರಾಜನ ಚಿಹ್ನಗಳನ್ನು ಧರಿಸಿದ ರಘು ಮತ್ತು ಅಜ ಇವರು ( ಅನುಕ್ರಮವಾಗಿ ) ಮೋಕ್ಷ ಮತ್ತು ಅಭ್ಯುದಯಗಳೇ ಗುರಿಯಾಗಿಯುಳ್ಳ ಧರ್ಮಗಳ ಅಂಶಗಳು ಭೂಮಿಗೆ ಬಂದಿ ವೆಯೋ ಎನ್ನುವಂತೆ ಜನರಿಗೆ ಕಂಡರು ( ಶಬ್ದಶಃ ಜನರಿಂದ ನೋಡಲ್ಪ ಟ್ಟರು. )

ಟಿಪ್ಪಣಿ:— ರಘುರಾಘವೌ ಜನ್ಯೈಃ ದದೃಶಾತೇ ( ರಘು ಮತ್ತು ಅಜರು ಇವರು ಜನರಿಂದ ನೋಡಲ್ಪಟ್ಟರು ) ಎಂಬದು ವಾಕ್ಯದ ಮುಖ್ಯಾಂಶ ಇದು ಕರ್ಮಣಿ ಪ್ರಯೋಗದಲ್ಲಿದೆ. ಇವರ ಕರ್ತರಿ ಪ್ರಯೋಗ ' ಜನಾಃ ರಘುರಾಘವೌ ದದೃಶುಃ ' ಎಂದು ಆಗುತ್ತದೆ. **ದದೃಶಾತೇ** – ದೃಶ್ ( ೧ ಪ) ಧಾತುವಿನ ಕರ್ಮಣಿ ದ್ವಿ. ಭೂ. ತೃ. ಪು. ದ್ವಿ. ವ. ಯತಿಪಾರ್ಥಿವ ಲಿಂಗಧಾರಿಣೌ–ಮುನಿ ಹಾಗೂ ರಾಜನ ಚಿಹ್ನಗಳನ್ನು ಧರಿಸಿದ ( ಎಂದರೆ ಚಿಹ್ನಗಳುಳ್ಳ ) ಯತಿಃ ಚ ಪಾರ್ಥಿವಃ ಚ ಯತಿಪಾರ್ಥಿವೌ (ದ್ವಂದ್ವ) । ತಯೋಃ ಲಿಂಗೇ ಧಾರಯತಃ ಇತಿ (ಉಪ ತ.) ಲಿಂಗಂ– ಚಿಹ್ನ ಗುರುತು ಉದಾ:- ಹೊಗೆಯು (ಧೂಮ ) ಬೆಂಕಿಯ ಚಿಹ್ನವು ( ಧೂಮಃ ವಹ್ನೇಃ ಲಿಂಗಂ ) ಯತಿಯ ಚಿಹ್ನಗಳೆಂದರೆ ದಂಡ, ಕಮಂಡಲು, ಕೌಪೀನ, ಕೃಷ್ಣಾ ಜಿನ, ಕೇವೆಯ ಬಟ್ಟೆ, ಮುಂಡನ, ಯಜ್ಞೋಪವೀತ (ಜನಿವಾರ) ತೆಗೆಯು ವದು ಮುಂ. ರಾಜನ ಚಿಹ್ನಗಳೆಂದರೆ, ಸಿಂಹಾಸನ, ಕಿರೀಟ, ಛತ್ರ, ಚಾಮರ ಮುಂ. ಅಪವರ್ಗಮಹೋದಯಾರ್ಥಯೋಃ – ಮೋಕ್ಷ ಮತ್ತು ಅಭ್ಯು ದಯಗಳೇ ಗುರಿಯಾಗಿಯುಳ್ಳ ಅರ್ಥಾತ್ ನಿವೃತ್ತ ಮತ್ತು ಪ್ರವೃತ್ತ ಮಾರ್ಗ ಗಳ ಅಪವರ್ಗಃ ಮಹೋದಯಃ ಚ ಅಪವರ್ಗಮಹೋದಯೌ (ದ್ವಂದ್ವ) ತೌ ಏವ ಅರ್ಥೌ ಯಯೋಃ ತೌ ಅಪ ........ ರ್ಥೌ ( ಬ. ಸ. ) ತಯೋಃ । ಅಪವರ್ಗಃ– ಮೋಕ್ಷ ' ದುಃಖದ ಲವಲೇಶವೂ ಇಲ್ಲದೆ ಕೇವಲ ಸುಖ ದೊರೆಯುವ ಸ್ಥಾನ' ಮಹೋದಯ – ಅಭ್ಯುದಯ ಸಂಪತ್ತು ಧರ್ಮಯೋಃ—ಧರ್ಮ ಎಂದರೆ ಧಾರ್ಮಿಕವಿಧಿ *religious injunction* ಎಂಬ ಅರ್ಥ ಇಲ್ಲಿ ಅಭಿಪ್ರೇತವಿದೆ. ಧರ್ಮಯೋಃ ಅಂಶೌ ಭುವಂ ಗತೌ ಇವ—ಧರ್ಮಗಳ ಅಂಶಗಳೇ ಭೂಮಿಯ ಮೇಲೆ ಬಂದಿವೆಯೋ ಎನ್ನು ವಂತೆ, ದದೃಶಾತೇ– (ಜನರಿಗೆ) ಕಂಡರು.

**ಪುಟ ೩೭** ೧೨. ಅನ್ವಯ :— ಅಜಃ ಅಜಿತಾಧಿಗಮಾಯ ನೀತಿವಿಶಾರದೈಃ ಮಂತ್ರಿಭಿಃ ಯುಯುಜೇ । ರಘುಃ ಅನಪಾಯಿಪದೋಪಲಬ್ಧಯೇ ಆಪ್ತೈಃ ಯೋಗಿಭಿಃ ಸಮಿಯಾಯ ।

ಭಾಷಾಂತರ :— (ಇನ್ನೂ) ಗೆಲ್ಲದಿದ್ದುದನ್ನು ಸಂಪಾದಿಸುವದಕ್ಕಾಗಿ ಅಜನು (ರಾಜ) ನೀತಿಶಾಸ್ತ್ರದಲ್ಲಿ ಬಲ್ಲಿದರಾದ ಮಂತ್ರಿಗಳೊಡನೆ ಆಲೋಚಿಸಿ ದನು. ರಘುವು ದುಃಖರಹಿತವಾದ ಸ್ಥಾನ (ಮೋಕ್ಷ) ದೊರಕಿಸಲು ಸತ

ವನ್ನರಿತು ಸತ್ಯವನ್ನೇ ನುಡಿಯುವ ಯೋಗಿಗಳ ಸಹವಾಸದಲ್ಲಿದ್ದನು (ಯೋಗಿಗಳೊಡನೆ ಕೂಡಿಕೊಂಡನು.)

ಟಿಪ್ಪಣಿ:— ಅಜಿತಾಧಿಗಮಾಯ — (ಇನ್ನೂ) ಗೆಲ್ಲದೆ ಇದ್ದುದನ್ನು ಸಂಪಾದಿಸಲು ಅಧಿಗಮ — ಪಡೆಯುವದು, ದೊರಕಿಸುವದು, ಸಂಪಾದಿಸುವದು. ನ ಜಿತಂ ಅಜಿತಂ (ನ. ತ.)। ತಸ್ಯ ಅಧಿಗಮಃ (ಷ. ತ.) ತಸ್ಮೈ। ಇನ್ನೂ ಜಯಿಸದೇ ಇದ್ದ ಶತ್ರುಗಳನ್ನು ಜಯಿಸಿ, ಅವರ ರಾಜ್ಯವನ್ನು ತನ್ನ ರಾಜ್ಯಕ್ಕೆ ಕೂಡಿಸಿಕೊಳ್ಳುವದಕ್ಕಾಗಿ ಎಂದು ತಾತ್ಪರ್ಯ. ನೀತಿವಿಶಾರದೈಃ – ನೀತಿ ಶಾಸ್ತ್ರದಲ್ಲಿ ನಿಪುಣರಾದ. ನೀತೌ ವಿಶಾರದಾಃ (ಸ.ತ.) ತೈಃ । ನೀತಿ ಎಂದರೆ ರಾಜನೀತಿ ಶಾಸ್ತ್ರ (*Politics*). ಯುಯುಜೇ – ಕೂಡಿಕೊಂಡನು. ಎಂದರೆ ಆಲೋಚಿಸಿದನು. ಹೊಸ ಪ್ರದೇಶವನ್ನು ಸಂಪಾದಿಸುವದಕ್ಕಾಗಿ ನೀತಿಶಾಸ್ತ್ರವನ್ನು ಆಳವಾಗಿ ಅಭ್ಯಾಸಮಾಡಿದ ಮಂತ್ರಿಗಳ ಸಲಹೆ ಪಡೆದನು. ಎಂದು ಅರ್ಥ. ಯುಯುಜೇ – ಇದು ಯುಜ್ (೭. ಉ) ಧಾತುವಿನ ದ್ವಿ. ಭೂ. ತೃ. ಪು. ಏ. ವ. ಇದೆ. ಅನಪಾಯಿಪದೋಪಲಬ್ಧಯೇ – ದುಃಖವಿಲ್ಲದ ಸ್ಥಾನ (ಮೋಕ್ಷ) ಪಡೆಯಲು (ಅಪಾಯಃ – ದುಃಖ ಪದಂ – ಸ್ಥಾನ ಉಪಲಬ್ಧಃ – ಪಡೆಯುವದು, ದೊರಕಿಸುವದು.) ನ ಅಪೈತಿ ಇತಿ ಅನಪಾಯಿ (ಉಪ. ತ.) [ನಾಶಹೊಂದದೆ ಇದ್ದ, ನಿತ್ಯವಾದ.] ಅನಪಾಯಿ ಪದಂ ಅನಪಾಯಿಪದಂ (ಕ.ಸ.)। ತಸ್ಯ ಉಪಲಬ್ಧಿಃ (ಷ. ತ.) । ತಸ್ಮೈ। ನಾಶರಹಿತವಾದ ಎಂದರೆ ನಿತ್ಯವಾದ ಸ್ಥಾನ. ಅರ್ಥಾತ್ ಮೋಕ್ಷ. ಅದನ್ನು ಸಂಪಾದಿಸಲು. ಆಪ್ತಃ – ಸತ್ಯವನ್ನರಿತು ಸತ್ಯವನ್ನೇ ನುಡಿಯುವವ. ವಸ್ತು ಸ್ಥಿತಿಯನ್ನು ಇದ್ದಕ್ಕಿದ್ದ ಹಾಗೆ ತಿಳಿದುಕೊಂಡು ಅದರಂತೆ ನುಡಿಯುವವ. 'ಯಥಾರ್ಥದರ್ಶಿನಃ ಯಥಾರ್ಥವಾದಿನಃ ಚ' ಶಾಸ್ತ್ರದ ಅರ್ಥವನ್ನು ಸರಿಯಾಗಿ ತಿಳಿದುಕೊಂಡು ಅದರಂತೆ ವಿವರಿಸುವವ ಎಂದು ಅರ್ಥ 'ಆಪ್ತಸ್ತು ಯಥಾಭೂತಸ್ಯಾರ್ಥಸ್ಯೋಪದೇಷ್ಟಾ ಪುರುಷಃ' ತರ್ಕಭಾಷಾ. ಯೋಗಿಭಿಃ – ಯೋಗಿನ್ (ಪು.) ಶಬ್ದದ ತೃ. ಬ. ವ. ಯೋಗಿಗಳೊಡನೆ. ಯೋಗಶಾಸ್ತ್ರವನ್ನು ಅಭ್ಯಾಸ ಮಾಡಿದವರೊಡನೆ. ಯೋಗಶಾಸ್ತ್ರವು ಷಡ್ದರ್ಶನದಲ್ಲಿ ಒಂದಾಗಿದೆ. ಯೋಗಿಯ ಲಕ್ಷಣ ಗೀತೆಯಲ್ಲಿ ಕೆಳಗಿನಂತೆ ಹೇಳಿದೆ:—

ಆತ್ಮೌಪಮ್ಯೇನ ಸರ್ವತ್ರ ಸಮಂ ಪಶ್ಯತಿ ಯೋಽರ್ಜುನ ।
ಸುಖಂ ವಾ ಯದಿ ವಾ ದುಃಖಂ ಸಯೋಗೀ ಪರಮೋ ಮತಃ ॥

ಸಮಿಯಾಯ – ಕೂಡಿಕೊಂಡನು. ಅವರ ಸಹವಾಸದಲ್ಲಿದ್ದನು. ಸಮ್ + ಇ (೨. ಪ) ಧಾತುವಿನ ದ್ವಿ. ಭೂ. ತೃ. ಪು. ಏ. ವ. ಮೋಕ್ಷ ಸಂಪಾದಿಸುವ ಉಪಾಯಗಳನ್ನರಿತುಕೊಳ್ಳಲು ಯೋಗ ಶಾಸ್ತ್ರವನ್ನಭ್ಯಾಸ ಮಾಡಿದ ಆಪ್ತರ ಸಲಹೆ ಪಡೆದನು.

೧೩. ಅನ್ವಯ :— ಯುವಾನೃಪತಿಃ ಪ್ರಕೃತೀಃ ಅವೇಕ್ಷಿತುಂ ವ್ಯವಹಾರಾಸನಂ ಆದದೇ । ಪ್ರವಯಾಃ ತು ಧಾರಣಾಂ ಪರಿಚೇತುಂ ಉಪಾಂಶು ಕುಶಪೂತಂ ವಿಷ್ಟರಂ ಆಪದೇ ।

ಭಾಷಾಂತರ:— ತರುಣನಾದ ಅಜರಾಜನು ಪ್ರಜೆಗಳ ವ್ಯಾಜ್ಯಗಳನ್ನು ತೀರಿಸಲು (ಶಬ್ದಶಃ ಪ್ರಜೆಗಳನ್ನು ನೋಡಲು)ನ್ಯಾಯಾಸನವನ್ನು ಸ್ವೀಕರಿಸಿದನು. ವೃದ್ಧನಾದ ರಘುರಾಜನಾದರೋ ಚಿತ್ತೈಕಾಗ್ರತೆಯ ಅಭ್ಯಾಸಕ್ಕಾಗಿ ಪವಿತ್ರ ಕುಶ ಹುಲ್ಲಿನಿಂದ ಶುದ್ಧವಾದ ಹಾಗೂ ಏಕಾಂತಪ್ರದೇಶದಲ್ಲಿದ್ದ ಆಸನದಮೇಲೆ ಕುಳಿತನು.

ಟಿಪ್ಪಣಿ:— ಯುವಾ ನೃಪತಿಃ—ತರುಣ ಅರಸನು. (ಯುವನ್ (ಪು)—ತರುಣ). ಪಾತಿ ಇತಿ ಪತಿಃ । ನೃಣಾಂ ಪತಿಃ ನೃಪತಿಃ (ಷ.ತ.ಸ.) ಜನರ ರಕ್ಷಕ ಅರಸ. ಪ್ರಕೃತಿಃ (ಸ್ತ್ರೀ)—ಪ್ರಜೆಗಳು, ಜನರು. ಇದನ್ನು ಬಹುವಚನದಲ್ಲಿಯೇ ಉಪಯೋಗಿಸುವರು. ಅವೇಕ್ಷಿತುಂ — ಅವ+ಈಕ್ಷ್ (೧. ಆ) ಧಾತುವಿನ ತುಮುಂತಾವ್ಯಯ ನೋಡಲು. ಕೇವಲ ಪ್ರಜೆಗಳನ್ನು ನೋಡುವದೆಂದು ಅರ್ಥವಲ್ಲ. ಅವರ ಯೋಗಕ್ಷೇಮವನ್ನು ನೋಡಲು. ಅವರ ಕಲಹಗಳನ್ನು ತೀರಿಸಲು ಎಂದು ಲಾಕ್ಷಣಿಕ ಅರ್ಥ. **ವ್ಯವಹಾರಾಸನಂ**—ನ್ಯಾಯಾಸನ ವ್ಯವಹಾರವೆಂದರೆ ನ್ಯಾಯದಾನ. ನ್ಯಾಯದಾನದ ಮಹತ್ತರವಾದ ಹೊಣೆಯನ್ನು ರಾಜನೇ ನಿರ್ವಹಿಸಬೇಕು ಎಂದು ಮನುಸ್ಮೃತಿಯಲ್ಲಿ ಹೇಳಿದೆ. ಆದಕ್ಕಾಗಿ ಅಜರಾಜನು ನ್ಯಾಯಾಸನವನ್ನು ಸ್ವೀಕರಿಸಿದನು. "ವಿ ನಾನಾರ್ಥೇ ಅವ ಸಂದೇಹೇ ಹರಣಂ ಹಾರ ಉಚ್ಯತೇ । **ನಾನಾ ಸಂದೇಹಹರಣಾತ್ ವ್ಯವಹಾರ ಇತಿ ಸ್ಮೃತಃ**". ಆದದೇ—ಆ+ದಾ(೩.ಆ) ಧಾತುವಿನ ದ್ವಿ. ಭೂ. ತೃ. ಪು. ಏ. ವ. ತೆಗೆದುಕೊಂಡನು. ನ್ಯಾಯಾಸನ ತೆಗೆದುಕೊಂಡನು. ಎಂದರೆ ನ್ಯಾಯಾಸನ ಸ್ವೀಕರಿಸಿದನು ಎಂದು ಅರ್ಥ. **ಪ್ರವಯಾಃ**—ವೃದ್ಧ, ಮುದುಕ. ಪ್ರಕೃಷ್ಟಂ ವಯಃ ಯಸ್ಯ ಸಃ (ಬ.ಸ.) **ಧಾರಣಾ**—ಚಿತ್ತೈಕಾಗ್ರತೆ. ಇದು ಅಷ್ಟಯೋಗಗಳಲ್ಲಿ ಒಂದಾಗಿದೆ.

ಯಮನಿಯಮಾದಿಗಳಿಂದ ಮನಸ್ಸನ್ನು ನಿಗ್ರಹಿಸಿ ಅದನ್ನು ಅಂತರಾತ್ಮನಲ್ಲಿ (ಎಂದರೆ ಅಂತರಾತ್ಮನ ವಿಚಾರದಲ್ಲಿ) ತೊಡಗಿಸುವದೇ ಅವಧಾರಣೆ. ತು. ಮಾ 'ಯಮಾದಿಗುಣಸಂಯುಕ್ತೇ ಮನಸಃ ಸ್ಥಿತಿರಾತ್ಮನಿ । ಧಾರಣಾ ಪ್ರೋಚ್ಯತೇ ಸದ್ಭಿರ್ಯೋಗಶಾಸ್ತ್ರವಿಶಾರದೈಃ' ಇತಿ ವಸಿಷ್ಠಃ । ಪರಿಚೇತುಂ— ಅಭ್ಯಾಸಮಾಡಲು, ಪರಿ+ಚಿ (೫. ಉ) ಧಾತುವಿನ ತುಮ್-ತಾವ್ಯಯ. ಉಪಾಂಶು—ಉಪನಿವೃತ್ತಾಃ ಅಂಶವಃ ಅಸ್ಮಾತ್ ಇತಿ । ಸೂರ್ಯಕಿರಣ್ಣ ಗಳು ಹಿಂತಿರುಗಿ ಹೋದಸ್ಥಳ. ಅರ್ಥಾತ್ ನಿರ್ಜನ ಅಥವಾ ಏಕಾಂತ ಪ್ರದೇಶ. ಕುಶಪೂತಂ—ಕುಶೈಃ ಪೂತಂ (ತೃ. ತ.) ದರ್ಭೆಗಳಿಂದ ಪವಿತ್ರ ವಾದ, ಕುಶ ಎಂದರೆ ಪವಿತ್ರವಾದ ಹುಲ್ಲು (ದರ್ಭೆ) ಈ ದರ್ಭೆವನ್ನು ಶುಭ ಹಾಗೂ ಅಶುಭ ಕಾರ್ಯಗಳೆರಡರಲ್ಲಿಯೂ ಉಪಯೋಗಿಸುವರು. ವಿಷ್ಟರಃ—ಆಸನ.

೧೪. ಅನ್ವಯ—ಏಕಃ (ಅಜಃ) ಅನಂತರಾನ್ ನೃಪತೀನ್ ಪ್ರಭುಶಕ್ತಿ- ಸಂಪದಾ ವಶಂ ಅನಯತ್ । ಅಪರಃ (ರಘುಃ) ಪ್ರಣಿಧಾನಯೋಗ್ಯಯಾ ಶರೀರಗೋಚರಾನ್ ಪಂಚ ಮರುತಃ (ವಶಂ ಅನಯತ್) ।

ಭಾಷಾಂತರ:— ಒಬ್ಬನು (ಅಜನು) ಸುತ್ತಮುತ್ತಲಿನ ರಾಜರನ್ನು ಪ್ರಭುಶಕ್ತಿಯಿಂದ ವಶಪಡಿಸಿಕೊಂಡನು. ಇನ್ನೊಬ್ಬನು (ರಘುವು) ಸಮಾಧಿಯ ಅಭ್ಯಾಸದಿಂದ ದೇಹದಲ್ಲಿಯ ಪಂಚಪ್ರಾಣಗಳನ್ನು ಜಯಿಸಿದನು.

ಟಿಪ್ಪಣಿ:— ಅನಂತರಾನ್ ನೃಪತೀನ್—ನೆರೆಹೊರೆಯ ಅಥವಾ ಸುತ್ತುಮುತ್ತಲಿನ ರಾಜರನ್ನು, ತನ್ನ ರಾಜ್ಯಕ್ಕೆ ಹೊಂದಿಕೊಂಡಿದ್ದ ರಾಜರನ್ನು. ಇವರಲ್ಲಿ ಎರಡು ವಿಧಗಳಿವೆ. (i) ಯಾತವ್ಯ, ಮಾಡಿದ ತಪ್ಪಿಗಾಗಿ ಅವಶ್ಯ ವಾಗಿ ದಂಡೆತ್ತಿಹೋಗಲೇಬೇಕಾದವರು. (ii) ಪಾರ್ಷ್ಣಿಗ್ರಾಹ, ಯಾರಿಂದ ದಾಳಿಯ ಭಯವಿದೆಯೋ ಅಂತಹ ನೆರೆಹೊರೆಯ ರಾಜರು. ಪ್ರಭುಶಕ್ತಿ ಸಂಪದಾ—ಪ್ರಭುಶಕ್ತಿಯ ಸಂಪತ್ತು ಅಥವಾ ಹೆಚ್ಚಳದ ಮೂಲಕ ಎಂದರೆ ಪ್ರಭುಶಕ್ತಿಯ ಮಹಿಮೆಯಿಂದ. **ಪ್ರಭುಶಕ್ತಿಃ**—(ಪ್ರಭೋಃ ಶಕ್ತಿಃ; ಷ. ತ. ಸ.) ಶಕ್ತಿಯಲ್ಲಿ ಪ್ರಭುಶಕ್ತಿ, ಉತ್ಸಾಹಶಕ್ತಿ, ಮಂತ್ರಶಕ್ತಿ ಎಂಬ ೩ ಪ್ರಕಾರಗಳಿವೆ. ರಾಜನ ಅತ್ಯುಚ್ಚ ಸ್ಥಾನಮಹಿಮೆ ಹಾಗೂ ಅವನ ಬಳಿಯಲ್ಲಿದ್ದ ಕೋಶ, ದಂಡ, ಸೈನ್ಯ ಮುಂತಾದವುಗಳ ಮೂಲಕ ಉದ್ಭವಿಸುವ ಶಕ್ತಿಗೆ ಪ್ರಭುಶಕ್ತಿ ಎಂದು ಕರೆಯುವರು. "ಕೋಶೋ ದಂಡೋ

ಬಲಂ ಚೈವ ಪ್ರಭುಶಕ್ತಿಃ ಪ್ರಕೀರ್ತಿತಾ" [ರಾಜನ ಸ್ವಂತ ಉತ್ಸಾಹದ ಮೂಲಕ ಉಂಟಾಗುವ ಶಕ್ತಿಗೆ ಉತ್ಸಾಹಶಕ್ತಿ ಎಂದೂ ಸತ್ಸಲಹೆಯಿಂದ ದೊರೆಯುವ ಶಕ್ತಿಗೆ ಮಂತ್ರಶಕ್ತಿ ಎಂದೂ ಕರೆಯುವರು.] ವಶಂ ಅನಯತ್—ವಶಪಡಿಸಿ ಕೊಂಡನು. ಪ್ರಣಿಧಾನಯೋಗ್ಯಯಾ — ಸಮಾಧಿಯ ಅಭ್ಯಾಸದಿಂದ ಯೋಗ್ಯಾ—ಅಭ್ಯಾಸ. ಯೋಗಾಯ ಪ್ರಭವತಿ ಇತಿ। ಚಿತ್ತೈಕಾಗ್ರತೆಗಾಗಿ ಮಾಡುವ ಸತತ ಅಭ್ಯಾಸ. **ಪ್ರಣಿಧಾನ**—ಸಮಾಧಿಸಾಧನೆಗಾಗಿ ಆಚರಿಸ-ಬೇಕಾದ ೧೦ ನಿಯಮಗಳಲ್ಲಿ ಇದು ಒಂದಾಗಿದೆ. ಪ್ರಣಿಧಾನ ಎಂದರೆ ಆಳವಾದ ಧ್ಯಾನ ಅಥವಾ ಚಿಂತನೆ. ಶರೀರಗೋಚರಾನ್—ಶರೀರೇ ಗೋಚರಾನ್ (ಸ. ತ.) ಶರೀರವನ್ನಾಶ್ರಯಿಸಿದ. **ಪಂಚಮರುತಃ**—ಪಂಚ ಪ್ರಾಣಗಳನ್ನು, ಶರೀರದಲ್ಲಿ ಪ್ರಾಣ, ಅಪಾನ, ಸಮಾನ, ಉದಾನ, ವ್ಯಾನ ಎಂಬ ೫ ಬಗೆಯ ವಾಯುಗಳಿವೆ, ಯೋಗಿಯಾದವನು ತನ್ನ ಇಚ್ಛಾನುಸಾರ ವಾಗಿ ಈ ೫ ವಾಯುಗಳಿಂದ ಕೆಲಸ ಮಾಡಿಸುವನು. ಅಂತೆಯೇ ಯೋಗಿಗೆ ಬೇಕಾದುದನ್ನು ಮಾಡಲು ಸಾಧ್ಯವಿದೆ.

೧೫. ಅನ್ವಯ:— ಅಚಿರೇಶ್ವರಃ (ಅಜಃ) ಕ್ಷಿತೌ ದ್ವಿಷದಾರಂಭ-ಫಲಾನಿ ಭಸ್ಮಸಾತ್ ಅಕರೋತ್। ಅಪರಃ (ರಘುಃ) ಜ್ಞಾನಮಯೇನ ವಹ್ನಿನಾ ಸ್ವಕರ್ಮಣಾಂ ದಹನೇ ವವೃತೇ।

ಭಾಷಾಂತರ:— ಹೊಸ ಅರಸನು ಭೂಮಿಯ ಮೇಲೆ ಶತ್ರುಗಳ ಚಟ ವಟಿಕೆಗಳ ಫಲವನ್ನು ನಿಷ್ಫಲಗೊಳಿಸಿದನು. ಇನ್ನೊಬ್ಬನಾದ ರಘುವು (ತತ್ವ) ಜ್ಞಾನವೆಂಬ ಅಗ್ನಿಯಿಂದ ತನ್ನ ಕರ್ಮಗಳನ್ನು ಸುಡುವವರಲ್ಲಿ ತೊಡಗಿದನು.

ಟಿಪ್ಪಣಿ:— ಅಚಿರೇಶ್ವರಃ— ಹೊಸ ರಾಜನು. ಅಚಿರಂ ಈಶ್ವರಃ (ಅವ್ಯಯ ಸಮಾಸ) ಅಥವಾ ಅಚಿರಃ ಈಶ್ವರಃ (ಕ. ಸ.) ಎಂಬುದಾಗಿಯೂ ಬಿಡಿಸಬಹುದೆಂದು ಒಬ್ಬ ಟೀಕಾಕಾರರ ಮತ. ಕ್ಷಿತೌ—ಭೂಮಿಯ ಮೇಲೆ ದ್ವಿಷದಾರಂಭಫಲಾನಿ—ಶತ್ರುಗಳ ಚಟವಟಿಕೆಗಳ ಫಲವನ್ನು (ದ್ವಿಷತ್— ವೈರಿ. ದ್ವೇಷಿಕ್ಕ್ನ್ಲಆರಂಭಃ—ಕಾರ್ಯ. ಚಟವಟಿಕೆ ಕೆಲಸ) ದ್ವಿಷತಾಂ ಆರಂಭಾಃ ದ್ವಿಸದಾರಂಭಾಃ (ಷ. ತ. ಸ.) ತೇಷಾಂ ಫಲಾನಿ (ಷ. ತ. ಸ)। ಭಸ್ಮಸಾತ್ ಅಕರೋತ್—ಬೂದಿ ಮಾಡಿದನು ಶತ್ರುಗಳ ಚಟುವಟಿಕೆಗಳ ಜ್ಞಾನವೆಂಬ ಅಗ್ನಿಯಿಂದ ಅವರ ಪ್ರಯತ್ನಗಳೆನ್ನೆಲ್ಲ ಬೂದಿಮಾಡಿದನು, ಅಥವಾ ಉಪಾ-ಯವೆಂಬ ಅಗ್ನಿಯಿಂದ ಶತ್ರುಗಳ ಕರ್ಮಗಳನ್ನು ಬೂದಿಮಾಡಿದನು.

ಎಂಬುದಾಗಿ ಇಟ್ಟುಕೊಳ್ಳಬಹುದು. ಅವರ ಚಟುವಟಿಕೆಗಳನ್ನೆಲ್ಲ ಹತ್ತಿಕ್ಕಿ ನಿಷ್ಫಲಗೊಳಿಸಿದನು ಎಂದು ತಾತ್ಪರ್ಯ. ಭಸ್ಮಸಾತ್ ಕೃ (ಬೂದಿಮಾಡು) ಎಂಬ ಪದವಿದ್ದ ಮೂಲಕ ಜ್ಞಾನಾಗ್ನಿ ಅಥವಾ ಉಪಾಯಾಗ್ನಿ ಎಂಬ ಪದವು ಗುಪ್ತವಿದೆ ಎಂದು ತಿಳಿಯಬಹುದು. ಜ್ಞಾನಮಯೇನ ವಹ್ನಿನಾ—ಜ್ಞಾನ ಅರ್ಥಾತ್ ತತ್ವಜ್ಞಾನವೆಂಬ ಅಗ್ನಿಯಿಂದ ದಹನೇ ವವೃತೇ—ಸುಟ್ಟನು. ವವೃತೇ—ವೃತ್ (೧. ಆ) ದ್ವಿ. ಭೂ, ತೃ. ಪು. ಏ. ವ. ಮನುಷ್ಯನು ದಿನಾಲು ತೀರ ಕಡಿಮೆ ಎಂದರೆ ಕನಿಷ್ಠ ೧೦ ಜನ್ಮ ಬರುವಷ್ಟು ಕೆಲಸ ಮಾಡುತ್ತಾನೆ. ಹೀಗೆ ಅಖಂಡವಾದ ಕರ್ಮರಾಶಿಯ ಮೂಲಕ ಕೊನೆಯ ವರೆಗೂ ಸಂಸಾರದಲ್ಲಿಯೇ ತೊಳಲಿ ಮೋಕ್ಷ ಪಡೆಯದೆ ಇರುವ ಸಂದರ್ಭ ಒದಗುತ್ತದೆ. ಆದರೆ ಪರಮ ದಯಾಲುವಾದ ಪರಮಾತ್ಮನು ತತ್ವಜ್ಞಾನ ದೊರಕಿಸಿದರೆ, ಆ ಜ್ಞಾನದಿಂದ ಹಿಂದಿನ ಕರ್ಮಗಳನ್ನೆಲ್ಲ, ಎಂದರೆ ಅವುಗಳ ಫಲವನ್ನೆಲ್ಲ (ಪ್ರಾರಬ್ಧಕರ್ಮವೊಂದನ್ನು ಮಾತ್ರ ಬಿಟ್ಟು) ಸುಟ್ಟುಬಿಡುತ್ತಾನೆ. ಅಂತೆಯೇ ಜ್ಞಾನದ ಮಹಿಮೆ ಅಗಾಧವಾದುದು. ತು ಮಾ ಯಥೈಧಾಂಸಿ ಸಮಿದ್ಧೋಽಗ್ನಿಃ ಭಸ್ಮಸಾತ್ಕುರುತೇಽರ್ಜುನ। ಜ್ಞಾನಾಗ್ನಿಃ ಸರ್ವಕರ್ಮಾಣಿ ಭಸ್ಮಸಾತ್ ಕುರುತೇ ತಥಾ॥ ಗೀತಾ. ಇದರಂತೆ ರಘುರಾಜನಾದರೂ ತತ್ವಜ್ಞಾನವೆಂಬ ಅಗ್ನಿಯಿಂದ ತನ್ನ ಕರ್ಮರಾಶಿಯನ್ನು ಸುಡುವದರಲ್ಲಿ ತೊಡಗಿದನು. ಜ್ಞಾನ ಸಂಪಾದಿಸತೊಡಗಿದನು ಎಂದು ತಾತ್ಪರ್ಯ.

೧೬. ಅನ್ವಯ:— ಅಜಃ ಪಣಬಂಧಮುಖಾನ್ ಷಡ್ ಗುಣಾನ್ ತತ್ ಫಲಂ ನಮೀಕ್ಷ್ಯ ಉಪಾಯುಂಕ್ತ। ಸಮಲೋಷ್ಟಕಾಂಚನಃ ರಘುಃಽಪಿ ಪ್ರಕೃತಿಸ್ಥಂ ಗುಣತ್ರಯಂ ಅಜಯತ್।

ಭಾಷಾಂತರ:— ಅಜನು ಸಂಧಿ (ವಿಗ್ರಹ) ವೊದಲಾದ ಆರು ಉಪಾಯಗಳನ್ನು, ಅವುಗಳ ಪರಿಣಾಮವನ್ನು ಚೆನ್ನಾಗಿ ವಿಚಾರಿಸಿ, ಉಪಯೋಗಿಸಿದನು. ಬಂಗಾರ ಮತ್ತು ಮಣ್ಣಿನ ಹೆಂಟೆ ಸಮವೆಂದು ಭಾವಿಸಿದ ರಘುರಾಜನು ಪ್ರಕೃತಿಯ ಮೂರು ಗುಣಗಳನ್ನು ಜಯಿಸಿದನು.

ಟಿಪ್ಪಣೆ: — ಪಣಬಂಧಮುಖಾನ್— ಸಂಧಿ ವೊದಲಾದವು. ಪಣಃ ಬಧ್ಯತೇ ಅಸ್ಮಿನ್ ಇತಿ ಪಣಬಂಧಃ. ನಿರ್ದಿಷ್ಟ ಹಣ ಇಲ್ಲವೆ ಕರಾರು ಇರುವಂತಹದು ಅರ್ಥಾತ್ ಸಂಧಿ, ಒಪ್ಪಂದ. ಆದ್ದರಿಂದ ಪಣಬಂಧ=ಸಂಧಿ, ಒಪ್ಪಂದ, ಪಣಬಂಧಃ ಮುಖಂ ಯೇಷಾಂ ತೇ (ಬ. ಸ.) ತಾನ್ **ಷಟ್ ಗುಣಾನ್**—೬ ಉಪಾಯಗಳನ್ನು (i) ಸಂಧಿ (ಒಪ್ಪಂದ) (ii) ವಿಗ್ರಹ

(ಯುದ್ಧ) (iii) ಯಾನ ತಮ್ಮ ಪಕ್ಷವನ್ನು ಭದ್ರಗೊಳಿಸಿ ವೈರಿಯ ಮೇಲೆ ಏರಿ ಹೋಗುವದು. (iv) ಆಸನಂ. ತಮ್ಮ ಸ್ಥಿತಿ ಸುಧಾರಿಸಿಕೊಳ್ಳಲು ಇಲ್ಲವೆ ಯೋಗ್ಯ ಸಂಧಿ ದೊರಕಿಸಲು ದ್ವೇಷಭಾವವನ್ನು ತಾತ್ಪೂರ್ತಿಕವಾಗಿ ಬಿಡುವದು. (v) ದ್ವೈಧಂ, ಭೇದನೀತಿ. (vi) ಆಶ್ರಯ. ಮೊರೆಹೋಗುವದು. 'ಸಂಧಿರ್ನಾ ವಿಗ್ರಹೋ ಯಾನಮಾಸನಂ ದ್ವೈಧಮಾಶ್ರಯಃ' ಇತಿ ಅಮರಃ ರಾಜನು ಪರರಾಷ್ಟ್ರಗಳೊಡನೆ ತಾಳುವ ರಾಜನೀತಿ ಧೋರಣೆಯಲ್ಲಿ ಮೇಲೆ ವಿವರಿಸಿದ ಬೇಕಾದ ಒಂದು ಉಪಾಯ ಕೈಕೊಳ್ಳಬಹುದು. ಫಲಂ ಸಮೀಕ್ಷ್ಯ-ಮೇಲೆ ಹೇಳಿದ ಉಪಾಯಗಳನ್ನು ಚೆನ್ನಾಗಿ ವಿಚಾರ ಮಾಡದೆ ಉಪಯೋಗಿ-ಸಿದಲ್ಲಿ ಅನರ್ಥ ಘಟಿಸುವ ಸಂಭವವಿದೆ. ಆದ್ದರಿಂದ ಅಜನು ಯಾವ ಉಪಾಯವನ್ನು ಕೈಕೊಂಡರೆ ಯಾವ ಪರಿಣಾಮವು ಆಗುವದು ಎಂಬು-ದನ್ನು ಚೆನ್ನಾಗಿ ಪರಿಶೀಲಿಸಿ, ನಂತರ ಇವುಗಳನ್ನು ಉಪಯೋಗಿಸಿಕೊಂಡನು. ಸಮೀಕ್ಷ್ಯ—ನೋಡಿ. ಸಮ್ + ಈಕ್ಷ್ (೧. ಆ) ಧಾತುವಿನ ಲ್ಯಬಂತಾ-ವ್ಯಯ. ಉಪಾಯುಂಕ್ತ—ಉಪಯೋಗಿಸಿದನು ಉಪ+ಯುಜ್ (೭. ಉ) ಧಾತುವಿನ ಪ್ರ. ಭೂ. ತೃ. ಪು. ಏ. ವ. ಸಮಲೋಷ್ಟ ಕಾಂಚನಃ—ಬಂಗಾರ ಮತ್ತು ಮಣ್ಣಿನ ಹೆಂಟೆಗಳ ಬೆಲೆ ಸಮಾನವಾಗಿಯುಳ್ಳವ ಎಂದರೆ ಅವೆರಡೂ ಸಮವೆಂದು ಭಾವಿಸಿದವ. ಇದು ಆಶಾರಹಿತವಾದ ಜ್ಞಾನಿಗಳ-ಲಕ್ಷಣ. ಅವರಿಗೆ ಐಹಿಕ ವಿಷಯಗಳಲ್ಲಿ ಆಸ್ಥೆಯೇ ಇರುವದಿಲ್ಲ ಅಂತೆಯೇ ಬಂಗಾರ ಹಾಗೂ ಮಣ್ಣು ಹೆಂಟೆಯ ಬೆಲೆ ಅವರಿಗೆ ಅಷ್ಟೇ. ಲೋಷ್ಟಂಚ ಕಾಂಚನಂ ಚ ಲೋಷ್ಟಕಾಂಚನೇ (ದ್ವಂದ್ವ)-ಸಮೇಲೋಷ್ಟ ಕಾಂಚನೇ ಯಸ್ಯ ಸಃ (ಬ. ಸ.) ಲೋಷ್ಟಂ—ಮಣ್ಣು ಹೆಂಟೆ. ಕಾಂಚನಂ-ಬಂಗಾರ.

**ಪ್ರಕೃತಿಸ್ಥಂಗುಣತ್ರಯಂ:**-ನಿಸರ್ಗದಲ್ಲಿದ್ದ ಸತ್ವ, ರಜಸ್, ತಮಸ್ ಎಂಬ ಗುಣಗಳು. ಪ್ರಕೃತೌ ತಿಷ್ಠತಿ ಇತಿ ಪ್ರಕೃತಿಸ್ಥಂ(ಉಪ.ತ.)ಗುಣಾನಾಂ ತ್ರಯಂ ಗುಣತ್ರಯಂ (ಷ. ತ. ಸ.) ಸಾಂಖ್ಯ ಸಿದ್ಧಾಂತದ ಮೇರೆಗೆ, ಪ್ರಕೃತಿಯೇ ಜಗತ್ತಿನ ಉತ್ಪತ್ತಿಗೆ ಕಾರಣವು. ಪ್ರಕೃತಿಯಿಂದಲೇ ಜಗತ್ತು ಹುಟ್ಟುತ್ತದೆ. ಈ ಪ್ರಕೃತಿಯಾದರೋ ಸತ್ವ, ರಜಸ್, ತಮಸ್ ಎಂಬ ಮೂರು ಗುಣಗಳನ್ನೊಳಗೊಂಡಿರುತ್ತದೆ. ಅರ್ಥಾತ್ ಮೂರು ಗುಣಗಳೇ ಸೃಷ್ಟಿಗೆ ಕಾರಣವು. [ಪ್ರತಿಯೊಬ್ಬನಲ್ಲಿಯೂ ಈ ಮೂರು ಗುಣಗಳು ಭಿನ್ನ ಭಿನ್ನ ಪ್ರಮಾಣದಲ್ಲಿ ಇದ್ದು ಅವುಗಳಿಂದ ಬೇರೆ ಬೇರೆ ಬಗೆಯ ಕಾರ್ಯ

ಗಳಾಗುತ್ತವೆ. ಸತ್ವಗುಣದಿಂದ ಒಳ್ಳೆಯ ಕಾರ್ಯ, ತಮೋಗುಣದಿಂದ ದುಷ್ಟಕಾರ್ಯ, ರಜೋಗುಣದಿಂದ ಮಿಶ್ರಕಾರ್ಯ, ಆಗುತ್ತವೆ. ಹೀಗೆ ತ್ರಿಗುಣಗಳೇ ಸೃಷ್ಟಿ ಹಾಗೂ ಮನುಷ್ಯನ ಕೃತಿಗಳಿಗೆ ಕಾರಣ. ಈ ತ್ರಿಗುಣ ಗಳನ್ನು ಜಯಿಸಿದರೆ ಮನುಷ್ಯನು ಸಂಸಾರಾವಸ್ಥೆಯನ್ನು ದಾಟಿ ಮೋಕ್ಷ ಪಡೆಯುತ್ತಾನೆ. ಅಂತೆಯೇ ರಘುರಾಜನು ಪ್ರಕೃತಿಯಲ್ಲಿರುವ ಸತ್ವಗುಣ, ರಜೋಗುಣ ಹಾಗೂ ತಮೋಗುಣಗಳನ್ನು ಜಯಿಸಿದನು.

೧೭ ಅನ್ವಯ:— ಸ್ಥಿರಕರ್ಮಾನವಃ ಪ್ರಭುಃ (ಅಜಃ) ಆಫಲೋದಯಾತ್ ಕರ್ಮಣಃ ನ ವಿರರಾಮ। ಸ್ಥಿರಧೀಃ ನವೇತರಃ ಚ ಆ ಪರಮಾತ್ಮ ದರ್ಶನಾತ್ ಯೋಗವಿಧೇಃ ನ ವಿರರಾಮ।

ಭಾಷಾಂತರ :— ಕಾರ್ಯದಲ್ಲಿ ಸ್ಥೈರ್ಯವಿದ್ದ ಹೊಸ ರಾಜನು (ಅಜ) ಕಾರ್ಯ ಕೈಗೂಡುವವರೆಗೆ (ಅದರ ಫಲ ದೊರೆಯುವವರೆಗೆ) ಕೆಲಸವನ್ನು ಬಿಡುತ್ತಿದ್ದಿಲ್ಲ. ನಿಶ್ಚಲ ಮನಸ್ಸುಳ್ಳ ಹಳೆಯ ರಾಜನು ಪರಮಾತ್ಮನ ದರ್ಶನವಾಗುವವರೆಗೆ ಧ್ಯಾನವನ್ನು ಬಿಡಲಿಲ್ಲ.

ಟಿಪ್ಪಣಿ:— ಸ್ಥಿರಕರ್ಮಾ— ಸ್ಥಿರಂ ಕರ್ಮ ಯಸ್ಯ ಸಃ (ಬ. ಸ.) ಆಫಲೋದಯಾತ್ — ಫಲದೊರೆಯುವವರೆಗೆ. ಕೈಕೊಂಡ ಕಾರ್ಯ ಕೈಗೂಡುವವರೆಗೆ. ಆ–ವರೆಗೆ ತನಕ ಈ ಉಪಸರ್ಗವು ಪಂಚಮೀ ವಿಭಕ್ತಿ ತೆಗೆದುಕೊಳ್ಳುತ್ತದೆ. ಉದಾ:— ರಾಜಹಂಸಾಃ ತೇ ಆ ಕೈಲಾಸಾತ್ ಸಹಾಯಾಃ ಸಂಪತ್ಸ್ಯಂತೇ ನ ವಿರರಾಮ — ಬಿಡಲಿಲ್ಲ. ವಿ+ರಮ್ (೧·ಪ) ಧಾತು ಪಂಚಮೀ ವಿಭಕ್ತಿ ತೆಗೆದುಕೊಳ್ಳುತ್ತದೆ. (ರಮ್ ಧಾತು, ಆತ್ಮನೇ ಪದವಿದ್ದರೂ ವಿ ಉಪಸರ್ಗ ಹಚ್ಚುವದರಿಂದ ಪರಸ್ಮೈಪದವಾಗುತ್ತದೆ.)

ಉದಾ:— ನ ನಿಶ್ಚಿತಾರ್ಥಾತ್ ವಿರಮಂತಿ ಧೀರಾಃ। ಸ್ಥಿರಧೀಃ— ನಿಶ್ಚಲವಾದ ಮನಸ್ಸುಳ್ಳ ಸ್ಥಿರಾ ಧೀಃ ಯಸ್ಯ ಸಃ (ಬ. ಸ.) ನವೇತರಃ— ಹೊಸಬನಲ್ಲದ ಅರ್ಥಾತ್ ಹಳೆಯ (ರಾಜನು). ನವಾತ್ ಇತರಃ (ಷ. ತ.) ದುಃಖಗಳ ಮಧ್ಯದಲ್ಲಿ ಕಳವಳಗೊಳ್ಳದ ಮನಸ್ಸುಳ್ಳ, ಸುಖಗಳಿಗಾಗಿ ಆಶೆ ಇಲ್ಲದ ಮತ್ತು ಪ್ರೀತಿ-ಅಂಜಿಕೆ ಸಿಟ್ಟುಗಳಿಲ್ಲದವನಿಗೆ ಸ್ಥಿರವಾದ ಮನಸ್ಸುಳ್ಳ ಮುನಿ ಎಂದು ಕರೆಯುವರು.' ಎಂದು ಗೀತೆಯಲ್ಲಿ ಹೇಳಲಾಗಿದೆ. ತು.ಮಾ. ದುಃಖೇಷ್ವನುದ್ವಿಗ್ನಮನಾಃ ಸುಖೇಷು ವಿಗತಸ್ಪೃಹಃ। ವೀತರಾಗಭಯಕ್ರೋಧಃ ಸ್ಥಿರಧೀರ್ಮುನಿರುಚ್ಯತೇ॥ ಗೀತಾ ಅ೨. ೫೫ ಯೋಗವಿಧೇಃ— ಧ್ಯಾನ ಇಲ್ಲವೆ ಚಿಂತನೆಯಿಂದ. ಯೋಗಸ್ಯ ವಿಧಿಃ ಯೋಗವಿಧಿಃ (ಷ.ತ.ಸ.)

ತಸ್ಮಾತ್ । ಆಪರಮಾತ್ಮ ದರ್ಶನಾತ್ —ದೇವರ ಸಾಕ್ಷಾತ್ಕಾರವಾಗುವವರೆಗೆ ಪ್ರತ್ಯಕ್ಷ ದೇವರ ದರ್ಶನವಾಗುವವರೆಗೆ. ಈಶ್ವರ ದರ್ಶನವಾಗುವವರೆಗೆ ಹಾಗೆಯೇ ಸಮಾಧಿಯೋಗದಲ್ಲಿ ಕುಳಿತುಕೊಂಡಿದ್ದನು ಎಂದು ಹೇಳ ಬೇಕಾಗಿದೆ.

೧೮. ಅನ್ವಯ:— ಇತಿ ಪ್ರತಿಷಿದ್ಧಪ್ರಸರೇಷು ಶತ್ರುಷು ಚ ಇಂದ್ರಿಯೇಷು ಚ ಜಾಗ್ರತೌ ಉದಯಾಪವರ್ಗಯೋಃ ಪ್ರಸಿತೌ ಉಭೌ ಉಭಯೀಂ ಸಿದ್ಧಿಂ ಅವಾಪತುಃ ।

ಭಾಷಾಂತರ:— ವಿರೋಧೀ ಚಟವಟಿಕೆಗಳನ್ನು ತಡೆಯಲಾದ ಶತ್ರುಗಳ ವಿಷಯವಾಗಿ ಹಾಗೂ ವಿಷಯ ವಾಸನೆ ಇಲ್ಲವೆ ಇಚ್ಛೆಯನ್ನು ನಿಗ್ರಹಿಸಿದ ಇಂದ್ರಿಯಗಳಲ್ಲಿ ಜಾಗರೂಕರಾಗಿ, ಅಭ್ಯುದಯ ಮತ್ತು ಮೋಕ್ಷಗಳಲ್ಲಿ ಆಸಕ್ತರಾದ ಇಬ್ಬರೂ ಎರಡೂ ಬಗೆಯ ಫಲವನ್ನು ಪಡೆದರು.

ಟಿಪ್ಪಣಿ:— ಇಬ್ಬರೂ ತಮ್ಮ ತಮ್ಮ ಕೆಲಸಗಳ ಫಲ ಪಡೆದರೆಂಬು ಶ್ಲೋಕದ ತಾತ್ಪರ್ಯ. ಅವರು ಇದ್ದ ಬಗೆ, ಕೈಕೊಂಡ ಕಾರ್ಯ ಹಾಗೂ ಪಡೆದ ಫಲ ಇವುಗಳ ವಿವರಣೆಯನ್ನು ಈ ಶ್ಲೋಕದಲ್ಲಿ ಸಂಗ್ರಹಿಸಿ ಕೊಡಲಾಗಿದೆ. ವಿದ್ಯಾರ್ಥಿಗಳ ಅನುಕೂಲತೆಗಾಗಿ ಅವನ್ನು ಪ್ರತ್ಯೇಕವಾಗಿ ಕೆಳಗೆ ಕೊಟ್ಟಿದೆ. (ಪ್ರತಿಷಿದ್ಧಪ್ರಸರೇಷು ಎಂಬ ವಿಶೇಷಣವು 'ಶತ್ರುಷು' ಹಾಗೂ 'ಇಂದ್ರಿಯೇಷು' ಎಂಬ ಎರಡೂ ಪದಗಳಿಗೆ ಅನ್ವಯಿಸುತ್ತದೆ)

(i) ಅಜ — ಇತಿ ಪ್ರತಿಷಿದ್ಧ ಪ್ರಸರೇಷು ಶತ್ರುಷು ಜಾಗ್ರತ್ ಉದಯೇ ಪ್ರಸಿತಃ ಸಿದ್ಧೀ ಅವಾಪ ವಿರೋಧೀ ಚಟುವಟಿಕೆಗಳನ್ನು ತಡೆಯಲಾದ ಶತ್ರುಗಳ (ಸಂಪತ್ತು) ವಿಷಯವಾಗಿ ಜಾಗರೂಕನಾದ ಹಾಗೂ ಐಹಿಕ ಅಭ್ಯುದಯದಲ್ಲಿ ಆಸಕ್ತನಾದ ಅಜನು ಫಲ ಪಡೆದನು. ಪ್ರತಿಷಿದ್ಧ ಪ್ರಸರೇಷು ಶತ್ರುಷು-ಯಾರ ವಿರೋಧೀಚಟುವಟಿಕೆಗಳು ತಡೆಯಲ್ಪಟ್ಟಿದ್ದವೋ ಅಂಥವರಲ್ಲಿ ಪ್ರಸರಃ—ದಾಳಿ. ವಿರೋಧೀಕೆಲಸ ಜಾಗ್ರತ್—ಜಾಗರೂಕ ಉದಯೇ— ಅಭ್ಯುದಯದಲ್ಲಿ. ಐಹಿಕ ಸಂಪತ್ತಿನಲ್ಲಿ. ಸಿದ್ಧಿಃ— ಫಲ ಐಹಿಕ ಸಂಪತ್ತೆಂಬ ಫಲಪಡೆದನು.

**ರಘು** — ಪ್ರತಿಷಿದ್ಧಪ್ರಸರೇಷು ಇಂದ್ರಿಯೇಷು ಜಾಗ್ರತ್, ಅಪವರ್ಗೇ ಪ್ರಸಿತಃ ಸಿದ್ಧಿಂ ಅವಾಪ। ವಿಷಯವಾಸನೆ ಇಲ್ಲವೆ ಇಚ್ಛೆಯನ್ನು ನಿಗ್ರಹಿಸಿದ ಇಂದ್ರಿಯಗಳಲ್ಲಿ ಜಾಗರೂಕನಾದ, ಮೋಕ್ಷದಲ್ಲಿ ಆಸಕ್ತನಾದ ರಘುರಾಜನು ಫಲ ಪಡೆದನು.

ಪ್ರತಿಷಿದ್ಧಪ್ರಸರೇಷು — ಇಚ್ಛೆಯನ್ನು ಸಂಪೂರ್ಣ ನಿಗ್ರಹಿಸಿದ. ಪ್ರಸರಃ–ಆಶೆ. ಇಚ್ಛೆ. ವಿಷಯಾಸಕ್ತಿ ವಿಷಯ ವಾಸನಾ. ಅಪವರ್ಗಃ–ದುಃಖ ಸ್ಪರ್ಶವಿಲ್ಲದ ಕೇವಲ ಸುಖಮಯವಾದ ಸ್ಥಾನ. ಅರ್ಥಾತ್ ಮೋಕ್ಷ. ಪ್ರಸಿತಃ- ಆಸಕ್ತನಾದ. ಸಿದ್ಧಿಃ– ಫಲ. ಮೋಕ್ಷ ಎಂಬ ಫಲ.

ಪ್ರತಿಷಿದ್ಧಪ್ರಸರೇಷು—ಪ್ರತಿಷಿದ್ಧಃ ಪ್ರಸರಃ ಯೇಷಾಂ ತೇ ತಾನಿ ವಾ (ಬ.ಸ.) ತೇಷು। ಉದಯಾಪವರ್ಗಯೋಃ – ಉದಯಃ ಅಪವರ್ಗಃ ಚ ಉದಯಾಪವರ್ಗೌ (ದ್ವಂದ್ವ)। ತಯೋಃ। ಉಭಯೀ – ಎರಡುಬಗೆಯ. ಅವಾಪತುಃ– ಅವ+ಆಪ್ (೫ ಪ) ಧಾತುವಿನ ದ್ವಿ. ಭೂ. ತೃ. ಪು. ದ್ವಿ. ವ. **ಜಾಗ್ರತೌ**–ಜಾಗೃ (೨.ಪ) ಧಾತುವಿನ ವ. ಧಾ. ವಿ. ವಾದ ಜಾಗ್ರತ್ ಶಬ್ದದ (ಪು) ಪ್ರ. ದ್ವಿ. ವ. ಉಭೌ ಉಭಯೀಂ ಸಿದ್ಧಿಂ ಅವಾಪತುಃ (ಕರ್ತರಿ) — ಉಭಾಭ್ಯಾಂ ಉಭಯೀ ಸಿದ್ಧಿಃ ಅವಾಪೇ (ಕರ್ಮಣಿ)

## EXERCISES

**ಅಭ್ಯಾಸಕ್ಕಾಗಿ ಪ್ರಶ್ನೆಗಳು:–**

**೧. ಕನ್ನಡಕ್ಕೆ ಪರಿವರ್ತಿಸಿರಿ:–** (i) ಶ್ಲೋಕ ೨, ೩, ೫, ೮ (ii) ಶ್ಲೋಕ ೧೦, ೧೧, ೧೪. (iii) ಶ್ಲೋಕ ೧೬, ೧೭, ೧೮

**೨. ವಿಗ್ರಹಿಸಿ ಸಮಾಸಗಳ ಹೆಸರು ಹೇಳಿರಿ– ಕೃತಕ್ರಿಯಃ;** ಪೃಥಿವೀರುಹಾನ್; ನಿಃಸ್ಪೃಹಃ; ತ್ರಿದಿವಸ್ಥೇಷು; ತರುವಲ್ಕವಾಸಸಾಂ; **ಪ್ರವಯಾಃ ಸಮಲೋಷ್ಟಕಾಂಚನಃ;**

**೩. ರೂಪ ಗುರುತಿಸಿರಿ:–** ಬಿಭ್ರತಃ; ಅಗ್ರಹೀತ್; ಪ್ರತಿಪೇದೇ; **ಈಪ್ಸಿತಂ;** ಅವಾಪತುಃ; **ಸಮಿಯಾಯ; ಜಾಗ್ರತೌ.**

**೪. ವಾಕ್ಯಗಳಲ್ಲಿ ಉಪಯೋಗಿಸಿರಿ:–** ಸಹಿತಂ; ಇತರಃ; ಅ;

**೫. ಟಿಪ್ಪಣಿ ಬರೆಯಿರಿ:–** ಧಾರಣಾ; ಪಂಚಮರುತಃ; ಷಟ್ ಗುಣಾಃ; ಪ್ರಕೃತಿ; ಪ್ರಭುಶಕ್ತಿಃ; ಪ್ರಣಿಧಾನ;

**೬. ಪ್ರಯೋಗ ಬದಲಿಸಿರಿ:–** (i) ಪ್ರಜಾಃ ತಂ ರಘುಂ ಅಮನ್ಯಂತ। (ii) **ದದೃಶಾತೇ ರಘುರಾಘವೌ ಜನೈಃ।** (iii) ಸಃ ನೃಪಶ್ರೀನ್ ವಶಂ ಅನಯತ್।

**೭. ಸಂಧಿ ಬಿಡಿಸಿರಿ:–** ತದುಪಸ್ಥಿತಮಗ್ರಹೀದಜಃ; ಪದಮೃದ್ಧಮಜೇನ; ಪ್ರಕೃತಿಷ್ವಾತ್ಮಜಮಾತ್ಮವತ್ತಯಾ; ರಘುರಪ್ಯಜಯದ್ಗುಣತ್ರಯಂ

# ೩. ಜಾಹ್ನವೀಯಂ ಮನೋಹರಾ

## ೧. ಕವಿ ಹಾಗೂ ಕಾವ್ಯ:—

**ಕವಿ:-** ಈ ಪಾಠವನ್ನು **ಭಗವಜ್ಜಿನಸೇನಾಚಾರ್ಯರಿಂದ** ವಿರಚಿತವಾದ **ಪೂರ್ವಪುರಾಣ**ದಲ್ಲಿಯ ಭರತರಾಜ ವಿಜಯ ಪ್ರಯಾಣ ವರ್ಣನಂ ಎಂಬ ೨೭ನೆಯ ಪರ್ವದಿಂದ ಆಯ್ದುಕೊಳ್ಳಲಾಗಿದೆ.

ಈ ಗ್ರಂಥವನ್ನು ಶ್ರೀ ಭಗವಜ್ಜಿನಸೇನಾಚಾರ್ಯರೆಂಬ ಮಹರ್ಷಿಗಳು ಲೋಕಕಲ್ಯಾಣಾರ್ಥವಾಗಿ ರಚಿಸಿದರು. ಆಚಾರ್ಯರು ಯಾವ ಊರಲ್ಲಿ, ಯಾವ ವಂಶದಲ್ಲಿ ಹುಟ್ಟಿದರೆಂಬುದು ತಿಳಿದುಬರುವದಿಲ್ಲ. ಇವರು ದಕ್ಷಿಣ ದೇಶದವರೆಂಬ ಐತಿಹ್ಯವದೆ. ಇವರ ಪೂರ್ವಾವಸ್ಥೆ ತಿಳಿಯದೇ ಹೋದರೂ ಉತ್ತರಾವಸ್ಥೆಯ ಬಗ್ಗೆ ಕೆಲವೊಂದು ಅಂಶಗಳು ತಿಳಿದುಬರುತ್ತವೆ. ಇವರು ಮೂಲ ಸಂಘದಲ್ಲಿಯ ಸೇನ ಸಂಘಕ್ಕೆ ಸೇರಿದವರು [ಜೈನರಲ್ಲಿ ಶ್ವೇತಾಂಬರ ಸಂಪ್ರದಾಯ ಹುಟ್ಟಿದಂದಿನಿಂದ ದಿಗಂಬರ ಸಂಪ್ರದಾಯಕ್ಕೆ ಮೂಲ ಸಂಘವೆಂಬ ಹೆಸರು ಪ್ರಾಪ್ತವಾಯಿತು. ಈ ಮೂಲ ಸಂಘದಲ್ಲಿ ಸುಮಾರು ೧೭೦೦ ವರುಷಗಳ ಹಿಂದೆ (೧) ಸಿಂಹ ಸಂಘ, (೨) ನದಿ ಸಂಘ (೩) ಸೇನ ಸಂಘ (೪) ದೇವ ಸಂಘ ಎಂಬ ೪ ಮುನಿಗಳ ಸಂಘಗಳುಂಟಾದವು.] ಆಚಾರ್ಯರ ವಿದ್ಯಾಗುರುಗಳು ಏಲಾಚಾರ್ಯರ ಶಿಷ್ಯರಾದ ವೀರಸೇನ ಮುನಿಗಳು. ಜಯಸೇನರು ಇವರ ದೀಕ್ಷಾ ಗುರುಗಳು. ಆಚಾರ್ಯರು ಮಾನ್ಯಖೇಡರ ರಾಷ್ಟ್ರಕೂಟರ ಅಮೋಘವರ್ಷನ ಗುರುಗಳಾಗಿದ್ದರು.

ಆಚಾರ್ಯರ ಕಾಲವನ್ನು ನಿಶ್ಚಿತವಾಗಿ ಹೇಳಲು ಸಾಕಷ್ಟು ಆಧಾರಗಳಿಲ್ಲ. ಆದರೂ ಅಮೋಘವರ್ಷನ ಸಮಕಾಲೀನರೆಂದು ಹೇಳಬಹುದು. ಇವರು ಸುಮಾರು ೮೫ ವರುಷಗಳ ವರೆಗೆ ಜೀವಿಸಿದ್ದರೆಂದು ಹೇಳಬಹುದು. ಆಚಾರ್ಯರ **ಜನ್ಮವು ಕ್ರಿ. ಶ. ೭೫೩** ಹಾಗೂ **ಮರಣ ಕ್ರಿ.ಶ.೮೩೮** ಎಂದೂ ಎ. ಶಾಂತಿರಾಜಶಾಸ್ತ್ರಿಗಳು ಅಭಿಪ್ರಾಯಪಡುತ್ತಾರೆ.

ಆಚಾರ್ಯರು (೧) ಜಿನಗುಣಸ್ತುತಿ (೨) ವರ್ಧಮಾನಪುರಾಣ (೩) ಜಯಧವಲ–ಸಿದ್ಧಾಂತ ವ್ಯಾಖ್ಯಾನ ಗ್ರಂಥ (೪) ಪಾರ್ಶ್ವಾಭ್ಯುದಯ (೫) ಪೂರ್ವಪುರಾಣ ಎಂಬ ಗ್ರಂಥಗಳನ್ನು ರಚಿಸಿದರು. ಪಾರ್ಶ್ವಾಭ್ಯುದಯ ಕಾವ್ಯವು ೪ ಸರ್ಗಗಳುಳ್ಳ ಮಂದಾಕ್ರಾಂತ ವೃತ್ತದಿಂದ ಕೂಡಿದೆ. ಕಾಲಿದಾಸನ ಮೇಘ–

ದೂತದ ಮೇಲೆ ಸಮಸ್ಯಾಪೂರ್ತಿರೂಪವಾಗಿ ರಚಿಸಲ್ಪಟ್ಟ ಗ್ರಂಥವಾಗಿದೆ. ಆಚಾರ್ಯರು ಮೇಘದೂತದ ಒಂದೊಂದು ಪಾದ ತೆಗೆದುಕೊಂಡು ಅದಕ್ಕೆ ೩ ಪಾದಗಳನ್ನು ತಾವು ಸೇರಿಸಿ ಮೂಲ ಗ್ರಂಥದ ಕಥೆಯನ್ನು ಸಂಪೂರ್ಣ ವಾಗಿ ಬದಲಾಯಿಸಿ ಶ್ರೀ ಪಾರ್ಶ್ವನಾಥ ಸ್ವಾಮಿಯ ಚರಿತ್ರೆಯನ್ನು ವರ್ಣಿ-ಸಿರುವರು. **ಮಹಾಪುರಾಣದಲ್ಲಿ ಪೂರ್ವ ಪುರಾಣ ಉತ್ತರ ಪುರಾಣ ಎಂಬ ೨ ಭಾಗಗಳುಂಟು.** ಆಚಾರ್ಯರು ಸಂಪೂರ್ಣ ಮಹಾಪುರಾಣವನ್ನು ಬರೆಯಬೇಕೆಂದು ಉದ್ದೇಶಪಟ್ಟಿದ್ದರು. "ಪುರಾಣಂ ಸಂಗ್ರಹಿಷ್ಯಾಮಿ ತ್ರಿಷಷ್ಟಿ ಪುರುಷಾಶ್ರಿತಂ" (I.19) ಆದರೆ ಪೂರ್ವಪುರಾಣದಲ್ಲಿಯ ೪೨ ಪರ್ವಗಳನ್ನು ರಚಿಸುವಷ್ಟರಲ್ಲಿ ಕಾಲವಾದರು. ಆಚಾರ್ಯರ ಶಿಷ್ಯರಾದ ಭಗವತ್ **ಗುಣ ಭದ್ರಾಚಾರ್ಯರು** ಪೂರ್ವಪುರಾಣದಲ್ಲಿಯ ಉಳಿದ ೫ ಪರ್ವಗಳನ್ನೂ ಹಾಗೂ ಉತ್ತರಪುರಾಣವನ್ನೂ ಬರೆದು ಮುಗಿಸಿದರು.

**ಕಾವ್ಯ:**—ಮಹಾಪುರಾಣದಲ್ಲಿ ಪೂರ್ವಪುರಾಣ ಉತ್ತರ ಪುರಾಣ ಎಂಬ್ಬ ೨ ಭಾಗಗಳಿವೆ. ಪ್ರಸ್ತುತ ಅವತರಣಿಕೆಯನ್ನು ಎತ್ತಿಕೊಂಡ **ಪೂರ್ವಪುರಾಣ ದಲ್ಲಿ ಪ್ರಥಮ ತೀರ್ಥಂಕರರಾದ ಶ್ರೀ ವೃಷಭಸ್ವಾಮಿಯ ಹಾಗೂ ಪ್ರಥಮ ಚಕ್ರವರ್ತಿಯಾದ ಭರತನ ಚರಿತ್ರೆಗಳನ್ನೂ ವಿಸ್ತಾರವಾಗಿ ವರ್ಣಿಸಲಾಗಿದೆ.** ಉಳಿದ ೬೧ ಮಹಾಪುರುಷರ ಚರಿತ್ರೆಗಳು ಉತ್ತರಪುರಾಣ ದಲ್ಲಿವೆ. "ಕವಿತಾಚಾತುರ್ಯ ಅರ್ಥ ಗಾಂಭೀರ್ಯ ಪದಲಾಲಿತ್ಯರಸಾಲಂಕಾರ ಸೌಷ್ಠವ ಮುಂತಾದ ಗುಣಗಳಿಂದ ಕೂಡಿದ **ಈ ಪುರಾಣವು ಜೈನ ಪುರಾಣಗಳಲ್ಲೆಲ್ಲ ಶ್ರೇಷ್ಠವಾದುದು."** ನೀತಿಬೋಧೆ, ವೈರಾಗ್ಯ ಸಂಸಾರ, ಮುಕ್ತಿ, ಕರ್ಮ, ಲೋಕಸ್ವರೂಪ ಮೊದಲಾದ ಗಹನ ವಿಷಯಗಳೂ ತುಂಬಾ ಹೃದಯಂಗಮವಾಗಿ ನಿರೂಪಿಸಲ್ಪಟ್ಟಿವೆ. ಇದರಲ್ಲಿ ಪುರಾಣದ ಲಕ್ಷಣಗಳು ಎದ್ದು ಕಾಣುತ್ತವೆ.

[ಸರ್ಗಶ್ಚ ಪ್ರತಿಸರ್ಗಶ್ಚ ವಂಶೋ ಮನ್ವಂತರಾಣಿ ಚ । ವಂಶಾನು ಚರಿತಂ ಚೈವ ಪುರಾಣಂ ಪಂಚಲಕ್ಷಣಂ ॥ ] ಅಲ್ಲದೆ ಮಹಾಕಾವ್ಯದ ಲಕ್ಷಣಗಳೂ ಈ ಪುರಾಣದಲ್ಲಿ ಸ್ಫುಟವಾಗಿ ತೋರುತ್ತವೆ. ಇದರಲ್ಲಿ ಶೃಂಗಾರಾದಿ ವರ್ಣನೆಗಳೂ ವಿಪುಲವಾಗಿ ಮಾಡಲ್ಪಟ್ಟಿವೆ. ಸಲಕ್ಷಣವಾದ ವರ್ಣನೆ ಗ್ರಂಥದ ಮಹತಿಗೆ ಒಂದು ಕಾರಣವಾಗಿದೆ. "ಆಚಾರ್ಯರು ಲಕ್ಷಣ ಶಾಸ್ತ್ರಾನು-ಸಾರವಾಗಿ ವಿದ್ವದ್ರಂಜಕವಾಗಿ ಗ್ರಂಥ ರಚಿಸಿದ್ದಾರೆ." **ಆಚಾರ್ಯರ ಶೈಲಿ**

**ದ್ರಾಕ್ಷಾಪಾಕವಿದ್ದಂತೆ.** ಸನಿಯಲು ಅಷ್ಟೊಂದು ಸರಳ ಅಷ್ಟೊಂದು ಮಧುರ, ಆದರೆ ಭಗವತ್ ಗುಣಭದ್ರಾಚಾರ್ಯರ ಶೈಲಿ ನಾರೀಕೇಳಪಾಕವೆಂದೂ ಹೇಳಬಹುದು. ತೆಂಗಿನ ಚಿಪ್ಪಿನ ಮರೆಯಲ್ಲಿದ್ದ ತಿಳಲಿನ ಹಾಗೆ. " ಈ ಗ್ರಂಥದಲ್ಲಿ ಹಲವು ಉತ್ತಮ ವಚನವೆಂಬ ರತ್ನಗಳೂ ಸಂಗ್ರಹಿಸಲು ಯೋಗ್ಯವಾದ ಸುಭಾಷಿತಗಳೂ ವಿಪುಲವಾಗಿವೆ." ಈ ಪುರಾಣವು ಬಹು ಪವಿತ್ರ ಗ್ರಂಥವೆಂದು ತಿಳಿಯಲ್ಪಡುತ್ತದೆ. ಶುಭಾಶುಭ ಫಲಗಳನ್ನು ತಿಳಿಯುವದಕ್ಕಾಗಿ ಅನೇಕ ಜೈನ ಬಾಂಧವರು ಈ ಪವಿತ್ರ ಗ್ರಂಥದಿಂದ ಪುರಾಣ ಶಕುನವನ್ನು ಶುಭಾಶುಭ ನಿಮಿತ್ತಗಳನ್ನು ತಿಳಿದುಕೊಳ್ಳಲು ಉಪಯೋಗಿಸುತ್ತಾರೆ. ಒಬ್ಬ ಕವಿಯು ಈ ಗ್ರಂಥವನ್ನು ಕುರಿತು ಹೀಗೆ ಹೇಳಿದ್ದಾನೆ.

ಯದಿ ಸಕಲಕವೀಂದ್ರಪ್ರೋಕ್ತಸೂಕ್ತಪ್ರಚಾರಶ್ರವಣ
ಸರಸಚೇತಾಸ್ತತ್ತ್ವಮೇವಂ ಸಖೇಸ್ಯಾಃ
ಕವಿವರಜಿನಸೇನಾಚಾರ್ಯವಕ್ತ್ರಾರವಿಂದಪ್ರಣಿಗದಿತ
ಪುರಾಣಾಕರ್ಣನಾಭ್ಯರ್ಣಕರ್ಣಃ ॥

ಅರ್ಥ :— "ಎಲೈ ಮಿತ್ರನೇ ನೀನು ಎಲ್ಲಾ ಕವಿ ಶ್ರೇಷ್ಠರು ಹೇಳಿದ ಸುವಚನಗಳನ್ನು ಕೇಳಿ ಸರಸ ಹೃದಯವುಳ್ಳವನಾಗ ಬೇಕಾದರೆ ಕವಿ ಶ್ರೇಷ್ಠರಾದ ಜಿನಸೇನ್ಯಾಚಾರ್ಯರ ಮುಖಕಮಲದಿಂದ ಹೇಳಲ್ಪಟ್ಟ ಪುರಾಣವನ್ನು ಕೇಳುವದಕ್ಕೆ ಕಿವಿಗಳುಳ್ಳವನಾಗು." ಈ ಪುರಾಣವನ್ನು ಅಭ್ಯಸಿಸುವದರ ಫಲವನ್ನು ಗ್ರಂಥದಲ್ಲಿ ಈ ರೀತಿಯಾಗಿ ಹೇಳಲಾಗಿದೆ. " ಈ ಪುರಾಣವನ್ನು ಋಷಿಗಳು ಹೇಳಿರುವದರಿಂದ ಇದು ಪ್ರಮಾಣವೂ ಸಂಪೂರ್ಣವಾಗಿ ಸತ್ಯವೂ ಆಗಿರುತ್ತದೆ. ಆದುದರಿಂದ ಆತ್ಮಕಲ್ಯಾಣವನ್ನಿಚ್ಛಿಸುವವರು ಇವನ್ನು ನಂಬಬೇಕು, ಅಧ್ಯಯನ ಮಾಡಬೇಕು, ಧ್ಯಾನಿಸಬೇಕು. ಈ ಪುರಾಣವು ಪುಣ್ಯದಾಯಕವೂ ಪವಿತ್ರವೂ ಉತ್ತಮವಾದ ಮಂಗಲ ಸ್ವರೂಪವೂ ಆಯುಷ್ಯವರ್ಧಕವೂ ಕೀರ್ತಿಯನ್ನುಂಟು ಮಾಡುವದೂ ಸ್ವರ್ಗದಾಯಕವೂ ಆಗಿರುತ್ತದೆ. ಈ ಪುರಾಣವನ್ನು ಪೂಜಿಸುವವರಿಗೆ ದುಃಖ-ಶಾಂತಿಯೂ ಸಂದೇಹ ನಿವಾರಣೆಗೋಸುಗ ಪ್ರಶ್ನೆಮಾಡುವವರಿಗೆ ಆನಂದವೂ ಪುಷ್ಟಿ-ಜ್ಞಾನ ವೃದ್ಧಿಯೂ, ಓದುವವರಿಗೆ ಕ್ಷೇಮವೂ, ಆರೋಗ್ಯವೂ, ಕೇಳುವವರಿಗೆ ಕರ್ಮ-ನಿರ್ಜರೆಯೂ ಆಗುವವು. ಈ ಪುರಾಣ ಪೂಜನ ಪೃಚ್ಛನಾಪಠನ ಶ್ರವಣಾದಿಗಳಿಂದ ದುಃಸ್ವಪ್ನಗಳ ನಾಶವೂ ಸುಸ್ವಪ್ನಗಳ ವೃದ್ಧಿಯೂ ನಿಮಿತ್ತ ನೋಡುವವರಿಗೆ ಇಷ್ಟ ಫಲ ಪ್ರಾಪ್ತಿಯೂ ಉಂಟಾಗುವವು." [I. ೨೦೪-೨೦೭].

**ಮಹಾಪುರಾಣದ ಲಕ್ಷಣಗಳು:**— ಮಹಾಪುರಾಣವು ಜೈನ ಸಾಹಿತ್ಯದ ವೈಶಿಷ್ಟ್ಯಪೂರ್ಣವಾದ ಅಂಗವಾಗಿದೆ. ಮಹಾಪುರಾಣವೆಂದರೆ ಶ್ರೇಷ್ಠರಾದ ಪೂರ್ವಪುರುಷರ ಚರಿತ್ರೆ. ಮಹಾಪುರಾಣದಲ್ಲಿ ಜೈನಧರ್ಮದಲ್ಲಿಯ ಶ್ರೇಷ್ಠರಾದ ೬೩ ಜನರ ಚರಿತ್ರೆ ಹೇಳಲ್ಪಟ್ಟಿದೆ. ಈ ಪುರಾಣವನ್ನು **ತ್ರಿಷಷ್ಠಿ ಶಲಾಕಾಪುರುಷಚರಿತ** ಎಂದೂ ಕೆಲವರು ಕರೆಯುತ್ತಾರೆ. ಮಹಾಪುರಾಣವನ್ನು ಕುರಿತು ಭಗವಜ್ಜಿನಸೇನಾಚಾರ್ಯರು ಈ ರೀತಿಯಾಗಿ ಹೇಳುತ್ತಾರೆ. " ೨೪ ತೀರ್ಥಂಕರರು, ೧೨ ಚಕ್ರವರ್ತಿಗಳು. ೯ ಬಲಭದ್ರರು. ೯ ನಾರಾಯಣರು ೯ ಪ್ರತಿನಾರಾಯಣರು ಇವರುಗಳ ತ್ರಿಷಷ್ಠಿಲಕ್ಷಣಗಳುಳ್ಳ ಪುರಾಣವನ್ನು ಹೇಳುವೆನು. ಪುರಾತನವಾದುದು ಪುರಾಣವೆನಿಸುವದು. ಆ ಪುರಾಣವು ತೀರ್ಥಂಕರರು ಮೊದಲಾದ ಮಹಾಪುರುಷರ ಸಂಬಂಧದಿಂದಲೂ ಮಹಾಪುರುಷರಿಂದುಪದೇಶಿಸಲ್ಪಟ್ಟಿರುವದರಿಂದಲೂ ಮಹಾಶ್ರೇಯಸ್ಸನ್ನು ಪ್ರತಿಪಾದಿಸುವದರಿಂದಲೂ ಮಹಾ ಪುರಾಣವೆನಿಸುವದು. ಅಥವಾ ಪುರಾತನ ಕವಿಯನ್ನಾಶ್ರಯಿಸಿ ಉಂಟಾಗಿರುವದರಿಂದ ಪುರಾಣತ್ವ ಉಂಟಾಗುವದು. ಆ ಪುರಾಣಕ್ಕೆ ಮಹತ್ವವು ತನ್ನ ಮಹಿಮೆಯಿಂದಲೇ ಎಂಬುದಾಗಿ ಬೇರೆಯವರು ಹೇಳುತ್ತಾರೆ. ಈ ಪುರಾಣವು ಮಹಾಪುರುಷಸಂಬಂಧಿಯೂ ಮಹಾಭ್ಯುದಯಕ್ಕೆ ಕಾರಣವೂ ಆಗಿರುವದರಿಂದ ಮಹರ್ಷಿಗಳು ಇದಕ್ಕೆ ಮಹಾಪುರಾಣವೆಂದು ಹೇಳುತ್ತಾರೆ." (I ೨೦–೨೩) ಎ, ಶಾಂತಿರಾಜ ಶಾಸ್ತ್ರಿ.

೬೩ ಜನ ಮಹಾಪುರುಷರು ೫ ಗುಂಪುಗಳಲ್ಲಿ ವಿಭಾಗಿಸಲ್ಪಟ್ಟಿದ್ದಾರೆ.

(೧) ತೀರ್ಥಂಕರರು ೨೪ ಜನ:—ವೃಷಭ, ಅಜಿತ ಮುಂ.

(೨) ಚಕ್ರವರ್ತಿಗಳು ೧೨ ಜನ:— ಭರತ, ಸಗರ ಮುಂ.

(೩) ಬಲಭದ್ರರು ೯ ಜನ:— ಅಚಲ, ವಿಜಯ ಮುಂ.

(೪) ನಾರಾಯಣರು (ಅರ್ಧ ಚಕ್ರವರ್ತಿಗಳು) ೯ ಜನ:— ತ್ರಿಪೃಷ್ಠ, ದ್ವಿಪೃಷ್ಠ, ಮುಂ.

(೫) ಪ್ರತಿನಾರಾಯಣರು ೯ ಜನ:— ಅಶ್ವಗ್ರೀವ, ತಾರಕ ಮುಂ.

ಜೈನಧರ್ಮದಲ್ಲಿರುವ ಮಹಾಪುರಾಣಗಳು:—

I. ಮಹಾಪುರಾಣ ( ದಿಗಂಬರ ) **ಜಿನಸೇನಾಚಾರ್ಯ ಹಾಗೂ ಗುಣಭದ್ರಾಚಾರ್ಯ**—ಸಂಸ್ಕೃತದಲ್ಲಿ.

II. ಮಹಾಪುರಾಣ (ದಿಗಂಬರ) **ಪುಷ್ಪದಂತ**-ಪ್ರಾಕೃತದಲ್ಲಿ.

III. ತ್ರಿಷಷ್ಠಿ ಶಲಾಕಾಪುರುಷಚರಿತ (ಶ್ವೇತಾಂಬರ) **ಹೇಮಚಂದ್ರ** ಸಂಸ್ಕೃತದಲ್ಲಿ.

IV. ಮಹಾಪುರುಷಚರಿತ— **ಶೀಲಾಚಾರ್ಯ** ಪ್ರಾಕೃತದಲ್ಲಿ.

V. ಮಹಾಪುರಾಣ— **ಅಮರಸೂರಿ**—ಪ್ರಾಕೃತದಲ್ಲಿ.

VI. ಮಹಾಪುರಾಣ—**ಮೇರುತುಂಗ**—ಸಂಸ್ಕೃತದಲ್ಲಿ.

**ಕಥಾಸಾರಾಂಶ:**— ೬೩ ಪ್ರಾಚೀನ ಶ್ರೇಷ್ಠ ಪುರುಷರ ಚರಿತ್ರೆ ಇದರಲ್ಲಿ ಹೇಳಲ್ಪಟ್ಟಿದೆ. ಅಲ್ಲಲ್ಲಿ ವರ್ಣನೆಗಳೂ ಭರತ ಮುಂತಾದವರ ದಿಗ್ವಿಜಯಗಳೂ ವರ್ಣಿಸಲ್ಪಟ್ಟಿವೆ. ನೀತಿಬೋಧೆ ತತ್ತ್ವೋಪದೇಶಗಳೂ ಹೇರಳವಾಗಿವೆ.

**ಪಾಠದ ಸಂದರ್ಭ:**— ಭರತ ಚಕ್ರವರ್ತಿಯು ದಿಗ್ವಿಜಯ ಮಾಡುತ್ತ ಗಂಗಾನದಿಯ ಸಮೀಪಕ್ಕೆ ಬಂದು ಗಂಗಾನದಿಯನ್ನು ನೆಟ್ಟ ನೋಟದಿಂದ ನೋಡತೊಡಗಲು ಸಾರಥಿಯು ಚಕ್ರವರ್ತಿಯ ಮನಸ್ಸಿನ ಒಲವನ್ನು ಅರಿತು ರಥವನ್ನು ನಿಲ್ಲಿಸಿದನು ಆ ಮೇಲೆ ಸಾರಥಿಯು ಗಂಗಾನದಿಯನ್ನು ಈ ರೀತಿಯಾಗಿ ವರ್ಣಿಸತೊಡಗಿದನು.

**ಪಾಠದ ಸಾರಾಂಶ:**— ಹಿಮಾಲಯ ಪರ್ವತದ ಪದ್ಮಸರೋವರದಲ್ಲಿ ಹುಟ್ಟಿದ ಗಂಗಾನದಿಯ ಮಹಿಮೆ ನಿಜವಾಗಿಯೂ ಅಗಾಧವಾದುದು. ಗಂಗಾನದಿಯ ಪ್ರವಾಹವು ಬಹಳ ಆಳವಿರುತ್ತದೆ. ಅಂತೆಯೇ ಅದನ್ನು ವಿಜಯಾರ್ಧ ಪರ್ವತಕ್ಕೆ ಧರಿಸಲಾಗುವದಿಲ್ಲ. ಸಮುದ್ರ ಮಾತ್ರ ತನ್ನ ಗಾಂಭೀರ್ಯದ ಮೂಲಕ ಪ್ರವಾಹವನ್ನು ಧರಿಸಿದೆ. ಇದರ ನೀರು ನಿರ್ಮಲವೂ ಪಾವನವೂ ಇದೆ. ಇದರ ಎರಡೂ ದಂಡೆಗಳ ಮೇಲೆ ದಟ್ಟವಾದ ಗಿಡಗಳ ಸಾಲು ಹಬ್ಬಿವೆ. ರಾಜಹಂಸ ಪಕ್ಷಿಗಳು ಗಂಗಾನದಿಯ ದಂಡೆಯನ್ನಾಶ್ರಯಿಸಿ ಅಸ್ಪಷ್ಟ ಹಾಗೂ ಮಧುರವಾದ ಕಲಕಲ ಶಬ್ದ ಮಾಡುತ್ತವೆ. ಒಟ್ಟಿನ ಮೇಲೆ ಈ ಗಂಗಾನದಿಯು ಜಗತ್ತಿಗೆಲ್ಲ ಆನಂದ ಕೊಡುತ್ತದೆ. ಹೀಗೆ ಮನೋಹರವಾದ ಗಂಗಾನದಿಯು ತನ್ನ ಶೋಭೆಯನ್ನು ಪ್ರಕಟಗೊಳಿಸಿದರೂ ಕೂಡ, ಹಿಮಾಲಯ ಪರ್ವತವು ಅದನ್ನು ಸಮುದ್ರದೆಡೆಗೆ ಕಂಠಹಾರವೆಂಬ ಕಾಣಿಕೆಯೆಂದು ಕಳಿಸಿದೆ.

## ಅನ್ವಯ, ಭಾಷಾಂತರ ಹಾಗೂ ಟೀಕೆ-ಟಿಪ್ಪಣಿಗಳು.

### जाह्नवीयं मनोहरा

### ೩. ಈ ಸುಂದರವಾದ ಗಂಗಾನದಿ.

**ಪುಟ ೩೮.** ೧ ಅನ್ವಯ:—ಆಹ್ಲಾದಿತಾಶೇಷಭುವನಾ ರಜೋ ವಿಧುನ್ವತೀ ಇಯಂದೇವನಿಮ್ನಗಾ ಸ್ವಯಂಭುವಃ ಆಹ್ಲಾದಿತಾಶೇಷಭುವನಾ ರಜೋ ವಿಧುನ್ವತೀ ಭಾರತೀ ಇವ ಭಾತಿ।

ಭಾಷಾಂತರ:— ಜಗತ್ತನ್ನೆಲ್ಲ ಸಂತೋಷಗೊಳಿಸಿದ, ಧೂಳ ಇಲ್ಲವೆ ಪಾಪವನ್ನು ನಾಶಮಾಡುವ ಈ ಗಂಗಾನದಿಯು, ಲೋಕವನ್ನೆಲ್ಲ ಸಂತೋಷಗೊಳಿಸುವ ಪಾಪ ಇಲ್ಲವೆ ಅಜ್ಞಾನವನ್ನು ನಾಶಮಾಡುವ ವೃಷಭಸ್ವಾಮಿಯ ವಾಣಿಯಂತೆ ಪ್ರಕಾಶಿಸುತ್ತದೆ.

ಟಿಪ್ಪಣಿ:— [ ಜಾಹ್ನವೀಯಂ ಮನೋಹರಾ— ಜಾಹ್ನವೀ ಇಯಂ ಮನೋಹರಾ ಈ ಸುಂದರವಾದ ಗಂಗಾನದಿ. **ಜಾಹ್ನವೀ**— ಜಹ್ನೋಃ ಅಪತ್ಯಂ ಸ್ತ್ರೀ (ತದ್ಧಿತ) ಜಹ್ನುರಾಜನ ಮಗಳಾದ ಗಂಗಾನದಿ ಹಿಂದಕ್ಕೆ ಭಗೀರಥನ ತಪಶ್ಚರ್ಯದ ಫಲವಾಗಿ ಗಂಗಾನದಿಯು ಸ್ವರ್ಗಲೋಕದಿಂದ ಪಾತಾಳಲೋಕಕ್ಕೆ ಹೊರಟಿತು. ಪಾತಾಳಕ್ಕೆ ಹೋಗಲು ಭೂಮಿಯ ಮೇಲೆ ಹರಿಯ ಬೇಕಾಯಿತು. ಹರಿಯುವಾಗ ದಾರಿಯಲ್ಲಿದ್ದ ಜಹ್ನುರಾಜನ ಯಜ್ಞ ಭೂಮಿಯೆಲ್ಲ ಗಂಗಾನದಿಯ ನೀರಿನಿಂದ ತುಂಬಿಹೋಯಿತು. ಇದರಿಂದ ಸಿಟ್ಟಿಗೆದ್ದ ಜಹ್ನುರಾಜನು ಗಂಗಾನದಿಯ ನೀರನ್ನೆಲ್ಲ ಸಂಪೂರ್ಣ ಕುಡಿದುಬಿಟ್ಟನು ಮುಂದೆ ದೇವತೆಗಳೂ, ಋಷಿಗಳೂ, ಹಾಗೂ ಭಗೀರಥನೂ ಜಹ್ನುರಾಜನ ಸಿಟ್ಟನ್ನು ಶಾಂತಗೊಳಿಸಿ ಗಂಗಾನದಿಯನ್ನು ಬಿಟ್ಟು ಬಿಡ ಬೇಕಾಗಿ ಪ್ರಾರ್ಥಿಸಿದರು. ಜಹ್ನುರಾಜನು ಅವರ ಬಿನ್ನಹಕ್ಕೆ ಮನ್ನಣೆಕೊಟ್ಟು ಗಂಗಾನದಿಯ ನೀರನ್ನು ತನ್ನ ಕಿವಿಗಳ ಮುಖಾಂತರ ಬಿಟ್ಟುಬಿಟ್ಟನು. ಆದ್ದರಿಂದ ಗಂಗಾನದಿ ಜಹ್ನುರಾಜನ ಮಗಳೆಂದು ಭಾವಿಸಲ್ಪಡುತ್ತದೆ. ಮನೋಹರಾ—ಸುಂದರವಾದ ಮನಸಃ ಹರಾ (ಷ. ತ.) ]

ಇಯಂ ದೇವ ನಿಮ್ನಗಾ ಸ್ವಯಂಭುವಃ ಭಾರತೀ ಇವ ಭಾತಿ ( ಈ ಗಂಗಾನದಿಯು ವೃಷಭದೇವನ ವಾಣಿಯಂತೆ ಶೋಭಿಸುತ್ತದೆ. ) ಎಂಬದು ವಾಕ್ಯದ ಮುಖ್ಯಾಂಶ. ದೇವನಿಮ್ನಗಾ—ದೇವತೆಗಳ ನದಿ ಗಂಗಾನದಿ ನಿಮ್ನಂ-

ಗಚ್ಛತಿ ಇತಿ ನಿಮ್ನಗಾ (ಉಪ. ತ. )ತಗ್ಗುಪ್ರದೇಶದಲ್ಲಿ (ಹರಿಯುವಂತಹದು. ಅರ್ಥಾತ್ ನದೀ ) ದೇವಾನಾಂ ನಿಮ್ನಗಾ (ಷ. ತ. ಸ.) ವಿಷ್ಣುವಿನ ಕಾಲಿನ ಹೆಬ್ಬೆರಳಿನಿಂದ ಹುಟ್ಟಿದ ಗಂಗಾನದಿಯು ಮೂಲತಃ ಸ್ವರ್ಗದಲ್ಲಿರುವದರಿಂದ ದೇವತೆಗಳು ಅದರ ಉಪಯೋಗ ಮಾಡಿಕೊಳ್ಳುವರು. ಆದ್ದರಿಂದ ಗಂಗಾ ನದಿಗೆ ದೇವತೆಗಳ ನದಿ ಎಂಬ ಸಂಜ್ಞೆ. ಗಂಗಾ ವಿಷ್ಣುಪದೀ ಜಹ್ನು ತನಯಾ ಸುರನಿಮ್ನಗಾ । ಭಾಗೀರಥೀ ತ್ರಿಪಥಗಾ ತ್ರಿಸ್ರೋತಾ ಭೀಷ್ಮಸೂರಪಿ ' ಇತ್ಯಮರಃ-ಇವೆಲ್ಲ ಗಂಗಾನದಿಯ ಹೆಸರುಗಳು. ಭಾರತೀ—ವಾಣಿ ಮಾತು ಸ್ವಯಂಭುವ:-ಸ್ವಯಂಭೂವಿನ, ವೃಷಭದೇವನ. ಸ್ವಯಂಭೂ ಎಂದರೆ ಬ್ರಹ್ಮ. ಆದರೆ ಜೈನರ ಪ್ರಕಾರ ಸ್ವಯಂಭೂ ಎಂದರೆ ಆದ್ಯ—ತೀರ್ಥಂಕರ ವೃಷಭ-ದೇವ ಭಾತಿ–ಶೋಭಿಸುತ್ತದೆ. ಭಾ. (೨ ಪ) ಧಾತುವಿನ ವ.ಕಾ.ತೃ.ಪು.ಏ.ವ.

ಗಂಗಾನದಿಯನ್ನು ವೃಷಭದೇವನ ವಾಣಿಗೆ ಹೋಲಿಸಿದ್ದರಿಂದ, ಆಹ್ಲಾದಿತಾಶೇಷಭುವನಾ ಹಾಗೂ ರಜೋವಿಧುನ್ವತೀ ಎಂಬ ವಿಶೇಷಣಗಳು ಗಂಗಾನದೀ ಹಾಗೂ ವಾಣೀ ಇವೆರಡಕ್ಕೂ ಅನ್ವಯಿಸುತ್ತವೆ. ಆಹ್ಲಾ........ ಭುವನಾ (i) ಜಗತ್ತನ್ನೆಲ್ಲ ಸಂತೋಷಗೊಳಿಸಿದ (ii) ಲೋಕವನ್ನೆಲ್ಲ ಸಂತೋಷಗೊಳಿಸುವ. ಆಹ್ಲಾದಿತಂ ಅಶೇಷಂ ಭುವನಂ ಯಯಾ ಸಾ(ಬ.ಸ) ಅಶೇಷ—ಎಲ್ಲ ಅವಿದ್ಯಮಾನಃ ಶೇಷಃ ಯಸ್ಯ ತತ್ (ಬ. ಸ.) ಭುವನಂ— ಜಗತ್ತು ಲೋಕ ರಜೋವಿಧುನ್ವತೀ—(i) (ನದೀಪರವಾದ ಅರ್ಥ) ಧೂಳಿ ಇಲ್ಲನೆ ಪಾಪವನ್ನು ಹೋಗಲಾಡಿಸುವ. (ii) ಪಾಪ ಇಲ್ಲವೆ ಅಜ್ಞಾನವನ್ನು ನಾಶಮಾಡುವ ರಜಸ್ (ನ)—(i) ಧೂಳಿ (ii) ಪಾಪ ಅಜ್ಞಾನ ವಿಧುನ್ವತೀ— ವಿ+ಧು (೫.ಉ) ಧಾತುವಿನ ವ.ಧಾ. ವಿ. (ಸ್ತ್ರೀ) ಪ್ರ. ಏ. ವ.

೨ ಅನ್ವಯ :—ಪ್ರಸೂತೌ ಚ. ಪ್ರವೇಶೇ ಚ ಗಂಭೀರಾ ನಿರ್ಮಲಾಶಯಾ ಮಹಾನದೀ ಹಿಮಾದ್ರಿಂ ಚ ಸಾಗರಂ ಚ. ಪುನಾತಿ.

ಭಾಷಾಂತರ:—ಉಗಮಸ್ಥಾನ ಹಾಗೂ (ಸಮುದ್ರ) ಪ್ರವೇಶ ಸ್ಥಾನದಲ್ಲಿ ಆಳವಾದ, ಹಾಗೂ ಸ್ವಚ್ಛವಾದ ನೀರುಳ್ಳ ಈ ದೊಡ್ಡ ಗಂಗಾನದಿಯು ಹಿಮಾಲಯ ಮತ್ತು ಸಮುದ್ರವನ್ನು ಪವಿತ್ರಗೊಳಿಸುತ್ತದೆ.

ಟಿಪ್ಪಣಿ :— ಪ್ರಸೂತೌ—ಉತ್ಪತ್ತಿ ಸ್ಥಳದಲ್ಲಿ. ಉಗಮಸ್ಥಳದಲ್ಲಿ ಪ್ರವೇಶೇ—ಪ್ರವೇಶ ಸ್ಥಳದಲ್ಲಿ ಗಂಭೀರಾ–ಆಳವಾದ. ಸಾಮಾನ್ಯವಾಗಿ ನದಿ ಹುಟ್ಟಿದಲ್ಲಿ ಆಳವಿರುವದಿಲ್ಲ. ಆದರೆ ಉಗಮಸ್ಥಳದಲ್ಲಿಯೂ ಆಳವಿದ್ದುದು

ಗಂಗಾನದಿಯ ವೈಶಿಷ್ಟ್ಯ ಮಹತೀ ನದೀ (ಕ. ಸ.) ದೊಡ್ಡದಾದ ಗಂಗಾನದಿ ನಿರ್ಮಲಾಶಯಾ—ಸ್ವಚ್ಛವಾದ ನೀರುಳ್ಳ ನಿರ್ಗತಂ ಮಲಂ ಯಸ್ಮಾತ್ ಸಃ ನಿರ್ಮಲಃ (ಬ.ಸ.)। ನಿರ್ಮಲಃ ಆಶಯಃ ಯಸ್ಯಾಃ ಸಾ (ಬ. ಸ.) ಆಶಯಃ ಸಂಗ್ರಹ, ನೀರಿನ ಸಂಗ್ರಹ. ಹಿಮಾದ್ರಿಂ—ಹಿಮಾಲಯವನ್ನು ಹಿಮಸ್ಯ ಅದ್ರಿಃ (ಷ. ತ. ಸ.) ತಂ ।

ಟಿಪ್ಪಣಿ:—(ಒಳ್ಳೆಯ ಸ್ತ್ರೀಯು ತವರ್ಮನೆ ಹಾಗೂ ಗಂಡನ ಮನೆಯನ್ನು ತನ್ನ ಸದ್ವರ್ತನದಿಂದ ಪವಿತ್ರಗೊಳಿಸುವಂತೆ) ನಿರ್ಮಲವಾದ ನೀರುಳ್ಳ ಈ ದೊಡ್ಡ ಗಂಗಾನದಿಯು ಉಗಮ ಸ್ಥಾನದಲ್ಲಿ ಹಿಮಾಲಯವನ್ನೂ, ಪ್ರವೇಶ ಸ್ಥಾನದಲ್ಲಿ ಸಮುದ್ರವನ್ನೂ ಪವಿತ್ರಮಾಡುತ್ತದೆ. ಎಂಬ ಅರ್ಥವಿದೆಯೆಂಮ ಶ್ರೀಮಾನ್. ಎ. ಶಾಂತಿರಾಜಶಾಸ್ತ್ರಿಗಳ ಅಭಿಪ್ರಾಯ....

೩.ಅನ್ವಯ:—ಭವಚ್ಯುತಾಃ ಮುನೀಂದ್ರಾಃ ಗಂಭೀರಾಂ ತಾಪವಿಚ್ಛಿದಂ ಸದ್ವಿದ್ಯಾಂ ಪ್ರಾಪ್ಯ ನಿರ್ವಾಂತಿ ಇವ ಏತೇ ಭಯಚ್ಯುತಾಃ ವನಗಜಾಃ ಇಮಾಂ ಗಂಭೀರಾಂ ತಾಪವಿಚ್ಛಿದಂ (ನದೀಂ) ಪ್ರಾಪ್ಯ ನಿರ್ವಾಂತಿ ।

ಭಾಷಾಂತರಃ— ನಿರ್ಭೀತರಾದ ಶ್ರೇಷ್ಠ ಮುನಿಗಳು ಗಂಭೀರವಾದ ಹಾಗೂ ಮನಸ್ತಾಪವನ್ನು ದೂರಮಾಡುವ ಒಳ್ಳೆಯ ವಿದ್ಯೆಯನ್ನು ಪಡೆದು ಸಮಾಧಾನ ಹೊಂದುವಂತೆ ಅಂಜಿಕೆ ಇಲ್ಲದ ಈ ಕಾಡಾನೆಗಳು ಆಳವಾದ ಹಾಗೂ (ಬಿಸಿಲಿನ) ತಾಪ ದೂರಮಾಡುವ ಈ ಗಂಗಾನದಿಯನ್ನು ಹೊಂದಿ ಶಾಂತವಾಗುತ್ತವೆ.

ಟಿಪ್ಪಣಿ:— ಸತೀ ವಿದ್ಯಾ ಸದ್ವಿದ್ಯಾ (ಕ.ಸ.) – ಒಳ್ಳೆಯ ವಿದ್ಯೆ. ಭಯಚ್ಯುತಾಃ— ಅಂಜಿಕೆ ಇಲ್ಲದ. ಭಯಾತ್ ಚ್ಯುತಾಃ ( ಪಂ. ತ. ) ಮುನೀಂದ್ರಾಃ— ಶ್ರೇಷ್ಠ ಮುನಿಗಳು. ಮುನಯಃ ಇಂದ್ರಾಃ ಇವ (ಕ.ಸ.). ಇಂದ್ರ, ಪುಂಗವ, ಋಷಭ, ಸಿಂಹ, ವ್ಯಾಘ್ರ ಮುಂತಾದ ಶಬ್ದಗಳು ನಾಮಗಳ ಮುಂದೆ ಬಂದರೆ ಶ್ರೇಷ್ಠವೆಂಬ ಅರ್ಥ ಕೊಡುತ್ತವೆ. ಉದಾ. ನರಪುಂಗವಃ, ಪುರುಷವ್ಯಾಘ್ರಃ ಮುಂ. ಗಂಭೀರ—ಆಳವಾದ. ತಾಪವಿಚ್ಛಿದಂ—ತಾಪವನ್ನು ಹೋಗಲಾಡಿಸುವ. ತಾಪಂ ವಿಚ್ಛಿನತ್ತಿ ಇತಿ (ಉಪ.ತ.) ತಾಂ। ವಿದ್ಯೆಯ ಪರವಾಗಿ ಅರ್ಥ ಮಾಡುವಾಗ ಮನಸ್ತಾಪ ಎಂದೂ। ನದಿಯ ಪರವಾಗಿ ಅರ್ಥ ಮಾಡುವಾಗ ಬಿಸಿಲಿನ ತಾಪ ಎಂದೂ ಇಟ್ಟುಕೊಳ್ಳಬೇಕು. ಪ್ರಾಪ್ಯ—ಹೊಂದಿ ಪ್ರ+ಆಪ್ (೫ ಪ) ಧಾತುವಿನ ಲ್ಯಬಂತಾವ್ಯಯ. ನಿರ್ವಾಂತಿ

(i) ಸಮಾಧಾನ ಹೊಂದುತ್ತಾರೆ. (ii) ಶಾಂತವಾಗುತ್ತವೆ. ನಿಸ್+ವಾ (೨ಪ) ಧಾತುವಿನ ವ.ತೃ.ಪು.ಬ.ವ. ವನಗಜಾಃ- ಕಾಡಾನೆಗಳು. ವನಸ್ಯ ಗಜಾಃ (ಷ.ತ.ಸ.) ಅಥವಾ ವನ ಭವಾಃ ಗಜಾಃ (ಮಧ್ಯಮಪದ ಲೋಪಿ ತ. ಸ.)

ಟೀಪು- ಇಲ್ಲಿ ಭಯಚ್ಯುತಾಃ ಎಂಬ ವಿಶೇಷಣವು ಮುನಿಗಳಿಗೂ ಹಾಗೂ ಕಾಡಾನೆಗಳಿಗೂ ಅನ್ವಯಿಸುತ್ತದೆ. ಇದರಂತೆ ಗಂಭೀರಾಂ ಮತ್ತು ತಾಪವಿಚ್ಛಿದಂ ಎಂಬ ವಿಶೇಷಣಗಳು ವಿದ್ಯೆ ಹಾಗೂ ನದಿಗೆ ಅನ್ವಯಿಸುತ್ತವೆ.

೪. ಅನ್ವಯ:— ಇತಃ ವನ್ಯೇಭಾಃ ಕೃತನಿಸ್ವನಾಃ ಅಸ್ಯಾಃ ಪಯಃ ಪಿಬಂತಿ। ಇತಃ ಅಮೀ ಮುಕ್ತಾಸಾರಾಃ ಶರದ್ಘನಾಃ ಏನಾಂಪೂರಯಂತಿ।

ಭಾಷಾಂತರ:— ಇತ್ತ ಕಾಡಾನೆಗಳು ಘೀಳಿಸುತ್ತ (ಶಬ್ದ ಮಾಡುತ್ತ) ಈ ನದಿಯ ನೀರನ್ನು ಕುಡಿಯುತ್ತವೆ; ಇತ್ತ (ಧೋ ಧೋ ಎಂದು) ಮಳೆ ಸುರಿಸುವ ಈ ಶರತ್ಕಾಲದ ಮೋಡಗಳು (ನೀರಿನಿಂದ) ಇದನ್ನು (ನದಿಯನ್ನು) ತುಂಬುತ್ತವೆ.

ಟಿಪ್ಪಣಿ:— ಇತಃ- ಇಲ್ಲಿ ಇತ್ತ. ಒಂದುಬದಿಗೆ ಕಾಡಾನೆಗಳು ನೀರು ಕುಡಿಯುತ್ತವೆ; ಇನ್ನೊಂದುಬದಿಗೆ ಮೋಡಗಳು ನದಿಯನ್ನು ಮಳೆಯ ನೀರಿನಿಂದ ತುಂಬುತ್ತವೆ. ವನ್ಯೇಭಾಃ- ಕಾಡಾನೆಗಳು. ವನೇ ಭವಾಃ ವನ್ಯಾಃ (ತದ್ಧಿತ). ವನ್ಯಾಃ ಇಭಾಃ ವನ್ಯೇಭಾಃ (ಕ.ಸ.) ಇಭಃ ಆನೆ, ಕೃತನಿಸ್ವನಾಃ- ಸಪ್ಪಳ ಮಾಡುತ್ತ ಘೀಳಿಸುತ್ತ (ನಿಸ್ವನಃ- ಸಪ್ಪಳ.) ಕೃತಃ ನಿಸ್ವನಃ ಯೈಃ ತೇ (ಬ.ಸ.) ಮುಕ್ತಾಸಾರಾಃ — ಮಳೆ ಸುರಿಸುವ (ಆಸಾರಃ— ಮಳೆ, ಮಳೆಯ ಶೆಳಕು). ಮುಕ್ತಃ ಆಸಾರಃ ಯೈಃ ತೇ (ಬ.ಸ.) ಶರದ್ಘನಾಃ- ಶರತ್ಕಾಲದ ಮೋಡಗಳು. ಶರದಃ ಘನಾಃ (ಷ.ತ.). ಆಶ್ವಿನ ಹಾಗೂ ಕಾರ್ತಿಕ ಮಾಸಗಳಿಗೆ ಕೂಡಿ ಶರದ್‌ಋತು ಎಂದು ಕರೆಯುವರು. ಪೂರಯಂತಿ — ತುಂಬುತ್ತವೆ. ಪೂರ್ (೧೦.ಉ) ಧಾತುವಿನ ವ.ತೃ.ಪು.ಬ.ವ. ಅಮೀಘನಾಃ ಏನಾಂ ಪೂರಯಂತಿ (ಕರ್ತರಿ)— ಅಮೀಭಿಃ ಘನೈಃ ಇಯಂ ಪೂರ್ಯತೇ (ಕರ್ಮಣಿ).

೫. ಅನ್ವಯ:— ತುಂಗೇನ ಅಪಿ ಅಚಲಾತ್ಮನಾ ವಿಜಯಾರ್ಧೇನ ಅಸೋಢಂ ಅಸ್ಯಾಃ ಪ್ರವಾಹಂ ಅಂಭೋಧಿಃ ಗಾಂಭೀರ್ಯಯೋಗತಃ ಧತ್ತೇ।

ಭಾಷಾಂತರ:– ಎತ್ತರವಿದ್ದರೂ ನಿಶ್ಚಲವಾದ ವಿಜಯಾರ್ಧ ಪರ್ವತ ದಿಂದ ಸಹಿಸಲಸಾಧ್ಯವಾದ ಈ ಗಂಗಾನದಿಯ ಪ್ರವಾಹವನ್ನು ಸಮುದ್ರವು ಆಳವಿರುವದರಿಂದ ಧರಿಸಿದೆ.

ಟಿಪ್ಪಣಿ:— ತುಂಗ-ಎತ್ತರವಾದ. ಅಚಲಾತ್ಮನಾ – ನಿಶ್ಚಲವಾದ ಸ್ವರೂಪವುಳ್ಳ. ನ ಚಲಃ ಅಚಲಃ (ನ.ತ.) ಅಚಲಃ ಆತ್ಮಾ ಯಸ್ಯ ಸಃ(ಬ.ಸ) ತೇನ। ವಿಜಯಾರ್ಧೇನ– ವಿಜಯಾರ್ಧ ಎಂಬ (ಹೆಸರುಳ್ಳ) ಪರ್ವತದಿಂದ ಈ ಪರ್ವತದ ಉಲ್ಲೇಖ ಮಹಾಪುರಾಣವನ್ನು ಬಿಟ್ಟು ಬೇರೆಡೆಯಲ್ಲಿ ಬಂದಂತೆ ತೋರುವದಿಲ್ಲ. ಇದರ ಬಗ್ಗೆ ಹೆಚ್ಚಿನ ವಿವರಗಳೂ ಗೊತ್ತಿಲ್ಲ. ಇದೊಂದು ಉನ್ನತವಾದ ಪರ್ವತ. ಅಸೋಢಂ–ಸಹಿಸಲ್ಪಡದ ನ ಸೋಢಃ ಅಸೋಢಃ (ನ.ತ.) ತಂ. ಸೋಢ– ಸಹ್ (೧·ಆ) ಧಾತುವಿನ ಕರ್ಮಣಿ ಭೂ. ಧಾ. ವಿ. ಅಂಭೋಧಿಃ– ಸಮುದ್ರ. ಅಂಭಾಂಸಿ ಧೀಯಂತೇ ಅಸ್ಮಿನ್ ಇತಿ (ಉಪ.ತ.) ಗಾಂಭೀರ್ಯತಃ– ಆಳವಾಗಿರುವದರಿಂದ. ವಿಜಯಾರ್ಧವೆಂಬ ಉನ್ನತ ಪರ್ವತಕ್ಕೂ ಕೂಡ ಸಹಿಸಲಸಾಧ್ಯವಾದ ಗಂಗಾನದಿಯ ದೊಡ್ಡ ಪ್ರವಾಹ ವನ್ನು ಸಮುದ್ರವು ಮಾತ್ರ ಧರಿಸಿದೆ ಎಂದು ಶ್ಲೋಕದ ತಾತ್ಪರ್ಯ.

೬. ಅನ್ವಯ:— ಸ್ವೇನ ಕ್ಷಾರೇಣ ಪಯಸಾ ದಹ್ಯಮಾನಾಂತರಾಶಯಃ ಅಬ್ಧಿಃ ಅಸ್ಯಾಃ ಪಯಃ ಪ್ರವಾಹೇಣ ನೂನಂ ವಿತೃಟ್ ಭವೇತ್।

ಭಾಷಾಂತರ:— ತನ್ನ ಉಪ್ಪು ನೀರಿನಿಂದ ಮನದೊಳಗೆ ಕುದಿಯುವ (ದಾಹವುಳ್ಳ) ಸಮುದ್ರವು ಈ ಗಂಗಾನದಿಯ ನೀರಿನ ಪ್ರವಾಹದಿಂದ ನಿಜ ವಾಗಿಯೂ ನೀರಡಿಕೆ ಇಲ್ಲದ್ದಾಗುವದು (ಸಮಾಧಾನ ಹೊಂದುವದು.)

ಟಿಪ್ಪಣಿ:— ಕ್ಷಾರ— ಉಪ್ಪು. ಪಯಸಾ—ನೀರಿನಿಂದ (ಪಯಸ್ (ನ)–ನೀರು.) ದಹ್ಯಮಾನಾಂತರಾಶಯಃ—ಮನದೊಳಗೆ ಕುದಿಯುವ. ಹೃದಯದಲ್ಲಿ ದಾಹವುಳ್ಳ (ಆಶಯಃ—ಹೃದಯ. ಮನಸ್ಸು. ಅಂತಃಕರಣ.) ಅಂತರ್ಗತಃ ಆಶಯಃ ಅಂತರಾಶಯಃ (ಪ್ರಾದಿ. ಕ. ಸ.) ದಹ್ಯಮಾನಃ ಅಂತರಾಶಯಃ ಯಸ್ಯ ಸಃ (ಬ.ಸ.)ಅಬ್ಧಿಃ—ಸಮುದ್ರ. (ಆಪಃ ಧೀಯಂತೇ ಅಸ್ಮಿನ್ ಇತಿ ಉಪ. ತ.)। ಪಯಃ ಪ್ರವಾಹೇಣ—ನೀರಿನ ಪ್ರವಾಹದಿಂದ ಪಯಸಃ ಪ್ರವಾಹಃ ಪಯಃ ಪ್ರವಾಹಃ (ಷ. ತ. ಸ.) ತೇನ। ನೂನಂ— ನಿಜವಾಗಿಯೂ ನಿಶ್ಚಯವಾಗಿಯೂ ವಿತೃಟ್—ನೀರಡಿಕೆ ಇಲ್ಲದ್ದು. ವಿಗತಾ ತೃಟ್ ಯಸ್ಮಾತ್ ಸಃ ( ಬ. ಸ. ) ತೃಷ್ ( ಸ್ತ್ರೀ )—ನೀರಡಿಕೆ.

ಸಮುದ್ರವು ತನ್ನ ಉಪ್ಪು ನೀರಿನಿಂದ ಮನದೊಳಗೆ ಕುದಿಯುತ್ತದೆ. ಆದರೆ ಈ ಹೃದಯದಾಹವು ಗಂಗಾನದಿಯ ಸಿಹಿನೀರಿನಿಂದ ಶಾಂತವಾಗಿ ಸಮುದ್ರದ ನೀರಡಿಕೆ ಹಿಂಗುತ್ತದೆ, ಸಮುದ್ರವು ತೃಪ್ತಿ ಹೊಂದುತ್ತದೆ ಎಂದು ತಾತ್ಪರ್ಯ.

೭ ಅನ್ವಯ:— ಪ್ರಸನ್ನಾತ್ ಮಾನಸಾತ್ ಇವ ಹಿಮವತಃ ಪದ್ಮಹೃದಾತ್ ಪ್ರಸೂತಾ (ಇಯಂ) ಪ್ರಥಿವ್ಯಾಂ ಪಪ್ರಥೇ। ಶುದ್ಧಜನ್ಮಾ ಪೂಜ್ಯತೇ ಹಿ।

ಭಾಷಾಂತರ:— ನಿರ್ಮಲವಾದ ಮಾನಸ ಸರೋವರವೋ (ಅಥವಾ ನಿರ್ಮಲವಾದ ಮನಸ್ಸೋ) ಎನ್ನುವಂತಿದ್ದ ಹಿಮಾಲಯದ ಪದ್ಮಸರೋವರದಿಂದ ಹುಟ್ಟಿದ ಈ ಗಂಗಾನದಿಯು ಭೂಮಿಯಲ್ಲಿ ಪ್ರಸಿದ್ಧವಾಯಿತು. ಪವಿತ್ರ ಕುಲದಲ್ಲಿ ಹುಟ್ಟಿದವನು ಗೌರವಿಸಲ್ಪಡುತ್ತಾನೆ ಎಂಬದು ಪ್ರಸಿದ್ಧವಿದೆ.

ಟಿಪ್ಪಣಿ:— ಹಿಮಾಲಯ ಪರ್ವತದ ಪದ್ಮಸರೋವರದಿಂದ ಹುಟ್ಟಿದ ಗಂಗಾನದಿಯು ಜಗತ್ತಿನಲ್ಲಿ ಪ್ರಸಿದ್ಧಿ ಪಡೆಯಿತು ಎಂದು ಈ ಶ್ಲೋಕದ ತಾತ್ಪರ್ಯ. ಗಂಗಾನದಿಗೆ ಜನ್ಮಕೊಟ್ಟ ಪದ್ಮಸರೋವರವು ನಿರ್ಮಲವಾದ ಮಾನಸ ಸರೋವರವೋ ಇಲ್ಲವೆ ನಿರ್ಮಲವಾದ ಮನಸ್ಸೋ ಎನ್ನುವಂತೆ ತೋರುತ್ತದೆ. ಇದಕ್ಕೆ ಕಾರಣವೆಂದರೆ, ಆ ಪದ್ಮಸರೋವರವಾದರೂ ಅತ್ಯಂತ ನಿರ್ಮಲವಿದೆ. ಇಷ್ಟೊಂದು ಶುದ್ಧ ಸ್ಥಳದಿಂದ ಹುಟ್ಟಿದ ಗಂಗಾನದಿಯು ಪ್ರಸಿದ್ಧವಾದುದರಲ್ಲಿ ಆಶ್ಚರ್ಯವೇನೂ ಇಲ್ಲ. ಏಕೆಂದರೆ ಶುದ (ಪವಿತ್ರ) ಕುಲದಲ್ಲಿ ಹುಟ್ಟಿದವರು ಜಗತ್ತಿನಲ್ಲಿ ಎಲ್ಲರಿಂದ ಸನ್ಮಾನಿಸಲ್ಪಡುತ್ತಾರೆ ಎಂಬುದು ಸುಪ್ರಸಿದ್ಧವಿದೆ.

ಪ್ರಸನ್ನ:— ಸ್ವಚ್ಛ. ನಿರ್ಮಲ. ಮಾನಸ— ಮಾನಸ ಸರೋವರ ಅಥವಾ ಮನಸ್ಸು. ಹಿಮವತಃ— ಹಿಮಾಲಯದ. ಪದ್ಮಹ್ರದಾತ್— ಪದ್ಮಸರೋವರದಿಂದ. ಹ್ರದಃ—ಮಡು. ಸರೋವರ ಪದ್ಮಾನಾಂ ಹ್ರದಃ ಪದ್ಮಹ್ರದಃ (ಷ. ತ. ಸ.) ತಸ್ಮಾತ್। ಅಥವಾ ಪದ್ಮಯುಕ್ತಃ ಹ್ರದಃ ಪದ್ಮಹ್ರದಃ (ಮಧ್ಯಮಪದಲೋಪೀ ತ. ಸ.)। ತಸ್ಮಾತ್। ಪ್ರಸೂತಾ—ಹುಟ್ಟಿದ. ಪಪ್ರಥೇ—ಪ್ರಸಿದ್ಧವಾಯಿತು. ಪ್ರಥ್ (೧. ಆ. ಧಾತುವಿನ ದ್ವಿ. ಭೂ. ತೃ. ಪು. ಏ. ವ.) **ಶುದ್ಧಜನ್ಮಾ** ಪವಿತ್ರವಾದ ಜನ್ಮವುಳ್ಳ. ಕುಲೀನ. ಉಚ್ಚಕುಲದಲ್ಲಿ ಹುಟ್ಟಿದವ. ಶುದ್ಧವಂಶದಲ್ಲಿ ಜನ್ಮ ತಾಳಿದವ. ಶುದ್ಧಂ ಜನ್ಮ ಯಸ್ಯ ಸಃ (ಬ. ಸ.) **ಪೂಜ್ಯತೇ ಹಿ**—ನಿಜವಾಗಿಯೂ ಸನ್ಮಾನಿಸಲ್ಪಡುತ್ತಾನೆ.

೮. ಅನ್ವಯ:— ವಿಯತಃ ಕ್ಷಿತೌ ಪತಿತಾಂ, ಸ್ವಜಲಪ್ಲವೈಃ ಗೃಹಂ ವಿಷ್ವಕ್ ಆಪ್ಲಾವ್ಯ (ಸ್ಥಿತಾಂ) ಇಮಾಂ ವ್ಯೋಮಾಪಗಾಂ ಗಂಗಾದೇವೀ ಇತಿ ಪ್ರಾಹುಃ ।

ಭಾಷಾಂತರ:— ಆಕಾಶದಿಂದ ಭೂಮಿಯ ಮೇಲೆ ಬಿದ್ದ, ತನ್ನ ನೀರಿನ ಪ್ರವಾಹದಿಂದ (ಹಿಮಾಲಯದಲ್ಲಿದ್ದ ತನ್ನ) ಮನೆಯನ್ನು ಸುತ್ತಲೂ ತೊಯ್ಸಿದ ಈ ಆಕಾಶ ಗಂಗೆಗೆ ಗಂಗಾದೇವೀ ಎಂದು ಅನ್ನುವರು.

ಟಿಪ್ಪಣಿಃ—ವಿಯತಃ–ಆಕಾಶದಿಂದ. ವಿಯತ್ (ನ) ಶಬ್ದದ ಪಂ.ಏ.ವ. ಕ್ಷಿತೌ—ಭೂಮಿಯಲ್ಲಿ ಭೂಮಿಯ ಮೇಲೆ ಪತಿತಾಂ–ಬಿದ್ದ ಪತ್ (೧. ಪ.) ಧಾತುವಿನ ಕರ್ಮಣಿ ಭೂ. ಧಾ. ವಿ. (ಸ್ತ್ರೀ) ದ್ವಿ. ಏ. ವ. ಸ್ವಜಲ ಪ್ಲವೈಃ–ತನ್ನ ನೀರಿನ ಪ್ರವಾಹದಿಂದ ಪ್ಲವಃ–ಮಹಾಪೂರ (*flood*) ಸ್ವಸ್ಯ ಜಲಂ (ಷ. ತ. ಸ) । ತಸ್ಯ ಪ್ಲವಾಃ (ಷ. ತ. ಸ.) ತೈಃ । ಗೃಹಂ–ಮನೆ-ಯನ್ನು. ಗಂಗಾನದಿಯು ಆಕಾಶದಿಂದ ಭೂಮಿಯಮೇಲೆ ಬೀಳಲು ಹಿಮಾ-ಲಯದ ಕೆಲವೊಂದು ಪ್ರದೇಶವು ಆ ನೀರಿನಿಂದ ತೊಯ್ದಿತು. ಈ ತೊಯ್ದ ಭಾಗಕ್ಕೆ ಗಂಗಾದೇವಿಯ ಮನೆ(ಗಂಗಾದೇವೀ ಗೃಹಂ)ಎಂದು ಕರೆಯುವರು. ವಿಷ್ವಕ್–ಎಲ್ಲ ಬದಿಗಳಿಂದ. ಸುತ್ತಲೂ. ಆಪ್ಲಾವ್ಯ – ತೊಯ್ಸಿ. ಆ+ ಪ್ಲು(೧.ಆ)ಧಾ.ಪ್ರಯೋಜಕ ಲ್ಯಬಂತಾವ್ಯಯ. ವ್ಯೋಮಾಪಗಾ=ಆಕಾಶಗಂಗೆ. ವ್ಯೋಮ್ನಃ ಆಪಗಾ ವ್ಯೋಮಾಪಗಾ (ಷ. ತ. ಸ.) [ವ್ಯೋಮನ್ (ನ)— ಆಕಾಶ. ಆಪಗಾ–ನದಿ.] ಗಂಗಾದೇವೀ— ಈ ಶಬ್ದದ ಮುಂದೆ ಗುಪ್ತವಿದ್ದ 'ಇತಿ' ಶಬ್ದವನ್ನು ತೆಗೆದುಕೊಳ್ಳಬೇಕು. [ಈ ತೊಂದರೆ ತಪ್ಪಿಸುವದಕ್ಕಾ-ಗಿಯೇ ಶ್ರೀ. ಎ ಶಾಂತಿರಾಜ ಶಾಸ್ತ್ರಿಗಳು ಗಂಗಾದೇವೀಗೃಹಂ ಎಂಬ ಸಾಮಾಸಿಕ ಪದದ ಪಾಠವನ್ನು ಹಿಡಿದು ಇದಕ್ಕೆ ನಿಮ್ನಾಪಗಾ ಎಂದು ಹೇಳು ವರು ಎಂಬ ಅರ್ಥ ಇಟ್ಟುಕೊಂಡಿದ್ದಾರೆ.]

೯ ಅನ್ವಯ:— ಶಶಾಂಕಕರನಿರ್ಮಲಾಂ ಆ ಸಿಂಧೋಃ ಪ್ರಸೃತಾಂ, ಲೋಕಪಾವನೀಂ ಏನಾಂ ಹಿಮವಾನ್ ಸ್ವಾಂ ಕೀರ್ತಿಂ ಇವ ಬಿಭರ್ತಿ.

ಭಾಷಾಂತರ:— ಹಿಮಾಲಯ ಪರ್ವತವು ತನ್ನ ಕೀರ್ತಿಯನ್ನು ಧರಿಸಿ ದಂತೆ, ಚಂದ್ರನ ಕಿರಣಗಳಂತೆ ಸ್ವಚ್ಛವಾದ, ಸಮುದ್ರದವರೆಗೆ ಹರಿದ, ಜಗ ತ್ತನ್ನು ಪವಿತ್ರಗೊಳಿಸುವ ಈ ಗಂಗಾನದಿಯನ್ನು ಧರಿಸಿದೆ.

ಟಿಪ್ಪಣಿ:— ಶಶಾಂಕಕರನಿರ್ಮಲಾಂ — ಚಂದ್ರನ ಕಿರಣಗಳಂತೆ ಸ್ವಚ್ಛವಾದ, (ಶಶಾಂಕಃ—ಚಂದ್ರ. ಕರಃ—ಕಿರಣ). ಶಶಃ ಅಂಕೇ

ಯಸ್ಯ ಸಃ ಶಶಾಂಕಃ (ಬ. ಸ.) ತಸ್ಯ ಕರಾಃ (ಷ. ತ. ಸ.) ತೇ ಇವ ನಿರ್ಮಲಾ (ಕ. ಸ.) ತಾಂ। ನಿರ್ಗತಃ ಮಲಃ ಯಸ್ಯಾಃ ಸಾ ನಿರ್ಮಲಾ (ಬ. ಸ.) ಆ ಸಿಂಧೋಃ—ಸಮುದ್ರದವರೆಗೆ. ಆ—ವರೆಗೆ, ತನಕ ಸಿಂಧುಃ—(ಪು)—ಸಮುದ್ರ. ಪ್ರಸೃತಾಂ—ಹರಿದ, ಹಬ್ಬಿದ. ಲೋಕಪಾವನೀಂ—ಜಗತ್ತನ್ನು ಅಥವಾ ಜನರನ್ನು ಪವಿತ್ರಗೊಳಿಸುವ, ಲೋಕಸ್ಯ ಪಾವನೀ (ಷ. ತ. ಸ.) ತಾಂ। ಸ್ವಾಂ ಕೀರ್ತಿಂ ಇವ—ತನ್ನ ಕೀರ್ತಿಯಂತೆ ತನ್ನ ಕೀರ್ತಿಯನ್ನು ಧರಿಸಿದಂತೆ. ಬಿಭರ್ತಿ—ಧರಿಸಿದೆ. ಭೃ (೩.ಉ) ಧಾತು ವಿನ ವ. ತೃ. ಪು. ಏ. ವ.

**ಟೀಪು:**— ಹಿಮಾಲಯ ಪರ್ವತದ ಕೀರ್ತಿಯಾದರೂ ಚಂದ್ರನಕಿರಣಗಳಂತೆ ನಿರ್ಮಲವೂ, ಸಮುದ್ರದವರೆಗೆ ಪಸರಿಸಿದುದೂ, ಜಗತ್ತನ್ನು ಪವಿತ್ರಗೊಳಿಸುವದೂ ಇರುವದರಿಂದ ಈ ಶ್ಲೋಕದಲ್ಲಿಯ ಶಶಾಂಕಕರ ನಿರ್ಮಲಾಂ, ಆ ಸಿಂಧೋಃ ಪ್ರಸೃತಾಂ, ಲೋಕಪಾವನೀಂ ಎಂಬ ಪದಗಳನ್ನು ಕೀರ್ತಿಯ ಪರವಾಗಿಯೂ ತೆಗೆದುಕೊಳ್ಳಲು ಬರುತ್ತದೆ. ಆದರೆ ಇದರಲ್ಲಿ ಅಷ್ಟೊಂದು ಸ್ವಾರಸ್ಯವಿಲ್ಲ.

೧೦ ಅನ್ವಯ:— ಇಯಂ (ಜಾಹ್ನವೀ) ತಟವರ್ತಿನಾ ವನರಾಜೀದ್ವಯೇನ, ವಿನೀಲೇನ ಧೃತಶ್ರಿಯಾ ವಾಸಸೋಃ ಯುಗ್ಮೇನ ಇವ ವಿಭಾತಿ।

ಭಾಷಾಂತರ:— ಕಪ್ಪಾದ ಹಾಗೂ ಶೋಭೆಯುಳ್ಳ ವಸ್ತ್ರಗಳ ಜೋಡಿಯಿಂದ ಶೋಭಿಸುವಂತೆ, ಈ ಗಂಗಾನದಿಯು ದಂಡೆಗಳಲ್ಲಿದ್ದ ಗಿಡಗಳ ಎರಡು ಸಾಲುಗಳಿಂದ ಶೋಭಿಸುತ್ತದೆ.

ಟಿಪ್ಪಣಿ:— ತಟವರ್ತಿನಾ—ದಂಡೆಗಳಲ್ಲಿದ್ದ. ತಟೇ (ತಟಯೋಃ ವಾ) ವರ್ತತೇ ಇತಿ ತಟವರ್ತಿ (ಉಪ. ತ.) ತೇನ। ತಟಃ (ಟಂ)—ದಂಡೆ, ವನರಾಜೀದ್ವಯೇನ—ಗಿಡಗಳ ಎರಡುಸಾಲುಗಳಿಂದ ವನರಾಜೀ—ವನಸ್ಯ ರಾಜೀ) ಗಿಡಗಳ ಗುಂಪು ಇಲ್ಲವೆ ಗಿಡಗಳ ಸುದೀರ್ಘವಾದ ಸಾಲು, ವನರಾಜ್ಯೋಃ ದ್ವಯಂ ವನರಾಜೀದ್ವಯಂ (ಷ. ತ. ಸ.) ತೇನ। **ವಿಭಾತಿ**—ಶೋಭಿಸುತ್ತದೆ. ಪಠ್ಯಪುಸ್ತಕದಲ್ಲಿ ಬಿಭರ್ತಿ ಎಂಬ ಪಾಠವಿದೆ. ಆದರೆ ಬಿಭರ್ತಿ (ಧರಿಸುತ್ತದೆ) ಎಂಬ ಪಾಠ ಇಟ್ಟುಕೊಂಡರೆ ಅರ್ಥ ಕೂಡುವದಿಲ್ಲ. ಆದ್ದರಿಂದ ವಿಭಾತಿ ಎಂಬ ಪಾಠ ಇಟ್ಟುಕೊಂಡೇ ನಾವು ಭಾಷಾಂತರ ಕೊಟ್ಟಿದ್ದೇವೆ. ಮೇಲಾಗಿ ಶ್ರೀಮಾನ್ ಮಣಿಯಂಗೂಡು ಕೃಷ್ಣಯ್ಯ ಗೌಡರವರ

(ಮೈಸೂರ) ಇವರಿಂದ ಪ್ರಕಟಿಸಲ್ಪಟ್ಟ ಮಹಾಪುರಾಣದಲ್ಲಿ ವಿಭಾತಿ ಎಂಬ ಪಾಠವೇ ಇದೆ. ವಿನೀಲೇನ—ಹೆಚ್ಚಾಗಿ ಕಪ್ಪು ಬಣ್ಣವುಳ್ಳ, ವಿಶೇಷೇಣ ನೀಲಂ ವಿನೀಲಂ। ತೇನ। ಧೃತಶ್ರಿಯಾ ಶೋಭೆಯುಳ್ಳ, ಸೌಂದರ್ಯವುಳ್ಳ. ಧೃತಾ ಶ್ರೀಃ ಯೇನ ತತ್ ಧೃತಶ್ರಿ (ಬ.ಸ.) ತೇನ। ವಾಸಸೋಃ ಯುಗ್ಮೇನ— ವಸ್ತ್ರಗಳ ಜೋಡಿಯಿಂದ. ವಾಸಸ್—ಬಟ್ಟೆ, ಅರಿವೆ. ಯುಗ್ಮಂ— (ಯುಗಂ, ಯುಗಲಂ) ಜೋಡಿ. ಸ್ತ್ರೀಯು ಕರೇಬಣ್ಣದ ಎರಡು ವಸ್ತ್ರಗಳಿಂದ ಶೋಭಿಸುವಂತೆ ಗಂಗಾನದಿಯು ದಟ್ಟವಾದ ಗಿಡಗಳ ಎರಡು ಸಾಲುಗಳಿಂದ ಶೋಭಿಸುತ್ತದೆ ಎಂದು ಶ್ಲೋಕದ ತಾತ್ಪರ್ಯ.

**ಪುಟ ೩೯.** ೧೧. ಅನ್ವಯ:— ಇಯಂ ಸ್ವತಟಾಶ್ರಯಿಣೀಂ ಕಲಸ್ವನಾಂ ಅಂಭೋಜರಜಃಪಿಂಜರವಿಗ್ರಹಾಂ ಹಂಸಮಾಲಾಂ ಕಾಂಚೀಂ ಇವ ಧತ್ತೇ।

ಭಾಷಾಂತರ:— ನಡುಪಟ್ಟಿಯನ್ನು ಧರಿಸುವಂತೆ, ಈ ಗಂಗಾನದಿಯು, ತನ್ನ ದಂಡೆಯನ್ನಾಶ್ರಯಿಸಿದ, ಅಸ್ಪಷ್ಟ ಹಾಗೂ ಮಧುರವಾದ ಸಪ್ಪಳ ಮಾಡುವ, ಕಮಲಗಳ ಹುಡಿಯಿಂದ ದೇಹವೆಲ್ಲ ಹಳದೀಬಣ್ಣದ್ದಾದ, ಹಂಸ- ಪಕ್ಷಿಗಳ ಮಾಲಿಕೆಯನ್ನು (ಸಾಲು), ಧರಿಸಿದೆ.

ಟಿಪ್ಪಣಿ:— ಸ್ತ್ರೀಯು ಟೊಂಕದಲ್ಲಿ ಪಟ್ಟಿಯನ್ನು ಧರಿಸುವಂತೆ ಈ ಗಂಗಾನದಿಯಾದರೂ ಹಂಸಪಕ್ಷಿಗಳ ಸಾಲನ್ನು ಧರಿಸಿದೆ ಎಂದು ಶ್ಲೋಕದ ತಾತ್ಪರ್ಯ.

ಇಯಂ (ಗಂಗಾ) ಹಂಸಮಾಲಾಂ ಕಾಂಚೀಂ ಇವ ಧತ್ತೇ (ಪಟ್ಟಿಯನ್ನು ಧರಿಸುವಂತೆ ಈ ಗಂಗಾನದಿಯು ಹಂಸಪಕ್ಷಿಗಳ ಸಾಲನ್ನು ಧರಿಸಿದೆ) ಎಂಬುದು ವಾಕ್ಯದ ಮುಖ್ಯಾಂಶ. ಸ್ವತಟಾಶ್ರಯಿಣೀಂ, ಕಲಸ್ವನಾಂ, ಅಂಬೋಜರಜಃ ಪಿಂಜರವಿಗ್ರಹಾಂ ಎಂಬುವು ಹಂಸಮಾಲಾಂ ಶಬ್ದಕ್ಕೆ ವಿಶೇಷಣಗಳಾಗಿವೆ.

ಇಯಂ ಧತ್ತೇ — ಈ ಗಂಗಾನದಿಯು ಧರಿಸಿದೆ. ಧತ್ತೇ — ಧಾ (೩. ಉ) ಧಾತುವಿನ ವ. ತೃ. ಪು. ಏ. ವ. ಕಾಂಚೀ — ಪಟ್ಟಿ. ಸ್ವತ್ತಟಾಶ್ರಯಿಣೀಂ — ತನ್ನ ದಂಡೆಯನ್ನು ಆಶ್ರಯಿಸಿದ. ಸ್ವಸ್ಯಾಃ ತಟಂ ಸ್ವತಟಂ (ಷ. ತ. ಸ.)। ಸ್ವತಟಂ ಆಶ್ರಯತೇ ಇತಿ ಸ್ವತಟಾಶ್ರಯಿಣೀ (ಉಪ. ತ.) ತಾಂ। ಕಲಸ್ವನಾಂ — ಅಸ್ಪಷ್ಟ ಹಾಗೂ ಮಧುರವಾದ

ಸಪ್ಪಳಮಾಡುವ. ಸ್ವನಃ – ಸಪ್ಪಳ. ಕಲ — ಅಸ್ಪಷ್ಟ ಹಾಗೂ ಮಧುರವಾದ *sweet and indistinct*. ಅಂಭೋಜರಜಃ ಪಿಂಜರ ವಿಗ್ರಹಾಂ — ಕಮಲಗಳ ಹುಡಿಯಿಂದ ಮೈಯೆಲ್ಲ ಹಳದೀ ಬಣ್ಣದ್ದಾದ. ಅಂಭೋಜಂ — ಕಮಲ. ರಜಸ್ (ನ) — ಹುಡಿ, ಪರಾಗ. ಪಿಂಜರ – ಹಳದೀ. ವಿಗ್ರಹಃ — ದೇಹ. ಅಂಭಸಿ ಜಾಯತೇ ಇತಿ ಅಂಭೋಜಂ (ಉಪ. ತ.) ತೇಷಾಂ ರಜಾಂಸಿ । ಅಂ ........ ಸಿ (ಷ. ತ. ಸ.) ತೈಃ ಪಿಂಜರಃ ವಿಗ್ರಹಃ ಯಸ್ಯಾಃ ಸಾ (ಬ. ಸ.) ಅಂಬೋಜರಜಃ ಪಿಂಜರ ವಿಗ್ರಹಾ (ಬ. ಸ.) ತಾಂ । ಬಿಳೇ ಬಣ್ಣದ ಹಂಸಪಕ್ಷಿಗಳ ಮೇಲೆ ಕಮಲ ಗಳ ಹುಡಿ ಬಿದ್ದುದರಿಂದ ಅವುಗಳ ಮೈಬಣ್ಣ ಹಳದೀ ಆಗಿತ್ತು. ಹೀಗಾಗಿ ಅವು ಭಂಗಾರದ ನಡುಪಟ್ಟಿಯಂತೆ ತೋರುತ್ತವೆ, ಹಂಸಮಾಲಾಂ — ಹಂಸಪಕ್ಷಿಗಳ ಸಾಲನ್ನು ಹಂಸಾನಾಂ ಮಾಲಾ (ಷ. ತ. ಸ.) ತಾಂ ।

೧೨. ಅನ್ವಯ :— ಇಯಂ ನದೀ ಸ್ವಚ್ಛಮೃಣಾಲಶಕಲಾಮಲಾಃ ಸಖೀಃ ಸ್ವಸಾತ್ ಕೃತ್ಯ ಸಂಬಿಭರ್ತಿ । ತಾದೃಶಾಂ ಸಖ್ಯಂ ಶ್ಲಾಘ್ಯಂ ಹಿ ।

ಭಾಷಾಂತರ :— ಈ ಗಂಗಾನದಿಯು, ಸ್ವಚ್ಛವಾದ ಕಮಲದ ದೇಟಿನ ತುಣುಕುಗಳಂತೆ ನಿರ್ಮಲವಾದ, (ನದಿಗಳೆಂಬ) ಗೆಳತಿಯರನ್ನು ತನ್ನಲ್ಲಿ ಸೇರಿಸಿಕೊಂಡು (ತನ್ನವರನ್ನಾಗಿ ಮಾಡಿಕೊಂಡು, ಅವರನ್ನು) ಚೆನ್ನಾಗಿ ಧರಿಸಿರುತ್ತದೆ. ಅಂಥವರ (ಗಂಗಾನದಿಯಂಥವರ) ಗೆಳೆತನವು ನಿಜವಾಗಿಯೂ ಸ್ತುತ್ಯವಾದುದು.

ಟೀಕಾ :— ಇಯಂ ನದೀ — ಈ ಗಂಗಾನದಿಯು. ಸ್ವಚ್ಛಮೃಣಾಲ ಶಕಲಾಮಲಾಃ — ಸ್ವಚ್ಛವಾದ ಕಮಲದ ದೇಟಿನ ತುಣುಕುಗಳಂತೆ ನಿರ್ಮಲ ವಾದ. ಸ್ವಚ್ಛ — ಸ್ವಚ್ಛವಾದ ಮೃಣಾಲಃ (ಲಂ) — ಕಮಲದ ದೇಟು ಶಕಲಃ — ತುಣುಕು. ನಿರ್ಮಲ — ಸ್ವಚ್ಛವಾದ. ಸ್ವಚ್ಛಃ ಮೃಣಾಲಃ ಸ್ವಚ್ಛಮೃಣಾಲಃ ( ಕ. ಸ. ) ತಸ್ಯ ಶಕಲಾಃ ( ಷ. ತ. ಸ. ) ತೇ ಇವ ಅಮಲಾಃ ಸ್ವಚ್ಛ ........ ಮಲಾಃ ( ಕ. ಸ. ) ಅವಿದ್ಯಮಾನಃ ಮಲಃ ಯಸಾಂ ತಾ ಅಮಲಾಃ (ಬ.ಸ.) ಸಖೀಃ — ಗೆಳತಿಯರನ್ನು ಸಖೀ – (ಸ್ತ್ರೀ.) ಗೆಳತಿ. ಸ್ವಸಾತ್ ಕೃತ್ಯ — ಸಂಪೂರ್ಣವಾಗಿ ತನ್ನವನ್ನಾಗಿ ಮಾಡಿ ಕೊಂಡು ಎಂದರೆ ಗಂಗಾನದಿಯು ಯಮುನಾ ಮುಂತಾದ ನದಿಗಳೆಂಬ ಗೆಳತಿಯರನ್ನು ತನ್ನಲ್ಲಿ ಸೇರಿಸಿಕೊಳ್ಳುತ್ತದೆ. ಆ ನದಿಗಳನ್ನು ಸಂಪೂರ್ಣ

ವಾಗಿ ತನ್ನವನ್ನಾಗಿ ಮಾಡಿಕೊಳ್ಳುತ್ತದೆ. ತಾನು ಬೇರೆ; ತನ್ನ ಗೆಳತಿಯರು ಬೇರೆ ಎಂಬ ಭೇದ ಭಾವವನ್ನು ಕಿತ್ತೊಗೆಯುತ್ತದೆ. ಹೀಗಾಗಿ ಆ ನದಿಗಳಾದರೂ ಗಂಗಾನದಿಗೆ ಕೂಡಿದ ನಂತರ, ಪವಿತ್ರವಾಗುತ್ತವೆ. ಅಂತೆಯೇ ಗಂಗಾನದಿಯಂಥವರ ಗೆಳೆತನವು ಸ್ತುತ್ಯವೆಂದು ಕವಿ ಉದ್ಗಾರ ತೆಗೆದಿದ್ದಾನೆ. ತಾದೃಶಾಂ — ಅಂಥವರ. ತಾದೃಶ್ ಶಬ್ದದ (ಷ. ಬ. ವ) ಸಖ್ಯಂ — ಗೆಳೆತನ. ಶ್ಲಾಘ್ಯ — ಶ್ಲಾಘನೀಯವಾದುದು. ಪ್ರಶಂಸನೀಯವಾದುದು ಸ್ತುತ್ಯವು. ಶ್ಲಾಘ್ (೧. ಆ) ಧಾತುವಿನ ಕರ್ಮಣಿ ವಿಧ್ಯರ್ಥ ಧಾ. ಸಾ. ವಿ. (ನ.) ಪ್ರ. ಏ. ವ.

೧೩. ಅನ್ವಯ:— ರಾಜಹಂಸೈಃ ಸೇವ್ಯಾ ಲಕ್ಷ್ಮೀಃ ಇವ ರಾಜಹಂಸೈಃ ಸೇವ್ಯಾ ಇಯಂ (ಜಾಹ್ನವೀ) ಜಗತಃ ಪ್ರೀತಿಂ ತನ್ವತೀ, ಅಪರೈಃ ಅಲಂಘ್ಯಮಹಿಮಾ (ಚ. ಸತೀ) ಶೋಭತೇ ।

ಭಾಷಾಂತರ:— ಶ್ರೇಷ್ಠ ರಾಜರಿಗೆ ಆಶ್ರಯಿಸಲು ಯೋಗ್ಯವಾದ ಸಂಪತ್ತು ಜಗತ್ತಿಗೆ ಆನಂದವನ್ನುಂಟುಮಾಡುವಂತಹದೂ ಮತ್ತು ಬೇರೆಯವರಿಂದ ಮಿಕ್ಕಲಸಾಧ್ಯವಾದ ಮಹಿಮೆಯುಳ್ಳದೂ ಆಗಿ ಶೋಭಿಸುವಂತೆ, ರಾಜಹಂಸ ಪಕ್ಷಿಗಳಿಗೆ ಆಶ್ರಯಿಸಲು ಯೋಗ್ಯವಾದ ಈ ಗಂಗಾನದಿಯು ಜಗತ್ತಿಗೆ ಸಂತೋಷವನ್ನುಂಟುಮಾಡುವಂತಹದೂ, ಬೇರೆಯವರಿಗೆ ದಾಟಲಸಾಧ್ಯವಾದ ಮಹಿಮೆಯುಳ್ಳದೂ ಆಗಿ ಶೋಭಿಸುತ್ತದೆ.

ಟಿಪ್ಪಣಿ:— ರಾಜಹಂಸೈಃ ಸೇವ್ಯಾ ಲಕ್ಷ್ಮೀಃ ಇವ, ರಾಜಹಂಸೈಃ ಸೇವ್ಯಾ ಇಯಂ ವಿರಾಜತೇ. ( ಶ್ರೇಷ್ಠರಾಜರಿಗೆ ಆಶ್ರಯಿಸಲು ಯೋಗ್ಯವಾದ ಸಂಪತ್ತಿನಂತೆ ರಾಜಹಂಸಪಕ್ಷಿಗಳಿಗೆ ಆಶ್ರಯಿಸಲು ಯೋಗ್ಯವಾದ ಈ ಗಂಗಾನದಿಯು ಶೋಭಿಸುತ್ತದೆ ) ಎಂಬುದು ವಾಕ್ಯದ ಮುಖ್ಯಾಂಶ. ವಾಕ್ಯದಲ್ಲಿಯ ಉಳಿದ ಪದಗಳು ಸಂಪತ್ತು ಮತ್ತು ಗಂಗಾನದಿಗಳೆರಡಕ್ಕೂ ಅನ್ವಯಿಸುತ್ತವೆ. ಆದರೆ ಅರ್ಥದಲ್ಲಿ ವಿಶೇಷ ಅಂತರವಿಲ್ಲ.

ರಾಜಹಂಸೈಃ—(i) ಶ್ರೇಷ್ಠ ರಾಜರಿಂದ ರಾಜಾನಃ ಹಂಸಾಃ ಇವ (ಕ. ಸ.) ತೈಃ (ii) ರಾಜಹಂಸಪಕ್ಷಿಗಳಿಂದ ಹಂಸಾನಾಂ ರಾಜಾನಃ ರಾಜಹಂಸಾಃ (ಷ. ತ. ಸ.) ತೈಃ। ಸೇವ್ಯಾ— ಆಶ್ರಯಿಸಲು ಯೋಗ್ಯವಾದ ***fit to de resorted*** ಜಗತಃ ಪ್ರೀತಿಂ ತನ್ವತೀ— ಜಗತ್ತಿಗೆ ಪ್ರೀತಿಯನ್ನುಂಟುಮಾಡುವ ಜಗತ್ತನ್ನು ಸಂತೋಷಗೊಳಿಸುವ. ತನ್ವತೀ— ತನ್(೮ಉ)

ಧಾತುವಿನ ವ. ಧಾ. ವಿ. (ಸ್ತ್ರೀ) ಪ್ರ. ಏ. ವ. ಅಪರೈಃ ಅಲಂಘ್ಯಮಹಿಮಾ— ಬೇರೆಯವರಿಂದ ದಾಟಲಸಾಧ್ಯವಾದ ಮಹಿಮೆಯುಳ್ಳ ಎಂದರೆ ಬೇರೆ ಯವರಿಗೆ ಇದರ ಮಹಿಮೆಯನ್ನು ಮೀರಲು ಸಾಧ್ಯವಿಲ್ಲ. ನ ಲಂಘ್ಯಃ ಅಲಂಘ್ಯಃ (ನ ತ.) ಅಲಂಘ್ಯಃ ಮಹಿಮಾ ಯಸ್ಯಾಃ ಸಾ ಅಲಂಘ್ಯಮಹಿಮಾ (ಬ. ಸ.) ಲಂಘ್ (೧೦.ಉ)— ದಾಟು ಮೀರು. ಲಂಘ್ಯ ಎಂಬುದು ಇದರ ಕರ್ಮಣಿ ವಿಧ್ಯರ್ಥ ಧಾ. ವಿ.

೧೪ ಅನ್ವಯ: – ಇತಿ ಆವಿಷ್ಕೃತ ಸಂಶೋಭಾ ಇಯಂ ಮನೋಹರಾ ಜಾಹ್ನವೀ ಹಿಮವದ್ಗಿರಿಣಾ ಅಂಭೋಧೇಃ ಕಂಠಿಕಾ ಇತಿ ಪ್ರಹಿತಾ ಕಿಮು!

ಭಾಷಾಂತರ:— ಈ ರೀತಿಯಾಗಿ ತನ್ನ ಸೌಂದರ್ಯವನ್ನು ಪ್ರಕಟ ಗೊಳಿಸಿದ ಈ ಸುಂದರವಾದ ಗಂಗಾನದಿಯನ್ನು ಹಿಮಾಲಯ ಪರ್ವತವು ಕಂಠಹಾರ (ಎಂಬ ಕಾಣಿಕೆ) ಎಂದು ಸಮುದ್ರದೇವಗೆ ಕಳಿಸಲಿಲ್ಲವೇ ?

ಟಿಪ್ಪಣಿ:— ಆವಿಷ್ಕೃತಸಂಶೋಭಾ – ಸೌಂದರ್ಯವನ್ನು ಪ್ರಕಟಗೊಳಿಸಿದ. ಸಮ್ಯಕ್ ಶೋಭಾ ಸಂಶೋಭಾ ( ಕ.ಸ. ) ಆವಿಷ್ಕೃತಾ ಸಂಶೋಭಾ ಯಯಾ ಸಾ (ಬ.ಸ.) ಮನೋಹರಾ – ಸುಂದರವಾದ ಮನಸಃ ಹರಾ (ಷ. ತ.) ಜಾಹ್ನವೀ — 'ಜಹ್ನುರಾಜನ ಮಗಳಾದ ಗಂಗಾನದಿ ಜಹ್ನೋಃ ಅಪತ್ಯಂ ಸ್ತ್ರೀ ( ತದ್ಧಿತ ) ಹಿಮವದ್ಗಿರಿಣಾ— ಹಿಮಾಲಯ ಪರ್ವತದಿಂದ ಹಿಮಂ ಅಸ್ಯ ಅಸ್ತಿ ಇತಿ ಹಿಮವಾನ್ (ತದ್ಧಿತ) ಹಿಮವಾನ್ ಗಿರಿಃ ಹಿಮವದ್ಗಿರಿಃ (ಕ. ಸ.) ಕಂಠಿಕಾ—ಕಂಠಾಭರಣ ಕಂಠಹಾರ ಅಂಭೋಧೇ:— ಸಮುದ್ರಕ್ಕೆ ಪ್ರಹಿತಾ ಕಿಮು— ಕಳಿಸಲ್ಪಡಲಿಲ್ಲವೇ ಪ್ರಹಿತಾ—ಪ್ರ+ಹಿ (೫.ಪ) ಧಾತುವಿನ ಕರ್ಮಣಿ ಭೂ. ಧಾ. ವಿ. (ಸ್ತ್ರೀ) ಪ್ರ. ಏ. ವ. ಕಿಮು ಸಂಶಯ ವ್ಯಕ್ತಪಡಿಸುವ ಪ್ರಶ್ನಾರ್ಥಕ ಅವ್ಯಯ. ಉದಾ:— ಕಿಮು ವಿಷ ವಿಸರ್ಪಃ ಕಿಮು ಮದಃ। ಇಯಂ ಹಿಮವದ್ಗಿರಿಣಾ ಅಂಭೋಧೇಃ ಪ್ರಹಿತಾ ( ಕರ್ಮಣಿ )— ಇಮಾಂ ಹಿಮವದ್ಗಿರಿಃ ಅಂಭೋಧೇಃ ಪ್ರಹಿತವಾನ್ (ಕರ್ತರಿ).

## EXERCISES.

**ಅಭ್ಯಾಸಕ್ಕಾಗಿ ಪ್ರಶ್ನೆಗಳು:—**

೧. **ಕನ್ನಡಕ್ಕೆ ಪರಿವರ್ತಿಸಿರಿ:—** (೧) ಶ್ಲೋಕಗಳು ೩, ೪, ೫. (೨) ಶ್ಲೋಕಗಳು ೭, ೮. (೩) ಶ್ಲೋಕಗಳು ೧೦-೧೩.

೨. ವಿಗ್ರಹಿಸಿ ಸಮಾಸಗಳ ಹೆಸರು ಹೇಳಿರಿ— ವನ್ಯೇಭಾಃ; ಮುಕ್ತಾಸಾರಾಃ; ಮಹಾನದೀ; ಮುನೀಂದ್ರಾಃ; ವಿತೃಟ್; ಶುದ್ಧಜನ್ಮಾ; ಅಲಂಘ್ಯಮಹಿಮಾ; ಸದ್ವಿದ್ಯಾ.

೩. ರೂಪ ಗುರುತಿಸಿರಿ:—ಪೂರಯಂತಿ; ವಿಘುನ್ವತೀ; ಆಪ್ಲಾವ್ಯ; ಧತ್ತೇ; ತನ್ವತೀ; ಪಪ್ರಥೇ; ತಾದೃಶಾಂ; ಪ್ರಹಿತಾ;

೪. ಟಿಪ್ಪಣಿ ಬರೆಯಿರಿ:— ಜಾಹ್ನವೀ; ದೇವನಿಮ್ನಗಾ; ವಿಜಯಾರ್ಧಃ.

೫. ವಾಕ್ಯಗಳಲ್ಲಿ ಉಪಯೋಗಿಸಿರಿ :— ನೂನಂ; ಕಿಮು; ಅಪಿ; ಇತಃ........ಇತಃ।

೬. ಪ್ರಯೋಗ ಬದಲಿಸಿರಿ:—(i) ಅಮೀ ಘನಾಃ ಏನಾಂ ಪೂರಯಂತಿ । (ii) ಇಯಂ ಹಿಮವದ್ಗಿರಿಣಾ ಅಂಭೋಧೇಃ ಪ್ರಹಿತಾ । (iii) ಅಂಭೋಧಿಃ ಅಸ್ಯಾಃ ಪ್ರವಾಹಂ ಧತ್ತೇ ।

೭. ಸಂಧಿ ಬಿಡಿಸಿರಿ :— ನಿರ್ವಾಂತ್ಯೇತೇ; ಪ್ರವಾಹಮಂಭೋಧಿರ್ಧತ್ತೇ; ತುಂಗೇನಾಪ್ಯಚಲಾತ್ಮನಾ;

## ೪. ಹಿಮಾಲಯಃ

೧. ಕವಿ ಹಾಗೂ ಕಾವ್ಯ:— ಈ ಪಾಠವನ್ನು ಭಗವಜ್ಜಿನಸೇನಾಚಾರ್ಯರಿಂದ ವಿರಚಿತವಾದ ಪೂರ್ವಪುರಾಣ (ಮಹಾಪುರಾಣ)ದ ೩೨ನೆಯ ಪರ್ವದಿಂದ ಆಯ್ದುಕೊಳ್ಳಲಾಗಿದೆ. ವಿವರಗಳಿಗಾಗಿ ಪದ್ಯಭಾಗದ ೩ನೇ ಪಾಠ ನೋಡಿರಿ.

ಕಥಾಸಂದರ್ಭ:— ದಿಗ್ವಿಜಯಕ್ಕಾಗಿ ಹೊರಟ ಭರತರಾಜನು ಸಂಚರಿಸುವಾಗ ದಾರಿಯಲ್ಲಿ ಹಿಮಾಲಯಪರ್ವತವು ಅವನ ದೃಷ್ಟಿಗೆ ಬಿದ್ದಿತು. ರಾಜನು ಆ ಹಿಮಾಲಯ ಪರ್ವತವನ್ನು ದಿಟ್ಟಿಸಿ ನೋಡಲಾರಂಭಿಸಿದನು. ಜಾಣ ಸಾರಥಿಯು ರಾಜನ ಮನೋಭಾವವನ್ನರಿತು ರಥವನ್ನು ನಿಲ್ಲಿಸಿದನು ಹಾಗೂ ರಾಜನಿಗೋಸ್ಕರ ಹಿಮಾಲಯವನ್ನು ವರ್ಣಿಸಲಾರಂಭಿಸಿದನು.

**ಪಾಠದ ಸಾರಾಂಶ:—** ಕುಲಪರ್ವತಗಳಲ್ಲಿ ಶ್ರೇಷ್ಠವಾದ ಹಿಮಾಲಯವು ಬಹಳ ಎತ್ತರವಿದೆ. ಅದನ್ನು ಏರಲು ಇಲ್ಲವೆ ದಾಟಲು ಆಗುವದಿಲ್ಲ. ಅದರಲ್ಲಿ ಹೂಬಿಟ್ಟ ಅನೇಕ ಗಿಡಗಳೂ, ಸುಂದರವಾದ ನದಿಕೊಳ್ಳಗಳೂ, ಮೋಹಕವಾದ ಲತಾಮಂಟಪಗಳೂ ಇವೆ. ಅಂತೆಯೇ ಅದರ ಶೋಭೆಯಿಂದ ಆಕರ್ಷಿತರಾದ ಸಿದ್ಧ, ವಿದ್ಯಾಧರ ಮೊದಲಾದ ದೇವಗಣದವರು ಹಿಮಾಲಯದಲ್ಲಿಯೇ ವಾಸಮಾಡಿಕೊಂಡಿದ್ದಾರೆ. ದೇವತೆಗಳು ಕೂಡ ಅಪ್ಸರಾಗಣದಿಂದ ಕೂಡಿಕೊಂಡು ವಿಹಾರಕ್ಕಾಗಿ ಈ ಪರ್ವತಕ್ಕೆ ಬರುತ್ತಾರೆ ಹಾಗೂ ಅದರ ಅಂದವಾದ ಲತಾಮಂಟಪಗಳಲ್ಲಿ ಸ್ವಚ್ಛಂದವಾಗಿ ಕ್ರೀಡಿಸುತ್ತಾರೆ. ಒಟ್ಟಿನ ಮೇಲೆ, ಹಿಮಾಲಯದ ಶೋಭೆ ಸದಾಕಾಲ ಅಚ್ಚಳಿಯದೆ ಹಾಗೇ ಉಳಿಯುತ್ತದೆ. ಅದು ನಂದನವನದ ಶೋಭೆಯನ್ನು ಅಣಕಿಸುವಂತೆ ತೋರುತ್ತದೆ. ಪರ್ವತದ ಶಿಖರಗಳಾದರೋ ಬಹಳ ಎತ್ತರವಿವೆ. ಇದರ ಒಂದು ಶಿಖರದಲ್ಲಿ ಪದ್ಮಸರೋವರವಿದೆ. ಇದರಿಂದ ಗಂಗಾ, ಸಿಂಧೂ ಮತ್ತು ರೋಹಿತಾಸ್ಯಾ ೩ ಮಹಾನದಿಗಳು ಹುಟ್ಟಿವೆ. ಈ ೩ ನದಿಗಳು ಪ್ರಭುಶಕ್ತಿ, ಉತ್ಸಾಹಶಕ್ತಿ, ಮಂತ್ರಶಕ್ತಿಗಳನ್ನು ಹೋಲುವದರಿಂದ, ಹಿಮಾಲಯವು ಈ ನದಿಗಳ ಮೂಲಕ ತನ್ನ ಅರಸೊತ್ತಿಗೆಯನ್ನು ವ್ಯಕ್ತಗೊಳಿಸುತ್ತಿದೆಯೋ ಎನ್ನುವಂತೆ ತೋರುತ್ತದೆ. ಮಹಾನದಿಗಳಲ್ಲದೆ ಬೇರೆ ಸಣ್ಣ ಸಣ್ಣ ನದಿಗಳೂ ಹಿಮಾಲಯದಲ್ಲಿ ಹುಟ್ಟಿವೆ. ಈ ನದಿಗಳೆಂಬ ನಾಲಿಗೆಯನ್ನು ಚಾಚಿದ ಹಿಮಾಲಯವು ಸಮುದ್ರವನ್ನು ಕುಡಿಯುವದೋ ಎನ್ನುವಂತೆ ಭಾಸವಾಗುತ್ತದೆ. ಪರ್ವತದ ಎತ್ತರ ೧೦೦ ಯೋಜನವಿದೆ. ಹಾಗೂ ೧೦೦ ಯೋಜನದಷ್ಟೇ ಅದು ಪಸರಿಸಿದೆ. ಆದ್ದರಿಂದ ಇದು ಭೂಮಿಯನ್ನು ಅಳೆಯುವ ಅಳತೆಗೋಲೋ ಇಲ್ಲವೆ ಭೂಮಿಯ ಕಿರೀಟವು ಮೇಲೆ ಬಂದಿದೆಯೋ ಎನ್ನುವಂತೆ ತೋರುತ್ತದೆ. ಈ ರೀತಿಯಾಗಿ ಹಿಮಾಲಯಪರ್ವತವು ಭೂಮಿಗೆ, ಶಾಶ್ವತವಾದ ಏಕಮೇವ ಅಲಂಕಾರವಾಗಿದೆ.

## ಅನ್ವಯ, ಭಾಷಾಂತರ ಹಾಗೂ ಟೀಕೆ-ಟಿಪ್ಪಣಿಗಳು.

### हिमालयः

### ೪. ಹಿಮಾಲಯಃ

**ಪುಟ ೪೦.**

೧ ಅನ್ವಯ:—ಉತ್ತುಂಗಃ ಸತತಂ ಶ್ರಿಯಾ ಸಂಗತಃ, ಕುಲಕ್ಷೋಣೀಭೃತಾಂ ಧುರ್ಯಃ ಅಯಂ ಹಿಮವಾನ್ ಭೂಭೃದನುಕ್ರಿಯಾಂ ಧತ್ತೇ।

ಭಾಷಾಂತರ:— ಎತ್ತರವಾದ, ಯಾವಾಗಲೂ ಶೋಭೆಯುಳ್ಳ, ಕುಲ ಪರ್ವತಗಳಲ್ಲಿ ಶ್ರೇಷ್ಠವಾದ ಈ ಹಿಮಾಲಯು ಪರ್ವತವು (ಉನ್ನತನೂ, ಯಾವಾಗಲೂ ಸಂಪದ್ಯುಕ್ತನೂ, ಕುಲೀನ ಅರಸರಲ್ಲಿ ಶ್ರೇಷ್ಠನೂ ಆದ) ರಾಜನ ಅನುಕರಣೆ ಮಾಡುತ್ತದೆ.

ಟಿಪ್ಪಣಿ:— ಅಯಂ ಹಿಮವಾನ್ ಭೂಭೃದನುಕ್ರಿಯಾಂ ಧತ್ತೇ (ಈ ಹಿಮಾಲಯವು ರಾಜನ ಅನುಕರಣೆ ಮಾಡುತ್ತದೆ.) ಎಂಬದು ವಾಕ್ಯದ ಮುಖ್ಯಾಂಶ. ಹಿಮವಾನ್– ಹಿಮಂ ಅಸ್ಯ ಅಸ್ತಿ ಇತಿ ಹಿಮವಾನ್ (ತದ್ಧಿತ) ಹಿಮಾಲಯವು ಭೂಭೃದನುಕ್ರಿಯಾಂ– ರಾಜನ ಅನುಕರಣೆಯನ್ನು, ಭುವಂ ಬಿಭರ್ತಿ ಇತಿ ಭೂಭೃತ್ (ಉಪ. ತ.) ಭೂಭೃತಃ ಅನುಕ್ರಿಯಾ (ಷ. ತ.) ತಾಂ. ರಾಜನು ಯಾವ ರೀತಿಯಾಗಿ ಉನ್ನತನೂ, ಸಂಪದ್ಯುಕ್ತನೂ, ಕುಲೀನ ರಲ್ಲಿ ಶ್ರೇಷ್ಠನೂ ಇರುವನೋ ಅದೇ ರೀತಿಯಾಗಿ ಈ ಪರ್ವತವಾದರೂ ಇದೆ. ಎಂದು ಅಭಿಪ್ರಾಯ. ರಾಜನು ಪ್ರಜೆಗಳ ರಕ್ಷಣೆ. ಪೋಷಣೆ ಮುಂ. ಮಾಡುವಂತೆ ಹಿಮಾಲಯವಾದರೂ ತನ್ನಲ್ಲಿದ್ದ ವಸ್ತು ಹಾಗೂ ಪ್ರಾಣಿಗಳ ರಕ್ಷಣೆ ಪೋಷಣೆ ಮುಂ. ಮಾಡುತ್ತದೆ. ಉತ್ತುಂಗ–ಬಹಳ ಎತ್ತರವಾದ ಸತತಂ ಶ್ರಿಯಾ ಸಂಗತಃ– ಯಾವಾಗಲೂ ಶೋಭೆಯುಳ್ಳ (ಶ್ರೀಃ- ಶೋಭೆ ಸಂಪತ್ತು) ಅಥವಾ ಯಾವಾಗಲೂ ರತ್ನ ಮುಂತಾದ ಸಂಪತ್ತುಳ್ಳ ಕುಲ- ಕ್ಷೋಣೀಭೃತಾಂ ಧುರ್ಯಃ- ಕುಲಪರ್ವತಗಳಲ್ಲಿ ಮುಖ್ಯವಾದ ಕ್ಷೋಣೀ ಭೃತ್–ಪರ್ವತ ಕ್ಷೋಣೀಂ ಬಿಭರ್ತಿ ಇತಿ ಕ್ಷೋಣಿಭೃೀತ್ (ಉಪ. ತ.) ಪರ್ವತಗಳ ಮೂಲಕವೇ ಭೂಮಿಯು ಅಲ್ಲಾಡದೆ ಸ್ಥಿರವಾಗಿ ಉಳಿದಿದೆ ಯೆಂದು ಕವಿಸಂಕೇತ. ಧುರ್ಯ–ಮುಖ್ಯ. ಧುರ್ ಎಂದರೆ ನೊಗ. ಧುರಂ ವಹತಿ ಇತಿ ಧುರ್ಯಃ (ತದ್ಧಿತ) ನೊಗವನ್ನು ಹೊತ್ತವ. ಅರ್ಥಾತ್ ಮುಖ್ಯ ಕುಲಸ್ಯ ಕ್ಷೋಣೀಭೃತಃ ಕುಲ....ತಃ (ಷ.ತ.) ತೇಷಾಂ ಏಳು ಕುಲಪರ್ವತ ಗಳಿದ್ದು ಅವುಗಳಿಂದಲೇ ಭೂಮಿ ಸ್ಥಿರವಾಗಿ ಉಳಿದಿದೆಯೆಂದು ನಂಬಲಾಗಿದೆ. ಆ ಪರ್ವತಗಳ ಉಲ್ಲೇಖ ಕೆಳಗಿನ ಶ್ಲೋಕದಲ್ಲಿದೆ.

ಮಹೇಂದ್ರೋ ಮಲಯಃ ಸಹ್ಯಃ ಶುಕ್ತಿಮಾನ್ ಋಕ್ಷಪರ್ವತಃ।
ವಿಂಧ್ಯಶ್ಚ ಪಾರಿವಾತ್ರಶ್ಚ ಸಪ್ತೈತೇ ಕುಲಪರ್ವತಾಃ॥

೨. ಅನ್ವಯಃ— ಅಹೋ ಅಯಂ ದುರಾರೋಹಃ, ದುರುತ್ತರಃ, ಪ್ರಸಾರಿತ-ಸರಿಜ್ಜಿಹ್ವಃ, ಅಬ್ಧಿಂ ಪಾತುಂ ಉದ್ಯತಃ ಇವ।

ಭಾಷಾಂತರ:— ಅಹಾ! ಏರಲು ಬಾರದ, ದಾಟಲು ಕಠಿಣವಾದ ಈ ಹಿಮಾಲಯವು ನದಿಗಳೆಂಬ ನಾಲಿಗೆಯನ್ನು ಚಾಚಿ ಸಮುದ್ರವನ್ನು ಕುಡಿಯಲು ಹೊರಟಿದೆಯೋ ಎನ್ನುವಂತೆ ಇದೆ.

ಟಿಪ್ಪಣಿಃ— ಅಹೋ—ಆಶ್ಚರ್ಯಸೂಚಕ ಅವ್ಯಯ. ದುರಾರೋಹಃ— ಏರಲು ಬಾರದ. ದುಃಖೇನ ಆರೋಢುಂ ಶಕ್ಯಃ ಅಥವಾ ದುಃಖೇನ ಆರುಹ್ಯತೇ ಇತಿ (ಉಪ. ತ.) ದುರುತ್ತರಃ— ದಾಟಲು ಕಠಿಣವಾದ. ದುಃಖೇನ ಉತ್ತೀರ್ಯತೇ ಇತಿ (ಉಪ. ತ.) ಪ್ರಸಾರಿತಸರಿಜ್ಜಿಹ್ವಃ – ನದಿಗಳೆಂಬ ನಾಲಿಗೆಯನ್ನು ಚಾಚಿದ ಸರಿತ್ ಏವ ಜಿಹ್ವಾ ಸರಿಜ್ಜಿಹ್ವಾ (ಕ.ಸ.) ಪ್ರಸಾರಿತಾ ಸರಿಜ್ಜಿಹ್ವಾ ಯೇನ ಸಃ (ಬ.ಸ.) ಅಬ್ಧಿಂ ಪಾತುಂ ಸಮುದ್ರವನ್ನು ಕುಡಿಯಲು. ಉದ್ಯತ–ಸಿದ್ಧವಾದ. ಹಿಂದಕ್ಕೆ ಅಗಸ್ತ್ಯ ಋಷಿಯು ಸಮುದ್ರ ಪಾನವನ್ನು ಮಾಡಿದಂತೆ ಹಿಮಾಲಯವೂ ಕೂಡ ನದಿಗಳೆಂಬ ತನ್ನ ನಾಲಿಗೆಯನ್ನು ಚಾಚಿ ಸಮುದ್ರವನ್ನು ಕುಡಿಯಲು ಹೊರಟಿದೆ. ಎಂದು ಕಲ್ಪನೆ. [ನಮಗೆ ದೊರೆತ ಮಹಾಪುರಾಣದಲ್ಲಿ ಈ ಶ್ಲೋಕದ ೨ನೇ ಸಾಲು ಇಲ್ಲವೇ ಇಲ್ಲ. ಆ ಸಾಲು ಪಠ್ಯಪುಸ್ತಕದಲ್ಲಿ ಹೇಗೆ ಸೇರಿತೆಂಬುದನ್ನು ನಾವರಿಯೆವು.]

೩. ಅನ್ವಯ :— ಸ್ವಪೂರ್ವಾಪರಕೋಟಿಭ್ಯಾಂ ಲವಣಾರ್ಣವಂ ವಿಗಾಹ್ಯ ಭುವಃ ಮಾನದಂಡಾಯಿತಃ ಇವ ಸ್ಥಿತಃ ಅಯಂ ಗಿರಿಃ ಆಭಾತಿ।

ಭಾಷಾಂತರ:— ತನ್ನ ಪೂರ್ವ ಮತ್ತು ಪಶ್ಚಿಮ ಭಾಗಗಳಿಂದ ಉಪ್ಪು ಸಮುದ್ರವನ್ನು ಪ್ರವೇಶಿಸಿ, ಭೂಮಿಯನ್ನು ಅಳೆಯುವ ಅಳತೆಗೋಲೋ ಎಂಬಂತೆ ಇದ್ದ ಈ ಪರ್ವತವು ಶೋಭಿಸುತ್ತದೆ.

ಟಿಪ್ಪಣಿ:— ಸ್ವಪೂರ್ವಾಪರಕೋಟಿಭ್ಯಾಂ – ತನ್ನ ಪೂರ್ವ ಮತ್ತು ಪಶ್ಚಿಮ ಭಾಗಗಳಿಂದ ಕೋಟಿಃ— ತುದಿ ಭಾಗ. ಪೂರ್ವ – ಪೂರ್ವ ದಿಕ್ಕು ಅಪರ–ಪಶ್ಚಿಮ ದಿಕ್ಕು. ಪೂರ್ವಾ ಚ ಅಪರಾಚ ಪೂರ್ವಾಪರೇ (ದ್ವಂದ್ವ). ಪೂರ್ವಾಪರೇ ಕೋಟೀ ಪೂ ........ ಟೀ (ಕ. ಸ) ಸ್ವಸ್ಯ ಪೂ ........ ಟೀ (ಷ.ತ.) ತಾಭ್ಯಾಂ ಲವಣಾರ್ಣವಂ—ಉಪ್ಪು ಸಮುದ್ರವನ್ನು. ಅರ್ಣವಃ— ಸಮುದ್ರ ಲವಣಃ ಅರ್ಣವಃ ಲವಣಾರ್ಣವಃ (ಕ. ಸ.) ತಂ।. ವಿಗಾಹ್ಯ—ಪ್ರವೇಶಿಸಿ. ವಿ+ಗಾಹ್ (೧ ಆ) ಧಾತುವಿನ ಲ್ಯಬಂತಾವ್ಯಯ. ಭುವಃ—ಭೂಮಿಯ ಭೂ. ಶಬ್ದದ ಷ. ಏ. ವ. ಮಾನದಂಡಃ—ಅಳತೆಗೋಲು. ಅಳೆಯುವ ಪಟ್ಟಿ (*measuring rod*). ಮಾನಸ್ಯ ದಂಡಃ

ಮಾನದಂಡಃ (ಷ. ತ. ಸ). ಮಾನದಂಡಾಯಿತಃ—ಮಾನದಂಡ ಎಂಬ ನಾಮದಿಂದುಂಟಾದ ಮಾನದಂಡಾಯ್ ಎಂಬ ನಾಮಧಾತುವಿನ ಕರ್ಮಣಿ ಭೂ. ಧಾ. ವಿ. (ಪು) ಪ್ರ. ಏ. ವ. ಆಭಾತಿ— ಶೋಭಿಸುತ್ತದೆ. ಹಿಮಾಲಯ ಪರ್ವತವು ಪೂರ್ವಸಮುದ್ರದಿಂದ ಪಶ್ಚಿಮ ಸಮುದ್ರದ ವರೆಗೆ ಹಬ್ಬಿದೆ. ಆದ್ದರಿಂದ ಅದು ಸಮುದ್ರವನ್ನು ತನ್ನ ಪೂರ್ವ ಹಾಗೂ ಪಶ್ಚಿಮ ಭಾಗಗಳಿಂದ ಪ್ರವೇಶಿಸಿದೆ ಎಂದು ಕವಿಯ ಹೇಳಿಕೆ. ಹೀಗೆ ಹಿಮಾಲಯವು ಬಹಳ ದೊಡ್ಡದಿದೆ. ಆದ್ದರಿಂದ ಭೂಮಿಯನ್ನು ಅಳೆಯಲು ಹೊರಟರೆ ಈ ಹಿಮಾಲಯಪರ್ವತವು ಅಳತೆಗೋಲಿನಂತೆ ಉಪಯೋಗವಾಗುತ್ತದೆ. ಸಣ್ಣ ಸಣ್ಣ ವಸ್ತುಗಳನ್ನು ಅಳೆಯಲು ಫೂಟುಪಟ್ಟಿ, ಯಾರ್ಡುಪಟ್ಟಿ ಉಪಯೋಗಿಸುವಂತೆ, ಭೂಮಿಯನ್ನು ಅಳೆಯಲು ಹಿಮಾಲಯವೆಂಬ ಅಳತೆಗೋಲನ್ನು ಉಪಯೋಗಿಸಲು ಬರುತ್ತದೆ ಎಂದು ಕವಿಯ ಕಲ್ಪನೆ.

ಈ ಶ್ಲೋಕದಲ್ಲಿ ಕಾಲಿದಾಸ ಕವಿಯ ಕುಮಾರಸಂಭವದ ೧ನೇ ಸರ್ಗದ ೧ನೇ ಶ್ಲೋಕದ ಛಾಯೆ ಕಂಡುಬರುತ್ತದೆ. ಕು.ಮಾ.:— ಅಸ್ತ್ಯುತ್ತರಸ್ಯಾಂ ದಿಶಿ ದೇವತಾತ್ಮಾ ಹಿಮಾಲಯೋನಾಮನಗಾಧಿರಾಜಃಪೂರ್ವಾಪರೌತೋಯನಿಧೀವಗಾಹ್ಯ ಸ್ಥಿತಃ ಪೃಥಿವ್ಯಾ ಇವ ಮಾನದಂಡಃ ॥

೪ ಅನ್ವಯ:— ಅಸ್ಯ ಅನುಸಾನು ಶಶ್ವತ್ ಸಿದ್ಧ ವಿದ್ಯಾಧರಮಹೋರಗೈಃ ಅಧ್ಯುಷಿತಾ ಇಯಂ ರಮ್ಯಾ ವನರಾಜೀ ವಿರಾಜತೇ ।

ಭಾಷಾಂತರ:— ಈ ಹಿಮಾಲಯದ ಪ್ರತಿಯೊಂದು ಶಿಖರದ ಮೇಲೆ ಸಿದ್ಧರು, ವಿದ್ಯಾಧರರು ಹಾಗೂ ದೊಡ್ಡ ಸರ್ಪಗಳು ಯಾವಾಗಲೂ ವಾಸಿಸುವ ಈ ಸುಂದರವಾದ ಗಿಡಗಳ ಸಾಲು ಶೋಭಿಸುತ್ತದೆ.

ಟಿಪ್ಪಣೆ:— ಅನುಸಾನು ಪ್ರತಿಯೊಂದು ಶಿಖರದಲ್ಲಿ ಸಾನೌ ಸಾನೌ ಇತಿ ಅಥವಾ ಸಾನುನಿ ಸಾನುನಿ ಇತಿ (ಅವ್ಯಯೀಭಾವ. ಸ) ಸಾನು (ಪು. ನ.)— ಶಿಖರ. ಶಶ್ವತ್ — ಯಾವಾಗಲೂ. ಸಿದ್ಧವಿದ್ಯಾಧರಮಹೋರಗೈಃ — ಸಿದ್ಧಾಃ ವಿದ್ಯಾಧರಾಃ ಮಹೋರಗಾಃ ಚ (ದ್ವಂದ್ವ) ತೈಃ. ಸಿದ್ಧರು, ವಿದ್ಯಾಧರರು, ಹಾಗೂ ದೊಡ್ಡ ಸರ್ಪಗಳಿಂದ.

ಸಿದ್ಧಾಃ:— ಸಿಧ್ಯಂತಿ ಇತಿ ಸಿದ್ಧಾಃ। ಅಣಿಮಾ, ಮಹಿಮಾ ಮುಂತಾದ ಅಷ್ಟಸಿದ್ಧಿಗಳನ್ನು ಪಡೆದ, ಶುದ್ಧ ಹಾಗೂ ಪವಿತ್ರ ನಡತೆಯುಳ್ಳ ಅರ್ಧದೈವೀ ಪ್ರಾಣಿಗಳು. **ವಿದ್ಯಾಧರಃ** — ವಿದ್ಯಾಯಾಃ ಧರಃ (ಷ. ತ. ಸ.). ಇವರು ದೇವಯೋನಿಗೆ ಸೇರಿದವರು. ಇವರು ಹೆಚ್ಚಾಗಿ ಹಿಮಾಲಯ-

ದಲ್ಲಿ ವಾಸವಾಡುತ್ತಾರೆ. ಇವರು ಮಾನವರು ಮಾಡುವ ಕೃತಿಗಳನ್ನು ನಿರೀಕ್ಷಿಸುತ್ತಾರೆ. ಹಾಗೂ ಒಳ್ಳೆಯ ಕಾರ್ಯಗಳಿಂದ ಸಂತುಷ್ಟಿ ಹೊಂದಿ ಅವರ ಮೇಲೆ ಪುಷ್ಪವೃಷ್ಟಿ ಸುರಿಸುತ್ತಾರೆ. ಮಹೋರಗಾಃ — ಮಹಾಂತಃ ಉರಗಾಃ (ಕ.ಸ.) **ಅಧ್ಯುಷಿತಾ** ಅಧಿ+ವಸ್(೧.ಪ).ಧಾ ಕರ್ಮಣಿ ಭೂ. ಧಾ. ವಿ. (ಸ್ತ್ರೀ) ಪ್ರ. ಏ. ವ. (ಅಧಿವಸ್ ಧಾತು ಯಾವಾಗಲೂ ದ್ವಿ. ವಿ. ತೆಗೆದುಕೊಳ್ಳುತ್ತದೆ. ಉದಾ. ಅಧಿವಸತಿ ವೈಕುಂಠಂ ಹರಿಃ)ವನರಾಜೀ — ಗಿಡಗಳ ಸುದೀರ್ಘ ಸಾಲು. (ವನಸ್ಯ ರಾಜೀ ಷ. ತ. ಸ.). ವಿರಾಜತೇ — ಶೋಭಿಸುತ್ತದೆ. ವಿ + ರಾಜ್ (೧.ಆ) ಧಾತುವಿನ ವ. ತೃ. ಏ.ವ.

೫ ಅನ್ವಯ: — ಅಸ್ಯ ಜ್ವಲನ್ಮಣಿಚಿತ್ರಿತಾಃ ತಟಾಭೋಗಾಃ ಸಂಕ್ರಾಂತೈಃ ಸ್ವರ್ವಧೂಪ್ರತಿಬಿಂಬಕೈಃ ಚಿತ್ರಿತಾಃ ಇವ ವಿಭಾಂತಿ ।

ಭಾಷಾಂತರ : — ಹೊಳೆಯುವ ರತ್ನಗಳಿಂದ ಚಿತ್ರವಿಚಿತ್ರವಾದ (ಬಣ್ಣಗಳುಳ್ಳ) ಇದರ ವಿಶಾಲವಾದ ತಪ್ಪಲು ಪ್ರದೇಶಗಳು, ಪ್ರತಿಬಿಂಬಿಸಲ್ಪಟ್ಟ ದೇವತಾ ಸ್ತ್ರೀಯರ ಪ್ರತಿಬಿಂಬಗಳಿಂದ ಚಿತ್ರಿಸಲ್ಪಟ್ಟಿವೆಯೋ ಎಂಬಂತೆ ಪ್ರಕಾಶಿಸುತ್ತವೆ.

ಟಿಪ್ಪಣಿ:— ಹಿಮಾಲಯದಲ್ಲಿ ಅನೇಕ ರತ್ನಗಳಿರುವದರಿಂದ ಅವುಗಳ ವಿವಿಧ ಛಾಯೆಗಳು ಪರ್ವತದ ತಪ್ಪಲು ಪ್ರದೇಶದ ಮೇಲೆ ಬೀಳುತ್ತವೆ. ಇದರಿಂದ ಆ ತಪ್ಪಲು ಪ್ರದೇಶಗಳು ಬಗೆಬಗೆಯ ಬಣ್ಣಗಳುಳ್ಳವು ಆಗಿ ಬಹಳ ಶೋಭಿಸುತ್ತವೆ. ಈ ರಮಣೀಯ ದೃಶ್ಯವು, ಕ್ರೀಡಿಸಲು ಬಂದ ದೇವಸ್ತ್ರೀಯರ. ಪ್ರತಿಬಿಂಬಗಳಿಂದ ಚಿತ್ರಿಸಲ್ಪಟ್ಟಿದೆಯೋ ಎಂಬಂತೆ ತೋರುತ್ತದೆ. ಜ್ವಲನ್ಮಣಿಚಿತ್ರಿತಾಃ—ಹೊಳೆಯುವ ರತ್ನಗಳಿಂದ ಚಿತ್ರವಿಚಿತ್ರವಾದ. ಜ್ವಲಂತಃ ಮಣಯಃ ಜ್ವಲನ್ಮಣಯಃ (ಕ. ಸ) । ತೈಃ ಚಿತ್ರಿತಾಃ (ತೃ. ತ.) ತಟಾಭೋಗಾಃ—ತಪ್ಪಲುಪ್ರದೇಶ ತಟಸ್ಯ ಆಭೋಗಾಃ (ಷ. ತ. ಸ.) ಸಂಕ್ರಾಂತೈಃ—*transferred*. ಸ್ವರ್ವಧೂಪ್ರತಿಬಿಂಬಕೈ.—ದೇವ— ಸ್ತ್ರೀಯರ ಪ್ರತಿಬಿಂಬಗಳಿಂದ ಸ್ವರ್ ವಧೂಃ ಸ್ವರ್ವಧೂಃ (ಅನ್ವಯ ಸಮಾಸ). ತಾಸಾಂ ಪ್ರತಿಬಿಂಬಕಾನಿ (ಷ. ತ. ಸ.) ತೈಃ । ಚಿತ್ರಿತ— ಕೊರೆಯಲ್ಪಟ್ಟ. ಚಿತ್ರಿಸಲ್ಪಟ್ಟ. ವಿಭಾಂತಿ—ಶೋಭಿಸುತ್ತವೆ. ವಿ+ಭಾ (೨.ಪ) ಧಾತುವಿನ ವ. ತೃ. ಪು. ಬ. ವ.

೬. ಅನ್ವಯ: — ಹಾರಿಭಿಃ ಲತಿಕಾಗೃಹೈಃ ಸ್ವೈರಸಂಭೋಗ- ಯೋಗ್ಯೇಷು ಅಸ್ಯ ತಟೇಷು. ಸಪ್ರೇಯಸ್ಯಃ ನಭಶ್ಚರಾಃ ಪರ್ಯಟಂತಿ ।

ಭಾಷಾಂತರ:— ಮನೋಹರವಾದ ಲತಾಮಂಟಪಗಳಿಂದ ಸ್ವಚ್ಛಂದ-ವಾಗಿ ಕ್ರೀಡಿಸಲು ಯೋಗ್ಯವಾದ ಇದರ ತಪ್ಪಲಲ್ಲಿ ಆಕಾಶ ಸಂಚಾರಿಗಳಾದ ಸಿದ್ಧ ಗಂಧರ್ವ ಮೊದಲಾದವರು ತಮ್ಮ ಹೆಂಡಂದಿರೊಡನೆ ಸಂಚರಿಸುತ್ತಾರೆ.

ಟಿಪ್ಪಣೆ:— ಸುಂದರವಾದ ಮನೋಹರವಾದ ಲತಿಕಾಗೃಹೈಃ— ಲತಾಮಂಟಪ. ಲತಿಕಾನಾಂ ಗೃಹಾಣಿ (ಷ. ತ. ಸ.) ತೈಃ ಸ್ವೈರಸಂಭೋಗ ಯೋಗ್ಯೇಷು—ಸ್ವಚ್ಛಂದವಾಗಿ ಕ್ರೀಡಿಸಲು ಯೋಗ್ಯವಾದ. ಆಕರ್ಷಕ ಲತಾಮಂಟಪಗಳಿರುವದರಿಂದ ಹಿಮಾಲಯದ ತಪ್ಪಲು ಪ್ರದೇಶವು ಸ್ವಚ್ಛಂದ ವಾಗಿ ಕ್ರೀಡಿಸಲು ಯೋಗ್ಯ ಸ್ಥಳವಾಗಿದೆ. ಸ್ವೈರಃ ಸಂಭೋಗಃ (ಸಮ್ಯಕ್ ಭೋಗಃ) ಸ್ವೈರಸಂಭೋಗಃ (ಕ. ಸ.) ತಸ್ಯ ಯೋಗ್ಯಾಃ (ಷ. ತ. ಸ.) ತೇಷು। **ಸಪ್ರೇಯಸ್ಯಃ**—ಹೆಂಡಂದಿರಿಂದೊಡಗೂಡಿದ ಪ್ರೇಯಸೀಭಿಃ ಸಹಿತಾಃ ಸಪ್ರೇಯಸ್ಯಃ (ಸಹ ಬ. ಸ.) ನಭಶ್ಚರಾಃ—ಆಕಾಶ ಸಂಚಾರಿಗಳು ನಭಸಿ ಚರಾಃ ( ಸ. ತ. ) ಪರ್ಯಟಂತಿ—ಸಂಚರಿಸುತ್ತಾರೆ. ಪರಿ+ ಅಟ್ (೧. ಪ.) ಧಾತುವಿನ ವ. ತೃ. ಪು. ಬ. ವ.

೭. ಅನ್ವಯ:— ಅಸ್ಯ ವಿವಿಕ್ತ ರಮಣೀಯೇಷು ಸಾನುಷು ಸಾಪ್ಸ-ರೋಗಣಾಃ ಧೃತೋತ್ಸವಾಃ ಗೀರ್ವಾಣಾಃ ಅನ್ಯತ್ರ ಧೃತಿಂ ನ ದಧತೇ।

ಭಾಷಾಂತರ:— ಇದರ ಏಕಾಂತವಾದ ಹಾಗೂ ಸುಂದರವಾದ ಶಿಖರ ಗಳಲ್ಲಿ ಅಪ್ಸರಾ ಸಮೂಹದಿಂದೊಡಗೂಡಿದ ದೇವತೆಗಳು ಹರ್ಷಗೊಂಡು, ಬೇರೆಡೆಯಲ್ಲಿ ಸುಖ (ಸಂತೋಷ) ಹೊಂದುವದಿಲ್ಲ.

ಟಿಪ್ಪಣೆ:— ವಿವಿಕ್ತರಮಣೀಯೇಷು—ಏಕಾಂತ ಹಾಗೂ ಸುಂದರ-ವಾದ. ವಿವಿಕ್ತಾಃ ಚ ತೇ ರಮಣೀಯಾಃ ಚ (ಕ. ಸ) ತೇಷು। ಸಾನು (ಪು. ನ.)—ಶಿಖರ. ಸಾಪ್ಸರೋಗಣಾಃ—ಅಪ್ಸರಾಗಣದಿಂದೊಡಗೂಡಿ-ದವರು. ಅಪ್ಸರಸಾಂ ಗಣಾಃ ಅಪ್ಸರೋಗಣಾಃ (ಷ. ತ. ಸ) ಅಪ್ಸರೋಗಣೈಃ ಸಹಿತಾಃ (ಸಹ. ಬ. ಸ.)

**ಅಪ್ಸರಸಃ**— ಈ ಶಬ್ದವು ಹೆಚ್ಚಾಗಿ ಬ. ವ. ದಲ್ಲಿಯೇ ಉಪಯೋಗಿ ಸಲ್ಪಡುತ್ತದೆ. ಅದ್ಭ್ಯಃ ಸರಂತಿ (ಉದ್ಗಚ್ಛಂತಿ) ಇತಿ ಅಪ್ಸರಸಃ। ನೀರು ಕಡೆಯುವಾಗ ಇವರು ನೀರಿನ ಸಾರದಿಂದ ಹುಟ್ಟಿದರೆ ತು. ಮಾ. ಅಪ್ಸು ನಿರ್ಮಥನಾದೇವರಸಾತ್ತಸ್ಮಾದ್ವರಸ್ತ್ರಿಯಃ। ಇವರು ಗಂಧರ್ವರ ಹೆಂಡಂದಿರು ಜನರಿಗೆ ಕಾಣದಂತೆ ಆಕಾಶದಲ್ಲಿ ಸಂಚರಿಸಬಲ್ಲರು. ಇವರಲ್ಲಿ ರಂಭಾ,

ಉರ್ವಶೀ, ಮೇನಕಾ ಮುಂ. ಪ್ರಸಿದ್ಧರಾಗಿದ್ದಾರೆ. ಇವರು ಹೆಚ್ಚಾಗಿ ಇಂದ್ರನ ಸೇವೆಮಾಡುವರು. ಇಂದ್ರನು ಬೇರೆಯವರ ತಪಶ್ಚರ್ಯಕ್ಕೆ ಅಂಜಿದಾಗ, ಅವರ ತಪಸ್ಸನ್ನು ಕೆಡಿಸುವದಕ್ಕಾಗಿ ಸುಂದರರಾದ ಈ ಅಪ್ಸರಾಸ್ತ್ರೀಯರನ್ನು ಕಳಿಸುವನು ಧೃತೋತ್ಸವಾಃ—ಹರ್ಷಗೊಂಡ ಧೃತಃ ಉತ್ಸವಃ ಯೈಃ ತೇ (ಬ. ಸ.) ಗೀರ್ವಾಣಾಃ—ದೇವತೆಗಳು. ಗೀಃ ಏವ ವಾಣಃ (ಬಾಣಃ) ಯೇಷಾಂ ತೇ (ಬ. ಸ.) ಅನ್ಯತ್ರ—ಬೇರೆಡೆಯಲ್ಲಿ. ಧೃತಿಃ — ಸಮಾಧಾನ ಸುಖ. ದಧತೇ—ಧಾ (ಪ. ಉ) ಧಾತುವಿನ ವ. ತೃ. ಬ. ವ. ಹಿಮಾಲಯದ ನಿರ್ಜನ ಹಾಗೂ ಸುಂದರವಾದ ಶಿಖರಗಳಲ್ಲಿ ಅಪ್ಸರೆಯರೊಂದಿಗೆ ಕ್ರೀಡಿಸಿ ಸುಖಪಡುವ ದೇವತೆಗಳಿಗೆ, ಬೇರೆಡೆಯಲ್ಲಿ ಸುಖ-ಸಮಾಧಾನಗಳು ದೊರೆಯುವದಿಲ್ಲ.

೮. ಅನ್ವಯ:— ಪರ್ಯಂತಸ್ಯ ವಿಕಾಸಿಕುಸುಮಸ್ಮಿತಾಃ ವನೋದ್ದೇಶಾಃ ಆತ್ಮೀಯಯಾ ಶ್ರಿಯಾ ಅಮರೋದ್ಯಾನಶ್ರಿಯಂ ಹಸಂತಿ ಇವ ।

ಭಾಷಾಂತರ:— ಹಿಮಾಲಯದ ಸೀಮಾ ಪ್ರದೇಶದಲ್ಲಿ, ಅರಳಿದ ಹೂಗಳೆಂಬ ನಗೆಯುಳ್ಳ ಅಡವಿಯ ಭಾಗಗಳು ತಮ್ಮ ಸಂಪತ್ತಿನಿಂದ ದೇವತೆಗಳ ನಂದನವನದ (ತೋಟದ) ಶೋಭೆಯನ್ನು ಪರಿಹಾಸಮಾಡುವವೋ ಎನ್ನುವಂತಿವೆ.

ಟಿಪ್ಪಣಿ:— ಹಿಮಾಲಯದ ಸೀಮಾಪ್ರದೇಶದಲ್ಲಿರುವ ಅಡವಿಯ ಭಾಗಗಳು ಬಹಳ ಸುಂದರ ಇವೆ. ಅದರಲ್ಲಿ ಹೂಬಿಟ್ಟ ಅನೇಕ ಗಿಡಗಳಿವೆ. ಇದು ವಾಸ್ತವದೃಶ್ಯ. ಕವಿಯು ಮಾತ್ರ ಇದರಲ್ಲಿ ಬಹಳ ಅರ್ಥ ಕಾಣುತ್ತಾನೆ. ಹಿಮಾಲಯದ ವನಸಂಪತ್ತು ನಂದವನವನ್ನು ಅಣಕಿಸುವಂತೆ ತೋರುತ್ತದೆಂದು ಕವಿಯ ಕಲ್ಪನೆ. ವನಶ್ರೀಯ ನಗೆಯೆಂದರೆ (ನಗೆಯಂತೆ) ಬೆಳ್ಳಗಿರುವ ಶುಭ್ರವರ್ಣದ ಹೂಗಳು.

ಪರ್ಯಂತಃ— ಸೀಮಾಪ್ರದೇಶ ಪರಿಗತಃ ಅಂತಂ (ಪ್ರಾದಿತ). ವಿಕಸಿತಕುಸುಮಸ್ಮಿತಾಃ—ಅರಳಿದ ಹೂಗಳೆಂಬ ನಗೆಯುಳ್ಳ, ವಿಕಸಿತಾನಿ-ಕುಸುಮಾನಿ (ಕ. ಸ.) ವಿಕಸಿತಕುಸುಮಾನಿ ಏವ ಸ್ಮಿತಾನಿ ಯೇಷಾಂ ತೇ (ಬ. ಸ.) ವನೋದ್ದೇಶಾಃ—ಅಡವಿಯ ಭಾಗಗಳು. ವನಪ್ರದೇಶಗಳು' ವನಸ್ಯ ಉದ್ದೇಶಾಃ (ಷ. ತ. ಸ.) । ಆತ್ಮೀಯ—ತಮ್ಮ. ಶ್ರಿಯಾ—ಸಂಪತ್ತಿ

ನಿಂದ. ಅಮರೋದ್ಯಾನಶ್ರಿಯಂ–ನಂದನವನದ ಶೋಭೆಯನ್ನು ಅಮರಾಣಾಂ ಉದ್ಯಾನಂ ಅಮರೋದ್ಯಾನಂ (ಷ. ತ. ಸ.) ತಸ್ಯ ಶ್ರೀಃ (ಷ. ತ. ಸ.) ತಾಂ । ಹಸಂತಿ ಇವ—ನಗುವಂತಿವೆ. ಅಣಕಿಸುವಂತೆ ತೋರುತ್ತವೆ.

೯. ಅನ್ವಯ:—ಏಷಃ ಸ್ವೇನ ಮೂರ್ಧ್ನಾ ನಿತ್ಯಾನಪಾಯಿನೀಂ ಶ್ರಿಯಂ ಬಿಭರ್ತಿ ಯಾಂ ಸ್ಮಾರ್ತಾಃ ಶಚ್ಯಾಃ ಸೌಭಾಗ್ಯಮದಕರ್ಷಿಣೀಂ ಸ್ಮರಂತಿ ।

ಭಾಷಾಂತರ:— ಈ ಹಿಮಾಲಯವು ತನ್ನ ಶಿಖರದಲ್ಲಿ, ಯಾವಾಗಲೂ ನಾಶಹೊಂದದ ಸೌಂದರ್ಯವನ್ನು ಧರಿಸಿದೆ. ಈ ಸೌಂದರ್ಯವು ಶಚೀ-ದೇವಿಯ ಸೌಂದರ್ಯದ ಗರ್ವವನ್ನು ನಾಶಮಾಡುತ್ತದೆಂದು ಸ್ಮೃತಿ(ಪುರಾಣ) ಗಳನ್ನರಿತವರು ತಿಳಿಯುತ್ತಾರೆ.

ಟಿಪ್ಪಣಿ:— ಹಿಮಾಲಯ ಪರ್ವತದ ಶೋಭೆಯು ಅಚ್ಚಳಿಯದೆ ಯಾವಾಗಲೂ ನಿತ್ಯವಾಗಿ ಉಳಿಯುತ್ತದೆ. ಆದರೆ ಶಚಿಯ ಸೌಂದರ್ಯ ಕೆಲವೊಂದು ಸಲ ಕುಂದಬಹುದು. ಆದ್ದರಿಂದ ಈ ವನಶೋಭೆ ಇಂದ್ರನ ಹೆಂಡತಿಯಾದ ಶಚೀದೇವಿಯ ಸೌಂದರ್ಯ ಗರ್ವವನ್ನು ನಷ್ಟಗೊಳಿಸುತ್ತದೆಂದು ಸ್ಮೃತಿಪುರಾಣಗಳನ್ನರಿತವರು ತಿಳಿಯುತ್ತಾರೆ ಎಂದು ಶ್ಲೋಕದ ತಾತ್ಪರ್ಯ.

ಸ್ವೇನಮೂರ್ಧ್ನಾ—ತನ್ನ ಶಿಖರದಿಂದ. ಮೂರ್ಧನ್ (ಪು)—ತಲೆ. ನಿತ್ಯಾನಪಾಯಿನೀಂ–ಯಾವಾಗಲೂ ನಾಶರಹಿತವಾದ ನಿತ್ಯವೂ ನಾಶರಹಿತವೂ ಆದ ನ ಅಪಾಯಃ ಅನಪಾಯಃ (ನ. ತ.) ಅನಪಾಯಃ ಅಸ್ಯಾಃ ಅಸ್ತಿ ಇತಿ ಅನಪಾಯಿನೀ (ತದ್ಧಿತ) ನಿತ್ಯಾ ಅನಪಾಯಿನೀ ನಿತ್ಯಾನಪಾಯಿನೀ (ಕ. ಸ.) ತಾಂ । ಬಿಭರ್ತಿ—ಧರಿಸಿದೆ. ಭೃ (ಕ್ರಿ. ಉ) ಧಾತುವಿನ ವ. ತೃ. ಏ. ವ. ಸ್ಮಾರ್ತಾಃ—ಸ್ಮೃತಿಂ ವೇತ್ತಿ ಇತಿ ಸ್ಮಾರ್ತಃ ಸ್ಮೃತಿಯನ್ನರಿತವ. ಪುರಾಣ ಸ್ಮೃತಿ ಮುಂ. ಅರಿತವರು. ಮನುಷ್ಯರಿಂದ ರಚಿತವಾದ, ಪರಂಪರಾಗ ಧರ್ಮನೀತಿ ಮುಂ. ಬೋಧಿಸುವ ಗ್ರಂಥಗಳಿಗೆ ಸ್ಮೃತಿ ಎಂಬ ಹೆಸರಿದೆ ಉದಾ:— ಮನುಸ್ಮೃತಿ, ಯಾಜ್ಞವಲ್ಕ್ಯ ಸ್ಮೃತಿ, ಪರಾಶರ ಸ್ಮೃತಿ ಮುಂ ಶಚ್ಯಾಃ—ಶಚೀದೇವಿಯ ಶಚಿಯು ಇಂದ್ರನ ಹೆಂಡತಿ. ಸೌಭಾಗ್ಯಮದ ಕರ್ಷಿಣೀಂ—ಸೌಂದರ್ಯದ ಸೊಕ್ಕನ್ನು ಅಪಹರಿಸುವ ಸೌಭಾಗ್ಯಸ್ಯ ಮದಃ ಸೌಭಾಗ್ಯಮದಃ (ಷ. ತ. ಸ.) ತಂ ಕರ್ಷತಿ (ಉಪ. ತ.) ತಾಂ । ಸ್ಮರಂತಿ ತಿಳಿಯುತ್ತಾರೆ, ಭಾವಿಸುತ್ತಾರೆ.

೧೦. ಅನ್ವಯ:—ಅಸ್ಯ ಮೂರ್ಧ್ನಿ ಧೃತಶ್ರೀಃ, ಬಹುವರ್ಣನಃ ಪ್ರಸನ್ನ ವಾರಿಃ ಉತ್ಫುಲ್ಲ ಹೈಮಪಂಕಜಮಂಡನಃ ಪದ್ಮಹ್ರದಃ ಅಸ್ತಿ ।

ಭಾಷಾಂತರ:—ಇದರ ಶಿಖರದಲ್ಲಿ ಸೌಂದರ್ಯವುಳ್ಳ, ಬಹಳ ವರ್ಣನೀಯ ವಿಷಯಗಳುಳ್ಳ, ನಿರ್ಮಲವಾದ ನೀರುಳ್ಳ, ಅರಳಿದ ಹೊಂದಾವರೆಗಳ ಶೋಭೆಯುಳ್ಳ, ಪದ್ಮಸರೋವರವಿದೆ.

ಟಿಪ್ಪಣಿ:—ಅಸ್ಯ ಮೂರ್ಧ್ನಿ ಪದ್ಮಹೃದಃ ಅಸ್ತಿ ( ಇದರ ಶಿಖರದಲ್ಲಿ ಪದ್ಮ-ಸರೋವರವಿದೆ. ) ವಂಬದು ವಾಕ್ಯದ ಮುಖ್ಯಾಂಶ. ಉಳಿದ ಪದಗಳು ಪದ್ಮಹ್ರದಃ ಎಂಬ ಶಬ್ದಕ್ಕೆ ವಿಶೇಷಣಗಳಾಗಿವೆ.

ಮೂರ್ಧ್ನಿ— ಶಿಖರದಲ್ಲಿ ಮೂರ್ಧನ್ (ಪು) ಶಬ್ದದ ಸ. ಏ. ವ. ಧೃತಶ್ರೀಃ— ಸೌಂದರ್ಯ ಧರಿಸಿದ ಧೃತಾ ಶ್ರೀಃ ಯೇನ ಸಃ (ಬ. ಸ.) ಬಹುವರ್ಣನಃ—ಬಹಳ ವರ್ಣನೆ ಮಾಡಲು ಬರುವ ಬಹಳ ವರ್ಣನೀಯ ವಿಷಯಗಳುಳ್ಳ. ಬಹು ವರ್ಣನಂ ಯಸ್ಯ ಸಃ (ಬ. ಸ) ಪ್ರಸನ್ನವಾರಿಃ— ನಿರ್ಮಲವಾದ ನೀರುಳ್ಳ ಪ್ರಸನ್ನಂ ವಾರಿ ಯಸ್ಯ ಸಃ (ಬ. ಸ.) ಉತ್ಫುಲ್ಲ-ಹೈಮಪಂಕಜಮಂಡನಃ— ಅರಳಿದ ಹೊಂದಾವರೆಗಳ ಶೋಭೆಯುಳ್ಳ. ಪಂಕೇ ಜಾಯತೇ ಇತಿ ಪಂಕಜಂ (ಉಪ. ತ.) ಹೈಮಾನಿ ಪಂಕಜಾನಿ ಹೈಮಪಂಕಜಾನಿ (ಕ. ಸ.) ಉತ್ಫುಲ್ಲಾನಿ ಹೈಮಪಂಕಜಾನಿ ಮಂಡನಂ ಯಸ್ಯ ಸಃ (ಬ. ಸ.) ಹೇಮನ್ (ನ)-ಬಂಗಾರ ಪದ್ಮಹ್ರದಃ— ಪದ್ಮಸರೋವರ ಪದ್ಮಾನಾಂ ಹ್ರದಃ (ಷ. ತ. ಸ) ಇಲ್ಲಿಯೇ ಗಂಗಾನದಿಯ ಉತ್ಪತ್ತಿಯಾಗಿದೆಯೆಂದು ೩ನೇ ಪಾಠದ ೭ನೇ ಶ್ಲೋಕದಿಂದ ಗೊತ್ತಾಗುತ್ತದೆ.

೧೧. ಅನ್ವಯ:—ಅಯಂ ಧರಣೀಧರಃ ಅಸ್ಯ ಹೃದಸ್ಯ ಪುರಃಪ್ರತ್ಯಕ್ತೋರಣ ದ್ವಾರನಿರ್ಗತೇ ಮಹಾನದ್ಯೌ ಗಂಗಾಸಿಂಧೂ ಧತ್ತೇ ।

ಭಾಷಾಂತರ:—ಈ ಪದ್ಮಸರೋವರದ ಪೂರ್ವ ಮತ್ತು ಪಶ್ಚಿಮದ ಹೊರಬಾಗಿಲುಗಳಿಂದ ಹೊರಬಿದ್ದ ಗಂಗಾ ಮತ್ತು ಸಿಂಧೂ ಎಂಬ ಎರಡು ದೊಡ್ಡ ನದಿಗಳನ್ನು ಈ ಪರ್ವತವು ಧರಿಸಿದೆ.

ಟಿಪ್ಪಣಿ:- ಧರಣೀಧರಃ- ಪರ್ವತ. ಧರಣ್ಯಾಧರ (ಷ.ತ.ಸ.) ಪರ್ವತದಿಂದಲೇ ಭೂಮಿಗೆ ಸ್ಥೈರ್ಯ ಬಂದಿದೆ. ಭೂಮಿ ಅಲ್ಲಾಡಬಾರದೆಂದು ತಿಳಿದು ಪರ್ವತವುಅದನ್ನುಗಟ್ಟಿಯಾಗಿ ಬಿಗಿಹಿಡಿದಿದೆ.ಅಂತೆಯೇ ಪರ್ವತಕ್ಕೆಧರಣೀಧರ ಎಂಬ ಹೆಸರು ಬಂದಿದೆ. ಹ್ರದಃ-ಮಡು ಸರೋವರ ಪುರಃಪ್ರತ್ಯಕ್ತೋರಣದ್ವಾರ

ನಿರ್ಗತೇ—ಪೂರ್ವ ಮತ್ತು ಪಶ್ಚಿಮದ ಹೊರಬಾಗಿಲುಗಳಿಂದ ಹೊರಬಿದ್ದ. [ಪುರಃ ಪ್ರ........ತೇ ಎಂದು ಪಠ್ಯಪುಸ್ತಕದಲ್ಲಿ ತಪ್ಪು ಅಚ್ಚಾಗಿದೆ. ಸಮಸ್ತ ಪದವಿದ್ದುದರಿಂದ ಪುರಃ ಶಬ್ದವಾದನಂತರ ಸ್ಥಳ ಬಿಡಬಾರದು. ಪುರಃ ಪ್ರತ್ಯ ........ತೇ ಎಂಬುದಾಗಿರಬೇಕು. ಮೂಲಪುಸ್ತಕದಲ್ಲಿ ಸಾಮಾಸಿಕ ಪದವೇ ಇದೆ. ಆದ್ದರಿಂದ ವಿದ್ಯಾರ್ಥಿಗಳು ಅವಶ್ಯವಿದ್ದ ತಿದ್ದುಪಡೆ ಮಾಡಿಕೊಳ್ಳ ಬೇಕು.] ಪುರಃ— ಪೂರ್ವದಿಕ್ಕಿನಲ್ಲಿದ್ದ ಪ್ರತ್ಯಕ್— ಪಶ್ಚಿಮದಿಕ್ಕಿನಲ್ಲಿದ್ದ ತೋರಣಃ (ಣಂ) – ಕಮಾನಿನ ಬಾಗಿಲು. ಕಮಾಸಿನ ಬಾಗಿಲು ಪ್ರದೇಶ ಹೊರಬಾಗಿಲ ಪ್ರದೇಶ '*An outer gateway*' (*Dictionary*) ನಿರ್ಗತ-ಹೊರಬಿದ್ದ ಪುರಶ್ಚ ಪ್ರತ್ಯಕ್ ಚ ಪುರಃಪ್ರತ್ಯಕ್ (ದ್ವಂದ್ವ) ತೋರಣಸ್ಯ ದ್ವಾರೇ ತೋರಣ ದ್ವಾರೇ ( ಷ. ತ. ಸ. ) ಪುರಃ ಪ್ರತ್ಯಕ್ ತೋರಣ ದ್ವಾರೇ ಪು......ರೇ (ಕ.ಸ.) ತಾಭ್ಯಾಂ ನಿರ್ಗತೇ (ಪಂ.ತ.) ಗಂಗಾಸಿಂಧೂ— ಗಂಗಾ ಚ ಸಿಂಧುಃ ಚ (ದ್ವಂದ್ವ). ಮಹಾನದ್ಯೌ–ಮಹತ್ಯೌ ನದ್ಯೌ (ಕ.ಸ.) ದೊಡ್ಡ ನದಿಗಳು ಧತ್ತೇ ಧರಿಸಿದೆ. ಧಾ. (೩ ಉ) ಧಾತುವಿನ ವ.ತೃ.ಪು.ಏ.ವ.

**ಪುಟ** ೪೧. ೧೨. ಅನ್ವಯ:— ಏಷಃ ಶಿಲೋಚ್ಚಯಃ ತಮುದಕ್ತೋರಣದ್ವಾರಾತ್ ನಿಃಸೃತ್ಯ ಉದಙ್ಮುಖೀಂ ಗತಾಂ ರೋಹಿತಾಸ್ಯಾಂ ಸರಿತಂ ಚ ದಧಾತಿ।

ಭಾಷಾಂತರ:— ಈ ಪರ್ವತವು ಪದ್ಮಸರೋವರದ ಉತ್ತರದ ಹೊರ ಬಾಗಿಲಿನಿಂದ ಹೊರಟು ಉತ್ತರದಿಕ್ಕಿಗೆ ಮುಖಮಾಡಿಕೊಂಡು ಹರಿದ (ಹೋದ) ರೋಹಿತಾಸ್ಯಾ (ಎಂಬ) ನದಿಯನ್ನೂ ಧರಿಸಿದೆ.

ಟಿಪ್ಪಣಿ:— ಶಿಲೋಚ್ಚಯಃ— ಪರ್ವತ ( ಶಿಲಾನಾಂ ಉಚ್ಚಯಃ ) ತದು................ತ್— ಪದ್ಮಸರೋವರದ ಉತ್ತರದ ಹೊರಬಾಗಿಲಿನಿಂದ ಉದಕ್ ತೋರಣದ್ವಾರಂ (ತೋರಣಸ್ಯ ದ್ವಾರಂ ಷ. ತ. ಸ) .(ಕ.ಸ.) ತಸ್ಯ ಉ....ರಂ ತ........ರಂ (ಷ. ತ. ಸ.) ತಸ್ಮಾತ್ ಉದಙ್ಮುಖೀ— ಉತ್ತರ ದಿಕ್ಕಿನೆಡೆಗೆ ಮುಖಮಾಡಿಕೊಂಡು. ಉದೀಚಿ ಮುಖಂ ಯಸ್ಯಾಃ ಸಾ (ಬ.ಸ.) ರೋಹಿತಾಸ್ಯಾ—ಇದೊಂದು ನದಿಯ ಹೆಸರು. ಸರಿತಂ–ನದಿಯನ್ನು ಸರಿತ್ (ಸ್ತ್ರೀ)-ನದಿ· ದಧಾತಿ—ಧರಿಸಿದೆ. ಧಾ (೩ ಉ) ಧಾತುವಿನ ವ. ತೃ. ಏ. ವ. ನಿಃಸೃತ್ಯ—ಹೊರಟು ನಿಸ್ + ಸೃ (೧ ಪ) ಧಾತುವಿನ ಲ್ಯಬಂತಾವ್ಯಯ.

೧೩.ಅನ್ವಯ:–ತಿಸೃಭಿಃ ಶಕ್ತಿಭಿಃ ಸ್ವಂ ಭೂಭೃದ್ಭಾವಂ ವಿಭಾವಯನ್ ವಾ (ಇವ)ಆಭಿಃ ಅಲಂಘ್ಯಾಭಿಃ ಮಹಾಪಗಾಭಿಃ ಅಯಂ(ಹಿಮಾಲಯಃ) ವಿಭಾತಿ।

ಭಾಷಾಂತರ :— (ಪ್ರಭುಶಕ್ತಿ, ಉತ್ಸಾಹಶಕ್ತಿ, ಮಂತ್ರಶಕ್ತಿ ಎಂಬ) ಮೂರು ಶಕ್ತಿಗಳಿಂದ ತನ್ನ ದೊರೆತನವನ್ನು ವ್ಯಕ್ತಗೊಳಿಸುತ್ತದೆಯೋ ಎನ್ನುವಂತೆ ಈ ಹಿಮಾಲಯ ಪರ್ವತವು ದಾಟಲುಬಾರದ ಈ (೩) ದೊಡ್ಡ ನದಿಗಳಿಂದ ಶೋಭಿಸುತ್ತದೆ.

ಟಿಪ್ಪಣಿ:— ರಾಜನು ಹೇಗೆ ಪ್ರಭುಶಕ್ತಿ ಉತ್ಸಾಹಶಕ್ತಿ ಮತ್ತು ಮಂತ್ರ ಶಕ್ತಿಗಳಿಂದ ತನ್ನ ದೊರೆತನವನ್ನು ಸ್ಥಾಪಿಸುವನೋ, ಅದರಂತೆ ಈ ಪರ್ವತವಾದರೂ ಗಂಗಾ, ಸಿಂಧು, ರೋಹಿತಾಸ್ಯಾ ಎಂಬ ೩ ನದಿಗಳಿಂದ 'ಪರ್ವತ-ರಾಜ' ಎಂಬ ತನ್ನ ದೊರೆತನವನ್ನು ಪ್ರಸ್ಥಾಪಿಸುವಂತೆ ತೋರುತ್ತದೆ ಎಂದು ಶ್ಲೋಕದ ತಾತ್ಪರ್ಯ.

ತಿಸೃಭಿಃ ಶಕ್ತಿಭಿಃ— ಪ್ರಭುಶಕ್ತಿ, ಉತ್ಸಾಹಶಕ್ತಿ ಮತ್ತು ಮಂತ್ರಶಕ್ತಿ ಗಳಿಂದ ಇವುಗಳ ವಿವರಣೆಗಾಗಿ ಪದ್ಯಭಾಗದ ೨ನೇ ಪಾಠದ ೧೪ನೇ ಶ್ಲೋಕ ನೋಡಿರಿ, ಅಲಂಘ್ಯಾಭಿಃ—ದಾಟಲುಬಾರದ ನ ಲಂಘ್ಯಾಃ ಅಲಂಘ್ಯಾಃ (ನ.ತ) ತಾಭಿಃ। ಮಹಾಪಗಾಭಿಃ— ದೊಡ್ಡ ನದಿಗಳಿಂದ ಗಂಗಾ, ಸಿಂಧು ಮತ್ತು ರೋಹಿತಾಸ್ಯಾ ಎಂಬ ೩ ದೊಡ್ಡ ನದಿಗಳಿಂದ ಈ ಮೂರು ನದಿಗಳಿಂದ. ಈ ೩ ನದಿಗಳು ಹಿಮಾಲಯವೆಂಬ ಪರ್ವತರಾಜನಿಗೆ ಪ್ರಭುಶಕ್ತಿ, ಉತ್ಸಾಹ ಶಕ್ತಿ, ಮತ್ತು ಮಂತ್ರಶಕ್ತಿಗಳಂತೆ ಇವೆ. ಸ್ವಂ ಭೂಭೃದ್ಭಾವಂ—ತನ್ನ ದೊರೆತನವನ್ನು. ಭುವಂ ಬಿಭರ್ತಿ ಇತಿ ಭೂಭೃತ್ (ಉಪ.ತ.) ತಸ್ಯ ಭಾವಃ (ಷ.ತ.) ತಂ। **ವಿಭಾವಯನ್** ತೋರಿಸುತ್ತ ವ್ಯಕ್ತಗೊಳಿಸುತ್ತ. ವಿ+ಭೂ (೧.ಪ) ಧಾತುವಿನ ಪ್ರಯೋಜಕ ರೂಪದ ವ.ಧಾ.ವಿ (ಪು) ಪ್ರ.ಏ.ವ.

೧೪. ಅನ್ವಯ:— ಏಷಃ ಕುಕ್ಷೀಲಃ ಇದ್ಧೈಃ ಪರಾರ್ಧ್ಯೈಃ ರುದ್ಧ ದಿಙ್ಮುಖೈಃ ಶಿಖರೈಃ ಖಾಂಗಣಂ ಕೀಲಯನ್ ಇವ ಸಿದ್ಧಾಧ್ವಾನಂ ರುಣದ್ಧಿ।

ಭಾಷಾಂತರಃ— ಈ ಪರ್ವತವು ಪ್ರಕಾಶಿಸುವ, ಶ್ರೇಷ್ಠವಾದ ಹಾಗೂ ದಿಕ್ಕುಗಳನ್ನು ತಡೆಗಟ್ಟುವ ತನ್ನ ಶಿಖರಗಳಿಂದ ಆಕಾಶ ಪ್ರದೇಶಕ್ಕೆ ಕೀಲ (ಮೊಳೆ) ಹೊಡೆಯುವದೋ ಎನ್ನುವಂತೆ ಸಿದ್ಧರ ದಾರಿಯನ್ನು ತಡೆಗಟ್ಟುತ್ತದೆ.

ಟಿಪ್ಪಣಿ:— ಹಿಮಾಲಯದ ಶಿಖರಗಳು ಬಹಳ ದೇದೀಪ್ಯಮಾನವಾಗಿವೆ; ಶ್ರೇಷ್ಠವಾಗಿವೆ ಹಾಗೂ ದಿಕ್ಕುಗಳನ್ನು ತಡೆಗಟ್ಟುತ್ತವೆ. ಇಂತಹ ಶಿಖರಗಳು ಆಕಾಶದಲ್ಲಿ ಬಹು ದೂರದ ವರೆಗೆ ಹಬ್ಬಿಕೊಂಡಿವೆ. ಆದ್ದರಿಂದ

ಇವು ಆಕಾಶಕ್ಕೆ ಬೆಣೆ (ಮೊಳೆ) ಹೊಡೆದಂತೆ ತೋರುತ್ತವೆ. ಹೀಗಾಗಿ ಆ ಶಿಖರಗಳು ಆಕಾಶದಲ್ಲಿ ಸಂಚರಿಸುವ ಸಿದ್ಧರ ದಾರಿಯನ್ನು ತಡೆಗಟ್ಟುತ್ತವೆ.

ಕುತ್ಕೀಲಃ— ಪರ್ವತ (**ಕುತ್ಸಿತಾಃ ಕೀಲಾಃ ಯಸ್ಯ ಸಃ ಬ.ಸ.**) ಚೂಪಾದ ತುದಿಗಳುಳ್ಳದು ಇದ್ಧೈಃ— ದೀಪ್ತೈಃ ಪ್ರಕಾಶಿಸುವ ಇಂಧ್(೭.ಆ) ಧಾತುವಿನ ಕರ್ಮಣಿ ಭೂ.ಧಾ.ವಿ (ನ) ತೃ.ಬ.ವ. ಪರಾರ್ಧ್ಯೈಃ—ಬಹು ಬೆಲೆ ಯುಳ್ಳ ಶ್ರೇಷ್ಠವಾದ. ರುದ್ಧದಿಙ್ಮುಖೈಃ- ದಿಕ್ಕುಗಳನ್ನು ತಡೆಗಟ್ಟಿದ. ದಿಶಃ ಏವ ಮುಖಾನಿ ದಿಙ್ಮುಖಾನಿ (ಕ.ಸ.) ರುದ್ಧಾನಿ ದಿಙ್ಮುಖಾನಿ ಯೈಃ ತಾನಿ (ಬ.ಸ.) ತೈಃ। ಖಾಂಗಣಂ — ಆಕಾಶ ಪ್ರದೇಶವನ್ನು. ಖಂ - ಆಕಾಶ. ಅಂಗಣಂ—ಒಳಂಗಳ ಪ್ರದೇಶ. ಖಂ ಏವ ಅಂಗಣಂ (ಕ.ಸ.) ಕೀಲಯನ್ ಇವ—ಕೀಲ ಹೊಡೆಯುವದೋ ಎನ್ನುವಂತೆ ಬೆಣೆ(ಮೊಳೆ) ಹೊಡೆಯುವದೋ ಎನ್ನುವಂತೆ (ಕೀಲಃ—ಬೆಣೆ[ಮೊಳೆ]) ಪರ್ವತದ ಶಿಖರಗಳೇ ಬೆಣೆ(ಮೊಳೆ) ಗಳಂತೆ ಹಾಗೂ ಹಿಮಾಲಯವು ಆಕಾಶದಲ್ಲಿ ಬೆಣೆ(ಮೊಳೆ)ಹೊಡೆಯುವಂತೆ ತೋರುತ್ತವೆ. ಕೀಲಯನ್ ಇದು ಕೀಲ ನಾಮದಿಂದುಂಟಾದ ಕೀಲಯ್ ಎಂಬ ನಾಮಧಾತುವಿನ ವ.ಧಾ.ವಿ.(ಪು)ಪ್ರ.ಏ.ವ. ಇದೆ. ಸಿದ್ಧಾಧ್ವಾನಂ—ಸಿದ್ಧರ ದಾರಿ ಯನ್ನು ಸಿದ್ಧಾನಾಂ ಅಧ್ವಾ ಸಿದ್ಧಾಧ್ವಾ (ಷ.ತ.) ತಂ। ರುಣದ್ಧಿ—ರುಧ್ (೭ಉ) ಧಾತುವಿನ ವ. ತೃ.ಪು.ಏ.ವ. ತಡೆಗಟ್ಟುತ್ತದೆ. ಆಕಾಶದಲ್ಲಿ ಸಂಚರಿ-ಸುವ ಸಿದ್ಧರಿಗೆ ದಾರಿಯಲ್ಲಿರುವ ಈ ಶಿಖರಗಳೆಂಬ ಬೆಣೆ(ಮೊಳೆ)ಗಳಿಂದ ಪ್ರತಿ ಬಂಧವಾಗುತ್ತದೆ.

೧೫. ಅನ್ವಯ:— ಇಹ ಅದ್ರೀಂದ್ರೇ ಸುಧಾಶಿನಾಂ ಪರಃಶತಂ ಆವಾಸಾಃ ಸಂತಿ ಯೇ ಸ್ವಸಂಪದಾ ಅನಲ್ಪಾಂ ಕಲ್ಪಜಾಂ ಲಕ್ಷ್ಮೀಂ ಹಸಂತಿ ಇವ।

ಭಾಷಾಂತರ:— ಇಲ್ಲಿ, ಪರ್ವತಗಳಲ್ಲಿ ಶ್ರೇಷ್ಠವಾದ ಹಿಮಾಲಯದಲ್ಲಿ ಅಮೃತ ಸವಿಯುವ ದೇವತೆಗಳ ನೂರಕ್ಕೆ ಮೇಲ್ಪಟ್ಟು ವಾಸಸ್ಥಳಗಳಿವೆ. ಆ ವಾಸಸ್ಥಳಗಳು ತಮ್ಮ ಸಂಪತ್ತಿನಿಂದ ಅಧಿಕವಾದ ಸ್ವರ್ಗಸಂಪತ್ತನ್ನು (ಕೂಡ) ಪರಿಹಾಸ ಮಾಡುವವೋ ಎನ್ನುವಂತಿವೆ.

ಟಿಪ್ಪಣಿ:— ಅದ್ರೀಂದ್ರೇ—ಶ್ರೇಷ್ಠ ಪರ್ವತದಲ್ಲಿ. ಅದ್ರಿಃ ಇಂದ್ರಃ ಇವ ಅದ್ರೀಂದ್ರಃ (ಕ.ಸ.) ತಸ್ಮಿನ್ ಸುಧಾಶಿನಾಂ—ದೇವತೆಗಳ. ಅಮೃತ ಸೇವಿ ಸುವ ದೇವತೆಗಳ. ಸುಧಾಂ ಅಶ್ನಂತಿ ಇತಿ ಸುಧಾಶಿನಃ (ಉಪ. ತ.)

ತೇಷಾಂ। **ಪರಃಶತಂ**—೧೦೦ಕ್ಕೆ ಮೇಲ್ಪಟ್ಟ ಶತಾತ್ ಪರಾಃ (ಪಂ.ತ.) ಆವಾಸಃ—ವಾಸಸ್ಥಳ. ಅನಲ್ಪಾಂ—ಹೆಚ್ಚಾದ. ನ ಅಲ್ಪಾ ಅನಲ್ಪಾ (ನ. ತ.) ತಾಂ। ಕಲ್ಪಜಾಂ—ಸ್ವರ್ಗಜಾಂ. ಕಲ್ಪಾತ್ ಜಾಯತೇ ಇತಿ (ಉಪ. ತ) ಬೇಡಿದ್ದನ್ನು ಕೊಡುವ ಕಲ್ಪವೃಕ್ಷದಿಂದ ಹುಟ್ಟಿದ. ಅರ್ಥಾತ್ ಸ್ವರ್ಗೀಯ-ವಾದ. ಲಕ್ಷ್ಮೀಂ—ಸಂಪತ್ತನ್ನು ಹಸಂತಿ ಇವ—ಪರಿಹಾಸ ಮಾಡುವವೋ ಎನ್ನುವಂತಿವೆ. ಹಿಮಾಲಯದಲ್ಲಿದ್ದ ದೇವತೆಗಳ ವಾಸಸ್ಥಳಗಳ ಸೌಂದ-ರ್ಯವು ಅಧಿಕವಾದ ಸ್ವರ್ಗಸಂಪತ್ತನ್ನು ಕೂಡ ಮೀರಿದೆ ಎಂದು ಶ್ಲೋಕದ ತಾತ್ಪರ್ಯ.

೧೬. ಅನ್ವಯ:— ಇತಿ ಅನೇಕಗುಣೇ ಅಸ್ಮಿನ್ ಗಿರೌ ಅಪಿ ಏಕಃ ಮಹಾನ್ ದೋಷಃ ಅಸ್ತಿ। ಯತ್ ಗುರುಃ ಅಪಿ (ಅಯಂ) ಪರ್ಯಂತಗ-ತಾನ್ ಅಗುರುದ್ರುಮಾನ್ ಧತ್ತೇ।

ಭಾಷಾಂತರ:— ಹೀಗೆ ಬಹಳ ಗುಣಗಳುಳ್ಳ ಈ ಪರ್ವತದಲ್ಲಿಯೂ ಸಹ ಒಂದ ದೊಡ್ಡ ದೋಷವಿದೆ. ಏನೆಂದರೆ, ತಾನು ದೊಡ್ಡದಿದ್ದರೂ (ಗುರು) ತನ್ನ ಸೀಮಾಪ್ರದೇಶದಲ್ಲಿದ್ದ ಸಣ್ಣ ಗಿಡಗಳನ್ನು (ಚಂದನಗಿಡಗಳನ್ನು) [ಅಗುರು] ಧರಿಸಿದೆ.

ಟಿಪ್ಪಣಿ:— ಅನೇಕಗುಣೇ—ಬಹಳ ಗುಣಗಳುಳ್ಳ. ನ ಏಕಃ ಅನೇಕೇ (ನ. ತ.) ಅನೇಕೇ ಗುಣಾಃ ಯಸ್ಯ ಸಃ (ಬ. ಸ.) ತಸ್ಮಿನ್ ಯತ್—ಏನೆಂದರೆ ಆ ದೋಷ ಯಾವದೆಂದರೆ [ನಿಜವಾಗಿ ವಿಚಾರಿಸಿದಲ್ಲಿ ದೋಷವಿಲ್ಲ. ಆದರೆ ವಿರೋಧಾಭಾಸ ಅಲಂಕಾರ ಇದ್ದುದರಿಂದ ಆಪಾತತಃ ಒಂದು ದೋಷ-ವಿದೆ. ಆ ದೋಷವಾದರೋ ಕವಿ ಹೇಳುವ ಶಾಬ್ದಿಕ ದೋಷ] ಈ ಹಿಮಾ-ಲಯದಲ್ಲಿ ಬಹಳ ಗುಣಗಳಿದ್ದರೂ ಕೂಡ ೧ ದೊಡ್ಡ ದೋಷ ಇದೆ. ಈ ಹಿಮಾಲಯವು ಬಹಳ ದೊಡ್ಡದು—**ಗುರು**—ಇದೆ; ಆದರೆ ತಾನು ಸಣ್ಣ— **ಅಗುರು**— ಗಿಡಗಳನ್ನು ಧರಿಸಿದೆ. ಹೀಗೆ **ಗುರು** (ದೊಡ್ಡದು) ಆದ ತಾನು **ಅಗುರು** (ಸಣ್ಣ) ಗಿಡಗಳನ್ನು ಧರಿಸಿದ ದೋಷಕ್ಕೆ (ಗುರು, ಅಗುರುಗಳ-ಲ್ಲಿರುವ ಪರಸ್ಪರ ಶಾಬ್ದಿಕ ವಿರೋಧ) ಪಾತ್ರವಾಗಿದೆ. ಈ ವಿರೋಧ ದೋಷ ವನ್ನು ದೂರ ಮಾಡುವ ಉಪಾಯವೆಂದರೆ ಅಗುರು ಶಬ್ದಕ್ಕೆ ಇನ್ನೊಂದು ಅರ್ಥ ಮಾಡುವದು. ಅಗುರು ಎಂದರೆ ದೊಡ್ಡದಲ್ಲದ್ದು, ಸಣ್ಣದು, ಎಂದು

ಅರ್ಥ ಮಾಡದೆ, ಚಂದನ ಎಂದು ಅರ್ಥಮಾಡಬೇಕು. ಅಗುರುದ್ರುಮಾನ್ ಎಂದರೆ ಚಂದನಗಿಡಗಳನ್ನು (ಧರಿಸಿದೆ) ಎಂದು ವಿರೋಧ ಪರಿಹರಿಸಬೇಕು ಅಗುರು ಎಂದರೆ ಚಂದನವೆಂದು ಕೋಶದಲ್ಲಿ ಅರ್ಥವಿದೆ. ಪರ್ಯಂತ-ಗತಾನ್–ಸೀಮಾಪ್ರದೇಶದಲ್ಲಿದ್ದ. ಪರ್ಯಂತಃ–ಸೀಮಾಪ್ರದೇಶ. ಪರ್ಯಂತಂ ಗತಾಃ (ದ್ವಿ. ತ.) ತಾನ್ ।

೧೭. ಅನ್ವಯ:— ಯಃ ಯೋಜನಶತೋಚ್ಛ್ರಾಯಃ, ಮೂಲೇ ತಾವತ್ ಚ ವಿಸ್ತೃತಃ, ಮೂರ್ಧ್ನಿ ತದರ್ಧವಿಸ್ತೃತಿಃ (ವರ್ತತೇ ಸಃ ಅಯಂ) ಭುವಃ ಮೌಲಿಃ ಉದ್ಗತಃ ಇವ ।

ಭಾಷಾಂತರ:— ನೂರು ಯೋಜನ ಎತ್ತರವೂ ತಳದಲ್ಲಿ ಅಷ್ಟೇ ಅಗಲವೂ, ಮತ್ತು ತುದಿಯಲ್ಲಿ. (ಅದರ ಅರ್ಧ, ಎಂದರೆ) ಐವತ್ತು ಯೋಜನ ವಿಸ್ತಾರವೂ ಆಗಿರುವ ಈ ಹಿಮಾಲಯವು ಭೂಮಿಯ ಕಿರೀಟವು ಮೇಲೆ ಬಂದಿದೆಯೋ ಎನ್ನುವಂತಿದೆ.

ಟಿಪ್ಪಣಿ:– ಯೋಜನಶತೋಚ್ಛ್ರಾಯಃ–೧೦೦ ಯೋಜನ ಎತ್ತರವಿದ್ದ. ಉಚ್ಛ್ರಾಯಃ–ಎತ್ತರ. ಯೋಜನಾನಾಂ ಶತಂ ಯೋಜನಶತಂ (ಷ.ತ.ಸ.) ಯೋಜನಶತಂ ಉಚ್ಛ್ರಾಯಃ ಯಸ್ಯ ಸಃ (ಬ. ಸ.) ಮೂಲೇ–ತಳದಲ್ಲಿ. ವಿಸ್ತೃತ–ಅಗಲವಾದ. ಮೂರ್ಧ್ನಿ–ತುದಿಯಲ್ಲಿ. ತದರ್ಧವಿಸ್ತೃತಿಃ–ಅದರ ಅರ್ಧದಷ್ಟು (ಎಂದರೆ ೫೦ ಯೋಜನ) ವಿಸ್ತಾರವುಳ್ಳ. ಭುವಃ–ಭೂಮಿಯ ಭೂ (ಸ್ತ್ರೀ) ಶಬ್ದದ ಷ. ಏ. ವ. ಮೌಲಿ (ಪು)–ಕಿರೀಟ. ಯೋಜನಂ–೪ ಕ್ರೋಶ ಇಲ್ಲವೆ ೮ ಮೈಲು ಉದ್ದಳತೆ. ಹಿಮಾಲಯ ಪರ್ವತವು ಭೂಮಿಗೆ ಕಿರೀಟದಂತಿದೆ. ಅತ್ಯಂತ ವಿಶಾಲವಾದ ಭೂಮಿಗೆ ಬಹು ದೊಡ್ಡ ಕಿರೀಟ-ವಿರಲು ಸಾಕು. ಅದುವೇ ಈ ಹಿಮಾಲಯ ಪರ್ವತ. ಆ ಕಿರೀಟ ಭೂಮಿ-ಯಿಂದ ಸಿಡಿದೆದ್ದು ಮೇಲೆ ಬಂದಿದೆಯೋ ಎನ್ನುವಂತಿದೆ.

೧೮. ಅನ್ವಯ:— ಏವಂ ಸಃ ಶೈಲಃ ಭುವನಸ್ಯ ಅನಶ್ವರಂ ಏಕಂ ಲಲಾಮ (ಅಸ್ತಿ) । ಯತ್ರ ಸ್ವರ್ಗವಾಸೇ ಅಪಿ ಅನಾದರಾಃ ತ್ರಿದಶಾಃ ರಮಂತೇ ।

ಭಾಷಾಂತರ:— ಹೀಗೆ ಆ ಹಿಮಾಲಯವು ಭೂಮಿಗೆ, ಶಾಶ್ವತವಾದ ಒಂದೇ ಒಂದು (ಅಥವಾ ಮುಖ್ಯ) ಅಲಂಕಾರವಾಗಿದೆ. ಅಲ್ಲಿ, ಸ್ವರ್ಗದಲ್ಲಿ-ರುವದರಲ್ಲಿ ಕೂಡ ಆದರವಿಲ್ಲದ ದೇವತೆಗಳು ಕ್ರೀಡಿಸುತ್ತಾರೆ.

ಟಿಪ್ಪಣಿ:— ಅನಶ್ವರಂ—ನಾಶಹೊಂದದ, ಶಾಶ್ವತವಾದ ನ ನಶ್ವರಂ (ನ. ತ.) ಏಕಂ — ಒಂದೇಒಂದು, ಮುಖ್ಯ. ಲಲಾಮ — ಅಲಂಕಾರ, ಭೂಷಣ, ಆಭರಣ. ಲಲಾಮನ್ (ನ) ಶಬ್ದದ ಪ್ರ. ಏ. ವ. ಸ್ವರ್ಗವಾಸೇ ಸ್ವರ್ಗದಲ್ಲಿರುವವರಲ್ಲಿ ಸ್ವರ್ಗೇ ವಾಸಃ (ಷ. ತ. ಸ.) ತಸ್ಮಿನ್ । ಅನಾದರಾಃ– ಅವಿದ್ಯಮಾನಃ ಆದರಃ ಯೇಷಾಂ ತೇ (ಬ.ಸ.) । ತ್ರಿದಶಾಃ— (i) ತಿಸ್ರಃ ದಶಾಃ ಯೇಷಾಂ ತೇ, ಬಾಲ್ಯ, ಕೌಮಾರ ಹಾಗೂ ಯೌವನಾವಸ್ಥೆ ಎಂಬ ಮೂರೇ ಅವಸ್ಥೆಗಳುಳ್ಳ ದೇವತೆಗಳು. (ii) ಯಾವಾಗಲೂ ಮೂರನೆಯ ದಾದ ತಾರುಣ್ಯಾವಸ್ಥೆಯುಳ್ಳವರು. (iii) ಆಧ್ಯಾತ್ಮಿಕ ಮೊದಲಾದ ೩ ತಾಪಗಳನ್ನು ತಪೋಬಲದಿಂದ ಕಿತ್ತೊಗೆದ ದೇವತೆಗಳು. ರಮಂತೇ— ಕ್ರೀಡಿಸುತ್ತಾರೆ. ರಮ್ (೧. ಆ.) ಧಾತುವಿನ ವ. ತೃ. ಪು. ಬ. ವ.

## EXERCISES

**ಅಭ್ಯಾಸಕ್ಕಾಗಿ ಪ್ರಶ್ನೆಗಳು:–**

**೧. ಕನ್ನಡಕ್ಕೆ ಪರಿವರ್ತಿಸಿರಿ:–** (i) ಶ್ಲೋಕ ೨, ೩, ೪. (ii) ಶ್ಲೋಕ ೮, ೯. (iii) ಶ್ಲೋಕ ೧೩, ೧೬.

**೨. ವಿಗ್ರಹಿಸಿ ಸಮಾಸಗಳ ಹೆಸರು ಹೇಳಿರಿ:—** ಉತ್ತುಂಗಃ; ದುರುತ್ತರಃ; **ಅನುಸಾನು;** ನಭಶ್ಚರಾಃ; ಧೃತಶ್ರೀಃ; ಗಂಗಾಸಿಂಧೂ; **ಪರಃಶತಂ;** ಸಪ್ರೇಯಸ್ಯಃ;

**೩. ರೂಪ ಗುರುತಿಸಿರಿ:– ಅಧ್ಯುಷಿತಾ;** ಧತ್ತೇ; ವಿಭಾವಯನ್ ಆಭಿಃ; ಅಧ್ವಸಿ.

**೪. ಲಘು ಟಿಪ್ಪಣಿ ಬರೆಯಿರಿ:–** ಕುಲಕ್ಷೋಣೀಭೃತ್; ಸಿದ್ಧಾಃ ವಿದ್ಯಾಧರಾಃ; ಅಪ್ಸರಸಃ; ಸ್ಮಾರ್ತಾಃ; ತಿಸ್ರಃ ಶಕ್ತಯಃ; ತ್ರಿದಶಾಃ.

**೫. ವಾಕ್ಯಗಳಲ್ಲಿ ಉಪಯೋಗಿಸಿರಿ:–** ಅಹೋ;

**೬. ಪ್ರಯೋಗ ಬದಲಿಸಿರಿ:—** (i) ಅಯಂ ಹಿಮಾಲಯಃ ಭೂಭೃದನುಕ್ರಿಯಾಂ ಧತ್ತೇ । (ii) ಅಸ್ಯ ಮೂರ್ಧ್ನಿ ಪದ್ಮಹ್ರದಃ ಅಸ್ತಿ । (iii) ಏಷಃ ತಾಂ ಸ್ವೇನ ಮೂರ್ಧ್ನಾ ಬಿಭರ್ತಿ ।

**೭. ಸಂಧಿ ಬಿಡಿಸಿರಿ:—** (i) ಮಹಾಪಗಾಭಿರಿತ್ಯಾಭಿರಲಂಘ್ಯಾ-ಭಿರ್ವಿಭಾತ್ಯಯಂ । (ii) ದ್ವೋಷೋಽಸ್ತ್ಯೇಕೋಮಹಾನ್. (iii) ಲಲಾ-ಮೈವಮನಶ್ವರಂ. (iv) ಇತ್ಯನೇಕಗುಣೇಷ್ವಸ್ಮಿನ್. (v) ಮೌಲಿರಿವೋ-ದ್ಗತಃ ।

# ೫. ಮನೋರಮಾಯಾ ಮನೋಭಂಗಃ

**ಕವಿ ಹಾಗೂ ಕಾವ್ಯ**—ಈ ಪಾಠವನ್ನು ಶ್ರೀವರ್ಧಮಾನ ಭಟ್ಟಾರಕ ವಿರಚಿತವಾದ **ಶ್ರೀವರಾಂಗಚರಿತ**ದಲ್ಲಿಯ **"ಸುನಂದಾಲಾಭ ಮನೋರಮಾ ವಿರಹ ದುಃಖಾವಸ್ಥಾ ವರ್ಣನಂ"** ಎಂಬ ೯ ನೆಯ ಸರ್ಗದಿಂದ ಆಯ್ದುಕೊಳ್ಳಲಾಗಿದೆ.

**ಕವಿ:**— ಶ್ರೀವರಾಂಗಚರಿತವನ್ನು ಶ್ರೀವರ್ಧಮಾನ ಭಟ್ಟಾರಕ ಎಂಬ ಜೈನಕವಿಯು ರಚಿಸಿದ್ದಾನೆ, ಈತನ ದೇಶಕಾಲ ವಂಶಗಳ ಬಗ್ಗೆ ಸಾಕಷ್ಟು ವಿವರಗಳು ತಿಳಿದು ಬಂದಿಲ್ಲ. ಕವಿಯು ಈ ಗ್ರಂಥದ ಕೊನೆಗೆ ಹೇಳುವ ಶ್ಲೋಕದಿಂದ [XIII-87] ಈತನು **ಜೈನಸಂಪ್ರದಾಯ**ದಲ್ಲಿಯ **ಬಲಾತ್ಕಾರಗಣ**ದಲ್ಲಿಯ **ಭಾರತೀಗಚ್ಛ**ದವನೂ ಪ್ರಸಿದ್ಧನಾದ **ಭಟ್ಟಾರಕ**ನೂ ಆಗಿದ್ದನೆಂದು ತಿಳಿದು ಬರುವದು. ಕವಿ ಅನೇಕ ಅನ್ಯಮತೀಯ ವಾದಿಗಳನ್ನು ಜಯಿಸಿ ವಾದಿಭಯಂಕರನೂ ಪಂಡಿತಶ್ರೇಷ್ಠನೂ ಆಗಿದ್ದನು. ಈತನಿಗೆ **"ಪರವಾದಿದಂತಿ ಪಂಚಾನನ"** ಎಂಬ ಬಿರುದು ಇದ್ದಂತೆ ತಿಳಿದು ಬರುತ್ತದೆ. ಈತನು ಹಂಚದ ಶಾಸನವನ್ನು ಬರೆದಿದ್ದಾನೆಂದು ಕೆಲವರು ಅಭಿಪ್ರಾಯ ಪಡುತ್ತಾರೆ. ಈತನು ಕ್ರಿ. ಶ. **೧೬ನೆಯ ಶತಮಾನದ** ಮಧ್ಯದಲ್ಲಿ ಇದ್ದಂತೆ ಕಂಡುಬರುತ್ತದೆ.

**ಕಾವ್ಯ:**— ಕವಿಯು ವರಾಂಗ ಯುವರಾಜನ ಚರಿತ್ರೆಯ ಮುಖಾಂತರ ಸಮ್ಯಗ್‌ದರ್ಶನದ ಮಹತ್ವವನ್ನು ಜಗತ್ತಿಗೆ ತೋರಿಸಿಕೊಡುವದಕ್ಕಾಗಿ ೧೩ ಸರ್ಗಗಳುಳ್ಳ ಈ ಕಾವ್ಯವನ್ನು ರಚಿಸಿದ್ದಾನೆ. ಆತ್ಮೋನ್ನತಿಯ ಮಾರ್ಗಗಳಾದ ಐಹಿಕ ಹಾಗೂ ಆಮುಷ್ಮಿಕ (ಪಾರಲೌಕಿಕ) ಗಳ ವರ್ಣನೆ ಕಾವ್ಯದುದ್ದಕ್ಕೂ ಇದೆ. ಆದರೆ ಕೇವಲ ತತ್ವಜ್ಞಾನದಿಂದ ಕೂಡಿ ಕಾವ್ಯ-ನೀರಸವಾಗಿದೆ ಎಂದು ತಿಳಿಯಕೂಡದು. ಇದೊಂದು ಕಾವ್ಯಗುಣಗಳಿಂದ-ಕೂಡಿದ ಶ್ರೇಷ್ಠಗ್ರಂಥ. ಸುಂದರವಾದ ಸರಳ ಶೈಲಿಯಿಂದ ರಚಿಸಲ್ಪಟ್ಟ ಈ ಗ್ರಂಥದಲ್ಲಿ ತತ್ವಜ್ಞಾನ ಹಾಗೂ ಕಥೆ ಹಾಸುಹೊಕ್ಕಾಗಿ ಹೆಣೆಯಲ್ಪಟ್ಟಿವೆ.

ಈ ಗ್ರಂಥವನ್ನು ಜಟಿಲ-ಸಿಂಹನಂದಿಯ ವರಾಂಗಚರಿತದ ಆಧಾರದ ಮೇಲೆ ಬರೆದಿದ್ದಾನೆ. ಜಟಿಲ-ಸಿಂಹನಂದಿಯು ೩೧ ಸರ್ಗಗಳಲ್ಲಿ ಹೇಳಿದ ಕಥೆಯನ್ನು ವರ್ಧಮಾನನು ೧೩ ಸರ್ಗಗಳಲ್ಲಿ ಹೇಳಿದ್ದಾನೆ. ಅಲ್ಲಿಯ ವಿಸ್ತೃತವಾದ ವರ್ಣನೆ, ತತ್ವೋಪದೇಶ, ಧಾರ್ಮಿಕ ಉಪದೇಶ ಇಲ್ಲಿ

ಹೆಚ್ಚಾಗಿ ಇಲ್ಲ. ಆದರೆ ಮೂಲ ಕಥೆ ಮಾತ್ರ ಎರಡೂ ಗ್ರಂಥಗಳಿಗೆ ಒಂದೇ ಆಗಿದೆ. ಅಲ್ಲದೆ ಘಟನೆಗಳು ಹಾಗೂ ಪ್ರಸಂಗಗಳೂ ಕೂಡ ಎರಡೂ ಕಾವ್ಯಗಳಲ್ಲಿ ಅದೇ ಕ್ರಮದಲ್ಲಿ ಬರುತ್ತವೆ. ಜಟಿಲಸಿಂಹನಂದಿಯ ಭಾಷೆ ಹಾಗೂ ಶೈಲಿಯನ್ನು ಕೂಡ ಸ್ವಲ್ಪಮಟ್ಟಿಗೆ ಅನುಸರಿಸಿದ್ದಾನೆ. ಜಟಿಲ-ಸಿಂಹನಂದಿಗೆ ಧಾರ್ಮಿಕದೃಷ್ಟಿ ಮಹತ್ವದ್ದಾದರೆ ವರ್ಧಮಾನನಿಗೆ ಚರಿತ್ರದೃಷ್ಟಿ ಹೆಚ್ಚು ಮಹತ್ವದ್ದು. ಜಟಿಲಸಿಂಹನಂದಿಯ ಕಾವ್ಯವನ್ನು ಸಂಗ್ರಹಿಸಿದ್ದೇನೆ ಎಂಬ ಉದ್ದೇಶದಿಂದಲೇ ವರ್ಧಮಾನ ಕವಿಯು ಈ ಕೆಳಗಿನ ಶ್ಲೋಕವನ್ನು ತನ್ನ ಗ್ರಂಥದಲ್ಲಿ ಬರೆದಂತೆ ಕಾಣುತ್ತದೆ.

ಗಣೇಶ್ವರೈರ್ಯಾಕಥಿತಾ ಕಥಾವರಾವರಾಂಗ ರಾಜನ್ಯಸವಿಸ್ತರಂಪುರಾ-
ಮಯಾಪಿ ಸಂಕ್ಷಿಪ್ಯ ಚ ಸೈವ ವರ್ಣ್ಯತೇ ಸುಕಾವ್ಯಬಂಧೇನ
ಸುಬುದ್ಧಿವರ್ಧಿನೀ ॥

೧೩ನೆಯ ಶತಮಾನದನಂತರ ಜಟಿಲಸಿಂಹನಂದಿಯ ವರಾಂಗಚರಿತವು ಅಷ್ಟೊಂದು ಲೋಕಪ್ರಿಯವಾದಂತೆಕಾಣದು. ವರ್ಧಮಾನಕವಿಯಿಂದ ಶ್ರೀ ವರಾಂಗಚರಿತವು ರಚಿಸಲ್ಪಟ್ಟನಂತರ ಜಟಿಲಸಿಂಹನಂದಿಯ ಕಾವ್ಯವು ಹಿಂದೆಬಿದ್ದು ವರ್ಧಮಾನ ಕವಿಯ ಕಾವ್ಯವೇ ಹೆಚ್ಚು ಲೋಕಪ್ರಿಯವಾಯಿತು. ಕನ್ನಡ ಹಾಗೂ ಹಿಂದೀ ಭಾಷೆಗಳಲ್ಲಿ ಕೂಡ ಶ್ರೀ ವರಾಂಗ ಚರಿತವನ್ನು ಆದರಿಸಿ ವರಾಂಗಚರಿತಗಳು ರಚಿಸಲ್ಪಟ್ಟವು. ಹೀಗೆ ವರ್ಧಮಾನ ಭಟ್ಟಾರಕನ ಶ್ರೀ ವರಾಂಗಚರಿತವು ತುಂಬ ಲೋಕಪ್ರಿಯವಾದ ಕಾವ್ಯವಾಗಿದೆ.

**ಉಪಲಬ್ಧವಾಗಿರುವ ವರಾಂಗ ಚರಿತಗಳು:**–ವರಾಂಗ ಯುವರಾಜನ ಕಥೆ ತುಂಬ ಪವಿತ್ರವಾದದ್ದು ಹಾಗೂ ಲೋಕಪ್ರಿಯವಾದದ್ದು ಇರುತ್ತದೆ. ಸಂಸ್ಕೃತ ಕನ್ನಡ ಹಿಂದೀ ಭಾಷೆಗಳಲ್ಲಿಕೂಡ ಬೇರೆ ಬೇರೆ ವರಾಂಗ ಚರಿತಗಳು ರಚಿಸಲ್ಪಟ್ಟಿವೆ ಎಂಬುದೇ ಇದಕ್ಕೆ ನಿದರ್ಶನ ಅವು ಇಂದಿಗೂ ಪ್ರಸಿದ್ಧವೂ ಲೋಕಪ್ರಿಯವೂ ಆಗಿವೆ.

| | ಗ್ರಂಥ | ಕವಿ | ಭಾಷೆ |
|---|---|---|---|
| ೧. | ವರಾಂಗಚರಿತಂ | ಜಟಿಲಸಿಂಹನಂದಿ | ಸಂಸ್ಕೃತದಲ್ಲಿ. |
| ೨. | ಶ್ರೀ ವರಾಂಗಚರಿತಂ | ವರ್ಧಮಾನ ಭಟ್ಟಾರಕ | ಸಂಸ್ಕೃತದಲ್ಲಿ. |
| ೩. | ವರಾಂಗಚರಿತ | ಧರಣೀಪಂಡಿತ | ಕನ್ನಡದಲ್ಲಿ. |
| ೪. | ವರಾಂಗಚರಿತ | ಲಾಲಚಂದ | ಹಿಂದೀಯಲ್ಲಿ. |
| ೫. | ವರಾಂಗಚರಿತ | ಕಮಲಾನಯನ | ಹಿಂದೀಯಲ್ಲಿ. |

**ವರಾಂಗಚರಿತೆಯ ಕಥಾಸಾರಾಂಶ:** — "ಉತ್ತಮಪುರದ ಅರಸನಾದ **ಧರ್ಮಸೇನನಿಗೆ** ಗುಣವತಿ ಮೊದಲಾದ ೩೦೦ ಜನ ರಾಣಿಯರಿದ್ದರು. **ಗುಣವತಿ**ಯಿಂದ ಆತನಿಗೆ **ವರಾಂಗ**ನೆಂಬ ಸದ್ಗುಣಿಯಾದ ಮಗನಿದ್ದನು. ರಾಜನು ಅವನಿಗೆ ೧೦ ಜನ ರಾಜಕುಮಾರಿಯರನ್ನು ಮದುವೆ ಮಾಡಿದನು. ಒಂದು ಸಲ ಅರಿಷ್ಟ ನೇಮಿಯ ಶಿಷ್ಯನಾದ ವರದತ್ತನು ಉತ್ತಮಪುರಕ್ಕೆ ಬರಲು ಧರ್ಮಸೇನನು ಭಕ್ತ್ಯಾದರಗಳಿಂದ ಬರಮಾಡಿಕೊಂಡನು. ವರದತ್ತನು ಧರ್ಮವನ್ನು ಕುರಿತು ಉಪದೇಶಪರವಾದ ಹಲವು ಭಾಷಣಗಳನ್ನು ಮಾಡಿದನು. ವರಾಂಗನು ಸಮ್ಯಕ್ತ್ವಸಹಿತವಾದ ೫ ಅಣುವ್ರತಗಳನ್ನು ಸ್ವೀಕರಿಸಿದನು. ಕೆಲಕಾಲದನಂತರ ರಾಜನು ವರಾಂಗನನ್ನು ಯುವರಾಜನನ್ನಾಗಿ ನೇಮಿಸಿದನು ಇದರಿಂದ ಮಲತಾಯಿಯಾದ ಮೃಗಸೇನೆ ಅವಳ ಮಗನಾದ ಸುಶೇಣ ಹಾಗೂ ಮಂತ್ರಿಯಾದ ಸುಬುದ್ಧಿ ಇವರು ಒಂದು ಪಕ್ಷವಾಗಿ **ವರಾಂಗನ ವಿರುದ್ಧವಾಗಿ ಸಂಚನ್ನು ನಡಿಸಿದರು.** ತೋರಿಕೆಗೆ ವಿಶ್ವಾಸಿಕನಂತೆ ತೋರುವ ಸುಬುದ್ಧಿಯಾದರೋ ಸುಶೇಣನನ್ನು ಪಟ್ಟಕ್ಕೆ ಕೂಡಿಸಲು ಯೋಗ್ಯ ಸಮಯಕ್ಕಾಗಿ ಹೊಂಚು ಕಾಯುತ್ತಿದ್ದನು. ಒಮ್ಮೆ ೨ ಕುದುರೆಗಳನ್ನು ತರಬೇತುಗೊಳಿಸಿದನು. ಒಂದು ಕುದುರೆ ಸಾಧುವಾಗಿಯೂ ಇನ್ನೊಂದು ದುಷ್ಟವೂ ಖೊಟ್ಟಿಯೂ ಆಗಿದ್ದವು.' ಈ ಕುದುರೆಗಳ ಯೋಗ್ಯತೆಯ ಪ್ರದರ್ಶನವನ್ನು ಏರ್ಪಡಿಸಿದನು. ಮಂತ್ರಿಯ ತಂತ್ರದಿಂದಾಗಿ ವರಾಂಗನು ದುಷ್ಟ ಖೊಟ್ಟಿ ಕುದುರೆಯನ್ನು ಏರಿದನು. ಆ ಕುದುರೆಯು ವರಾಂಗನನ್ನು ಒಳ್ಳೇ ವೇಗದಿಂದ ದಟ್ಟಡವಿಗೆ ತೆಗೆದುಕೊಂಡು ಹೋಗಿ ಒಳ್ಳೇ ರಭಸದಿಂದ ವರಾಂಗನನ್ನು ಕೆಡವಿ ತಾನು ಬಾವಿಯಲ್ಲಿ ಬಿದ್ದಿತು. ಅಸಹಾಯ ಸ್ಥಿತಿಯಲ್ಲಿ ದಟ್ಟಡವಿಯಲ್ಲಿ ಅಲೆಯುವ ವರಾಂಗನಿಗೆ ಅನೇಕ ಸಂಕಟಗಳು ಒದಗಿದವು. ಒಂದು ಸಲ ಆನೆಯ ಸಹಾಯದಿಂದ ಹುಲಿಯ ಬಾಯಿಯಿಂದ ಪಾರಾದನು. ಮತ್ತೊಂದು ಸಲ ಸುಂದರ ಸ್ತ್ರೀ ರೂಪ ಧರಿಸಿದ ಯಕ್ಷಿಣಿಯ ಸಹಾಯದಿಂದ ಮೊಸಳೆಯ ಹಿಡಿತದಿಂದ ತಪ್ಪಿಸಿಕೊಂಡನು. ಆ ಸ್ತ್ರೀಯು ವರಾಂಗನನ್ನು ತನ್ನ ಮೋಹಪಾಶದಲ್ಲಿ ಕೆಡವಲು ಯತ್ನಿಸಿದರೂ ಕೂಡ ಅವನು ಅವಳಿಗೆ ಬಲಿಯಾಗದ್ದನ್ನು ಕಂಡು ಅವಳು ಸುಪ್ರೀತಳಾದಳು. ಅಸಹಾಯ ಸ್ಥಿತಿಯಲ್ಲಿ ಅಲೆಯುತ್ತಿರಲು ಬೇಡರಿಂದ ಹಿಡಿಯಲ್ಪಟ್ಟು ಸೆರೆಯಲ್ಲಿ ಇಡಲ್ಪಟ್ಟನು. ಹಾವಿನಿಂದ ಕಚ್ಚಲ್ಪಟ್ಟ ಬೇಡರೊಡೆಯನ ಮಗನನ್ನು ಗುಣಪಡಿಸಿದುದರಿಂದ ಸೆರೆಯಿಂದ ಮುಕ್ತನಾದನು. ಒಂದು ಸಲ ಸಾಗರ

ಬುದ್ಧಿ ಹಾಗೂ ಆತನ ಸಂಗಡಿಗರಾದ ವ್ಯಾಪಾರಿಗಳನ್ನು ಭಿಲ್ಲರ ದಾಳಿಯಿಂದ ರಕ್ಷಿಸಿ ಸಾಗರಬುದ್ಧಿಯ ಸಂಗಡ ಲಲಿತಪುರಕ್ಕೆ ಬಂದು ತನ್ನ ಗುರುತು ಪರಿಚಯವನ್ನು ಮರೆಮಾಚಿ **ಕಶ್ಚಿದ್ಭಟನೆಂಬ ಹೆಸರಿನಿಂದ ಸಾಗರಬುದ್ಧಿಯ ಮಗನೋಪಾದಿಯಲ್ಲಿ ಇರತೊಡಗಿದನು.** ಸಾಗರಬುದ್ಧಿಯು ಈತನನ್ನು ವ್ಯಾಪಾರಸ್ಥರ ಮುಖಂಡನನ್ನಾಗಿ ಮಾಡಿದನು. ಇತ್ತ ಉತ್ತಮಪುರದಲ್ಲಿ ವರಾಂಗನ ತಂದೆತಾಯಿ ಹಾಗೂ ರಾಣಿಯರು ಆಕಸ್ಮಿಕವಾಗಿ ವರಾಂಗನು ಕಣ್ಮರೆಯಾದುದರಿಂದ ಬಹಳವಾಗಿ ದುಃಖಪಟ್ಟರು. ಒಬ್ಬ ಸನ್ಯಾಸಿಯಿಂದ ಧರ್ಮೋಪದೇಶವನ್ನು ಕೇಳಿ ಸಂಸಾರದ ಮೋಹವನ್ನು ತೊರೆದು ಜೀವಿಸ ತೊಡಗಿದರು. ಇತ್ತ ಮಥುರೆಯ ದೊರೆ ದುರಾಶೆಯಿಂದ ಪ್ರೇರಿತನಾಗಿ ಲಲಿತಪುರದ ಮೇಲೆ ದಾಳಿ ಮಾಡಿದಾಗ ಅವನನ್ನು ಸಂಪೂರ್ಣವಾಗಿ ಸೋಲಿಸಿ ಕಶ್ಚಿದ್ಭಟನು ಪ್ರಸಿದ್ಧಿಗೆ ಬಂದನು. ದೊರೆ ಅರ್ಧ ರಾಜ್ಯವನ್ನು ಕೊಟ್ಟು ಮಗಳಾದ ಸುನಂದೆಯನ್ನು ವಿವಾಹ ಮಾಡಿಕೊಟ್ಟನು. ಸುನಂದೆಯೊಡನೆ ಕೂಡಿಕೊಂಡು ಎಲ್ಲ ಭೋಗಗಳನ್ನು ಭೋಗಿಸಿದನು. ಒಂದುಸಲ ರಾಜನ ದರಬಾರಕ್ಕೆ ಹೋಗುವಾಗ ರಾಜಕುಮಾರಿಯಾದ ಮನೋರಮೆಯು ಈತನನ್ನು ಕಿಡಿಕಿಯೊಳಗಿಂದ ನೋಡಿ ಈತನಲ್ಲಿ ಅನುರಕ್ತಳಾಗಿ ಪ್ರಣಯ ಭಿಕ್ಷೆ ಬೇಡಿದರೂ ಕೂಡ ಧರ್ಮಭೀರುವಾದ ಕಶ್ಚಿದ್ಭಟನು ಅವಳ ಪ್ರಣಯವನ್ನು ನಿರಾಕರಿಸಿದನು. ಮುಂದೆ ರಾಜನು ಮನೋರಮೆಯನ್ನು ಕಶ್ಚಿದ್ಭಟನಿಗೆ ಮದುವೆ ಮಾಡಿಕೊಟ್ಟನು. ಕಶ್ಚಿದ್ಭಟನು ಮನೋರಮೆಯೊಡಗೂಡಿ ಸಕಲ ಭೋಗಗಳನ್ನು ಭೋಗಿಸಿದನು. ಧರ್ಮಸೇನನು ಲಲಿತಪುರದ ಅರಸನನ್ನು ಬೇಡಿಕೊಂಡಮೇರೆಗೆ ಕಶ್ಚಿದ್ಭಟನು ಬಕುಲೇಶ್ವರನನ್ನು ಸೋಲಿಸಿ ಉತ್ತಮಪುರವನ್ನು ಪ್ರವೇಶಿಸಿದನು. ವರಾಂಗನು ಮರಳಿ ಬಂದುದರಿಂದ ಎಲ್ಲರೂ ಸಂತೋಷಪಟ್ಟರು. ತನಗೆ ಕೇಡು ಬಗೆದವರನ್ನು ಕ್ಷಮಿಸಿ ತಂದೆ-ತಾಯಿಯ ಅಪ್ಪಣೆ ಪಡೆದು ದಿಗ್ವಿಜಯಕ್ಕೆ ಹೊರಟನು. ಸರಸ್ವತೀ ನದಿಯ ದಂಡೆಯ ಮೇಲೆ ಆನರ್ತಪುರವೆಂಬ ರಾಜ್ಯವನ್ನು ಸ್ಥಾಪಿಸಿ ಸುಖದಿಂದ ರಾಜ್ಯವಾಳತೊಡಗಿದನು. ವರಾಂಗನು ಮುಂದೆ ಮನೋಹರಾ ಎಂಬ ಬೇರೊಬ್ಬ ರಾಜಕನ್ಯೆಯನ್ನು ಮದುವೆಯಾಗಿ ಸಕಲ ಸುಖಗಳನ್ನು ಅನು-ಭವಿಸುತ್ತ ಸುಖಿಯೆಂದಿದ್ದನು. ಜಿನಾಲಯಗಳನ್ನು ನಿರ್ಮಿಸುತ್ತಲೂ ಜೈನ ಧರ್ಮದ ಬಗ್ಗೆ ಉಪದೇಶಗಳನ್ನು ಮಾಡುತ್ತಲೂ ಧರ್ಮ ದೃಷ್ಟಿಯಿಂದ ರಾಜ್ಯ-ವಾಳುತ್ತಿದ್ದನು. ಅನುಪಮೆ ಎಂಬ ರಾಣಿಯಿಂದ ಸುಗಾತ್ರನೆಂಬ ಮಗನು

ಹುಟ್ಟಿದನು. ಒಂದು ಸಲ ಆಕಾಶದಿಂದ ಬೀಳುವ ನಕ್ಷತ್ರವನ್ನು ಕಂಡು ಈ ಸುಖ ಹಾಗೂ ಜಗತ್ತು ಕ್ಷಣಿಕವೆಂದು ಕಂಡುಕೊಂಡು ವೈರಾಗ್ಯವನ್ನು ತಾಳಿದನು. ತಂದೆಯ ಹಾಗೂ ಸಾಗರ ಬುದ್ಧಿಯ ಅಪ್ಪಣೆಯನ್ನು ಪಡೆದು ಸುಗಾತ್ರನಿಗೆ ಉಪದೇಶ ಮಾಡಿ ರಾಜ್ಯವನ್ನು ಒಪ್ಪಿಸಿ ವರದತ್ತನಿಂದ ದೀಕ್ಷೆಯನ್ನು ಪಡೆದನು. ಉಗ್ರವಾದ ತಪಶ್ಚರ್ಯ ವ್ರತೋಪವಾಸಗಳನ್ನು ಮಾಡಿ ಕರ್ಮವನ್ನು ಸುಟ್ಟುಹಾಕಿ ಪರಿಶುದ್ಧವಾಗಿ ಅತ್ಯಂತ ಶ್ರೇಷ್ಠವಾದ ಸದ್ಗತಿಯನ್ನು ಪಡೆದನು.

**ಕಥಾ ಸಂದರ್ಭ ಹಾಗೂ ಪಾಠದ ಸಾರಾಂಶ:—** ವರಾಂಗನು ಲಲಿತಪುರದಲ್ಲಿ ಸಾಗರಬುದ್ಧಿಯ ಮನೆಯಲ್ಲಿರುವಾಗ, ತನ್ನ ಪೂರ್ವಪರಿಚಯ ಇತರರಿಗೆ ಆಗಬಾರದೆಂದು ಕಶ್ಚಿದ್ಭಟ ಎಂದು ಹೆಸರನ್ನು ಇಟ್ಟುಕೊಂಡನು. ಹೀಗೆ ಸಾಗರಬುದ್ಧಿಯಮನೆಯಲ್ಲಿರುತ್ತ ರಾಜಸೇವೆ ಮಾಡತೊಡಗಿದನು.

ಒಮ್ಮೆ ಕಶ್ಚಿದ್ಭಟನು ಅರಮನೆಗೆ ಹೋಗುತ್ತಿರುವಾಗ ಮನೋರಮೆ ಎಂಬ ರಾಜಪತ್ನಿಯು ಅವನನ್ನು ಕಿಡಿಕಿಯೊಳಗಿಂದ ನೋಡಿದಳು. ಅವನ ರೂಪ, ಲಾವಣ್ಯ, ಗುಣಗಳಿಗೆ ಮೆಚ್ಚಿ, ಅವನಲ್ಲಿ ಅನುರಾಗವುಳ್ಳವಳಾದಳು. ಅವನ ರೂಪವನ್ನು ನೆನೆಯುತ್ತಲೇ ಕಾಮಬಾಧೆಯಾಯಿತು. ಮನೆಯಲ್ಲಿ ನಿಲ್ಲಲು ಆಗಲಿಲ್ಲ; ಮನೆಯ ಎದುರಿಗಿದ್ದ ತೋಟದಲ್ಲಿಯೂ ಮನಸ್ಸಿಗೆ ಸಮಾಧಾನ ದೊರೆಯಲಿಲ್ಲ. ಆದ್ದರಿಂದ ಒಬ್ಬಳೇ ಬೇರೊಂದು ತೋಟಕ್ಕೆ ಹೋಗಿ ಅಲ್ಲಿ ಲತಾಮಂಟಪದಲ್ಲಿ ಚಿತ್ರ ತೆಗೆದು, ಅದನ್ನೇ ನಿರೀಕ್ಷಿಸುತ್ತ ನಿಂತಳು. ಅಷ್ಟರಲ್ಲಿ ಅವಳ ದೂತಿಯು ಅಲ್ಲಿಗೆ ಬಂದು ಅವಳ ಎರಡೂ ಕಣ್ಣುಗಳನ್ನು ಮುಚ್ಚಿ ನಡೆದ ವರ್ತಮಾನವೇನೆಂದು ಕೇಳಿದಳು. ಮನೋರಮೆಯು ನಿಜಸಂಗತಿಗಳನ್ನು ಬಚ್ಚಿಡಲು ಯತ್ನಿಸಿದಳು. ಆದರೆ ಆ ದೂತಿಯು ಸಂಗತಿಗಳನ್ನು ಬಚ್ಚಿಡುವದರಿಂದ ಉಪಯೋಗವಾಗುವದಿಲ್ಲವೆಂದೂ, ವಸ್ತುಸ್ಥಿತಿಯನ್ನು ಹೇಳಿದರೆ ತಾನು ಕೈಲಾದಮಟ್ಟಿಗೆ ಸಹಾಯ ಸಲ್ಲಿಸುವದಾಗಿಯೂ ಭರವಸೆ ಕೊಟ್ಟಳು. ಆಗ ಮನೋರಮೆ ನಡೆದ ಎಲ್ಲ ವೃತ್ತಾಂತವನ್ನು ಹೇಳಿ, ಕಶ್ಚಿದ್ಭಟನಲ್ಲಿದ್ದ ತನ್ನ ಗಾಢವಾದ ಪ್ರೇಮವನ್ನೊಪ್ಪಿಕೊಂಡಳು. ಜಾಣೆಯಾದ ದೂತಿಯಾದರೋ ಮನೋರಮೆಯನ್ನು ಸಮಾಧಾನಗೊಳಿಸಿ, ಅವಳ ಇಚ್ಛೆಯನ್ನು ಪೂರ್ಣಮಾಡುವದಕ್ಕಾಗಿ ಕಶ್ಚಿದ್ಭಟನೆಡೆಗೆ ಹೋದಳು.

ಮೊದಲು ಅವನ ಗುಣಗಾನ ಮಾಡಿ, ನಂತರ ಮನೋರಮೆಯ ಇಚ್ಛೆ ಪೂರೈಸಿ ಕೃತಕೃತ್ಯನಾಗಬೇಕೆಂದು ಸೂಚಿಸಿದಳು. ಆದರೆ ಕಶ್ಚಿದ್ಭಟನು ಜಿನತತ್ವಕ್ಕೆ ವಿರುದ್ಧವಾದ ಈ ಕೀಳು ಕೃತ್ಯಕ್ಕೆ ಒಪ್ಪಲಿಲ್ಲ. ತಾನು ಸ್ವಸ್ತ್ರೀ ಉಪಭೋಗದ ದೀಕ್ಷೆ ಕೈಕೊಂಡಿದ್ದರಿಂದ, ರಾಜನು ಅವಳನ್ನು ವಿಧಿ-ಪೂರ್ವಕವಾಗಿ ಮದುವೆ ಮಾಡಿಕೊಟ್ಟರೆ ಮಾತ್ರ ಅವಳನ್ನು ಸ್ವೀಕರಿಸಲು ಸಿದ್ಧನಿರುವದಾಗಿ ಹೇಳಿದನು. ಹೀಗಾಗಿ ಮನೋರಮೆಯ ಇಚ್ಛೆ ನಿಷ್ಫಲ-ವಾಯಿತು.

## ಅನ್ವಯ, ಭಾಷಾಂತರ ಹಾಗೂ ಟೀಕೆ-ಟಿಪ್ಪಣಿಗಳು.

### मनोरमाया मनोभंगः

ಈ ಮನೋರಮೆಯ ಇಚ್ಛೆ ವಿಫಲವಾದುದು.

**ಪುಟ ೪೨. ೧.** ಅನ್ವಯ:— ಅಥ ಅನ್ಯದಾ, ವಾತಾಯನಸ್ಥಾ ಮನೋರಮಾಹ್ವಾ ಅನ್ಯಾ ಅವನಿಪಾಲಪುತ್ರೀ ರಾಜಸಭಾಂ ಪ್ರವಿಶಂತಂ ಮನೋಜರೂಪಂ ಕಶ್ಚಿದ್ಭಟಂ ಅಪಶ್ಯತ್ ।

ಭಾಷಾಂತರ:— ಬಳಿಕ ಒಮ್ಮೆ, ಕಿಡಿಕಿಯಲ್ಲಿ ಕುಳಿತ ಮನೋರಮೆಯೆಂಬ ಬೇರೊಬ್ಬ ರಾಜಪುತ್ರಿಯು ರಾಜಸಭೆಯನ್ನು ಪ್ರವೇಶಿಸುವ, ಮನ್ಮಥನಂತೆ ರೂಪವುಳ್ಳ ಕಶ್ಚಿದ್ಭಟನನ್ನು ನೋಡಿದಳು.

ಟಿಪ್ಪಣಿ:— ಮನೋಭಂಗಃ—ಆಶಾಭಂಗಃ ಇಚ್ಛೆ ವಿಫಲವಾದುದು. ಮನಸ್ (ನ)–ಇಚ್ಛೆ–ಮನಸಃ ಭಂಗಃ ಮನೋಭಂಗಃ (ಷ. ತ. ಸ.)

ಅಥ–ಬಳಿಕ. ಅನ್ಯದಾ–ಒಮ್ಮೆ, ಒಂದು ದಿನ. ವಾತಾಯನಸ್ಥಾ— ಕಿಡಿಕಿಯಲ್ಲಿ ಕುಳಿತ ವಾತಾಯನಂ–ಕಿಡಿಕಿ ವಾತಾಯನೇ ತಿಷ್ಠತಿ ಇತಿ (ಉಪ. ತ.) ಮನೋರಮಾಹ್ವಾ—ಮನೋರಮೆ ಎಂಬ ಹೆಸರುಳ್ಳ ಆಹ್ವಾ–ಹೆಸರು. ಮನೋರಮಾ (ಇತಿ) ಆಹ್ವಾ ಯಸ್ಯಾಃ ಸಾ (ಬ. ಸ.) ಅನ್ಯಾ–ಬೇರೊಬ್ಬ. ಅವನಿಪಾಲಪುತ್ರೀ – ರಾಜಪುತ್ರೀ. ಅವನ್ಯಾಃ ಪಾಲಃ ಅವನಿಪಾಲಃ (ಷ. ತ. ಸ.) ತಸ್ಯ ಪುತ್ರೀ (ಷ. ತ. ಸ.) ರಾಜಸಭಾಂ ಪ್ರವಿಶಂತಂ-ರಾಜಸಭೆಗೆ ಹೋಗುವ ರಾಜ್ಞಃ ಸಭಾ ರಾಜಸಭಾ (ಷ. ತ. ಸ.) ಪ್ರವಿಶಂತಂ–ಪ್ರವೇಶಿಸುವ. ಪ್ರ+ವಿಶ್ (೬.ಪ) ಧಾತುವಿನ ವ. ಘಾ. ವಿ. (ಪು) ದ್ವಿ. ಏ. ವ. ಮನೋಜರೂಪಂ-ಮನ್ಮಥನಂತೆ ರೂಪವುಳ್ಳ. ಮನಸಿಜಾಯತೇ ಇತಿ ಮನೋಜಃ (ಉಪ. ತ.) ತಸ್ಯ ಇವ ರೂಪಂ ಯಸ್ಯ ಸಃ (ಬ.ಸ.) ತಂ

**ಕಶ್ಚಿದ್ಭಟಂ**—ಕಶ್ಚಿದ್ಭಟನೆಂಬವನನ್ನು ಕಶ್ಚಿದ್ಭಟ ಎಂಬುದು ಒಂದು ಹೆಸರು ಹಿಂದಕ್ಕೆ, ವರಾಂಗನಿಗೆ ಯುವರಾಜಪಟ್ಟಾಭಿಷೇಕವಾಗಲು, ಅದನ್ನು ಸಹಿಸದ ಮೃಗಸೇನೆ ಎಂಬ ಅವನ ಮಲತಾಯಿಯು ತನ್ನ ಮಗ ಸುಷೇಣನೊಂದಿಗೆ ಆಲೋಚಿಸಿ, ಸುಬುದ್ಧಿ ಎಂಬ ಮಂತ್ರಿಯ ಸಲಹೆ ಪಡೆದು, ಯುವರಾಜನಾದ ವರಾಂಗನನ್ನು ಒಂದು ಕುತಂತ್ರದ ಮೂಲಕ ಕಾಡಿಗೆ ಅಟ್ಟಿದಳು. ಅಲ್ಲಿ ಅವನು ಅನೇಕ ಕಷ್ಟನಷ್ಟಗಳನ್ನು ಸಹಿಸಿಕೊಂಡು ಇರಬೇಕಾಯಿತು. ಹೀಗೆ ಅಡವಿಯಲ್ಲಿ ಕಾಲ ಕಳೆಯುತ್ತಿರುವಾಗ, ಒಮ್ಮೆ ಸಾಗರಬುದ್ಧಿ ಎಂಬ ವ್ಯಾಪಾರಸ್ಥನಿಗೆ, ಬೇಡರ ಕೈಯಿಂದ ಪಾರಾಗಲು ಸಹಾಯ ಮಾಡಿದನು. ಉಪಕಾರ ಹೊಂದಿದ ಸಾಗರಬುದ್ಧಿಯು ಆ ರಾಜಕುಮಾರನನ್ನು ಸಂಗಡ ಕರೆದುಕೊಂಡು ಲಲಿತಪುರವೆಂಬ ತನ್ನ ಊರಿಗೆ ಹೋದನು. ಅಲ್ಲಿ ವರಾಂಗನು ಕಶ್ಚಿದ್ಭಟ ಎಂಬ ಹೆಸರು ಧರಿಸಿ ಇರತೊಡಗಿದನು. ತನ್ನ ಮೂಲ ಹೆಸರನ್ನು (ವರಾಂಗ) ಗುಪ್ತವಾಗಿಯೇ ಇಟ್ಟನು. ಜನರಲ್ಲಿ ಸಾಗರಬುದ್ಧಿಯ ಮಗ, ಕಶ್ಚಿದ್ಭಟ ಎಂದು ಪ್ರಸಿದ್ಧನಾದನು.

೨. ಅನ್ವಯ:— ತದಾ ಸುನೇತ್ರಾ ತತ್ರ ತಂ ವಣಿಕ್ಪತಿಂ ದೃಷ್ಟ್ವಾ ಅಶೇಷಾನ್ ತದ್ರೂಪಸೌಭಾಗ್ಯಗುಣಾನ್ ಮನಸಾ ವಿಚಿಂತಯಂತೀ ಕಾಮಾನಲತಪ್ತಗಾತ್ರಾ ಬಭೂವ ।

ಭಾಷಾಂತರ:—ಆಗ ಒಳ್ಳೆಯ ಕಣ್ಣುಗಳುಳ್ಳ ಆ ರಾಜಪುತ್ರಿಯು, ಅಲ್ಲಿ ಆ ವ್ಯಾಪಾರಸ್ಥರ (ಶೆಟ್ಟರ) ಒಡೆಯನನ್ನು ಕಂಡು, ಅವನ ಯಾವತ್ತೂ ರೂಪ, ಲಾವಣ್ಯ, ಗುಣಗಳನ್ನು ಮನಸ್ಸಿನಲ್ಲಿ ಧ್ಯಾನಿಸುತ್ತ ಕಾಮಪೀಡಿತಳಾದಳು. (ಬೆಂಕಿಯಂತಿರುವ ಕಾಮನಿಂದ ಸುಡಲ್ಪಟ್ಟ ಅವಯವಗಳುಳ್ಳವಳಾದಳು.)

ಟಿಪ್ಪಣಿ:— ಸುನೇತ್ರಾ—ಒಳ್ಳೆಯ ಕಣ್ಣುಗಳುಳ್ಳವಳು. ಶೋಭನೇ ನೇತ್ರೇ ಯಸ್ಯಾಃ ಸಾ (ಬ. ಸ) ವಣಿಕ್ಪತಿಃ – ಶ್ರೇಷ್ಠ ವ್ಯಾಪಾರಿ. ವ್ಯಾಪಾರಸ್ಥರ (ಶೆಟ್ಟರ) ದೊರೆ ವಣಿಜಾಂ ಪತಿಃ (ಷ. ತ. ಸ.) ಅಶೇಷಾನ್— ಎಲ್ಲ ನಾಸ್ತಿ ಶೇಷಃ ಯಸ್ಮಿನ್ ಸಃ ಅಶೇಷಃ (ಬ. ಸ.) ತದ್ರೂಪಸೌಭಾಗ್ಯಗುಣಾನ್—ಅವನ ರೂಪ, ಲಾವಣ್ಯ ಹಾಗೂ ಗುಣಗಳನ್ನು ರೂಪಂ ಚ ಸೌಭಾಗ್ಯಂ ಚ ಗುಣಾಃಚ (ದ್ವಂದ್ವ). ತಸ್ಯ ರೂಪ ಸೌಭಾಗ್ಯ ಗುಣಾಃ ತದ್ರೂ.... ಗುಣಾಃ (ಷ. ತ. ಸ.) ತಾನ್ । ರೂಪಂ-ಆಕಾರ ಸೌಭಾಗ್ಯ-ಸೌಂದರ್ಯ.

ಲಾವಣ್ಯ ಶೋಭನಃ ಭಗಃ ಯಸ್ಯ ಸಃ ಸುಭಗಃ ( ಬ. ಸ. ) ತಸ್ಯಭಾವಃ (ತದ್ಧಿತ). ಮನಸಾ ವಿಚಿಂತಯಂತೀ—ಮನಸ್ಸಿನಲ್ಲಿ ಯೋಚಿಸುತ್ತ ವಿಚಿಂತಯಂತೀ— ವಿ+ ಚಿಂತ್ (೧೦ ಉ.) ಧಾತುವಿನ ವ. ಧಾ. ವಿ. (ಸ್ತ್ರೀ) ಪ್ರ. ಏ. ವ. ಕಾಮಾನಲತಪ್ತಗಾತ್ರಾ-ಕಾಮಾಗ್ನಿಯಿಂದ ಬಳಲಿದ ಅವಯವಗಳುಳ್ಳವಳು. ಕಾಮಃ ಏವ ಅನಲಃ ಕಾಮಾನಲಃ (ಕ. ಸ.) ತೇನ ತಪ್ತಾನಿ ಗಾತ್ರಾಣಿ ಯಸ್ಯಾಃ ಸಾ (ಬ.ಸ.) ಗಾತ್ರಂ – ಅವಯವ. ಬಭೂವ – ಭೂ. (೧.ಪ.) ಧಾತುವಿನ ದ್ವಿ. ಭೂ. ತೃ. ಏ. ವ.

೩. ಅನ್ವಯ:—ಸಾ ನಿಶಾಂತಮಧ್ಯೇ ಸ್ಥಾತುಂ ನ ಶಕ್ನೋತಿ, ಬಹಿಃ ಪ್ರದೇಶೇ ಧೃತಿಂ ಚ. ನ ಆಪ್ನೋತಿ। ತಂ ಮುಹುಃ ಮುಹುಃ ಮನಸಾ ಸ್ಮರಂತೀ ನಿರುದ್ಧಕಂಠಂ ರುದತೀ ಸ್ಥಿತಾ ।

ಭಾಷಾಂತರ:— ಅವಳಿಗೆ ಮನೆಯಲ್ಲಿ ನಿಲ್ಲಲು ಆಗಲಿಲ್ಲ, ( ತೋಟಮು.) ಹೊರಗಿನ ಪ್ರದೇಶದಲ್ಲಿ ಅವಳಿಗೆ ಸಮಾಧಾನ ದೊರೆಯಲಿಲ್ಲ. ಅವನನ್ನು ಮತ್ತೆ ಮತ್ತೆ ಮನಸ್ಸಿನಲ್ಲಿ ನೆನೆಯುತ್ತ ಗಂಟಲ ಶಿರವುಬ್ಬಿದವಳಾಗಿ (ಕುತ್ತಿಗೆ ಬಿಗಿದವಳಾಗಿ) ಅಳುತ್ತ ನಿಂತಳು.

ಟಿಪ್ಪಣಿ:-ನಿಶಾಂತಮಧ್ಯೇ ಮನೆಯೊಳಗೆ ನಿಶಾಂತಂ-ಮನೆ. '*house; dwelling*' *Apte's dictionary* ನಿಶಾಂತಸ್ಯ ಮಧ್ಯಂ (ಷ.ತ.ಸ.) ತಸ್ಮಿನ್ । ಸ್ಥಾತುಂ—ನಿಲ್ಲಲು ಸ್ಥಾ (೧.ಪ) ಧಾತುವಿನ ತುಮಂತಾವ್ಯಯ. ನ ಶಕ್ನೋತಿ—ಸಮರ್ಥಳಾಗಲಿಲ್ಲ. ಧೃತಿಂ—ಸಮಾಧಾನವನ್ನು ಮುಹುಃ—ಮತ್ತೆ ಸ್ಮರಂತೀ-ನೆನೆಯುತ್ತ ಸ್ಮೃ (೧. ಪ) ಧಾತುವಿನ ವ. ಧಾ. ವಿ. (ಸ್ತ್ರೀ) ಪ್ರ. ಏ. ವ. **ನಿರುದ್ಧಕಂಠಂ** — ಕುತ್ತಿಗೆ ಬಿಗಿಯಲು ನಿರುದ್ಧಃ ಕಂಠಃ ಯಸ್ಮಿನ್ ಕರ್ಮಣಿ ಯಥಾ ಸ್ಯಾತ್ ತಥಾ ಅವ್ಯಯೀಭಾವ ಸಮಾಸ ರುದತೀ—ಅಳುತ್ತ ರುದ್ (೨. ಪ.) ಧಾತುವಿನ ವ. ಧಾ. ವಿ. (ಸ್ತ್ರೀ) ಪ್ರ. ಏ. ವ.

೪. ಅನ್ವಯ:— ಕದಾಚಿತ್ (ಸಾ) ಉದ್ಯಾನವನಂ ಪ್ರವಿಶ್ಯ ಲತಾ-ಗೃಹಾಂತರ್ಗತಮಧ್ಯದೇಶೇ, ಅದ್ಭುತವಿಕ್ರಮಸ್ಯ ಕಸ್ಯಚಿದ್ಭಟಸ್ಯ ರೂಪಂ ಶಿಲಾಯಾಃ ಫಲಕೇ ಲಿಲೇಖ ।

ಭಾಷಾಂತರ:— ಒಮ್ಮೆ ಅವಳು ತೋಟದೊಳಗೆ ಹೋಗಿ (ಹೊಕ್ಕು) ಲತಾಮಂಟಪದೊಳಗಿದ್ದ ನಡುವಿನ ಪ್ರದೇಶದಲ್ಲಿ, ಅದ್ಭುತವಾದ ಪರಾಕ್ರಮ

ವುಳ್ಳ ಕಶ್ಚಿದ್ಭಟನ ಚಿತ್ರವನ್ನು (ಆಕೃತಿ) ಹಾಸುಗಲ್ಲಿನಮೇಲೆ ತೆಗೆದಳು (ಬರೆದಳು).

ಟಿಪ್ಪಣೆ:— ಕದಾಚಿತ್–ಒಮ್ಮೆ. ಉದ್ಯಾನವನಂ – ತೋಟದೊಳಗೆ ಗಿಡ–ಬಳ್ಳಿಗಳು ದಟ್ಟವಾಗಿ ಹಬ್ಬಿದ ಭಾಗ. ಉದ್ಯಾನಸ್ಯ ವನಂ (ಷ.ತ.ಸ.) ಪ್ರವಿಶ್ಯ–ಹೊಕ್ಕು. ಪ್ರವೇಶಿಸಿ ಪ್ರ+ವಿಶ್ (೬. ಪ) ಧಾತುವಿನ ಲ್ಯಬಂತಾವ್ಯಯ. ಲತಾಗೃಹಾಂತರ್ಗತಮಧ್ಯದೇಶೇ–ಲತಾಮಂಟಪದೊಳಗಿದ್ದ ನಡುವಿನ ಭಾಗ. ಲತಾನಾಂಗೃಹಂ ಲತಾಗೃಹಂ (ಷ. ತ. ಸ.) ಲತಾಗೃಹಸ್ಯ ಅಂತರ್ಗತಃ ಯಃ ಮಧ್ಯದೇಶಃ(ಮಧ್ಯಃ ದೇಶಃ(ಕ.ಸ.) ಲತಾ....ದೇಶಃ(ಕ.ಸ.) ತಸ್ಮಿನ್ । ಅದ್ಭುತವಿಕ್ರಮಸ್ಯ—ಅದ್ಭುತವಾದ ಪರಾಕ್ರಮವುಳ್ಳ. ಅದ್ಭುತಃ ವಿಕ್ರಮಃ ಯಸ್ಯ ಸಃ (ಬ. ಸ.) ತಸ್ಯ, ಕಶ್ಚಿದ್ಭಟಸ್ಯರೂಪಂ— ಕಶ್ಚಿದ್ಭಟನ (ಆಕೃತಿ) ಚಿತ್ರವನ್ನು. ಶಿಲಾ–ಕಲ್ಲು. ಫಲಕಂ–ಫಳಿ. ಲಿಲೇಖ—ಬರೆದಳು. ಲಿಖ್ (೬. ಪ) ಧಾತುವಿನ ದ್ವಿ. ಭೂ. ತೃ. ಪು. ಏ. ವ.

೫. ಅನ್ವಯ:— ಬಾಷ್ಪನಿರುದ್ಧಕಂಠಾ ಅಧೋಮುಖೀ ತಚ್ಚಿತ್ರರೂಪಂ ಪ್ರವಿಲೋಕಯಂತೀ (ಬಭೂವ) । ವಯಸ್ಯಾ ತತ್ಪೃಷ್ಠತಃ ಶನೈಃ ಅಭ್ಯೇತ್ಯ ಕರಾಭ್ಯಾಂ ಸುಲೋಚನೇ ಪಿದಧೌ ವೈ ।

ಭಾಷಾಂತರ:— ಕಂಬನಿಗಳಿಂದ ಬಿಗಿದ ಕುತ್ತಿಗೆಯುಳ್ಳ ಹಾಗೂ ಮುಖವನ್ನು ಕೆಳಗೆಮಾಡಿದ ಅವಳು ಆ ಚಿತ್ರದ ಸೌಂದರ್ಯವನ್ನು ದಿಟ್ಟಿಸಿ ನೋಡಹತ್ತಿದಳು. (ಆಗ ಅವಳ) ಗೆಳತಿಯು ಅವಳ ಹಿಂದಿನಿಂದ ಮೆಲ್ಲನೆ ಬಂದು (ತನ್ನ) ಎರಡೂ ಕೈಗಳಿಂದ (ಅವಳ) ಒಳ್ಳೆಯ ಕಣ್ಣುಗಳನ್ನು ಮುಚ್ಚಿದಳು.

ಟಿಪ್ಪಣೆ:— ಬಾಷ್ಪನಿರುದ್ಧಕಂಠಾ—ಕಂಬನಿಗಳಿಂದ ಬಿಗಿದ ಶಿರವುಳ್ಳ. ಬಾಷ್ಪೈಃ ನಿರುದ್ಧಃ ಕಂಠಃ ಯಸ್ಯಾಃ ಸಾ(ಬ.ಸ.)ಬಾಷ್ಪಂ-ಕಂಬನಿ. ನಿರುದ್ಧ-ಬಿಗಿಯಲ್ಪಟ್ಟ. ಅಧೋಮುಖೀ- ಮುಖ ಕೆಳಗೆಮಾಡಿದ ಅಧಃ ಮುಖಂ ಯಸ್ಯಾಃ ಸಾ (ಬ. ಸ.) ತಚ್ಚಿತ್ರರೂಪಂ—ಆ ಚಿತ್ರದ ಸೌಂದರ್ಯವನ್ನು ತತ್ ಚಿತ್ರಂ ತಚ್ಚಿತ್ರಂ (ಕ. ಸ ) ತಸ್ಯ ರೂಪಂ (ಷ. ತ. ಸ.) ಪ್ರವಿಲೋಕಯಂತೀ—ದಿಟ್ಟಿಸಿನೋಡುತ್ತ ಪ್ರ+ವಿ+ಲೋಕ್ (೧೦. ಉ) ಧಾತುವಿನ ವ. ಧಾ. ವಿ. (ಸ್ತ್ರೀ) ಪ್ರ. ಏ. ವ. ವಯಸ್ಯಾ—ಗೆಳತಿಯು. ತತ್ಪೃಷ್ಠತಃ— ಅವಳ ಬೆನ್ನುಹಿಂದಿನಿಂದ ತಸ್ಯಾಃ ಪೃಷ್ಠತಃ (ಷ.ತ.ಸ.) ಪೃಷ್ಠತಃ (ಅವ್ಯಯ)-

ಹಿಂದಿನಿಂದ. ಶನೈಃ—ಮೆಲ್ಲನೆ. ಅಭ್ಯೇತ್ಯ—ಬಂದು. ಅಭಿ+ಆ+ಇ (೨.ಪ) ಧಾತುವಿನ ಲ್ಯಬಂತಾವ್ಯಯ. ಸುಲೋಚನೇ—ಒಳ್ಳೆಯ ಕಣ್ಣುಗಳನ್ನು ಶೋಭನೇ ಲೋಚನೇ (ಕ. ಸ.) ಪಿದಧೌ—ಮುಚ್ಚಿದಳು. ಅಪಿ+ಧಾ (೩. ಉ) ಧಾತುವಿನ ದ್ವಿ. ಭೂ. ತೃ. ಪು. ಏ. ವ. (ಅಪಿ ಇದರಲ್ಲಿಯ ಆರಂಭದ ಅ ಲೋಪವಾಗಿದೆ.)

೬. ಅನ್ವಯ:— ಸಾ ಸಖೀ ಮನೋರಮಾಯಾಃ ಅವಸ್ಥಾಂ ಮಹತೀಂ ಮತ್ವಾ ಇತಿ ವಚಃ ಬಭಾಷೇ। ಏತತ್ ಚಿತ್ರಂ ಕಿಂ, ಕಃ ವಾ ಅಯಂ ತವ ಚಿತ್ತಚೌರಃ ನರಃ। ವೀತಶಂಕಾ ವದ।

ಭಾಷಾಂತರ:— ಆ ಗೆಳತಿಯು ಮನೋರಮೆಯ ಸ್ಥಿತಿ ಕಠಿಣವಿದ್ದುದನ್ನು ಕಂಡು ಹೀಗೆ ಮಾತನಾಡಿದಳು. 'ಈ ಚಿತ್ರವು ಯಾರದು (ಶಬ್ದಶಃ, ಈ ಚಿತ್ರವೇನು) ? ನಿನ್ನ ಮನಸ್ಸನ್ನು ಅಪಹರಿಸಿದ ಈ ಮನುಷ್ಯನಾರು ? ಸಂದೇಹತಾಳದೆ (ಅಥವಾ ನಿರ್ಭಯವಾಗಿ) ಹೇಳು.'

ಟಿಪ್ಪಣಿ:— ಸಖೀ—ಗೆಳತಿ. ಅವಸ್ಥಾಂ ಮಹತೀಂ ಮತ್ವಾ—ಅವಳ ಅವಸ್ಥೆ (ಸ್ಥಿತಿ) ಕಠಿಣವೆಂದು ತಿಳಿದು. ಮಹತೀಂ—ದೊಡ್ಡದಾದ. ವಚಸ್ (ನ)—ಮಾತು. ಬಭಾಷೆ—ಮಾತನಾಡಿದಳು. ಭಾಷ್ (೧. ಆ) ಧಾತುವಿನ ದ್ವಿ. ಭೂ. ತೃ. ಪು. ಏ. ವ. ಚಿತ್ತಚೌರಃ — ಮನವನ್ನಪಹರಿಸಿದವ. ಚಿತ್ತಸ್ಯ ಚೌರಃ (ಷ. ತ. ಸ.) ವೀತಶಂಕಾ—ನಿರ್ಭೀತಳಾಗಿ. ಸಂದೇಹತಾಳದೆ. ಶಂಕಾ—ಭೀತಿ, ಸಂಶಯ, ಸಂದೇಹ. ವೀತಾ ಶಂಕಾ ಯಸ್ಯಾಃ ಸಾ (ಬ. ಸ.).

೭. ಅನ್ವಯ:— ರಾಜಪುತ್ರಿ, ತ್ವಂ ಏಕಾಕಿನೀ ಅಸ್ಮಿನ್ ಉದ್ಯಾನವನೇ ಕಿಮರ್ಥಂ ತಿಷ್ಠಸಿ। ಸಾ ಲೋಲನೇತ್ರಾ ಕ್ಷಿತಿಪಾಲಪುತ್ರೀ ತದುಕ್ತಂ ಶ್ರುತ್ವಾ ತಾಂ ಇತಿ ಅವಾದೀತ್ ।

ಭಾಷಾಂತರ:— 'ರಾಜಕನ್ನಿಕೆಯೇ, ನೀನು ಒಬ್ಬಳೇ ಈ ತೋಟದಲ್ಲಿ ಏಕೆ ಇರುವೆ ?' (ಈ) ಅವಳ ಮಾತುಕೇಳಿ, ಚಂಚಲವಾದ (ಸುಂದರವಾದ) ಕಣ್ಣುಗಳುಳ್ಳ ಆ ರಾಜಕನ್ಯೆಯು ಹೀಗೆ ನುಡಿದಳು.

ಟಿಪ್ಪಣಿ:- ರಾಜಪುತ್ರಿ—ರಾಜಕನ್ನಿಕೆಯೇ ರಾಜ್ಞಃ ಪುತ್ರೀ ರಾಜಪುತ್ರೀ (ಷ. ತ. ಸ.) ತಸ್ಯಾಃ ಸಂಬೋಧನಂ. ಏಕಾಕಿನೀ – ಒಬ್ಬಳೇ. ಲೋಲನೇತ್ರಾ—ಚಂಚಲವಾದ ಅಥವಾ ಸುಂದರವಾದ ಕಣ್ಣುಗಳುಳ್ಳ. ಲೋಲೇ

ನೇತ್ರೀ ಯಸ್ಯಾಃ ಸಾ (ಬ. ಸ.) ಕ್ಷಿತಿಪಾಲಪುತ್ರೀ–ರಾಜಕನ್ಯೆ. ಕ್ಷಿತೇಃ ಪಾಲಃ ಕ್ಷಿತಿಪಾಲಃ (ಷ. ತ. ಸ.) ತಸ್ಯ ಪುತ್ರೀ. ತದುಕ್ತಂ–ಅವಳ ಮಾತನ್ನು ತಸ್ಯಾಃ ಉಕ್ತಂ (ಷ. ತ.) **ಅವಾದೀತ್**–ನುಡಿದಳು. ವದ್ (೧. ಪ) ಧಾತುವಿನ ತೃ. ಭೂ. ತೃ. ಪು. ಏ. ವ.

೮. ಅನ್ವಯ:— ಹೇ ಆಲಿ, ಯದಾ ತ್ವಂ ಗೃಹೇ ಮಯಾ ನ ದೃಷ್ಟಾ ಅಸಿ, ತದಾ ಅಹಂ ತ್ವಾಂ ಅವಲೋಕಯಂತೀ. (ಅಭವಮ್)। ಇಹ ಏತ್ಯ ವಲ್ಲೀಗೃಹ–ಮಧ್ಯದೇಶೆ ಕ್ರೀಡಾವಿನೋದಾತ್ ನೃರೂಪಂ (ಮಯಾ) ಲಿಖಿತಂ ।

ಭಾಷಾಂತರ:— ಸಖಿಯೇ, ನೀನು ನನಗೆ ಮನೆಯಲ್ಲಿ ಕಾಣದೆ ಇರಲು, ನಾನು ನಿನ್ನನ್ನು ಹುಡುಕುತ್ತ ಇಲ್ಲಿ ಬಂದೆನು. (ಬಂದಬಳಿಕ) ಲತಾ ಮಂಟಪದೊಳಗೆ, ಆಟದ ಮೋಜು ಅಥವಾ ವಿನೋದದಲ್ಲಿ (ಶಬ್ದಶಃ, ವಿನೋದದಿಂದ) ಒಬ್ಬ ಮನುಷ್ಯನ ಚಿತ್ರ ತೆಗೆದೆನು. (ನನ್ನಿಂದ ಚಿತ್ರ ಬರೆಯಿಲ್ಪಟ್ಟಿತು.)

ಟಿಪ್ಪಣಿ:— ಆಲಿ—ಗೆಳತಿಯೇ. ಆಲೀ (ಸ್ತ್ರೀ) ಶಬ್ದದ ಸಂಬೋಧನ ಏ. ವ. ಆಲೀ—ಗೆಳತಿ. *A female friend or companion*. ಯದಾ....ತದಾ—ನೀನು ನನಗೆ ಯಾವಾಗ ಕಾಣಲಿಲ್ಲವೋ ಆಗ ಯದಾ ಮಯಾ ನ ದೃಷ್ಟಾ ಅಸಿ— ಯಾವಾಗ ನನ್ನಿಂದ ನೋಡಲ್ಪಡಲಿಲ್ಲವೋ ಅವಲೋಕಯಂತೀ—ಶೋಧಿಸುತ್ತ. ಹುಡುಕುತ್ತ. ಅವ+ಲೋಕ್ (೧೦.ಉ) ಧಾತುವಿನ ವ. ಧಾ. ವಿ. (ಸ್ತ್ರೀ) ಪ್ರ. ಏ. ವ. ವಲ್ಲೀಗೃಹಮಧ್ಯದೇಶೇ—ಲತಾಮಂಟಪದ ಒಳಭಾಗದಲ್ಲಿ. ವಲ್ಲೀ–ಬಳ್ಳಿ. ವಲ್ಲೀನಾಂ ಗೃಹಂ ವಲ್ಲೀಗೃಹಂ (ಷ. ತ. ಸ.) ತಸ್ಯ ಮಧ್ಯದೇಶಃ (ಮಧ್ಯಃ ದೇಶಃ ಕ. ಸ.) (ಷ. ತ. ಸ.) ತಸ್ಮಿನ್। ಕ್ರೀಡಾವಿನೋದಾತ್—ಆಟದ ವಿನೋದದಿಂದ. ಕ್ರೀಡಾಯಾಃ ವಿನೋದಃ (ಷ. ತ. ಸ.); ತಸ್ಮಾತ್. ನೃರೂಪಂ–ಮನುಷ್ಯನ ಆಕಾರ ಮನುಷ್ಯನ ಚಿತ್ರ. ನುಃ ರೂಪಂ (ಷ. ತ. ಸ.) ಮಯಾ ನೃರೂಪಂ ಲಿಖಿತಂ (ಕರ್ಮಣಿ)–ಅಹಂ ನೃರೂಪಂ ಲಿಖಿತವತೀ (ಕರ್ತರಿ). ಏತ್ಯ—ಬಂದು ಆ+ಇ (೨. ಪ) ಧಾತುವಿನ ಲ್ಯಬಂತಾವ್ಯಯ,

೯. **ಅನ್ವಯ:— ತಯಾ ಏವಂ ಉಕ್ತೇ (ಸತಿ) । ಸಾ ವದತಿ ಸ್ಮ । ವಯಸ್ಯೇ, ಮತ್ಪುರತಃ ಮನಸ್ಥಂ ಕಿಂ ಗೋಪಯಸೇ । ತ್ವಂ ಏಕಾ ಏತತ್ ವೋಢುಂ ಸಮರ್ಥಾ ಅಸಿ ಕಿಮ್ । ಮಹ್ಯಂ ಸತ್ಯಂ ವದ ।**

ಭಾಷಾಂತರ:— ಅವಳು (ಮನೋರಮೆ) ಹೀಗೆ ಅನ್ನಲಾಗಿ, ಅವಳು (ಗೆಳತಿ), ನುಡಿದಳು. 'ಗೆಳತೀ, ನಿನ್ನ ಮನಸ್ಸಿನಲ್ಲಿದ್ದ ಮನುಷ್ಯನನ್ನು (ಅಥವಾ ನಿನ್ನ ಮನಸ್ಸಿನಲ್ಲಿದ್ದುದನ್ನು) ನನ್ನೆದುರಿಗೆ ಅದೇಕೆ ಬಚ್ಚಿಡುವೆ? ನೀನು ಒಬ್ಬಳೇ ಇದನ್ನು (ಈ ಕಠಿಣ ಪರಿಸ್ಥಿತಿ, ಈ ದುರವಸ್ಥೆ) ಸಹಿಸಲು ಸಮರ್ಥಳಿರುವಿಯಾ? ನನಗೆ ಸತ್ಯಸಂಗತಿ ಹೇಳು.

ಟಿಪ್ಪಣಿ:— ತಯಾ ಏವಂ ಉಕ್ತೇ–ಅವಳಿಂದ ಹೀಗೆ ನುಡಿಯಲ್ಪಡಲು ಅವಳು ಹೀಗೆ ಅನ್ನಲಾಗಿ ವದತಿಸ್ಮ–(ಗೆಳತಿ) ನುಡಿದಳು. ಸ್ಮ–ಭೂತಕಾಲದರ್ಶಕ ಆವ್ಯಯ. ಪುರತಃ–ಎದುರಿಗೆ ಇದು ಷಷ್ಠೀ ವಿಭಕ್ತಿ ತೆಗೆದುಕೊಳ್ಳುತ್ತದೆ. ಉದಾ:— ಬಹು ಜಗದ ಪುರಸ್ತಾತ್ ತಸ್ಯ ಮತ್ತಾ ಕಿಲಾಹಂ। ಯಂ ಯಂ ಪಶ್ಯಸಿ ತಸ್ಯ ತಸ್ಯ ಪುರತೋ ಮಾ ಬ್ರೂಹಿ ದೀನಂ ವಚಃ। ಕಿಂ—ಏಕೆ ಕಿಮರ್ಥಂ **ಗೋಪಾಯಸೇ**–ಬಚ್ಚಿಡುವೆ. ಗುಪ್ (೧. ಪ.) ಧಾತುವಿನ ವರ್ತಮಾನಕಾಲ ದ್ವಿ. ಪು. ಏ. ವ. ಈ ರೂಪವು ತಪ್ಪಿದೆ. ಗೋಪಾಯಸಿ (೧. ಪ.) ಅಥವಾ ಗೋಪಯಸೇ (೧೦. ಉ.) ಎಂಬುದಾಗಿ ರಬೇಕು. ಆದ್ದರಿಂದ ಆರ್ಷರೂಪವೆಂದು ಇಟ್ಟುಕೊಳ್ಳಬೇಕು. ವೋಢುಂ–ಸಹಿಸಲು. ವಹ್ (೧. ಪ.) ಧಾತುವಿನ ತುಮಂತಾವ್ಯಯ ಸತ್ಯಂ–ಸತ್ಯವನ್ನು ನಿಜವನ್ನು ಸತ್ಯ ಸಂಗತಿಯನ್ನು.

೧೦. ಅನ್ವಯ:—ಅಥ ಸಾಶ್ರುವಿಶಾಲನೇತ್ರಾ ಸಾ ಸಗದ್ಗದಂ ವಾಕ್ಯಂ ಉವಾಚ। ಆಲಿ, ನರನಾಥಸೇವಾಂ ವಿಧಾತುಂ ಗಚ್ಛನ್ ಕಶ್ಚಿದ್ಭಟ–ನಾಮಧೇಯಃ ಇಹ ಮಯಾ ದೃಷ್ಟಃ।

ಭಾಷಾಂತರ:— ಬಳಿಕ, ಕಂಬನಿಗಳಿಂದ ತುಂಬಿದ ವಿಶಾಲವಾದ ಕಣ್ಣುಗಳುಳ್ಳ ಅವಳು ಗದ್ಗದ ಧ್ವನಿಯಲ್ಲಿ ಮಾತನಾಡಿದಳು. 'ಗೆಳತೀ, ರಾಜನ ಸೇವೆ ಮಾಡಲು ಹೋಗುತ್ತಿದ್ದ ಕಶ್ಚಿದ್ಭಟನೆಂಬವನನ್ನು ನಾನು ಇಲ್ಲಿ ಕಂಡೆನು.

ಟಿಪ್ಪಣಿ:— **ಸಾಶ್ರುವಿಶಾಲನೇತ್ರಾ**—ಕಂಬನಿಯುಕ್ತವಾದ ವಿಶಾಲ ಕಣ್ಣುಗಳುಳ್ಳವಳು ವಿಶಾಲೇ ನೇತ್ರೇ ವಿಶಾಲನೇತ್ರೇ (ಕ. ಸ.) ಅಶ್ರುಭಿಃ ಸಹಿತೇ ಸಾಶ್ರುಣೀ (ಸಹ. ಬ.) ಸಾಶ್ರುಣೀ ವಿಶಾಲನೇತ್ರೇ ಯಸ್ಯಾಃ ಸಾ (ಬ. ಸ.) ಸಗದ್ಗದಂ–ಗದ್ಗದ ಧ್ವನಿಯಿಂದ. ಗದ್ಗದೇನ ಸಹಿತಂ ಯಥಾ ಸ್ಯಾತ್ ತಥಾ (ಅವ್ಯಯೀಭಾವ ಸ.) ಉವಾಚ–ಅಂದಳು, ವಚ್ (೨. ಪ.)

ಧಾತುವಿನ ದ್ವಿ. ಭೂ. ತೃ. ಪು. ಏ. ವ. ನರನಾಥಸೇವಾಂ–ರಾಜನ ಸೇವೆ-ಯನ್ನು. ನರಾಣಾಂ ನಾಥಃ ನರನಾಥಃ (ಷ. ತ. ಸ.) ತಸ್ಯ ಸೇವಾ (ಷ. ತ. ಸ.) ತಾಂ, ವಿಧಾತುಂ–ಮಾಡಲು. ವಿ+ಧಾ (೩. ಉ) ಧಾತುವಿನ ತುಮಂತಾವ್ಯಯ. ಗಚ್ಛನ್–ಹೋಗುತ್ತಿದ್ದ. ಗಮ್ (೧. ಪ) ಧಾತುವಿನ ವ. ಧಾ. ವಿ. (ಪು) ಪ್ರ. ಏ. ವ. ಕಶ್ಚಿದ್ಘಟನಾಮಧೇಯಃ– ಕಶ್ಚಿದ್ಘಟನೆಂದು ಹೆಸರುಳ್ಳ. ಕಶ್ಚಿದ್ಘಟಃ ಇತಿ ನಾಮಧೇಯಂ ಯಸ್ಯ ಸಃ (ಬ. ಸ.) ಮಯಾ ದೃಷ್ಟಃ (ಕರ್ಮಣಿ)–ನನ್ನಿಂದ ನೋಡಲ್ಪಟ್ಟನು. ಅಹಂ ದೃಷ್ಟವತೀ (ಕರ್ತರಿ).

**ಪುಟ ೪೩.** ೧೧. ಅನ್ವಯಃ— ಆಲಿ, ಯದಾ ಮಯಾ ಸುಭಗಃ ದೃಷ್ಟಃ, ತದಾ ಪ್ರಭೃತಿ ಏವ ಏಷ ಮನೋಭೂಃ ಮೇ ಮನಃ ಸಂತಾಪಯತಿ। ತಸ್ಮಾತ್ ಧೃತಿಂ ನ ಭಜಾಮಿ । ಭದ್ರೇ, ತತ್ ಕಿಂ ಕರೋಮಿ ।

ಭಾಷಾಂತರ:— ಸಖಿಯೇ, ನಾನು ಆ ಭಾಗ್ಯವಂತನನ್ನು ನೋಡಿ-ದಂದಿನಿಂದಲೇ ಈ ಮನ್ಮಥನು ನನ್ನ ಮನಸ್ಸಿಗೆ ಸಂತಾಪವನ್ನುಂಟುಮಾಡು-ತ್ತಾನೆ. ಆದ್ದರಿಂದ ನನಗೆ ಸಮಾಧಾನವಿಲ್ಲ, ಸಮಂಗಲೆಯೇ, ಆದ್ದರಿಂದ ಏನು ಮಾಡಲಿ ?

ಟಿಪ್ಪಣಿ:— ಸುಭಗಃ–ಭಾಗ್ಯವಂತನು. ಸುದೈವಿಯು. ಶೋಭನಃ ಭಗಃ ಯಸ್ಯ ಸಃ (ಬ. ಸ.) ಪ್ರಭೃತಿ–ಇಂದ. ಪಂಚಮೀ ವಿಭಕ್ತಿಯೊಡನೆ ಉಪಯೋಗಿಸಲ್ಪಡುತ್ತದೆ. ಚೈತ್ರಾತ್ ಪ್ರಭೃತಿ ಸಂವತ್ಸರಃ ಪ್ರವರ್ತತೇ । ಮನೋಭೂಃ–ಮನ್ಮಥ. ಮನಸಃ ಭವತಿ ಇತಿ (ಉಪ. ತ) ಸಂತಾಪಯತಿ–ಪೀಡಿಸುತ್ತಾನೆ. ಸಮ್ + ತಪ್ (೧. ಪ) ಧಾತುವಿನ ಪ್ರಯೋಜಕ ರೂಪದ ವ. ತೃ. ಪು. ಏ. ವ. ಧೃತಿಃ–ಸಮಾಧಾನ, ಸುಖ. ಮನೋಭುವಾ ಮೇ ಮನಃ ಸಂತಾಪ್ಯತೇ (ಕರ್ಮಣಿ).

೧೨. ಅನ್ವಯ:— ಇತಿತಾಂ ರಾಜಕನ್ಯಾಂಆಶ್ವಾಸ್ಯ ಸಾ ದೂತೀ ವಣಿಕ್ಪತೇಃ ಅಂತಿಕಂ ಆಪ್ಯ ಏಕಾಂತತಮಪ್ರದೇಶೇ ಚ (ತಂ) ಆಹೂಯ, ಸ್ಮಿತಾನನಾ ಸತೀ ತಂ ಏವಂ ಆಹ ।

ಭಾಷಾಂತರ:— ಈ ರೀತಿಯಾಗಿ ಆ ರಾಜಪುತ್ರಿಯನ್ನು ಸಮಾಧಾನಗೊಳಿಸಿ, ಆ ದೂತಿಯು ಶ್ರೇಷ್ಠ ಶೆಟ್ಟಿಯ ಬಳಿಗೆ ಹೋಗಿ. ನಿರ್ಜನ ಪ್ರದೇಶದಲ್ಲಿ (ಅವನನ್ನು) ಕರೆದು, ಮುಗುಳ್ನಗೆಯುಳ್ಳ ಮುಖವುಳ್ಳವಳಾಗಿ, ಅವನಿಗೆ ಹೀಗೆ ಅಂದಳು.

ಟಿಪ್ಪಣಿ:– ಇತಿ ಆಶ್ವಾಸ್ಯ–ಹೀಗೆ ಸಮಾಧಾನ ಮಾಡಿ. ಇತಿ–ಈ ರೀತಿಯಾಗಿ ದುರ್ದೈವದಿಂದ, ರಾಜಪುತ್ರಿಯನ್ನು ಸಮಾಧಾನಗೊಳಿಸಿದ ಶ್ಲೋಕಗಳನ್ನು ಪಠ್ಯಪುಸ್ತಕದಲ್ಲಿ ಕೊಟ್ಟಿಲ್ಲ. ಆದ್ದರಿಂದ ವಿದ್ಯಾರ್ಥಿಗಳ ಸೌಕರ್ಯಕ್ಕಾಗಿ ಅವುಗಳನ್ನು ಕೆಳಗೆ ಕೊಟ್ಟಿದೆ (ಆಶ್ವಾಸ್ಯ ಇದು ಆ+ಶ್ವಸ್ (೨.ಪ) ಧಾತುವಿನ ಪ್ರಯೋಜಕ ರೂಪದ ಲ್ಯಬಂತಾವ್ಯಯ.)

ನಿಶಮ್ಯ ತಸ್ಯಾ ವಚ ಇತ್ಯುವಾಚ ಚಿಂತಾಮಿಮಾಂ ಮಾಕುರು ರಾಜಪುತ್ರಿ।
ಕಶ್ಚಿದ್ಭಟಸ್ಯಾಂತಿಕಮಾಪ್ಯ ವೇಗಾತ್ಸಂಪಾದಯಾಮ್ಯಾಶು ಮನೋಗತಂತೇ ॥
ಪುಂಸಾಂ ಮನೋಮೋಹನಮಂತ್ರತಂತ್ರಯಂತ್ರಪ್ರಯೋಗಾನ್ವಿವಿಧೌಷಧಾನಿ।
ಜಾನಾಮ್ಯಹಂ ಮಾ ಭವ ವಿಹ್ವಲಾ ತ್ವಂ ಕುರ್ವೇನುಕೂಲಂ ತವ ತಂ ತತೋದ್ಯ ॥

ದೂತೀ - ಸೇವಿಕೆ. ದೂತಿಯು ವಣಿಕ್ಪತೇಃ— ಶ್ರೇಷ್ಠ ಶೆಟ್ಟಿಯ. ವಣಿಜಾಂ ಪತಿಃ ವಣಿಕ್ಪತಿಃ (ಷ.ತ.ಸ.) ತಸ್ಯ ಅಂತಿಕಂ–ಸಮೀಪಕ್ಕೆ. ಬಳಿಗೆ ಆಪ್ಯ–ಹೊಂದಿ. ಹೋಗಿ ಆಪ್ (೫.ಉ) ಧಾತುವಿನ ಅನಿಯಮಿತ ಲ್ಯಬಂತಾವ್ಯಯ. ಶುದ್ಧರೂಪವು ಆಪ್ತ್ವಾ ಎಂದು ಆಗುತ್ತದೆ. ಏಕಾಂತತಮಪ್ರದೇಶೇ ನಿರ್ಜನ ಪ್ರದೇಶದಲ್ಲಿ. ಏಕಾಂತತಮಃ ಪ್ರದೇಶಃ (ಕ.ಸ.) ತಸ್ಮಿನ್। ಆಹೂಯ–ಕರೆದು. ಆ+ಹ್ವೇ (೧.ಉ) ಧಾತುವಿನ ಲ್ಯಬಂತಾವ್ಯಯ. ಸ್ಮಿತಾನನಾ–ಸ್ಮಿತಂ ಆನನಂ ಯಸ್ಯಾಃ ಸಾ (ಬ.ಸ) ಮುಗುಳ್ನಗೆಯುಳ್ಳ ಮುಖವುಳ್ಳವಳು. ಸತೀ-ಅಸ್ (೨. ಪ) ಧಾತುವಿನ ವ.ಧಾ.ವಿ. (ಸ್ತ್ರೀ) ಪ್ರ.ಏ.ವ. **ಆಹ**- ಅಂದಳು. ಬ್ರೂ (೨.ಪ.) ಧಾತುವಿನ ವರ್ತಮಾನಕಾಲ ತೃ. ಪು. ಏ. ವ.

೧೩. ಅನ್ವಯ—ಕಶ್ಚಿದ್ಭಟ, ತ್ವಂ ಜೀವಲೋಕೇ ಧನ್ಯಃ (ಅ.ಸಿ)। ಯತ್ ಅನೇಕೈಃ ಪುರುಷೈಃ ಸಂಪ್ರಾರ್ಥನೀಯಂ ವಲ್ಲಭಂ ವಸ್ತು ದುರ್ಲಭಂ ಏವ, ತತ್ ಸ್ವಯಂ ಏವ ತೇ ಸಿದ್ಧಿಂ ಗತಮ್।

ಭಾಷಾಂತರ:— ಕಶ್ಚಿದ್ಭಟನೇ, ನೀನು ಜಗತ್ತಿನಲ್ಲಿ ಧನ್ಯನು. (ಏಕೆಂದರೆ) ಅನೇಕ ಜನರಿಂದ ಪ್ರಾರ್ಥಿಸಲ್ಪಡುವ ಪ್ರೀತ್ಯಾಸ್ಪದವಾದ ಯಾವ ವಸ್ತುವು ದೊರೆಯಲು ಕಠಿಣವೇ ಆಗಿರುವದೋ, ಆ (ಪ್ರೇಮ ಎಂಬ) ಪದಾರ್ಥವು ತನ್ನಿಂದ ತಾನೇ ನಿನಗೆ ದೊರಕಿದೆ.

ಟಿಪ್ಪಣಿ:— ಜೀವಲೋಕೇ - ಜಗತ್ತಿನಲ್ಲಿ. ಜೀವಾನಾಂ ಲೋಕಃ (ಷ.ತ.ಸ.) ತಸ್ಮಿನ್ ಸಂಪ್ರಾರ್ಥನೀಯಂ–ಪ್ರಾರ್ಥಿಸಲ್ಪಡುವ. ಬಯಸ

ಲ್ಪಡುವ. ಸಮ್+ಪ್ರ+ಅರ್ಥ್ (೧೦.ಉ) ಧಾತುವಿನ ಕರ್ಮಣಿ ವಿಧ್ಯರ್ಥ ಧಾ.ಸಾ.ವಿ. (ನ) ಪ್ರ. ಏ. ವ. ವಲ್ಲಭಂ–ಪ್ರಿಯವಾದ. ದುರ್ಲಭಂ–ದೊರೆಯಲು ಕಠಿಣವಾದ. ದುಃಖೇನ ಲಭ್ಯತೇ ಇತಿ (ಉಪ. ತ.) ಸ್ವಯಂಏವ-ತನ್ನಿಂದ ತಾನೇ. ತಾನಾಗಿಯೇ ತೇ ಸಿದ್ಧಿಂ ಗತಂ – ನಿನಗೆ ದೊರೆತಿದೆ.

೧೪. ಅನ್ವಯಃ— (ತವ) ವಪುಃ ಕಾಂತಂ ಯೌವನಂ ಅಪಿ ಉದಾರಂ ತ್ವಂ ನವಕಾಮಿನೀನಾಂ ಶ್ಲಾಘನೀಯಃ ಅಸಿ। ತ್ವಂ ಸರ್ವಜನಪ್ರಿಯಾನ್ ಗುಣಾನ್ ಧತ್ಸೇ। ನರೇಂದ್ರಾತ್ ಪೂಜಾತಿಶಯಂ ಪ್ರಾಪ್ತಃ ಅಸಿ।

ಭಾಷಾಂತರ:— ನಿನ್ನ ದೇಹವು ಸುಂದರವಿದೆ; ತಾರುಣ್ಯವಾದರೂ ಭವ್ಯವಿದೆ. ನೀನು ಹೊಸ ತರುಣಿಯರ ಸ್ತುತಿಗೆ ಪಾತ್ರನು. ಎಲ್ಲರಿಗೂ ಪ್ರಿಯಕರವಾದ ಗುಣಗಳನ್ನು ಧರಿಸಿರುವೆ. ರಾಜನಿಂದ ಹೆಚ್ಚು ಮನ್ನಣೆ ಪಡೆದಿರುವೆ.

ಟಿಪ್ಪಣಿ:— ದೂತಿಯು ಮೊದಲು ಕಶ್ಚಿದ್ಭಟನ ಗುಣಗಾನ ಮಾಡು-ತ್ತಾಳೆ. ಹಾಗೂ ಸೂಚ್ಯವಾಗಿ, ಒಬ್ಬ ಸುಂದರ ತರುಣಿಯು ನಿನಗೆ ಮನ-ಸೋತಿದ್ದಾಳೆ ಎಂದು ಹೇಳುತ್ತಾಳೆ.

ವಪುಸ್—ದೇಹ, ಕಾಂತ—ಸುಂದರ. ನವಕಾಮಿನೀನಾಂ— ಹೊಸ ತರುಣಿಯರ ನವಾಃ ಕಾಮಿನ್ಯಃ ನವಕಾಮಿನ್ಯಃ (ಕ.ಸ) ತಾಸಾಂ। ಶ್ಲಾಘ-ನೀಯಃ-ಸ್ತುತ್ಯನು. ಸ್ತುತಿಗೆ ಪಾತ್ರನು. ಶ್ಲಾಘ್ (೧.ಆ) ಧಾತುವಿನ ಕರ್ಮಣಿ ವಿಧ್ಯರ್ಥ ಧಾ.ವಿ (ಪು) ಪ್ರ.ಏ.ವ. ಸರ್ವಜನಪ್ರಿಯಾನ್—ಎಲ್ಲ ಜನರಿಗೂ ಪ್ರಿಯಕರವಾದ. ಸರ್ವೇ ಜನಾಃ ಸರ್ವಜನಾಃ (ಕ.ಸ.) ತೇಷಾಂ ಪ್ರಿಯಾಃ (ಷ.ತ.ಸ.) ತಾನ್। ಧತ್ಸೇ—ಧರಿಸಿರುವೆ. ಧಾ. (೩.ಉ) ಧಾತುವಿನ ವ. ದ್ವಿ. ಪು. ಏ. ವ. ನರೇಂದ್ರಾತ್—ರಾಜನಿಂದ ನರಃ ಇಂದ್ರಃ ಇವ ( ಕ. ತ. ) ತಸ್ಮಾತ್। ಪೂಜಾತಿಶಯಂ-ಹೆಚ್ಚು ಮನ್ನಣೆ ಪೂಜಾಯಾಃ ಅತಿಶಯಃ (ಷ.ತ.ಸ.) ತಂ। ಪ್ರಾಪ್ತಃ–ಪಡೆದಿರುವೆ.

೧೫. ಅನ್ವಯಃ— ಸಖೇ, ವಿದಗ್ಧ, ಅತಃ ಮನೋ–ರಮಾಹ್ವಾ ರಾಜ ಕನ್ಯಾ ತ್ವಯಿ ಸಂಗಂ ಉಚ್ಚೈಃ ವಾಂಛತಿ। ಬದ್ಧಾನುರಾಗಾಂ ನವಯೌವ ನಾಂಗೀಂ ತಾಂ ಏಕಾಂತದೇಶೇ ಭಜ।

ಭಾಷಾಂತರ:— ಜಾಣಮಿತ್ರನೇ, ಆದ್ದರಿಂದ ಮನೋರಮೆ ಎಂಬ ರಾಜಪುತ್ರಿಯು ನಿನ್ನ ಸಂಗವನ್ನು ಹೆಚ್ಚಾಗಿ ಬಯಸುತ್ತಾಳೆ. (ನಿನ್ನಲ್ಲಿ) ಪ್ರೇಮ

ವನ್ನಿಟ್ಟ ಹೊಸತಾರುಣ್ಯವುಳ್ಳ ಅವಳನ್ನು ನಿರ್ಜನಪ್ರದೇಶದಲ್ಲಿ ಉಪ ಭೋಗಿಸು.

ಟಿಪ್ಪಣಿ:— ಸಖೇ, ಗೆಳೆಯನೇ. ಸಖಿನ್ (ಪು) ಶಬ್ದದ ಸಂಬೋಧನ ಏ. ವ. ವಿವಸ್ಥ-ಜಾಣನೇ. ಮನೋರಮಾಹ್ವಾ— ಮನೋರಮೆ ಎಂಬ ಮನೋರಮಾ ಇತಿ ಆಹ್ವಾ ಯಸ್ಯಾಃ ಸಾ (ಬ. ಸ.) ರಾಜಕನ್ಯಾ— ರಾಜ್ಞಃ ಕನ್ಯಾ (ಷ. ತ ಸ) ರಾಜಪುತ್ರಿ ಸಂಗಂ— ಸಹವಾಸವನ್ನು, ಉಚ್ಚೈಃ ವಾಂಛತಿ— ಉತ್ಕಟವಾಗಿ ಇಚ್ಛಿಸುತ್ತಾಳೆ. ಬದ್ಧಾನುರಾಗಾಂ— ಪ್ರೀತಿಯುಳ್ಳ ಬದ್ಧಃ ಅನುರಾಗಃ ಯಯಾ ಸಾ(ಬ.ಸ.)ತಾಂ ನವಯೌವನಾಂಗೀಂ—ಹೊಸ ತಾರುಣ್ಯವುಳ್ಳ ನವಂ ಯೌವನಂ ನವಯೌವನಂ (ಕ.ಸ.) ನವಯೌವನಂ ಅಂಗೇಷುಯಸ್ಯಾಃ ಸಾ(ಬ.ಸ.)ತಾಂ। ಏಕಾಂತಃ ದೇಶಃ ಏಕಾಂತದೇಶಃ(ಕ.ಸ) ತಸ್ಮಿನ್ ಏಕಾಂತದೇಶೇ-ನಿರ್ಜನವಾದ ಪ್ರದೇಶದಲ್ಲಿ ಭಜ — ಆಶ್ರಯಿಸು. ಹೊಂದು ಉಪಭೋಗಿಸು. ಭಜ್(೧.ಪ.)ಧಾತುವಿನ ಆಜ್ಞಾರ್ಥ ದ್ವಿ.ಪು.ಏ.ವ.

೧೬. ಅನ್ವಯಃ— ಅಸ್ಯಾಃ ವಚಃ ಶ್ರುತ್ವಾ ಸಃ ವಣಿಕ್ ಕರಾಭ್ಯಾಂ ಕರ್ಣೌ ಆಚ್ಛಾದ್ಯ ವಚಃ ಜಗಾದ ಚ । ಇಹ ಅಪಿ ಅಮುತ್ರ ಅಪಿ ವಿರುದ್ಧಂ ಏತತ್ ವಚಃ । ತ್ವಯಾ ಮಮ ಅಗ್ರೇ ನ ವಾಚ್ಯಂ ಹಿ ।

ಭಾಷಾಂತರ :—ಅವಳ ಮಾತನ್ನು ಕೇಳಿ ಆ ವ್ಯಾಪಾರಸ್ಥನು ಎರಡೂ ಕೈಗಳಿಂದ ಎರಡೂ ಕಿವಿಗಳನ್ನು ಮುಚ್ಚಿಕೊಂಡು ಮಾತನಾಡಿದನು. ಈ ಮಾತು ಇಲ್ಲಿಯೂ ಮತ್ತು ಪರಲೋಕದಲ್ಲಿಯೂ ನಿಷಿದ್ಧವಾದುದು. (ಧರ್ಮ ವಿರುದ್ಧವಾದುದು). ಇದನ್ನು ನನ್ನೆದುರಿಗೆ ಮಾತನಾಡಬಾರದು.

ಟಿಪ್ಪಣಿ: — ಆಚ್ಛಾದ್ಯ - ಮುಚ್ಚಿಕೊಂಡು ಆ+ಛದ್ (೧೦. ಉ) ಧಾತುವಿನ ಲ್ಯಬಂತಾವ್ಯಯ. ಜಗಾದ—ನುಡಿದನು. ಗದ್ (೧. ಪ) ಧಾತು ವಿನ ದ್ವಿ. ಭೂ. ತೃ. ಪು. ಏ. ವ. ಇಹ—ಈ ಲೋಕದಲ್ಲಿ ಅಮುತ್ರ - ಪರ ಲೋಕದಲ್ಲಿ ವಿರುದ್ಧಂ-ಧರ್ಮ ವಿರುದ್ಧವು. ಮಮ ಅಗ್ರೇ—ನನ್ನ ಎದುರಿಗೆ, ನ ವಾಚ್ಯಂ - ನುಡಿಯಲು ಯೋಗ್ಯವಲ್ಲ. ವಚ್ (೨.ಪ) ಧಾತುವಿನ ಕರ್ಮಣಿ ವಿಧ್ಯರ್ಥ ಧಾ. ಸಾ. ವಿ.(ನ)ಪ್ರ. ಏ. ವ. ತ್ವಯಾ ಏತತ್ ಮಮ ಅಗ್ರೇನ ವಾಚ್ಯಂ (ಕರ್ಮಣಿ) — ತ್ವಂ ಏತತ್ ಮಮ ಅಗ್ರೇನ ವಚ್ಯಾಃ (ಕರ್ತರಿ)

೧೭. ಅನ್ವಯ:— ಯತ್ ಸ್ವಸ್ತ್ರೀಪ್ರವೃತ್ತಿಃ ( ಇತಿ ) ವ್ರತಂ, ಸಭಾಯಾಂ ಆದರಾತ್ ಮಯಾ ಗಣಿನಃ ಗೃಹೀತಂ। ತಸ್ಮಿನ್ ಭಗ್ನೆ ತು ಇಹ ಪಾಪಂ ಆಪ್ಯ ಘೋರಂ ನರಕಂ ಅವಶ್ಯಂ ವ್ರಜಾಮಿ ।

ಭಾಷಾಂತರ :— (ಧರ್ಮ) ಸಭೆಯಲ್ಲಿ ನಾನು ' ಸ್ವ ಪತ್ನೀ ಉಪ ಭೋಗ ' ಎಂಬ ವ್ರತವನ್ನು ಆದರಪೂರ್ವಕವಾಗಿ (ಗಣಧರ) ಆಚಾರ್ಯ ರಿಂದ ಸ್ವೀಕರಿಸಿದೆನು. ಆ ವ್ರತವು ಭಂಗವಾದರೆ ಈ ಲೋಕದಲ್ಲಿ ಪಾಪಕ್ಕೆ ಗುರಿಯಾಗಿ ( ಪಾಪ ಪಡೆದು ), (ಪರಲೋಕದಲ್ಲಿ) ಅವಶ್ಯವಾಗಿ ನರಕದಲ್ಲಿ ಬೀಳುವೆನು.

ಟಿಪ್ಪಣಿ:— ಸ್ವಸ್ತ್ರೀಪ್ರವೃತ್ತಿಃ—ಸ್ವಪತ್ನೀ ಉಪಭೋಗ. ಸ್ವಸ್ಯ ಸ್ತ್ರೀ ಸ್ವಸ್ತ್ರೀ ( ಷ. ತ. ಸ. ) ತಸ್ಯಾಂ ಪ್ರವೃತ್ತಿಃ ( ಸ. ತ. ಸ. ) ವ್ರತಂ—ವ್ರತವು. ಸಭಾಯಾಂ — ಸಭೆಯಲ್ಲಿ. ಧರ್ಮಸಭೆಯಲ್ಲಿ ಗಣಿನಃ ಗೃಹೀತಂ – ಆಚಾರ್ಯರಿಂದ ನಾನು ಸ್ವೀಕರಿಸಿದೆನು. ಗಣಿನಃ ಇದು ಗಣಿನ್ (ಪು). ಶಬ್ದದ ಪ. ಏ. ವ. **ಗಣಿನ್** ಜೈನರಲ್ಲಿ ಪ್ರತಿಯೊಬ್ಬ ತೀರ್ಥಂ ಕರರಿಗೆ ಪಟ್ಟ ಶಿಷ್ಯರಿದ್ದು ಅವರಿಗೆ ಶಿಕ್ಷಕ, ಗುರು, ಆಚಾರ್ಯ, ಗಣಧರ ಮು. ಕರೆಯಲಾಗುವದು. ಭಕ್ತರಿಗೆ ದೀಕ್ಷೆ ಕೊಡುವದೇ ಅವರ ಮುಖ್ಯಕಾರ್ಯ ಈ ವರಾಂಗರಾಜನಾದರೋ ( ಕಶ್ಚಿದ್ಭಟ ) ಹಿಂದಕ್ಕೆ ಧರ್ಮ ಸಭೆಯಲ್ಲಿ ಅರಿಷ್ಟ ನೇಮಿಗಳ ಶಿಷ್ಯನಾದ ವರದತ್ತನಿಂದ ೫ ಅಣುವ್ರತಗಳ ದೀಕ್ಷೆ ತೆಗೆದು ಕೊಂಡಿದ್ದನು. ಅವುಗಳಲ್ಲಿ ಸ್ವಸ್ತ್ರೀ ಉಪಭೋಗವೂ ಒಂದಾಗಿತ್ತು. (ಅಸೇವನ ಮನ್ಯಸ್ತ್ರೀಷು) ಆ ೫ ಅಣುವ್ರತಗಳು ಕೆಳಗಿನ ಶ್ಲೋಕದಲ್ಲಿ ಹೇಳಲ್ಪಟ್ಟಿವೆ.

ಪ್ರಾಣಿರಕ್ಷಣಮಸತ್ಯನಿವೃತ್ತಿಂ ಚೌರ್ಯತೋಪ್ಯುಪರಮಂ ಯತಿವರ್ಯಾಃ।
ಲೋಭವರ್ಜನಮಸೇವನ ಮನ್ಯಸ್ತ್ರೀಷುಚಾಣುಚರಿತಂ ಕಥಯಂತಿ ॥
(III ೭೫)

ಮಯಾ ಗಣಿನಃ ಗೃಹೀತಂ (ಕರ್ಮಣಿ)— ಅಹಂ ಗಣಿನಃ ಗೃಹೀತವಾನ್ (ಕರ್ತರಿ) ಇಹ–ಈ ಲೋಕದಲ್ಲಿ ಪಾಪಂ ಆಪ್ಯ–ಪಾಪ ಹೊಂದಿ ಆಪ್ಯ ಇದು ಆಪ್ (೫. ಪ.) ಧಾತುವಿನ ಲ್ಯಬಂತಾವ್ಯಯ. ಅನಿಯಮಿತ ರೂಪ ತಸ್ಮಿನ್ ಭಗ್ನೇ–ಆ ವೃತವು ಭಂಗವಾದರೆ ವ್ರಜಾಮಿ—ಹೊಂದುತ್ತೇನೆ

೧೮. ಅನ್ವಯ:–ಸಾ ತಂ ಬಭಾಣ । ತ್ವಂ ಶ್ರುತಮೋಹಿತಃ ಮುನೀನಾಂ ವಾಕ್ಯೈಃ ಪರಿವಂಚಿತಃ ಚ । ದೇವಲೋಕಂ ವಾ ನರಕಾಲಯಂ ವಾ ನ ಜಾನಾಸಿ । ಆತ್ಮನಃ ಹಿತಂ ಚ ನೋ ಜಾನಾಸಿ ।

ಭಾಷಾಂತರ:– ಆ ದೂತಿಯು ಅವನಿಗೆ ಅಂದಳು. ನೀನು ಜ್ಞಾನದ ವ್ಯಾಮೋಹದಿಂದ ಮುನಿಗಳ ವಾಕ್ಯಗಳಿಗೆ ಮರುಳಾದೆ. ( ಅಥವಾ ಮೋಸ ಹೋದಿ ) ನೀನು ದೇವಲೋಕ ಇಲ್ಲವೆ ನರಕಸ್ಥಾನಗಳನ್ನು ಅರಿತಿರುವದಿಲ್ಲ. ಮತ್ತು ನಿನ್ನ ಹಿತವೂ ನಿನಗೆ ಗೊತ್ತಿಲ್ಲ.

ಟಿಪ್ಪಣಿ:— ಬಭಾಣ—ಅಂದಳು. ಭಣ್ (೧. ಪ) ಧಾತುವಿನ ದ್ವಿ. ಭೂ. ತೃ. ಪು. ಏ. ವ. ಶ್ರುತಮೋಹತಃ—ಜ್ಞಾನದ ವ್ಯಾಮೋಹದಿಂದ ಶ್ರುತಸ್ಯ ಮೋಹಃ ಶ್ರುತಮೋಹಃ (ಷ. ತ. ಸ.) ತಸ್ಮಾತ್ । ಮೋಹ ಎಂದರೆ ತಪ್ಪುತಿಳುವಳಿಕೆ, ಅಯಥಾರ್ಥ ಜ್ಞಾನ, ಪರಿವಂಚಿತಃ ವಂಚಿಸಲ್ಪಟ್ಟಿರುವೆ. ಮೋಸಗೊಳಿಸಲ್ಪಟ್ಟಿರುವೆ. ಪರಿ+ವಂಚ್(೧.ಪ)ಧಾ. ಪ್ರಯೋಜಕದ ಕರ್ಮಣಿ ಭೂ. ಧಾ. ವಿ. (ಪು)ಪ್ರ. ಏ. ವ. ಶ್ರುತಿಗಳು ಪರಸ್ಪರ ಭಿನ್ನವಿವೆ; ಸ್ಮೃತಿಗಳಾ ದರೂ ಪರಸ್ಪರ ವಿರುದ್ಧ ಇವೆ; ಬೇರೆ ಬೇರೆ ಮುನಿಗಳು ಬೇರೆ ಬೇರೆ ಹೇಳು ತ್ತಾರೆ. ಆದ್ದರಿಂದ ಮುನಿಗಳ ಮಾತಿಗೆ ಮರುಳಾಗಬೇಡ. ನನ್ನ ಮಾತನ್ನು ಕೇಳು. ನಿನ್ನ ಹಿತವನ್ನು ಸಾಧಿಸಿಕೋ ಎಂದು ಅವಳ ವಾದ. ದೇವಲೋಕಂ— ದೇವಲೋಕವನ್ನು, ದೇವಾನಾಂ ಲೋಕಃ ದೇವಲೋಕಃ (ಷ. ತ. ಸ.) ತಂ. ನರಕಾಲಯಂ— ನರಕಸ್ಥಾನವನ್ನು ನರಕಸ್ಯ ಆಲಯಃ ನರಕಾಲಯಃ (ಷ. ತ. ಸ.) ತಂ । ಆತ್ಮನಃ ಹಿತಂ—ನಿನ್ನ ಹಿತವನ್ನು. ನ ಜಾನಾಸಿ— ನೀನರಿಯೆ, ಜಾನಾಸಿ ಇದು ಜ್ಞಾ (೯. ಉ) ಧಾತುವಿನ ವ. ದ್ವಿ. ಪು. ಏ. ವ. ಇದೆ.

೧೯. ಅನ್ವಯ:— ಸಃ ವಣಿಕ್ಪತಿಃ ಪುನಃ ದೂತೀಂ ಪ್ರಾಹ । ಏತತ್ ಜಿನೋಕ್ತತತ್ತ್ವಪ್ರತಿಕೂಲಂ । ಅಹಂ ನ ಶೃಣೋಮಿ। ಅಹಂ ನ ಕರೋಮಿ । ತ್ವಯಾ ಅಯುಕ್ತಂ ನ ವಕ್ತವ್ಯಂ ಏವ ।

ಭಾಷಾಂತರ:— ಆ ವ್ಯಾಪಾರಸ್ಥರ ಮುಖಂಡನು ಮತ್ತೆ ದೂತಿಗೆ ಅಂದನು. ಇದು ತೀರ್ಥಂಕರರು ಹೇಳಿದ ತತ್ತ್ವಗಳಿಗೆ ವಿರುದ್ಧವಾಗಿದೆ. (ಆದ್ದರಿಂದ) ನಾನು (ನಿನ್ನ ಮಾತು) ಕೇಳುವದಿಲ್ಲ। (ಆ) ಕೆಲಸವನ್ನು ಮಾಡುವದಿಲ್ಲ. ಅಯೋಗ್ಯವಾದುದನ್ನು ನೀನು ಹೇಳಲೇ ಕೂಡದು.

ಟಿಪ್ಪಣಿ:— ಜಿನೋಕ್ತತತ್ತ್ವಪ್ರತಿಕೂಲಂ—ಜಿನೈಃ ಉಕ್ತಂ ಜಿನೋಕ್ತಂ (ತೃ.ತ.) ಜಿನೋಕ್ತಂ ತತ್ತ್ವಂ ಜಿನೋಕ್ತತತ್ತ್ವಂ(ಕ.ಸ.) ತಸ್ಯ ಪ್ರತಿಕೂಲಂ (ಷ.ತ.ಸ.) ತೀರ್ಥಂಕರರು ಹೇಳಿದ ತತ್ತ್ವಗಳಿಗೆ ವಿರುದ್ಧವಾದುದು. ಜಿನಃ–

ಜೈನರಗುರು, ತೀರ್ಥಂಕರ. ಜೈನಧರ್ಮದ ಆರ್ಹತರಿಗೆ ಕರೆಯುವ ಹೆಸರು. ಅಯುಕ್ತಂ — ಅಯೋಗ್ಯವಾದುದು. ನ ಯುಕ್ತಂ (ನ ತ.) ನವಕ್ತವ್ಯಂ — ಹೇಳಕೂಡದು. ವಕ್ತವ್ಯಂ ಇದು ವಚ್ (೨. ಪ) ಧಾತುವಿನ ಕರ್ಮಣಿ ವಿಧ್ಯರ್ಥ. ಧಾ. ಸಾ. ವಿ. (ನ) ಪ್ರ. ಏ. ವ. ತ್ವಯಾ ನ ವಕ್ತವ್ಯಂ (ಕರ್ಮಣಿ) ತ್ವಂ ನ ವಚ್ಯಾಃ(ಕರ್ತರಿ) ।

೨೦. ಅನ್ವಯ: — ಭದ್ರೇ, ಪ್ರಚ್ಛನ್ನವೃತ್ತ್ಯಾ ಕನ್ಯಾಂ ನ ಭಜಾಮಿ । ಪರಸ್ತ್ರಿಯಂ ಕದಾಪಿ ನ ಏವ ಭಜಾಮಿ । ಯಸ್ಮಾತ್ ಲೋಕಾಪವಾದಃ, ದುರಿತಂ ಚ (ಭವತಃ) ತತ್ ಕುಕರ್ಮ ಕುಲಜೈಃ ನ ವಿಧೇಯಮ್ ।

ಭಾಷಾಂತರ:– ಸುಮಂಗಯೆಲೇ, ಗುಪ್ತರೀತಿಯಿಂದ ನಾನು ಕನ್ಯೆಯನ್ನು ಸೇವಿಸಲಾರೆ. ಪರಸ್ತ್ರೀಯನ್ನು ಎಂದೂ ಭೋಗಿಸುವದಿಲ್ಲ. ಯಾವುದರಿಂದ ಲೋಕನಿಂದೆ ಮತ್ತು ಪಾಪ ಉದ್ಭವಿಸುವವೋ ಆ ಕೀಳು ಕೆಲಸವನ್ನು ಕುಲೀನರು ಮಾಡಕೂಡದು.

ಟಿಪ್ಪಣಿ:– ಭದ್ರೇ–ಸುಮಂಗಲೆಯೇ, ಶುಭವನ್ನುಂಟುಮಾಡುವವಳೇ. ಪ್ರಚ್ಛನ್ನವೃತ್ತ್ಯಾ–ಗುಪ್ತರೀತಿಯಿಂದ ಪ್ರಚ್ಛನ್ನಾ ವೃತ್ತಿಃ (ಕ. ಸ.) ತಯಾ. ಪರಸ್ತ್ರಿಯಂ–ಪರಸ್ತ್ರೀಯನ್ನು ಪರಸ್ಯ ಸ್ತ್ರೀ ಪರಸ್ತ್ರೀ (ಷ. ತ. ಸ.) ತಾಂ. ಲೋಕಾಪವಾದಃ – ಲೋಕನಿಂದೆ ಜನರನಿಂದೆ ಲೋಕಸ್ಯ ಅಪವಾದಃ (ಷ. ತ. ಸ.) ದುರಿತಂ–ಪಾಪ. **ಕುಕರ್ಮ—ಕೀಳುಕೆಲಸ.** ಕುತ್ಸಿತಂ ಕರ್ಮ (ಕ. ಸ.) ಕುಲಜೈಃ ಕುಕರ್ಮ ನ ವಿಧೇಯಮ್ (ಕರ್ಮಣಿ)— ಕುಲೀನರಿಂದ ಕೀಳು ಕೆಲಸವು ಮಾಡಲ್ಪಡಬಾರದು. ಕುಲಜಾಃ ಕುಕರ್ಮ ನ ವಿದಧ್ಯುಃ (ಕರ್ತರಿ) ವಿಧೇಯಂ–ವಿ+ಧಾ (೩. ಉ) ಧಾತುವಿನ ಕರ್ಮಣಿ ವಿಧ್ಯರ್ಥ ಧಾ. ಸಾ. ವಿ. (ನ) ಪ್ರ. ಏ. ವ.

ಪಠ್ಯಪುಸ್ತಕದಲ್ಲಿ ಕುಲಜಃ ಎಂದು ತಪ್ಪು ಅಚ್ಚಾಗಿದೆ. ಅದು ಕುಲಜೈಃ ಎಂದಿರಬೇಕು. ಮೂಲಪುಸ್ತಕದಲ್ಲಿ ಕುಲಜೈಃ ಎಂಬುದಾಗಿಯೇ ಇದೆ. ಕುಲಜಃ ಎಂದು ಪಾಠ ಇಟ್ಟುಕೊಂಡರೆ ಅನ್ವಯ ಕೂಡುವದಿಲ್ಲ. ಆದ್ದರಿಂದ ವಿದ್ಯಾರ್ಥಿಗಳು ತಪ್ಪನ್ನು ಸರಿಪಡಿಸಿಕೊಳ್ಳಬೇಕು.

**ಪುಟ ೪೪.** ೨೧. ಅನ್ವಯ:—ಯದಾ ನರೇಶಃ ವಿಧಿವತ್ ವಿವಾಹಂ ವಿಧಾಯ ಕನ್ಯಾಂ ಮಹ್ಯಂ ಪ್ರದದಾತಿ ತದಾ ಏಷಾ ಮಯಾ ಸ್ವೀಕ್ರಿಯತೇ, ಅನ್ಯಥಾ ನ ಏವ ಸ್ವೀಕ್ರಿಯತೇ । ಬಹುಭಾಷಿತೇನ ಕಿಮ್।

ಭಾಷಾಂತರ:— ರಾಜನು ವಿಧಿಪೂರ್ವಕವಾಗಿ ಲಗ್ನಮಾಡಿ ಕನ್ಯೆಯನ್ನು ನನಗೆ ಕೊಟ್ಟಾಗ (ಶಬ್ದಶಃ ಯಾವಾಗ ಕೊಡುವನೋ ಆಗ) ನಾನು ಇವಳನ್ನು ಸ್ವೀಕರಿಸುವೆನು. ಇಲ್ಲವಾದರೆ ಇಲ್ಲ. ಬಹಳ ಮಾತಿನಿಂದೇನು ಪ್ರಯೋಜನ ?

ಟಿಪ್ಪಣಿ:— ಯದಾ....ತದಾ–ಯಾವಾಗ ಆಗ. ನರೇಶಃ–ಅರಸ. ನರಾಣಾಂ ಈಶಃ (ಷ. ತ. ಸ.) ವಿಧಿವತ್–ವಿಧಿಪೂರ್ವಕವಾಗಿ ಶಾಸ್ತ್ರದಲ್ಲಿ ಹೇಳಿದ ಪದ್ಧತಿಯ ಮೇರೆಗೆ. ವಿವಾಹಂ ವಿಧಾಯ–ಲಗ್ನವನ್ನು ಮಾಡಿ. ವಿಧಾಯ–ವಿ+ಧಾ (೩. ಉ.) ಧಾತುವಿನ ಲ್ಯಬಂತಾವ್ಯಯ ಪ್ರದದಾತಿ— ಕೊಡುವನು. ಪ್ರ+ದಾ (೩. ಉ) ಧಾತುವಿನ ವ. ತೃ. ಪು, ಏ. ವ. ಸ್ವೀಕ್ರಿಯತೇ–ಸ್ವೀಕರಿಸಲ್ಪಡುತ್ತಾಳೆ. ಸ್ವೀ+ಕೃ (೮. ಉ.) ಧಾತುವಿನ ಕರ್ಮಣಿ ವ. ತೃ. ಪು. ಏ. ವ. ಏಷಾ ಮಯಾ ಸ್ವೀಕ್ರಿಯತೇ (ಕರ್ಮಣಿ)–ಏನಾಂ ಅಹಂ ಸ್ವೀಕರೋಮಿ (ಕರ್ತರಿ). ಬಹುಭಾಷಿತೇನ–ಬಹಳ ಮಾತಿನಿಂದ. ಬಹು ಭಾಷಿತಂ ಬಹುಭಾಷಿತಂ (ಕ. ಸ.) ತೇನ. ಕಿಮ್–ಏನು. ಏನು ಉಪಯೋಗ. ಇದು ತೃತೀಯಾ ವಿಭಕ್ತಿ ತೆಗೆದುಕೊಳ್ಳುತ್ತದೆ. ಉದಾ:– ಸುಕವಿತಾ ಯದ್ಯಸ್ತಿ ರಾಜ್ಯೇನ ಕಿಮ್ ।

೨೨. ಅನ್ವಯ:— ಶ್ರೇಷ್ಠಿಸುತಂ ದೃಢವ್ರತಂ ವಿದಿತ್ವಾ ಸ್ವಕಾರ್ಯಸಿದ್ಧಿಂ ಪ್ರತಿ ನಿಷ್ಫಲಾಶಾ; ಮನೋರಮಾಯಾಃ ಕ್ಲೇಶಂ ಚ ಸ್ಮರಂತೀ ಏಷಾ ಪ್ರತಿವಾಕ್ಯಂ ವಕ್ತುಂ ನ ಶಶಾಕ ।

ಭಾಷಾಂತರ:— ದೂತಿಯು, ವ್ಯಾಪಾರಸ್ಥನ ಮಗನು ನಿಶ್ಚಲವಾದ ವ್ರತವುಳ್ಳವನಿದ್ದುದನ್ನು ಕಂಡು, ನಿರಾಶೆಗೊಂಡು, ಮನೋರಮೆಯ ವ್ಯಥೆಯನ್ನು ನೆನೆಯುತ್ತ (ಅವನಿಗೆ) ಪ್ರತ್ಯುತ್ತರ ಕೊಡಲು ಸಮರ್ಥಳಾಗಲಿಲ್ಲ.

ಟಿಪ್ಪಣಿ:— ಶ್ರೇಷ್ಠಿಸುತಃ– ವ್ಯಾಪಾರಸ್ಥನ ಮಗ. ಶೆಟ್ಟಿಯ ಮಗ. ಶ್ರೇಷ್ಠಿನಃ ಸುತಃ (ಷ. ತ. ಸ) ದೃಢವ್ರತಂ (ತಂ)–ದೃಢಂ ವ್ರತಂ ಯಸ್ಯ ಸಃ (ಬ. ಸ.) ತಂ. ವಿದಿತ್ವಾ–ತಿಳಿದುಕೊಂಡು. ಅರಿತುಕೊಂಡು ವಿದ್ (೨. ಪ.) ಧಾತುವಿನ ಲ್ಯಬಂತಾವ್ಯಯ, ಸ್ವಕಾರ್ಯಸಿದ್ಧಿಂ ಪ್ರತಿ–ತನ್ನ ಕಾರ್ಯ ಕೈಗೂಡುವ ವಿಷಯವಾಗಿ. ಸ್ವಸ್ಯ ಕಾರ್ಯಂ ಸ್ವಕಾರ್ಯಂ (ಷ. ತ. ಸ.) ತಸ್ಯ ಸಿದ್ಧಿಃ (ಷ. ತ. ಸ.) ತಾಂ. ನಿಷ್ಫಲಾಶಾ–ನಿರಾಶೆಯುಳ್ಳವಳು. ನಿರ್ಗತಂ ಫಲಂ ಯಸ್ಯಾಃ ಸಾ ನಿಷ್ಫಲಾ (ಪ್ರಾದಿ ಬ. ಸ.) ನಿಷ್ಫಲಾ ಆಶಾ ಯಸ್ಯಾಃ

ಸಾ (ಬ. ಸ.) ಕ್ಲೇಶಂ–ವ್ಯಥೆಯನ್ನು ಸ್ಮರಂತೀ-ನೆನೆಯುತ್ತ. ಸ್ಮೃ (೧. ಪ.) ಧಾತುವಿನ ವ. ಧಾ. ವಿ. (ಸ್ತ್ರೀ) ಪ್ರ. ಏ. ವ. ಪ್ರತಿವಾಕ್ಯಂ–ಉತ್ತರ ಪ್ರತಿಗತಂ ವಾಕ್ಯಂ (ಪ್ರಾದಿ. ತ. ಸ.) ವಕ್ತುಂ–ನುಡಿಯಲು. ವಚ್ (೨. ಪ) ಧಾತುವಿನ ತುಮಂತಾವ್ಯಯ. ನ ಶಕ್ತಾ–ಸಮರ್ಥಳಾಗಲಿಲ್ಲ. ಶಕ್ತಾ ಇದು ಶಕ್ (೫. ಪ) ಧಾತುವಿನ ಕರ್ಮಣಿ ಭೂ. ಧಾ. ವಿ. (ಸ್ತ್ರೀ) ಪ್ರ. ಏ. ವ.

## EXERCISES

ಅಭ್ಯಾಸಕ್ಕಾಗಿ ಪ್ರಶ್ನೆಗಳು:—

೧. ಕನ್ನಡಕ್ಕೆ ಪರಿವರ್ತಿಸಿರಿ:—(i) ಶ್ಲೋಕಗಳು ೪-೬. (ii) ಶ್ಲೋಕ ೧೨–೧೪. (iii) ಶ್ಲೋಕ ೧೬–೧೯.

೨. ವಿಗ್ರಹಿಸಿ ಸಮಾಸಗಳ ಹೆಸರು ಹೇಳಿರಿ:— ಮನೋರಮಾಹ್ವಾ; ಮನೋಜರೂಪಂ; ಮನಃಸ್ಥಂ; ನಿರುದ್ಧಕಂಠಂ; ಅಧೋಮುಖೀ; ಸುನೇತ್ರಾ; ವೀತಶಂಕಾ; ಮನೋಭೂಃ; ಸಾಶ್ರುವಿಶಾಲನೇತ್ರಾ; ಸ್ಮಿತಾನನಾ; ಕುಕರ್ಮ; ಪ್ರತಿವಾಕ್ಯಂ.

೩. ರೂಪ ಗುರುತಿಸಿರಿ:— ಪ್ರವಿಶಂತಂ; ವಿಚಿಂತಯಂತೀ; ಅಭ್ಯೇತ್ಯ; ಪಿದಧೌ; ಅವಾದೀತ್; ಅಸ್ಯ; ಗೋಪಾಯಸೇ; ಆಸ್ವಾಸ್ಯ; ಸತೀ; ವೋಢುಂ; ಬಭಾಣ; ಜಗಾದ; ವಾಚ್ಯಂ; ಧತ್ಸೇ.

೪. ಲಘು ಟಿಪ್ಪಣಿ ಬರೆಯಿರಿ:— ಗಣಿನ್; ಜಿನ.

೫ ವಾಕ್ಯಗಳಲ್ಲಿ ಉಪಯೋಗಿಸಿರಿ:—ಪುರತಃ; ಪ್ರಭೃತಿ; ಕಿಮ್; ಅಲಿ.

೬. ಪ್ರಯೋಗ ಬದಲಿಸಿರಿ:— (i) ಏಷ ಮನೋಭೂಃ ಮೇ ಮನಃ ಸಂತಾಪಯತಿ। (ii) ನರನಾಥಸೇವಾಂ ವಿಧಾತುಂ ಗಚ್ಛನ್ ಕಶ್ಚಿದ್ಭಟಃ ಮಯಾ ದೃಷ್ಟಃ। (iii) ಕುಲಜೈಃ ಕುಕರ್ಮ ನ ವಿಧೇಯಮ್।

೭. ಸಂಧಿ ಬಿಡಿಸಿರಿ:— ತಯೈವಮಾಪೃಷ್ಟೋಽಭ್ಯೇತ್ಯ; ತ್ವಮಸ್ಮಿನ್ನೇಕಾಕಿನೀ; ತಾಮುವಾದೀದಿತಿ; ವಾಕ್ಯಮಥೇಹ; ಇಹಾಪ್ಯಮುತ್ರಾಪಿ

# ೬. ಭಕ್ತಾಮರಸ್ತೋತ್ರಮ್

**ಕವಿ ಹಾಗೂ ಕಾವ್ಯ:—** ಈ ಪಾಠವನ್ನು ಶ್ರೀಮಾನ ತುಂಗಾಚಾರ್ಯ ವಿರಚಿತವಾದ ಭಕ್ತಾಮರಸ್ತೋತ್ರದಿಂದ ಆಯ್ದುಕೊಳ್ಳಲಾಗಿದೆ.

**ಕವಿ:—** ಭಕ್ತಾಮರಸ್ತೋತ್ರವನ್ನು ಶ್ರೀಮಾನ್‌ತುಂಗಾಚಾರ್ಯರೆಂಬ ಜೈನ ಕವಿಗಳು ರಚಿಸಿದ್ದಾರೆ. ಇವರು ಬಾಣ, ಮಯೂರ, ಹರ್ಷ, ವೃದ್ಧ ಭೋಜನ ಸಮಕಾಲೀನರೆಂದು ಕೆಲವರು ಹೇಳುತ್ತಾರೆ. ಆದರೆ ಇವರು ಕ್ರಿ.ಶ. ೩ನೆಯ ಶತಮಾನದವರೆಂದು ಬೇರೆ ಪಂಡಿತರ ಮತ. ಒಟ್ಟಾರೆ **ಇವರ ಕಾಲ**ವನ್ನು ಬಹುಜನ ಸಮ್ಮತವಾದ **೬ನೆಯ ಶತಮಾನ**ವೆಂದು ಇಟ್ಟು ಕೊಳ್ಳಬಹುದು. ಆಚಾರ್ಯರು ಶ್ವೇತಾಂಬರ ಪಂಥದವರೆಂದು ಶ್ವೇತಾಂಬರರೂ ದಿಗಂಬರ ಪಂಥಕ್ಕೆ ಸೇರಿದವರೆಂದು ದಿಗಂಬರರೂ ಹೇಳುತ್ತಾರೆ. ಎರಡೂ ಪಂಥದವರು ಇವರ ಗ್ರಂಥಗಳಿಗೆ ಟೀಕೆಗಳನ್ನು ಬರೆದಿದ್ದಾರೆ. ಈ ರೀತಿಯಾಗಿ ಆಚಾರ್ಯರು ಎರಡೂ ಪಂಥಗಳ ಮನ್ನಣೆಗೆ ಪಾತ್ರರಾಗಿದ್ದಾರೆ.

ತುಂಗಾಚಾರ್ಯರು ನಾಗರಾಜನಿಗೆ ಜೈನಧರ್ಮದ ಮಹತಿಯನ್ನು ತೋರಿಸುವದಕ್ಕಾಗಿ ಪ್ರಾಕೃತದಲ್ಲಿ ಭಯಾಪಹರಣಸ್ತವನವನ್ನು ರಚಿಸಿದ್ದಾರೆ. ಇದರಲ್ಲಿ ಪಾರ್ಶ್ವನಾಥನ ಸ್ತುತಿಯಿದೆ.

ಆಚಾರ್ಯರು ಈ **ಭಕ್ತಾಮರಸ್ತೋತ್ರವನ್ನು ರಚಿಸಿದ ಸಂದರ್ಭವನ್ನು** ಇವರ ಗ್ರಂಥಗಳ ಟೀಕಾಕಾರರು ಈ ರೀತಿಯಾಗಿ ವಿವರಿಸುತ್ತಾರೆ. ಬಾಣನ ಮಾವನಾದ ಮಯೂರನು ಬಾಣನ ಹೆಂಡತಿಯ ಶಾಪದಿಂದ ಕುಷ್ಠ ರೋಗಿಯಾಗಿ ತುಂಬ ಬಳಲಿದನು. ಆಗ ಗಂಗಾನದಿಯ ಪ್ರವಾಹದ ಮೇಲೆ ಚಾಚಿದ ಒಂದು ಮರದ ಟೊಂಗೆಗೆ ೧೦೦ ಹಗ್ಗಗಳಿಂದ ತನ್ನನ್ನು ಕಟ್ಟಿ ಕೊಂಡನು. ಆ ಮೇಲೆ ಅನನ್ಯ ಭಕ್ತಿಯಿಂದ ಸೂರ್ಯದೇವನನ್ನು ಸ್ತುತಿಸಲು ಪ್ರಾರಂಭಿಸಿದನು. ಒಂದು ಶ್ಲೋಕವನ್ನು ಪಠಿಸಿದ ಕೂಡಲೇ ಒಂದು ಹಗ್ಗ ವನ್ನು ಕತ್ತರಿಸುತ್ತ ೯೯ ಹಗ್ಗಗಳನ್ನು ಕತ್ತರಿಸಿ ೧೦೦ನೆಯ ಶ್ಲೋಕವನ್ನು ಪಠಿಸಿ ೧೦೦ನೆಯ ಹಗ್ಗವನ್ನು ಕತ್ತರಿಸಿ ಗಂಗಾನದಿಯ ಪ್ರವಾಹದಲ್ಲಿ ಮುಳುಗಿ ಮರಣಹೊಂದಲುದ್ಯುಕ್ತನಾಗಿರುವಾಗ ಸೂರ್ಯದೇವನು ಪ್ರತ್ಯಕ್ಷನಾಗಿ ಅವ ನನ್ನು ಮಹಾರೋಗದಿಂದ ಮುಕ್ತನನ್ನಾಗಿ ಮಾಡಿದನು. ಮಯೂರನು ರಚಿಸಿದ ಈ ೧೦೦ ಶ್ಲೋಕಗಳು 'ಸೂರ್ಯಶತಕ'ವೆಂದು ಪ್ರಸಿದ್ಧವಾದವು. ಮಯೂರನು ಮಾಡಿ ತೋರಿಸಿದ ಈ ಪವಾಡವನ್ನು ಕಂಡು ಆತನ ಪ್ರತಿ ಸ್ಪರ್ಧಿಯಾದ ಬಾಣನು ತನ್ನ ಕೈಕಾಲುಗಳನ್ನು ಕತ್ತರಿಸಿಕೊಂಡು ಚಂಡೀ

ದೇವಿಯನ್ನು ೧೦೦ ಶ್ಲೋಕಗಳಲ್ಲಿ ಅನನ್ಯ ಭಕ್ತಿಯಿಂದ ಸ್ತುತಿಸಿ ತನ್ನ ಕೈಕಾಲು ಪಡೆದನು. ಬಾಣನ ಈ ೧೦೦ ಶ್ಲೋಕಗಳಿಗೆ ಚಂಡೀಶತಕವೆನ್ನುವರು. ಈ ಇಬ್ಬರೂ ಬ್ರಾಹ್ಮಣ ಕವಿಗಳು ಮಾಡಿತೋರಿಸಿದ ಈ ಪವಾಡಗಳನ್ನು ಕಂಡು ಆಚಾರ್ಯರು ಜಿನನ ಸ್ತುತಿಯನ್ನು ಮಾಡಿ ತಾವೂ ಒಂದು ಪವಾಡ ವನ್ನು ಮಾಡಿ ತೋರಿಸಲು ತಮ್ಮ ಮನಸ್ಸಿನ ವಿರುದ್ಧವಾಗಿ ನಿಶ್ಚಯಿಸಿದರು. ೪೨ ಕಬ್ಬಿಣದ ಸರಪಳಿಗಳಿಂದ ತಮ್ಮನ್ನು ಕಟ್ಟಿಕೊಂಡು ಒಂದು ಮನೆಯಲ್ಲಿ ಬೀಗ ಹಾಕಿಕೊಂಡು ಕುಳಿತು ಜಿನನನ್ನು ಅನನ್ಯಭಕ್ತಿಯಿಂದ ಭಜಿಸಲು ಪ್ರಾರಂಭಿಸಿದರು. ಒಂದೊಂದು ಶ್ಲೋಕವನ್ನು ಪಠಿಸದಂತೆ ಒಂದೊಂದು ಸರಪಳಿಯು ತನ್ನಷ್ಟಕ್ಕೆ ತಾನೇ ಕಡಿದು ಬೀಳತೊಡಗಿತು. ಹೀಗೆ ೪೪ ಶ್ಲೋಕಗಳನ್ನು ರಚಿಸಿ ಜಿನನ ಮಹಾತ್ಮ್ಯೆಯನ್ನು ಲೋಕಕ್ಕೆ ಅರುಹಿದರು. ಈ ಶ್ಲೋಕಗಳಿಗೆ ಭಕ್ತಾಮರಸ್ತೋತ್ರವೆನ್ನುವರು. ಈ ಅದ್ಭುತವನ್ನು ಕಂಡು ಭೋಜನು ಆಚಾರ್ಯರ ಶಿಷ್ಯತ್ವವನ್ನು ವಹಿಸಿದನು.

**ಟೀಪು :—** ಈ ಕಥೆಯ ಸತ್ಯಾಸತ್ಯತೆ ಶಂಕನೀಯವೆಂದು ಕಂಡರೂ ಕೂಡ ಇದು ಸತ್ಯವೆಂದೇ ಹೇಳಬಹುದು. ಈ ಕಥೆಗೆ ಸ್ತೋತ್ರದಲ್ಲಿಯ ೪೨ನೆಯ ಶ್ಲೋಕವು ಆಧಾರವಾಗಿರಬಹುದು.

[ ಆಪಾದ ಕಂಠ ಮುರು ಶೃಂಖಲವೇಷ್ಟಿತಾಂಗಾ
ಗಾಢಂ ಬೃಹನ್ನಿಗಡ ಕೋಟಿ ನಿಘೃಷ್ಟ ಜಂಘಾಃ ॥
ತ್ವನ್ನಾಮಮಂತ್ರ ಮನಿಶಂ ಮನುಜಾಃ ಸ್ಮರಂತಃ
ಸದ್ಯಃ ಸ್ವಯಂ ವಿಗತ ಬಂಧ ಭಯಾ ಭವಂತಿ ॥ ]

ಅಲ್ಲದೆ ಮಮ್ಮಟಭಟ್ಟನೂ ಕೂಡ ತನ್ನ ಕಾವ್ಯಪ್ರಕಾಶದಲ್ಲಿ "ಶಿವೇತರಕ್ಷತಿ"ಯ ಉದಾಹರಣೆಯೆಂದು ಈ ಕಥೆಯನ್ನು ಸೂಚಿಸಿದ್ದಾನೆ. ಅಲ್ಲದೆ ಬಹುತರ ಎಲ್ಲ ಟೀಕಾಕಾರರೂ ಈ ಕಥೆಯನ್ನು ಹೇಳಿದ್ದಾರೆ. ಹೀಗಾಗಿ ಈ ಕಥೆ ಸತ್ಯ ವಾಗಿರಬೇಕು.

**ಕಾವ್ಯ:—** ಈ ಭಕ್ತಾಮರ ಸ್ತೋತ್ರದಲ್ಲಿ ಋ(ವೃ)ಷಭನಾಥನ ಸ್ತುತಿಯಿದೆ. ಅವನನ್ನು ಶ್ರೇಷ್ಠ ದೇವತೆಗಳ ಸಾಲಿನಲ್ಲಿ ಸ್ಥಾಪಿಸಿ ಭಜಿಸಿದ್ದಾನೆ. ಎಲ್ಲ ಸಂಕಟಗಳಿಂದಲೂ ಪಾರುಮಾಡುವ ಸರ್ವಶಕ್ತನೆಂದೂ ವರ್ಣಿಸಿದ್ದಾನೆ. ನಿಜವಾಗಿ **ಈ ಸ್ತೋತ್ರದ ಹೆಸರು ಆದಿನಾಥ ಸ್ತೋತ್ರವೆಂದಿದೆ.** ಆದರೆ **ಈ** ಸ್ತೋತ್ರದ ಮೊದಲನೆಯ ಚರಣದ ಮೊದಲನೆಯ ಪದವು ಭಕ್ತಾಮರ ಇದ್ದುದರಿಂದ ಇದಕ್ಕೆ ಭಕ್ತಾಮರ ಸ್ತೋತ್ರವೆಂಬ ಹೆಸರು ಬಂದಿದೆ.

ಈ ಭಕ್ತಾಮರ ಸ್ತೋತ್ರವು ಜೈನಮತೀಯ ಗ್ರಂಥಗಳಲ್ಲಿ ತುಂಬ ಮಹತ್ವದ ಸ್ಥಾನವನ್ನು ಪಡೆದಿದೆ. ಇಂದಿಗೂ ಕೂಡ ಶ್ವೇತಾಂಬರರು ಹಾಗೂ ದಿಗಂಬರರು ಭಕ್ತಿಯಿಂದ ಇದನ್ನು ದಿನಾಲು ಪಠಿಸುತ್ತಾರೆ. ಈ ಸ್ತೋತ್ರದ ಪಠಣವು ದೈನಂದಿನ ಆಹ್ನಿಕದ ಮಹತ್ವದ ಅಂಗವಾಗಿದೆ.

**ಸಂದರ್ಭ ಹಾಗೂ ಪಾಠದ ಸಾರಾಂಶ:**— ಈ ಪಾಠದಲ್ಲಿ ಭಕ್ತಾಮರ ಸ್ತೋತ್ರದ ಮೊದಲಿನ ೧೦ ಶ್ಲೋಕಗಳನ್ನು ಆಯ್ದುಕೊಳ್ಳಲಾಗಿದೆ.

ಮಾನತುಂಗನು ಮೊದಲು ಜಿನೇಶ್ವರನ ಪಾದಗಳಿಗೆ ನಮಸ್ಕರಿಸಿ ನಂತರ ಆದ್ಯ ತೀರ್ಥಂಕರನ (ವೃಷಭನಾಥ?) ಸ್ತೋತ್ರ ಮಾಡಲು ಆರಂಭಿಸುತ್ತಾನೆ. ಈ ಪ್ರಥಮ ಜಿನೇಂದ್ರನು ಸಕಲ ಗುಣಗಳುಳ್ಳವನು. ಹಾಗೂ ಜನರ ಪಾಪವನ್ನು ಪರಿಹಾರ ಮಾಡುವವನು. ಇವನನ್ನು ಎಲ್ಲ ದೇವತೆಗಳು ಆರಾಧಿಸುತ್ತಾರೆ. ದೇವೇಂದ್ರನು ಕೂಡ ಸ್ತುತಿಗಳಿಂದ ಇವನನ್ನು ಪೂಜಿಸುತ್ತಾನೆ. ಆದರೆ ಇವನ ಗುಣಗಳನ್ನು ಸಂಪೂರ್ಣವಾಗಿ ಗಾನ ಮಾಡಲು ದೇವಗುರು ಬೃಹಸ್ಪತಿಗೆ ಕೂಡ ಸಾಧ್ಯವಿಲ್ಲ. ಹೀಗಿದ್ದರೂ ಮಂದಬುದ್ಧಿಯ ಮಾನತುಂಗನು ಅವನನ್ನು ಸ್ತುತಿಸಲು ಹೊರಟಿದ್ದಾನೆ. ಇದಕ್ಕೆ ಕಾರಣವೆಂದರೆ ತೀರ್ಥಂಕರರಲ್ಲಿದ್ದ ಪರಮವಿಶ್ವಾಸ, ದೃಢಭಕ್ತಿ. ಚಿಗರೆಯು ತನ್ನ ಮರಿಯ ಮೇಲಿನ ಮಮತೆಯಿಂದ ಅದನ್ನು ರಕ್ಷಿಸಲು ಸಿಂಹದ ಮೇಲೆ ಮುಗಿಬೀಳುವಂತೆ, ಮಾನತುಂಗನಾದರೂ ಅತಿಶಯ ಭಕ್ತಿಯ ಮೂಲಕ ಸ್ತೋತ್ರ ಮಾಡಲು ಅಣಿಯಾಗಿದ್ದಾನೆ. ಈ ತನ್ನ ಕಾರ್ಯವು, ಬಾಲಕನು ನೀರಿನಲ್ಲಿ ಬಿದ್ದ ಚಂದ್ರನ ಪ್ರತಿಬಿಂಬವನ್ನು ತೆಗೆದುಕೊಳ್ಳಲು ಯತ್ನಿಸುವಂತಿದೆ. ಎಂಬುದರ ಪೂರ್ಣ ಅರಿವಿದ್ದರೂ ಕವಿ ಧೈರ್ಯಗುಂದುವದಿಲ್ಲ. ನೀರಿನ ಹನಿಯು ಕಮಲದೆಲೆಯ ಸಹವಾಸದಿಂದ ಮುತ್ತಿನ ಶೋಭೆ ಪಡೆಯುವಂತೆ ತನ್ನ ಸ್ತೋತ್ರವಾದರೂ ತೀರ್ಥಂಕರರ ಅಗಾಧ ಮಹಿಮೆಯ ಮೂಲಕ ವಿದ್ವಜ್ಜನರ ಮೆಚ್ಚುಗೆ ಪಡೆಯುವದೆಂಬ ದೃಢ ವಿಶ್ವಾಸ ಕವಿಗೆ ಇದೆ. ಜಿನೇಂದ್ರನ ನಾಮಸಂಕೀರ್ತನೆಯಿಂದಲೇ ದುರಿತ ನಿವೃತ್ತಿಯಾಗುತ್ತದೆಂದ ಮೇಲೆ, ಅವನ ಸ್ತೋತ್ರದ ಮಹಿಮೆ ಕೇಳುವದೇನು? ಭಕ್ತರು ಅವನಲ್ಲಿದ್ದ ವಾಸ್ತವ ಗುಣಗಳಿಂದ ಅವನನ್ನು ಆರಾಧಿಸಿದರೆ, ಅವನು ಸತ್ಯವಾಗಿಯೂ ಅವರನ್ನು ತನ್ನ ಸರಿಸಮಾನರನ್ನಾಗಿ ಮಾಡಿಕೊಳ್ಳುತ್ತಾನೆ. ಅಂತೆಯೇ ಮಾನತುಂಗನು ಸ್ತುತಿಸಲು ಪ್ರವೃತ್ತನಾಗಿ ಸ್ತೋತ್ರವನ್ನು ಮುಂದುವರಿಸುತ್ತಾನೆ.

## ಅನ್ವಯ, ಭಾಷಾಂತರ ಹಾಗೂ ಟೀಕೆ-ಟಿಪ್ಪಣಿಗಳು.

### भक्तामरस्तोत्रम्

### ೬. ಭಕ್ತಾಮರಸ್ತೋತ್ರವು.

**ಪುಟ** ೪೫ ೧-೨ ಅನ್ವಯ:-ಭಕ್ತಾಮರಪ್ರಣತಮೌಲಿಮಣಿಪ್ರಭಾಣಾಂ ಉದ್ಯೋತಕಂ, ದಲಿತಪಾಪತಮೋವಿತಾನಂ, ಯುಗಾದೌ ಭವಜಲೇ ಪತತಾಂ ಜನಾನಾಂ ಆಲಂಬನಂ. ಜಿನಪಾದಯುಗಂ, ಸಮ್ಯಕ್ ಪ್ರಣಮ್ಯ(೧) ಸಕಲವಾಙ್ಮಯತತ್ತ್ವಬೋಧಾತ್ ಉದ್ಭೂತಬುದ್ಧಿಪಟುಭಿಃ ಸುರಲೋಕನಾಥೈಃ ಜಗತ್ರಿತಯಚಿತ್ತಹರೈಃ ಉದಾರೈಃ ಸ್ತೋತ್ರೈಃ ಯಃ ಸಂಸ್ತುತಃ, ತಂ ಪ್ರಥಮಂ ಜಿನೇಂದ್ರ ಕಿಲ ಅಹಂ ಅಪಿ ಸ್ತೋಷ್ಯೇ (೨)

ಭಾಷಾಂತರ:— ಭಕ್ತಿಯುಳ್ಳ ದೇವತೆಗಳು ನಮಿಸುವಾಗ ಅವರ ಕಿರೀಟಗಳಲ್ಲಿದ್ದ ರತ್ನಗಳ ಹೊಳಪನ್ನು ಹೆಚ್ಚು ಹೊಳೆಯುವಂತೆ ಮಾಡುವ, ಪಾಪರೂಪವಾದ ಕತ್ತಲೆಯ ಸಮೂಹವನ್ನು ನಾಶಗೊಳಿಸಿದ, ಯುಗದ ಆರಂಭದಲ್ಲಿ ಸಂಸಾರರೂಪವಾದ ನೀರಿನಲ್ಲಿ ಬೀಳುವ ಜನರಿಗೆ ಆಧಾರಭೂತವಾದ, ಜಿನೇಶ್ವರನ ಎರಡೂ ಪಾದಗಳಿಗೆ ಚೆನ್ನಾಗಿ ಎರಗಿ (ನಮಸ್ಕರಿಸಿ), (೧) ಎಲ್ಲ ಶಾಸ್ತ್ರಗಳ ತತ್ವಜ್ಞಾನದಿಂದ ತೀಕ್ಷ್ಣವಾದ ಬುದ್ಧಿಸಾಮರ್ಥ್ಯ ಹುಟ್ಟಿದ ದೇವೇಂದ್ರರಿಂದ ಮೂರು ಲೋಕಗಳಲ್ಲಿರುವ ಜನರ ಮನಸ್ಸನ್ನು ಆಕರ್ಷಿಸುವ ಗಂಭೀರವಾದ ಸ್ತೋತ್ರಗಳಿಂದ ಯಾರು ಚೆನ್ನಾಗಿ ಹೊಗಳಲ್ಪಟ್ಟಿರುವರೋ ಆ ಮೊದಲನೆಯ ತೀರ್ಥಂಕರನನ್ನು (ನಾಭೇಯ ಅಥವಾ ಋ (ವೃ) ಷಭದೇವ ಅಥವಾ ಆದಿನಾಥ) ನಾನಾದರೂ ಸ್ತುತಿಸುವೆನು.

ಟಿಪ್ಪಣಿ:— ೧ ಮತ್ತು ೨ನೇ ಶ್ಲೋಕಗಳು ಕೂಡಿ ಒಂದು ವಾಕ್ಯವಾಗಿದೆ. ಜಿನಪಾದಯುಗಂ ಸಮ್ಯಕ್ ಪ್ರಣಮ್ಯ ಅಹಂ ಅಪಿ ಪ್ರಥಮಂ ಜಿನೇಂದ್ರಂ ಸ್ತೋಷ್ಯೇ (ಜಿನೇಶ್ವರನ ಪಾದಗಳಿಗೆ ಎರಗಿ ನಾನಾದರೂ ಆದ್ಯ ತೀರ್ಥಂಕರನನ್ನು ಸ್ತುತಿಸುವೆ) ಎಂಬುದು ವಾಕ್ಯದ ಮುಖ್ಯಾಂಶವಾಗಿದೆ. ಜಿನಪಾದಯುಗಂ ಎಂಬ ಪದಕ್ಕೆ ೩ ವಿಶೇಷಣಗಳಿದ್ದು ಅವೆಲ್ಲವೂ ೧ನೆಯ ಶ್ಲೋಕದಲ್ಲಿವೆ. ಪ್ರಥಮಂ ಜಿನೇಂದ್ರಂ ಎಂಬ ಪದಕ್ಕೆ ಅನ್ವಯಿಸುವ ಒಂದೇ ಒಂದು ಸುದೀರ್ಘವಾದ ವಿಶೇಷಣವು (ಸಕಲ....ಸಂಸ್ತುತಃ) ೨ನೇ ಶ್ಲೋಕದಲ್ಲಿದೆ. ಮೊದಲು ವಾಕ್ಯದ ಮುಖ್ಯಾಂಶವನ್ನು ವಿಚಾರಿಸೋಣ. ಜಿನಪಾದಯುಗಂ-ಜಿನೇಶ್ವರನ ಎರಡು ಪಾದಗಳನ್ನು ಪಾದಯೋಃ ಯುಗಂ ಪಾದ-

ಯುಗಂ (ಷ. ತ. ಸ) ಜಿನಸ್ಯ ಪಾದಯುಗಂ ಜಿನಪಾದಯುಗಂ (ಷ ತ.ಸ.) ಜೈನಧರ್ಮದಲ್ಲಿ ತೀರ್ಥಂಕರರಿಗೆ **ಜಿನ** ಎಂಬ ಸಂಜ್ಞೆ ಇದೆ. ಜಿನ ಎಂದರೆ ಕಾಮ, ಕ್ರೋಧ ಮುಂ. ಶತ್ರುಗಳನ್ನು ಜಯಿಸಿದ ಎಂಬ ಅರ್ಥ. (ಕಾಮಾ-ದೀನ್ ರಿಪೂನ್ ಜಯತಿ ಇತಿ ಜಿನಃ) ಸಮ್ಯಕ್-ಚೆನ್ನಾಗಿ. ಪ್ರಣಮ್ಯ—ನಮಸ್ಕರಿಸಿ. ಪ್ರ+ನಮ್ (೧. ಪ) ಧಾತುವಿನ ಲ್ಯಬಂತಾವ್ಯಯ. ಅಹಂ ಅಪಿ—ನಾನಾದರೂ. ಅಹಂ ಸರ್ವನಾಮದಿಂದ ಮಾನತುಂಗ ಎಂದು ತೆಗೆದು-ಕೊಳ್ಳಬೇಕು. ಮಾನತುಂಗ ಎಂಬ ಹೆಸರುಳ್ಳ ನಾನಾದರೂ ಪ್ರಥಮಂ ಜಿನೇಂದ್ರಂ— ೧ನೆಯ ತೀರ್ಥಂಕರನನ್ನು ಜಿನಃ ಇಂದ್ರಃ ಇವ ಜಿನೇಂದ್ರಃ ( ಕ. ಸ.) ತಂ, ಜಿನೇಂದ್ರಂ. ೧ನೆಯ ತೀರ್ಥಂಕರನು ಯಾರೆಂಬ ಬಗ್ಗೆ ಭಿನ್ನ ಭಿನ್ನ ಟೀಕಾಕಾರರು ಬೇರೆ ಬೇರೆ ಅಭಿಪ್ರಾಯ ತಾಳಿದ್ದಾರೆ. ಕೆಲವರು ನಾಭೇಯ ಎಂದೂ, ಕೆಲವರು ಋ (ವೃ) ಷಭದೇವ ಎಂದೂ, ಕೆಲವರು ಆದಿನಾಥ ಎಂದೂ ವಾದಿಸುವರು. ಸ್ತೋಷ್ಯೇ—ಸ್ತುತಿಸುವೆನು. ಸ್ತು (೨. ಉ) ಧಾತುವಿನ ದ್ವಿ. ಭ. ಪ್ರ. ಪು. ಏ. ವ.

ಈಗ 'ಜಿನಪಾದಯುಗಂ'ಕ್ಕೆ ಸಂಬಂಧಿಸಿದ ೩ ವಿಶೇಷಣಗಳನ್ನು ತೆಗೆದುಕೊಳ್ಳುವಾ.

(i) ಭಕ್ತಾ.... ಉದ್ಯೋತಕಂ—ಭಕ್ತರಾದ ದೇವತೆಗಳು ನಮಿಸು-ವಾಗ, ಅವರ ಕಿರೀಟಗಳಲ್ಲಿದ್ದ ರತ್ನಗಳ ಹೊಳಪನ್ನು ಹೆಚ್ಚು ಹೊಳೆಯು ವಂತೆ ಮಾಡುವ. ಭಕ್ತಾಃ—ಭಕ್ತರು. ಅಮರಾಃ—ಮರಣರಹಿತರಾದ ದೇವತೆ ಗಳು (ನ ಮ್ರಿಯಂತೇ ಇತಿ ಉಪ. ತ) ಪ್ರಣತ—ನಮಸ್ಕರಿಸಲ್ಪಟ್ಟ. ಪ್ರ+ ನಮ್ (೧. ಪ) ಧಾತುವಿನ ಕರ್ಮಣಿ ಭೂ. ಧಾ. ವಿ. ಮೌಲಿ (ಪು. ಸ್ತ್ರೀ)— ಕಿರೀಟ. ಮಣಿ (ಪು)—ರತ್ನ. ಪ್ರಭಾ—ಕಾಂತಿ. ಹೊಳಪು. ಉದ್ಯೋತಕ —ಬೆಳಗಿಸುವ ಹೆಚ್ಚು ಹೊಳೆಯುವಂತೆ ಮಾಡುವ; ಭಕ್ತಾಃ ಅಮರಾಃ ಭಕ್ತಾಮರಾಃ (ಕ. ಸ.)। ಪ್ರಣತಾಃ ಮೌಲಯಃ ಪ್ರಣತಮೌಲಯಃ (ಕ. ಸ.) ಭಕ್ತಾಮರಾಣಾಂ ಪ್ರಣತ ಮೌಲಯಃ ಭಕ್ತಾ...ಮೌಲಯಃ (ಷ. ತ. ಸ) ತೇಷಾಂ ಮಣಯಃ (ಷ. ತ. ಸ,) ತೇಷಾಂ ಪ್ರಭಾಃ (ಷ. ತ. ಸ.) ತಾಸಾಂ.

(ii) ದಲಿತಪಾಪತಮೋವಿತಾನಂ – ಪಾಪರೂಪವಾದ ಕತ್ತಲೆಯ ಸಮೂಹವನ್ನು ನಾಶಗೊಳಿಸಿದ. ದಲಿತ—ನಾಶಗೊಳಿಸಿದ. ದಲ್ (೧. ಪ)

ಧಾತುವಿನ ಕರ್ಮಣಿ ಭೂ. ಧಾ. ವಿ. ಪಾಪಂ–ಪಾಪ. ತಮಸ್ (ಸ)–ಕತ್ತಲೆ ವಿತಾನ (ಪು. ನ)—ಸಮೂಹ. ಪಾಪಾನಿ ಏವ ತಮಾಂಸಿ ಪಾಪತಮಾಂಸಿ (ಕ. ಸ.) ತೇಷಾಂ ವಿತಾನಂ (ಷ. ತ. ಸ.) ದಲಿತಂ ಪಾಪತಮೋವಿತಾನಂ ಯೇನ ತತ್ ದಲಿತ.......ವಿತಾನಂ (ಬ. ಸ.) ತತ್ ।

(iii) ಯುಗಾದೌ....ಆಲಂಬನಂ–ಯುಗದ ಆರಂಭದಲ್ಲಿ ಸಂಸಾರ ರೂಪವಾದ ನೀರಿನಲ್ಲಿ ಬೀಳುವ ಜನರಿಗೆ ಆಧಾರಭೂತವಾದ. ಯುಗಾದೌ– ಆರಂಭದಲ್ಲಿ. ಯುಗಸ್ಯ ಆದಿಃ (ಷ. ತ. ಸ.) ತಸ್ಮಿನ್. ಭವಜಲೇ— ಸಂಸಾರವೆಂಬ ನೀರಿನಲ್ಲಿ (ಭವಃ–ಸಂಸಾರ). ಭವಃ ಏವ ಜಲಂ ಭವಜಲಂ (ಕ. ಸ.) ತಸ್ಮಿನ್. ಪತತಾಂ–ಬೀಳುವ. ಪತ್ (೧. ಪ) ಧಾತುವಿನ ವ. ಧಾ. ವಿ. (ಪು). ಷ. ಬ. ವ. ಜನಾನಾಂ–ಜನರಿಗೆ ಆಲಂಬನಂ–ಆಧಾರ. ಆಶ್ರಯ.

೨ನೆಯ ಶ್ಲೋಕದಲ್ಲಿ 'ಪ್ರಥಮಂ ಜಿನೇಂದ್ರಂ'ಕ್ಕೆ ಸಂಬಂಧಿಸಿದ ೧. ಸುದೀರ್ಘವಾದ ವಿಶೇಷಣವಿದೆ. ಅದರಲ್ಲಿ 'ಸುರಲೋಕನಾಥೈಃ ಸ್ತೋತ್ರೈಃ ಯಃ ಸಂಸ್ತುತಃ' (ದೇವೇಂದ್ರರಿಂದ ಸ್ತೋತ್ರಗಳಿಂದ ಸ್ತುತಿಸಲ್ಪಟ್ಟವ.) ಎಂಬುದು ಮುಖ್ಯ ಭಾಗ. ಸುರಲೋಕನಾಥೈಃ — ದೇವೇಂದ್ರರಿಂದ ಸುರಾಣಾಂ ಲೋಕಃ ಸುರಲೋಕಃ (ಷ. ತ. ಸ.) ತಸ್ಯ ನಾಥಾಃ (ಷ.ತ.ಸ.) ತೈಃ ದೇವಲೋಕದ ಅಧಿಪತಿ ಇಂದ್ರನು, ಅವನ ಆಳಿಕೆ ೧೦೦ ವರ್ಷ. (ದೇವಮಾನದಿಂದ) ಹೀಗೆ ಅನೇಕ ಇಂದ್ರರು ಆಗಿಹೋಗಿರುವರು. ಅಂತೆಯೇ ಸುರಲೋಕನಾಥಾಃ ಎಂಬ ಬ. ವ. ಇದೆ. ಸ್ತೋತ್ರೈಃ—ಸ್ತುತಿಗಳಿಂದ. ಸಂಸ್ತುತಃ—ಚೆನ್ನಾಗಿ ಸ್ತುತಿಸಲ್ಪಟ್ಟ. ಸಮ್+ಸ್ತು (೨. ಉ.) ಧಾತುವಿನ ಕರ್ಮಣಿ ಭೂ. ಧಾ. ವಿ. (ಪು). ಪ್ರ. ಏ. ವ. ಇನ್ನು ಸುರಲೋಕನಾಥೈಃ ಎಂಬುದಕ್ಕೆ ಸಕಲ........ಪಟುಭಿಃ ಎಂಬ ೧ ವಿಶೇಷಣವೂ, ಸ್ತೋತ್ರೈಃ ಎಂಬುದಕ್ಕೆ ಜಗತ್ರಿತಯಚಿತ್ತಹರೈಃ ಮತ್ತು ಉದಾರೈಃ ಎಂಬ ೨ ವಿಶೇಷಣ ಗಳೂ ಇವೆ. ಸಕಲ........ಪಟುಭಿಃ (ಸುರಲೋಕನಾಥೈಃ)—ಎಲ್ಲ ಶಾಸ್ತ್ರ ಗಳ ತತ್ತ್ವಜ್ಞಾನದಿಂದ ತೀಕ್ಷ್ಣವಾದ ಬುದ್ಧಿಸಾಮರ್ಥ್ಯ ಹುಟ್ಟಿದ. ಸಕಲ— ಎಲ್ಲ. ವಾಙ್ಮಯ–ಸಾಹಿತ್ಯ, ಶಾಸ್ತ್ರ. ತತ್ತ್ವಬೋಧಃ–ತತ್ತ್ವಜ್ಞಾನ. ತತ್ತ್ವಾನಾಂ ಬೋಧಃ (ಷ. ತ. ಸ.) ಉದ್ಭೂತ–ಹುಟ್ಟಿದ, ಉಂಟಾದ. ಬುದ್ಧಿ–ಬುದ್ಧಿ ಸಾಮರ್ಥ್ಯ. ಪಟು–ತೀಕ್ಷ್ಣ, ಹದನ. ವಾಚಾಂ ವಿಕಾರಃ ವಾಙ್ಮಯಂ

(ತದ್ಧಿತ) ಸಕಲಂ ವಾಙ್ಮಯಂ ಸಕಲವಾಙ್ಮಯಂ (ಕ. ಸ.) ತಸ್ಯ ತತ್ತ್ವಂ (ಷ. ತ. ಸ.) ತಸ್ಯ ಬೋಧಃ (ಷ. ತ. ಸ.) ತಸ್ಮಾತ್. ಸಕಲ....... ಬೋಧಾತ್ ಉದ್ಭೂತಾ ಬುದ್ಧಿಃ ಉದ್ಭೂತಬುದ್ಧಿಃ (ಕ. ಸ.) ತಯಾ ಪಟವಃ (ತೃ. ತ.) ಜಗತ್ತ್ರಿಯಚಿತ್ತಹರೈಃ (ಸ್ತೋತ್ರೈಃ) ಮೂರುಲೋಕಗಳ ಜನರ ಮನಸ್ಸನ್ನು ಸೆಳೆಯುವ. ಜಗತ್-(ನ)-ಜಗತ್ತು. ತ್ರಿತಯಂ-ಮೂರ ಗುಂಪು. ಚಿತ್ತಂ-ಮನಸ್ಸು ಜಗತಾಂ ತ್ರಿತಯಂ ಜಗತ್ತ್ರಿತಯಂ (ಷ. ತ. ಸ.) । ತಸ್ಯ ಚಿತ್ತಾನಿ (ಷ. ತ. ಸ.)। ತೇಷಾಂ ಹರಾಣಿ ಜಗ....ಚಿತ್ತಹರಾಣಿ (ಷ. ತ) ತೈಃ. ಉದಾರೈಃ (ಸ್ತೋತ್ರೈಃ)-ಗಂಭೀರವಾದ.

**೧-೨ ಶ್ಲೋಕಗಳ ಸಾರಾಂಶ:—** ಎರಗಿದ ದೇವತೆಗಳ ಕಿರೀಟಗಳ ರತ್ನಶೋಭೆಯನ್ನು ಬೆಳಗಿಸುವ, ಎಲ್ಲ ಪಾಪಗಳನ್ನು ದೂರಮಾಡುವ, ಸಂಸಾರ ಸಮುದ್ರವನ್ನು ದಾಟಿಸುವ, ಜಿನೇಶ್ವರನ ಪಾದಗಳಿಗೆ ನಮಸ್ಕರಿಸಿ, ಸಕಲ-ಶಾಸ್ತ್ರಗಳ ತತ್ತ್ವಜ್ಞಾನವುಳ್ಳ ದೇವೇಂದ್ರರಿಂದ ಮನೋಹರವಾದ ಹಾಗೂ ಗಂಭೀರವಾದ ಸ್ತೋತ್ರಗಳಿಂದ ಸ್ತುತಿಸಲ್ಪಟ್ಟ ಆದ್ಯ ತೀರ್ಥಂಕರನನ್ನು ನಾನು ಸ್ತುತಿಸುವೆ.

ಜೈನಧರ್ಮದವರಿಗೆ ಆದ್ಯ ತೀರ್ಥಂಕರನೇ ಎಲ್ಲರಿಗಿಂತ ಶ್ರೇಷ್ಠನು. ಅಂತೆಯೇ ಅವನನ್ನು ಇಂದ್ರ ಮುಂತಾದ ದೇವತೆಗಳು ಸ್ತುತಿಸುವರೆಂದು ವರ್ಣನೆ ಬಂದಿದೆ.

೩. ಅನ್ವಯ:— ವಿಬುಧಾರ್ಚಿತಪಾದಪೀಠ, ಬುದ್ಧ್ಯಾ ವಿನಾ ಅಪಿ (ತ್ವಾಂ) ಸ್ತೋತುಂ ಸಮುದ್ಯತಮತಿಃ (ಅಹಂ) ವಿಗತತ್ರಪಃ। ಯತಃ ಬಾಲಂ ವಿಹಾಯ ಅನ್ಯಃ ಕಃ ಜನಃ ಜಲಸಂಸ್ಥಿತಂ ಇಂದುಬಿಂಬಂ ಸಹಸಾ ಗ್ರಹೀತುಂ ಇಚ್ಛತಿ।

ಭಾಷಾಂತರ:— ದೇವತೆಗಳಿಂದ ಪೂಜಿಸಲ್ಪಟ್ಟ ಕಾಲ್ಮಣೆಯುಳ್ಳವನೇ, (ಪಾದಪೀಠ) ಬುದ್ಧಿರಹಿತನಾದರೂ (ನಿನ್ನನ್ನು) ಸ್ತುತಿಸಲು ಅಣಿಯಾದ (ಸಿದ್ಧನಾದ) ನಾನು ನಿರ್ಲಜ್ಜನು; ಏಕೆಂದರೆ ಹುಡುಗನ ಹೊರತಾಗಿ ನೀರಿನಲ್ಲಿ ಚಂದ್ರನ (ಪ್ರತಿ) ಬಿಂಬವನ್ನು ಒಮ್ಮಿಂದೊಮ್ಮೆ ತೆಗೆದುಕೊಳ್ಳಲು ಯಾರು ತಾನೆ (ಯಾವ ಮನುಷ್ಯನು) ಇಚ್ಛಿಸುವರು ?

ಟಿಪ್ಪಣೆ:— ವಿಬುಧಾರ್ಚಿತಪಾದಪೀಠ—ದೇವತೆಗಳಿಂದ ಪೂಜಿಸಲ್ಪಟ್ಟ ಪಾದಪೀಠವುಳ್ಳವನೇ, ವಿಬುಧಾಃ-ದೇವತೆಗಳು. ಅರ್ಚಿತ—

ಅರ್ಚ್ (೧. ಉ) ಧಾತುವಿನ ಕರ್ಮಣಿ ಭೂ. ಧಾ. ವಿ. ಪಾದಪೀಠ– ಕಾಲ್ಮಣೆ *foot stool*. ಪಾದಯೋಃ ಪೀಠಂ (ಷ. ತ. ಸ.) ವಿಬುಧೈಃ ಅರ್ಚಿತಂ ಪಾದಪೀಠಂ ಯಸ್ಯ ಸಃ ವಿಬುಧಾರ್ಚಿತಪಾದಪೀಠಃ (ಬ. ಸ.) ತಸ್ಯ ಸಂಬುದ್ಧಿಃ। ಬುದ್ಧ್ಯಾ ವಿನಾ ಅಪಿ–ಬುದ್ಧಿ ಇಲ್ಲದಿದ್ದರೂ ಬುದ್ಧಿರಹಿತ- ನಾದರೂ, ವಿನಾ ಇದು ದ್ವಿತೀಯಾ ಇಲ್ಲವೆ ತೃತೀಯಾ ಇಲ್ಲವೆ ಪಂಚಮೀ ವಿಭಕ್ತಿ ತೆಗೆದುಕೊಳ್ಳುತ್ತದೆ. ಉದಾ:— ಕಾರಣಂ (ಕಾರಣೇನ, ಕಾರಣಾತ್ ವಾ) ವಿನಾ ಕಾರ್ಯಂ ನ ಸಮುತ್ಪದ್ಯತೇ । ಸ್ತೋತುಂ — ಸ್ತು (೨. ಉ) ಧಾತುವಿನ ತುಮಂತಾವ್ಯಯ ಸ್ತುತಿಸಲು. ಸಮುದ್ಯತಮತಿಃ— ಸಿದ್ಧನಾದ, ಅಣಿಯಾದ. ಸಮುದ್ಯತಾ ಮತಿಃ ಯಸ್ಯ ಸಃ (ಬ. ಸ.) ವಿಗತತ್ರಪಃ — ನಿರ್ಲಜ್ಜನು, ನಾಚಿಕೆ ಇಲ್ಲದವನು. ತ್ರಪಾ – ಲಜ್ಜೆ, ನಾಚಿಕೆ. ವಿಗತಾ ತ್ರಪಾ ಯಸ್ಯ ಸಃ (ಬ. ಸ.) ಯತಃ ಏಕೆಂದರೆ. ಬಾಲಂ ವಿಹಾಯ — ಹುಡುಗನನ್ನು ಬಿಟ್ಟು, ವಿಹಾಯ – ಬಿಟ್ಟು. ವಿ + ಹಾ (೩. ಪ) ಧಾತು ವಿನ ಲ್ಯಬಂತಾವ್ಯಯ. ಅನ್ಯಃ ಕಃ ಜನಃ — ಬೇರೆ ಯಾವ ಮನುಷ್ಯನು ಜಲಸಂಸ್ಥಿತಂ — ನೀರಿನಲ್ಲಿದ್ದ. ಜಲೇ ಸಂಸ್ಥಿತಂ ಜಲಸಂಸ್ಥಿತಂ (ಸ.ತ.ಸ.) ತತ್. ಇಂದು ಬಿಂಬಂ — ಚಂದ್ರ ಬಿಂಬವನ್ನು. ಇಂದುಃ – ಚಂದ್ರ. ಬಿಂಬ (ಪು. ನ.) – ಬಿಂಬ. ಪ್ರತಿಬಿಂಬ — ಇಂದೋಃ ಬಿಂಬಂ ಇಂದು ಬಿಂಬಂ (ಷ. ತ. ಸ.) ತತ್. ಸಹಸಾ — ಒಮ್ಮೆಲೆ. ಗ್ರಹೀತುಂ — ತೆಗೆದುಕೊಳ್ಳಲು. ಗ್ರಹ್ (೯. ಪ) ಧಾತುವಿನ ತುಮಂತಾವ್ಯಯ. ಇಚ್ಛತಿ – ಇಚ್ಛಿಸುವನು. ಇಷ್ (೬. ಪ.) ಧಾತುವಿನ ವ. ತೃ. ಪು. ಏ. ವ. ಬಾಲಂ ವಿಹಾಯ ಕಃ ಅನಃ ಇಚ್ಛತಿ ( ಕರ್ತರಿ ) — ಬಾಲಂ ವಿಹಾಯ ಕೇನ ಅನ್ಯೇನ ಇಷ್ಯತೇ ( ಕರ್ಮಣಿ ).

೪. ಅನ್ವಯ:— ಗುಣಸಮುದ್ರ, ಬುದ್ಧ್ಯಾ ಸುರಗುರುಪ್ರತಿಮಃ ಅಪಿ ಕಃ ತೇ ಶಶಾಂಕಕಾಂತಾನ್ ಗುಣಾನ್ ವಕ್ತುಂ ಕ್ಷಮಃ। ಕಲ್ಪಾಂತಕಾಲ ಪವನೋದ್ಧತನಕ್ರಚಕ್ರಂ ಅಂಬುನಿಧಿಂ ಭುಜಾಭ್ಯಾಂ ತರೀತುಂ ಕಃ ವಾ ಅಲಮ್ ।

ಭಾಷಾಂತರ:— ಗುಣನಿಧಿಯೇ, ಬುದ್ಧಿಯಲ್ಲಿ ಬೃಹಸ್ಪತಿಗೆ (ದೇವತೆ– ಗಳ ಗುರು). ಸಮಾನನಾಗಿದ್ದರೂ ಚಂದ್ರನಂತೆ ಮನೋಹರವಾದ ನಿನ್ನ ಗುಣ ಗಳನ್ನು ವರ್ಣಿಸಲು ಯಾರು (ತಾನೇ) ಸಮರ್ಥರು ? ಪ್ರಳಯಕಾಲದ

ಗಾಳಿಯಿಂದ ಮೇಲಕ್ಕೆ ಬಂದ ಮೊಸಳೆಗಳ ಸಮೂಹವುಳ್ಳ (ಪ್ರಕ್ಷುಬ್ಧವಾದ) ಸಮುದ್ರವನ್ನು ಎರಡೂ ಕೈಗಳಿಂದ ಯಾರು (ತಾನೇ) ದಾಟಲು ಸಮರ್ಥರು?

ಟಿಪ್ಪಣಿ:— ಗುಣಸಮುದ್ರಃ–ಗುಣನಿಧಿಯೇ, ಗುಣಾನಾಂ ಸಮುದ್ರಃ ಗುಣಸಮುದ್ರಃ (ಷ ತ. ಸ.) ತಸ್ಯ ಸಂಬೋಧನಂ. **ಸುರಗುರುಪ್ರತಿಮಃ** ದೇವತೆಗಳ ಗುರುವಾದ ಬೃಹಸ್ಪತಿಗೆ ಸಮಾನನು. ಸುರಾಃ– ದೇವತೆಗಳು. ಗುರುಃ ಗುರು. ಪ್ರತಿಮಾ–ಹೋಲಿಕೆ. ಸುರಾಣಾಂ ಗುರುಃ ಸುರಗುರುಃ (ಷ.ತ.ಸ.) ಸುರಗುರುಃ ಪ್ರತಿಮಾ ಯಸ್ಯ ಸಃ (ಬ.ಸ.) ಶಶಾಂಕಕಾಂತಾನ್- ಚಂದ್ರನಂತೆ ನಿರ್ಮಲ ಅಥವಾ ಮನೋಹರವಾದ. ಶಶಃ ಅಂಕೇ ಯಸ್ಯ ಸಃ ಶಶಾಂಕಃ (ಬ.ಸ.) ಶಶಾಂಕಃ ಇವ ಕಾಂತಾಃ ಶಶಾಂಕಕಾಂತಾಃ (ಕ-ಸ.) ತಾನ್ ವಕ್ತುಂ—ನುಡಿಯಲು ವರ್ಣಿಸಲು ವಚ್ (೨.ಪ.) ಧಾತುವಿನ ತುಮುಂತಾವ್ಯಯ ಕಲ್ಪಾಂತಕಾಲಪವನೋದ್ಧತನಕ್ರಚಕ್ರಂ (ಸಮುದ್ರಂ) ಪ್ರಳಯಕಾಲದ ಗಾಳಿಯಿಂದ ಮೇಲಕ್ಕೆದ್ದ ಮೊಸಳೆಗಳ ಸಮೂಹವುಳ್ಳ **ಕಲ್ಪಃ**—ಬ್ರಹ್ಮದೇವರ ೧ ದಿನ. ಇದು ೧ ಸಾವಿರ ಯುಗ ಇಲ್ಲವೆ ೪೩ ಕೋಟಿ ೨೦ ಲಕ್ಷ ವರ್ಷಗಳಿಗೆ ಸಮಾನವಿರುವ ಅಂತಃ- ಕೊನೆ ಪವನಃ -ಗಾಳಿ. ಉದ್ಧತ–ಮೇಲೆ ಬಂದ ಉತ್+ಹನ್ (೨.ಪ) ಧಾತುವಿನ ಕರ್ಮಣಿ ಭೂ.ಧಾ.ವಿ. ನಕ್ರಃ-ಮೊಸಳೆ ಚಕ್ರಂ-ಸಮೂಹ ಕಲ್ಪಸ್ಯ ಅಂತಃ ಕಲ್ಪಾಂತಃ (ಷ.ತ.) ಕಲ್ಪಾಂತಃ ಏವ ಕಾಲಃ ಕಲ್ಪಾಂತಕಾಲಃ (ಕ. ಸ) ತಸ್ಯ ಪವನಃ (ಷ.ತ) ತೇನ ಉದ್ಧತಾನಿ ನಕ್ರಾಣಾಂ ಚಕ್ರಾಣಿ ಯಸ್ಮಿನ್ ಸಃ (ಬ.ಸ.) ತಂ ಅಂಬುನಿಧಿಂ— ಸಮುದ್ರವನ್ನು. ಅಂಬೂನಾಂ ನಿಧಿಃ ಇತಿ ಅಂಭುಧಿಃ (ಉಪ.ತ) ತಂ ಭುಜಾಭ್ಯಾಂ—ಎರಡೂ ಬಾಹುಗಳಿಂದ **ತರೀತುಂ**- ದಾಟಲು ತೄ (೧.ಪ) ಧಾತುವಿನ ತುಮುಂತಾವ್ಯಯ. ಅಲಂ—ಸಮರ್ಥ.

೫. ಅನ್ವಯ:— ಮುನೀಶ, ತಥಾ ಅಪಿ, ವಿಗತಶಕ್ತಿಃ ಅಪಿ. ಸಃ ಅಹಂ ತವಭಕ್ತಿವಶಾತ್ ಸ್ತವಂ ಕರ್ತುಂ ಪ್ರವೃತ್ತಃ। ಆತ್ಮವೀರ್ಯಂ ಅವಿಚಾರ್ಯ ಮೃಗಃ ಪ್ರೀತ್ಯಾ ನಿಜಶಿಶೋಃ ಪರಿಪಾಲನಾರ್ಥಂ ಮೃಗೇಂದ್ರಂ ನ ಅಭ್ಯೇತಿ ಕಿಮ್ ।

ಭಾವಾರ್ಥ:— ಮುನಿಶ್ರೇಷ್ಠನೇ, ಹಾಗಿದ್ದರೂ, ಶಕ್ತಿರಹಿತನಾದರೂ ಆ ನಾನು (ಕೇವಲ) ನಿನ್ನ ಮೇಲಿನ ಭಕ್ತಿಯಿಂದ ಸ್ತೋತ್ರ ಮಾಡಲು ಹೊರಟಿದ್ದೇನೆ. ತನ್ನ ಶಕ್ತಿಯನ್ನು ವಿಚಾರಿಸದೆ ಚಿಗರಿಯು, (ಮರಿಯಮೇಲಿನ)

ಮಮತೆಯಿಂದ ಮರಿಯನ್ನು ರಕ್ಷಿಸುವದಕ್ಕಾಗಿ ಸಿಂಹದ ಮೇಲೆ ಏರಿಹೋಗು ವದಿಲ್ಲವೋ ?

ಟಿಪ್ಪಣಿ :— ಮುನೀಶ — ಮುನಿವರ್ಯನೆ, ಶ್ರೇಷ್ಠ ಮುನಿಯೇ ತಥಾಪಿ — ಹಾಗಿದ್ದರೂ. ವಿಗತಶಕ್ತಿಃ ಅಪಿ — 'ಶಕ್ತಿರಹಿತನಾದರೂ' ವಿಗತಾ ಶಕ್ತಿಃ ಯಸ್ಮಾತ್ ಸಃ (ಬ. ಸ.) ಭಕ್ತಿವಶಾತ್–ಭಕ್ತಿಯಿಂದ ಭಕ್ತಿ ವಶನಾಗಿ. ಭಕ್ತೇಃ ವಶಃ ಭಕ್ತಿವಶಃ (ಷ. ತ. ಸ.) ತಸ್ಮಾತ್. ಪ್ರವೃತ್ತಃ– ಹೊರಟಿದ್ದೇನೆ. ಪ್ರ + ವೃತ್ (೧. ಆ.) ಧಾತುವಿನ ಕರ್ಮಣಿ ಭೂ. ಧಾ ವಿ. (ಪು.) ಪ್ರ. ಏ. ವ. ಆತ್ಮವೀರ್ಯಂ — ತನ್ನ ಶಕ್ತಿಯನ್ನು. ಆತ್ಮನಃ ವೀರ್ಯಂ ( ಷ. ತ. ಸ. ) ತತ್. ಅವಿಚಾರ್ಯ — ವಿಚಾರಿಸದಲೆ. ನ ವಿಚಾರ್ಯ ಅವಿಚಾರ್ಯ (ನ. ತ.) ಮೃಗಃ — ಜಿಗರೆ. ಪ್ರೀತ್ಯಾ — ಪ್ರೀತಿಯಿಂದ ಮರಿಯ ಮೇಲಿನ ಮಮತೆಯಿಂದ. ನಿಜಶಿಶೋಃ – ತನ್ನ ಮರಿಯ. ನಿಜಃ ಶಿಶುಃ ನಿಜಶಿಶುಃ (ಕ. ಸ.) ತಸ್ಯ. ಪರಿಪಾಲನಾರ್ಥಂ – ರಕ್ಷಿಸುವದಕ್ಕಾಗಿ. ಪರಿಪಾಲನಾಯ ಇದಂ ಪರಿಪಾಲನಾರ್ಥಂ (ಚ.ತ.ಸ.) ಹೀಗೆ ಚತುರ್ಥೀ ವಿಭಕ್ತಿಯ ಅರ್ಥದಲ್ಲಿ ಸಮಾಸದ ಕೊನೆಗೆ ಅರ್ಥಮ್, ಅರ್ಥೇ, ಅರ್ಥಾಯ ಎಂಬ ಶಬ್ದಗಳು ಬರುತ್ತವೆ. ಆದ್ದರಿಂದ **ಸಮಾಸದ ಕೊನೆಗೆ ಅರ್ಥಃ ಅರ್ಥಾ ಅರ್ಥಂ, ಅರ್ಥೇ, ಅರ್ಥಾಯ ಮುಂತಾದ ಶಬ್ದಗಳು ಬಂದರೆ ಆ ಸಮಾಸವು ಚತುರ್ಥೀ ತತ್ಪುರುಷ ಆಗುತ್ತದೆ.** ಉದಾ :—ಗವೇ ಇದಂ ಗವಾರ್ಥೇ, ಬ್ರಾಹ್ಮಣಾಯ ಇದಂ ಬ್ರಾಹ್ಮಣಾರ್ಥೇ [ಇದೇ ಗೈಡಿನ ೧೧ನೇ ಪುಟದಲ್ಲಿ ಸಜರಚೂಕನಿಂದ ಗವೇ ಇದಂ ಗವಾರ್ಥಂ (ಚ.ತ.) ತಸ್ಮಿನ್ ಗವಾರ್ಥೇ ಎಂದೂ, ಬ್ರಾಹ್ಮಣಾಯ ಇದಂ ಬ್ರಾಹ್ಮಣಾರ್ಥಂ (ಚ. ತ) ತಸ್ಮಿನ್ ಬ್ರಾಹ್ಮಣಾರ್ಥೇ ಎಂದು **ತಪ್ಪಿ ಬಿದ್ದಿವೆ.** ಅವುಗಳನ್ನು ಅನುಕ್ರಮವಾಗಿ **ಗವೇ ಅಥವಾ ಗೋಭ್ಯಃ ಇದಂ ಗವಾರ್ಥೇ (ಚ. ತ.)** ಎಂದೂ **ಬ್ರಾಹ್ಮಣಾಯ, ಬ್ರಾಹ್ಮಣೇಭ್ಯಃ ವಾ ಇದಂ ಬ್ರಾಹ್ಮಣಾರ್ಥೇ (ಚ. ತ.)** ಎಂದೂ ಬಿಡಿಸಬೇಕು. **ವಿದ್ಯಾರ್ಥಿಗಳು ಅವಶ್ಯವಿದ್ದ ತಿದ್ದು ಪಡೆ ಮಾಡಿಕೊಳ್ಳಬೇಕು.]** ಅದರಂತೆ ಸುಖಾಯ ಇದಂ ಸುಖಾರ್ಥಃ ಮೋಕ್ಷಾಯ ಇದಂ ಮೋಕ್ಷಾರ್ಥಂ, ವೃತ್ತಯೇ ಇದಂ ವೃತ್ತ್ಯರ್ಥಾ, ಎಂದು ಬಿಡಿಸಬೇಕು. ಇವೆಲ್ಲ ಚತುರ್ಥೀ ತತ್ಪುರುಷ ಸಮಾಸಗಳು. ಮೃಗೇಂದ್ರಂ ನ ಅಭ್ಯೇತಿ ಕಿಮ್ –ಸಿಂಹದಮೇಲೆ ಏರಿ ಹೋಗುವದಿಲ್ಲವೋ ಮೃಗಃ ಇಂದ್ರಃ ಇವ ಮೃಗೇಂದ್ರಃ ( ಕ. ಸ. ) ಮೃಗಗಳ ( ಪಶುಗಳ )

ಒಡೆಯನಾದ ಸಿಂಹ. ಅಭ್ಯೇತಿ — ದಾಳೀಮಾಡುತ್ತದೆ. ಮುಗಿಬೀಳು ತ್ತದೆ. ಅಭಿ + ಇ (೨. ಪ) ಧಾತುವಿನ ವ. ತೃ. ಪು. ಏ. ವ.

ಸಾಮರ್ಥ್ಯವಿಲ್ಲದಿದ್ದರೂ ನಿನ್ನನ್ನು ಸ್ತುತಿಸಲು ಹೊರಟಿದ್ದು ಕೇವಲ ನಿನ್ನ ಮೇಲಿನ ಭಕ್ತಿಯಿಂದ ಇದಕ್ಕೆ ಜಿಗರಿ ಸಿಂಹದ ಮೇಲೆ ಮುಗಿಬೀಳುವದೇ ದೃಷ್ಟಾಂತವಾಗಿದೆ. ತನ್ನ ಮರಿಯನ್ನು ರಕ್ಷಿಸುವದಕ್ಕಾಗಿ, ತನ್ನ ಮರಿಯ ಮೇಲಿನ ಪ್ರೀತಿಯಿಂದ, ಜಿಗರಿಯು ತನ್ನಲ್ಲಿ ಸಾಮರ್ಥ್ಯವಿಲ್ಲದಿದ್ದರೂ ಸಿಂಹದಮೇಲೆ ಏರಿಹೋಗುವದಿಲ್ಲವೇ ? ಅದರಂತೆ ನನಗಾವರೂ ನಿನ್ನನ್ನು ಸ್ತುತಿಸುವ ಬುದ್ಧಿ ಸಾಮರ್ಥ್ಯವಿಲ್ಲ. ಆದರೂ ಕೇವಲ ನಿನ್ನಲ್ಲಿರುವ ಭಕ್ತಿ ಯಿಂದ ಸ್ತೋತ್ರಮಾಡಲು ಹೊರಟಿದ್ದೇನೆ ಎಂಬ ಅಭಿಪ್ರಾಯವಿದೆ.

**ಪುಟ ೪೩.** ೬. ಅನ್ವಯಃ — ತ್ವದ್ಭಕ್ತಿಃ ಏವ ಅಲ್ಪಶ್ರುತಂ, ಶ್ರುತ-ವತಾಂ ಪರಿಹಾಸಧಾಮ, ಮಾಂ ಬಲಾತ್ ಮುಖರೀಕುರುತೇ। ಯತ್ ಕೋಕಿಲಃ ಮಧೌ ಮಧುರಂ ವಿರೌತಿ ತತ್ ಚಾರುಚೂತಕಲಿಕಾನಿಕರೈ-ಕಹೇತು।

ಭಾಷಾಂತರ:— ನಿನ್ನಲ್ಲಿರುವ ಭಕ್ತಿಯೇ ಅಲ್ಪಜ್ಞಾನವುಳ್ಳ (ಅಂತೆಯೇ) ಪಂಡಿತರ ಅಪಹಾಸ್ಯಕ್ಕೆ ಪಾತ್ರನಾದ, ನನ್ನನ್ನು ಬಲಾತ್ಕಾರದಿಂದ ಮಾತ-ನಾಡಲು ಹಚ್ಚುತ್ತದೆ. ಕೋಗಿಲೆಯು ವಸಂತಕಾಲದಲ್ಲಿ ಮಧುರವಾಗಿ ಹಾಡು ವದಕ್ಕೆ ಸುಂದರವಾದ ಮಾವಿನ ಮಗ್ಗಿಗಳ ಗೊಂಚಲಗಳೇ ಮುಖ್ಯವಾದ ಕಾರಣವು.

ಟಿಪ್ಪಣಿ:— ತ್ವದ್ಭಕ್ತಿಃ ಮಾಂ ಬಲಾತ್ ಮುಖರೀಕುರುತೇ ( ನಿನ್ನ ಭಕ್ತಿಯು ನನ್ನನ್ನು ಬಲಾತ್ಕಾರದಿಂದ ಮಾತನಾಡಲು ಹಚ್ಚುತ್ತದೆ) ಎಂಬುದು ವಾಕ್ಯದ ಮುಖ್ಯಾಂಶ, ತದ್ಭಕ್ತಿಃ—ತ್ವಯಿ ಭಕ್ತಿಃ (ಸ. ತ) ಮಾಂ—ನನ್ನನ್ನು **ಮುಖರೀಕುರುತೇ**— ಮಾತನಾಡಲು ಹಚ್ಚುತ್ತದೆ. ಮುಖರೀಕೃ (೮.ಉ) ಎಂಬ ಚ್ವಿ ಧಾತುವಿನ ವ. ತೃ. ಪು. ಏ. ವ. ಮಾಂ ಶಬ್ದಕ್ಕೆ ಅಲ್ಪಶ್ರುತಂ, ಶ್ರುತವತಾಂ ಪರಿಹಾಸಧಾಮ ಎಂಬ ೨ ವಿಶೇಷಣಗಳಿವೆ. ಅಲ್ಪಶ್ರುತಂ— ಅಲ್ಪಜ್ಞಾನವುಳ್ಳ. ತುಸು ಅಭ್ಯಾಸ ಮಾಡಿದವ. ಅಲ್ಪಂ ಶ್ರುತಂ (ಜ್ಞಾನಂ, ಅಧ್ಯಯನಂ ವಾ) ಯಸ್ಯ ಸಃ ಅಲ್ಪಶ್ರುತಃ (ಬ. ಸ.) ತಂ. ಶ್ರುತವತಾಂ— ಪಂಡಿತರ. ಶ್ರುತಂ ಅಸ್ತಿ ಏಷಾಂ ಇತಿ ಶ್ರುತವಂತಃ (ತದ್ಧಿತ) ತೇಷಾಂ, ಪರಿಹಾಸಧಾಮ—ಅಪಹಾಸ್ಯಕ್ಕೆ ಪಾತ್ರನಾದವ. ಪರಿಹಾಸಸ್ಯ ಧಾಮ

ಪರಿಹಾಸ ಧಾಮ (ಷ. ತ. ಸ.) ತತ್ ಕೋಕಿಲಃ–ಕೋಗಿಲೆ ಮಧೌ–ವಸಂತುಋತುವಿನಲ್ಲಿ (ಮಧುರಂ) ವಿರೌತಿ– (ಇಂಪಾಗಿ) ಹಾಡುತ್ತದೆ. ವಿ+ರು (೨. ಪ.) ಧಾತುವಿನ ವ. ತೃ. ಪು. ಏ. ವ. ಚಾರು....ಹೇತು–ಮನೋಹರವಾದ ಮಾವಿನ ಮಗ್ಗಿಗಳ ಗೊಂಚಲಗಳೇ ಮುಖ್ಯ ಕಾರಣವುಳ್ಳ ಚಾರು–ಸುಂದರವಾದ ಚೂತಃ· ಮಾವಿನ ಗಿಡ. ಕಲಿಕಾ–ಮೊಗ್ಗೆ. ನಿಕರಃ–ಸಮೂಹ. ಏಕ–ಮುಖ್ಯವಾದ ಹೇತುಃ–ಕಾರಣ. ಚೂತಸ್ಯ ಕಲಿಕಾಃ ಚೂತಕಲಿಕಾಃ (ಷ. ತ. ಸ.) ಚಾರವಃ (ಚಾರ್ವ್ಯಃ ವಾ) ಚೂತ-ಕಲಿಕಾಃ ಚಾರುಚೂತಕಲಿಕಾಃ (ಕ. ಸ.) ತಾಸಾಂ ನಿಕರಃ ಚಾರು.... ನಿಕರಃ (ಷ. ತ. ಸ.) ಸಃ ಏವ ಏಕಹೇತುಃ (ಏಕಃ ಹೇತುಃ ಏಕಹೇತುಃ ಕ. ಸ.) ಯಸ್ಯ ತತ್ ಚಾರು–ಹೇತು (ಬ. ಸ.) ಕೋಗಿಲೆಗಳು ಹಾಡು-ವದಕ್ಕೆ ಸುಂದರವಾದ ಮಾವಿನ ಮೊಗ್ಗೆಗಳ ಗೊಂಚಲಗಳೇ ಕಾರಣವಾದಂತೆ, ನಾನು ಸ್ತೋತ್ರ ಮಾಡುವದಕ್ಕೆ ನನಗೆ ನಿನ್ನಲ್ಲಿರುವ ಭಕ್ತಿಯೇ ಮುಖ್ಯ ಕಾರಣವಾಗಿದೆ ಎಂದು ಮಾನತುಂಗಾಚಾರ್ಯರ ಹೇಳಿಕೆ.

೭. ಅನ್ವಯ:– ಆಕ್ರಾಂತಲೋಕಂ, ಅಲಿನೀಲಂ, ಅಶೇಷಂ. ಶಾರ್ವರಂ, ಅಂಧಕಾರಂ ಆಶು ಸೂರ್ಯಾಂಶುಭಿನ್ನಂ ಇವ ಶರೀರ ಭಾಜಾಂ ಭವಸಂತತಿಸನ್ನಿಬದ್ಧಂ ಪಾಪಂ ತ್ವತ್ಸಂಸ್ತವೇನ ಕ್ಷಣಾತ್ ಕ್ಷಯಂ ಉಪೈತಿ ।

ಭಾಷಾಂತರ:– ಜಗತ್ತನ್ನು ವ್ಯಾಪಿಸಿದ ಭ್ರಮರದಂತೆ ಕಪ್ಪಾದ ರಾತ್ರಿಯ ಎಲ್ಲ ಕತ್ತಲೆಯು, ಕೂಡಲೆ ಸೂರ್ಯನ ಕಿರಣಗಳಿಂದ ನಾಶವಾಗು-ವಂತೆ, ಅನೇಕ ಜನ್ಮಗಳಿಂದಂಟಿಕೊಂಡ ಪ್ರಾಣಿಗಳ ಪಾಪವು ನಿನ್ನ ಸ್ತುತಿ-ಯಿಂದ ಕ್ಷಣಕಾಲದಲ್ಲಿಯೇ ನಾಶವಾಗುತ್ತದೆ.

ಟಿಪ್ಪಣಿ:– ಅನ್ವಯದಲ್ಲಿ ಕೊಟ್ಟಿರುವ ಮೊದಲಿನ ೪ ಶಬ್ದಗಳು ಅಂಧ-ಕಾರಂ ಇದಕ್ಕೆ ವಿಶೇಷಣಗಳಾಗಿವೆ. ಅಂಧಕಾರ (ಪು. ನ.)–ಕತ್ತಲೆ ಆಕ್ರಾಂತಲೋಕಂ–ಜಗತ್ತನ್ನು ವ್ಯಾಪಿಸಿದ. ಆಕ್ರಾಂತಃ ಲೋಕಃ ಯೇನ ತತ್ (ಬ. ಸ.) । ಅಲಿನೀಲಂ–ಭ್ರಮರದಂತೆ ಕಪ್ಪಾದ ಅಲಿಃ ಇವ ನೀಲ ಅಲಿನೀಲಂ ( ಕ. ಸ. ) ಅಶೇಷಂ – ಎಲ್ಲ. ಅವಿದ್ಯಮಾನಃ ಶೇಷ ಯಸ್ಯ ತತ್ (ಬ. ಸ.) । ಶಾರ್ವರಂ – ರಾತ್ರಿಯ. ಶರ್ವರೀಸ.ಬಂಧಿ

೨ ಶರ್ವರ್ಯಾಂ

ಭಿನ್ನಂ ಇವ—ಸೂರ್ಯನ ಕಿರಣಗಳಿಂದ ನಾಶಹೊಂದುವಂತೆ. ಸೂರ್ಯಸ್ಯ ಅಂಶವಃ ಸೂರ್ಯಾಂಶವಃ (ಷ. ತ. ಸ.) ತೈಃ ಭಿನ್ನಂ (ತೃ. ತ.) ಸೂರ್ಯನ ಕಿರಣಗಳಿಂದನಾಶಗೊಳ್ಳುವಂತೆ. ಶರೀರಭಾಜಾಂ—ಪ್ರಾಣಿಗಳ ಶರೀರಂ ಭಜಂತಿ ಇತಿ ಶರೀರಭಾಜಃ (ಉಪ.ತ.) ತೇಷಾಂ। ಭವಸಂತತಿ–ಸನ್ನಿಬದ್ಧಂ– ಜನ್ಮಜನ್ಮಾಂತರಗಳಿಂದಂಟಿಕೊಂಡ. ಭವಾನಾಂ ಸಂತತಿಃ ಭವಸಂತತಿಃ (ಷ. ತ. ಸ.) ತಯಾ ಸನ್ನಿಬದ್ಧಂ (ತೃ. ತ.) ಪಾಪಂ–ಪಾಪವು. ತ್ವತ್ಸಂಸ್ತವೇನ—ನಿನ್ನ ಸ್ತುತಿಯಿಂದ ತವ ಸಂಸ್ತವಃ ತ್ವತ್ಸಂಸ್ತವಃ (ಷ. ತ. ಸ.) ತೇನ. ಕ್ಷಣಾತ್—ಕ್ಷಣಕಾಲದಲ್ಲಿ. ಕ್ಷಯಂ ಉಪೈತಿ — ನಾಶಹೊಂದುತ್ತದೆ. ಉಪೈತಿ—ಉಪ+ಇ (೨. ಪ) ಧಾತುವಿನ ವ. ತೃ. ಪು. ಏ. ವ.

೮. ಅನ್ವಯ:— ನಾಥ, ಇತಿ ಮತ್ವಾ ತನುಧಿಯಾ ಮಯಾ ಅಪಿ ಇದಂ ತವ ಸಂಸ್ತವನಂ ಆರಭ್ಯತೇ। ಇದಂ ಸಂಸ್ತವನಂ ತವ ಪ್ರಭಾವಾತ್ ಸತಾಂ ಚೇತಃ ಹರಿಷ್ಯತಿ। ನನು ಉದಬಿಂದುಃ ನಲಿನೀದಲೇಷು ಮುಕ್ತಾಫಲದ್ಯುತಿಂ ಉಪೈತಿ।

ಭಾಷಾಂತರ:— ಪ್ರಭುವೇ, ಹೀಗೆ ತಿಳಿದು ಅಲ್ಪಬುದ್ಧಿಯುಳ್ಳ ನಾನಾದರೂ ಈ ಸ್ತೋತ್ರವನ್ನು ಆರಂಭಿಸುತ್ತೇನೆ. ಈ ಸ್ತುತಿಯು ನಿನ್ನ ಪ್ರಭಾವದಿಂದ ಸಜ್ಜನರ ಮನಸ್ಸನ್ನು ಸೆಳೆಯುವದು. ನೀರಿನ ಹನಿಯು ಕಮಲದ ಎಲೆಯಲ್ಲಿ (ಎಲೆಯಮೇಲೆ ಬಿದ್ದರೆ) ನಿಶ್ಚಯವಾಗಿ ಮುತ್ತಿನ ಕಾಂತಿಯನ್ನು (ತೇಜ) ಪಡೆಯುತ್ತದೆ.

ಟಿಪ್ಪಣಿ:— ನಾಥ–ಪ್ರಭುವೇ. ಇತಿ ಮತ್ವಾ—ಹೀಗೆ ತಿಳಿದು. ನಿನ್ನ ಸ್ತೋತ್ರದಿಂದ ಪಾಪಪರಿಹಾರವಾಗುವದೆಂದು ತಿಳಿದು. **ತನುಧಿಯಾ ಮಯಾ ಅಪಿ** ಅಲ್ಪಬುದ್ಧಿಯುಳ್ಳ ನನ್ನಿಂದಲೂಕೂಡ. ತನ್ವೀ (ತನುಃ ವಾ) ಧೀಃ ಯಸ್ಯ ಸಃ ತನುಧೀಃ (ಬ.ಸ.) ತೇನ ತನುಧಿಯಾ, ತನುಧಿಯಾ ಅಪಿ ಮಯಾ ಇದಂ ತವ ಸಂಸ್ತವನಂ ಆರಭ್ಯತೇ (ಕರ್ಮಣಿ)—ತನುಧೀಃ ಅಹಂ ಅಪಿ ಇದಂ ತವ ಸಂಸ್ತವನಂ ಆರಭೇ (ಕರ್ತರಿ)। ಪ್ರಭಾವಾತ್–ಮಹಿಮೆಯಿಂದ. ಸತಾಂ—ಸಜ್ಜನರ. ಹರಿಷ್ಯತಿ—ಆಕರ್ಷಿಸುವದು. ಹೃ (೧. ಪ) ಧಾತುವಿನ ದ್ವಿ. ಭ. ತೃ. ಪು. ಏ. ವ. ನನು—ನಿಶ್ಚಯವಾಗಿ. **ಉದಬಿಂದುಃ**–ನೀರಿನಹನಿಯು. ಉದ್ನಃ ಬಿಂದುಃ (ಷ. ತ. ಸ.) ಉದನ್ (ನ)—ನೀರು. ನಲಿನೀದಲೇಷು–ಕಮಲದೆಲೆಗಳಲ್ಲಿ ನಲಿನ್ಯಾಃ ದಲಾನಿ (ಷ.ತ.ಸ.) ತೇಷು।

ನಲಿನೀ–ಕಮಲ. ದಲಂ–ಎಲೆ. ಮುಕ್ತಾಫಲದ್ಯುತಿಂ—ಮುತ್ತಿನ ಕಾಂತಿಯನ್ನು, ಮುತ್ತಿನ ಶೋಭೆಯನ್ನು, ಮುಕ್ತಾ—ಮುತ್ತು. ದ್ಯುತಿಃ—ಕಾಂತಿ. ಮುಕ್ತಾ ಏವ ಫಲಂ ಮುಕ್ತಾ ಫಲಂ (ಕ. ಸ.) ತಸ್ಯ ದ್ಯುತಿಃ (ಷ. ತ. ಸ.) ತಾಂ । ಉಪೈತಿ–ಹೊಂದುತ್ತದೆ. ಉಪ+ಇ (೨. ಪ) ಧಾತುವಿನ ವ. ತೃ. ಪು. ಏ. ವ.

ನೀರಿನಹನಿಯು ಕಮಲದೆಲೆಯಮೇಲೆ ಬಿದ್ದರೆ ಅದು ಮುತ್ತಿನಂತೆ ಕಾಣುತ್ತದೆ. ಇದಕ್ಕೆ ಕಮಲದೆಲೆಯ ಮಹಿಮೆಯೇ ಕಾರಣ. ಅದರಂತೆ ನನ್ನ ಸ್ತೋತ್ರವಾದರೂ ನಿನ್ನ ಪ್ರಭಾವದಿಂದ ಸಜ್ಜನರ ಮನಸ್ಸನ್ನು ಆಕರ್ಷಿಸುವದು ಎಂಬ ಭಾವವಿದೆ.

೯. ಅನ್ವಯ:— ಅಸ್ತಸಮಸ್ತದೋಷಂ ತವಸ್ತವನಂ ಆಸ್ತಾಮ್ । ತ್ವತ್ಸಂಕಥಾ ಅಪಿ ಜಗತಾಂ ದುರಿತಾನಿ ಹಂತಿ । (ತಥಾ ಹಿ)। ಸಹಸ್ರಕಿರಣಃ ದೂರೇ (ಅಸ್ತಿ) (ತಸ್ಯ) ಪ್ರಭಾ ಏವ ಪದ್ಮಾಕರೇಷು ಜಲಜಾನಿ ವಿಕಾಸಭಾಂಜಿ ಕುರುತೇ ।

ಭಾಷಾಂತರ:— ಎಲ್ಲ ದೋಷಗಳನ್ನು ಹೊಡೆದೋಡಿಸಿದ ನಿನ್ನ ಸ್ತೋತ್ರವು ಒಂದುಬದಿಗೆ ಇರಲಿ; ನಿನ್ನ ನಾಮಸಂಕೀರ್ತನೆಯೂ ಕೂಡ ಜಗತ್ತಿನ (ಜನರ) ಪಾಪಗಳನ್ನು ದೂರಮಾಡುತ್ತದೆ. (ಹೇಗೆಂದರೆ) ಸಾವಿರ ಕಿರಣಗಳುಳ್ಳ ಸೂರ್ಯನು ದೂರದಲ್ಲಿ; (ಅವನ) ಕೇವಲ ಕಾಂತಿಯು ಸರೋವರಗಳಲ್ಲಿಯ ಕಮಲಗಳನ್ನು ಅರಳಿಸುತ್ತದೆ.

ಟಿಪ್ಪಣಿ:— ಅಸ್ತಸಮಸ್ತದೋಷವನ್–ಎಲ್ಲ ದೋಷಗಳನ್ನು ಹೊಡೆದೋಡಿಸಿದ. ಅಸ್ತಾಃ ಸಮಸ್ತಾಃ ದೋಷಾಃ ಯಸ್ಮಾತ್ ತತ್ (ಬ.ಸ.)ದೂರೇ ಆಸ್ತಾಂ–ದೂರದಲ್ಲಿರಲಿ. ಆಸ್ತಾಂ–ಆಸ್ (೨. ಆ) ಧಾತುವಿನ ಆಜ್ಞಾರ್ಥ ತೃ. ಪು. ಏ. ವ. ತ್ವತ್ಸಂಕಥಾಪಿ–ನಿನ್ನ ನಾಮಸಂಕೀರ್ತನೆಯೂ ಕೂಡ. ಸಂಕಥಾ–ನಾಮೋಚ್ಚಾರಣ. ಸಹಸ್ರಕಿರಣಃ–ಸಾವಿರ ಕಿರಣಗಳುಳ್ಳ ಸೂರ್ಯ. ಸಹಸ್ರಂ ಕಿರಣಾಃ ಯಸ್ಯ ಸಃ (ಬ. ಸ.) ಪ್ರಭಾ–ಕಾಂತಿ, ತೇಜ. ಪದ್ಮಾಕರೇಷು–ಕಮಲಗಳ ಸಮೂಹಗಳುಳ್ಳ ಸರೋವರಗಳಲ್ಲಿ. ಪದ್ಮಾನಾಂ ಆಕರಾಃ (ಷ. ತ.ಸ.) ತೇಷು। ಜಲಜಾನಿ–ಕಮಲಗಳನ್ನು ಜಲೇ ಜಾಯಂತೇ ಇತಿ ಜಲಜಾನಿ (ಉಪ. ತ.) ವಿಕಾಸಭಾಂಜಿ – ವಿಕಾಸವುಳ್ಳವುಗಳನ್ನು, ವಿಕಾಸಂ ಭಜಂತೇ ತಾನಿ (ಉಪ. ತ.)

ಸೂರ್ಯನು ದೂರದಲ್ಲಿದ್ದರೂ ಆತನ ಕಾಂತಿಯೇ ಸರೋವರಗಳಲ್ಲಿಯ ಕಮಲಗಳನ್ನು ಅರಳಿಸುತ್ತದೆ. ಅದರಂತೆ ನಿನ್ನ ಸ್ತೋತ್ರ ಒತ್ತಟ್ಟಿಗಿರಲಿ; ನಿನ್ನ ನಾಮೋಚ್ಚಾರಣ ಹಾಗೂ ನಾಮಸಂಕೀರ್ತನೆಗಳೇ ಜನರ ದುರಿತಗಳನ್ನು (ಪಾಪ) ದೂರ ಮಾಡುತ್ತವೆ ಎಂದು ಶ್ಲೋಕದ ತಾತ್ಪರ್ಯ.

೧೦ ಅನ್ವಯ:— ಭುವನಭೂಷಣ, ಭೂತನಾಥ, ಭುವಿ ಭೂತೈಃ ಗುಣೈಃ ಅಭಿಷ್ಟುವಂತಃ ಭವತಃ ನನು ತುಲ್ಯಾಃ ಭವಂತಿ, ಅತ್ರ ಅದ್ಭುತಂ ನಾಸ್ತಿ। (ಕಿಂತು) ಯಃ ಇಹ ಭುವಿ ಆಶ್ರಿತಂ ಭೂತ್ಯಾ ಆತ್ಮಸಮಂ ನ ಕರೋತಿ ವಾ, ತೇನ ಕಿಮ್।

ಭಾಷಾಂತರ:— ಜಗದ್ಭೂಷಣನೇ, ಲೋಕದೊರೆಯೇ, ನಿನ್ನಲ್ಲಿದ ಗುಣಗಳಿಂದ ಜಗತ್ತಿನಲ್ಲಿ ನಿನ್ನನ್ನು ಸ್ತುತಿಸುವವರು ನಿಶ್ಚಯವಾಗಿಯೂ ನಿನಗೆ ಸಮಾನರಾಗುತ್ತಾರೆ; ಇದರಲ್ಲಿ ಆಶ್ಚರ್ಯವೇನೂ ಇಲ್ಲ; (ಆದರೆ) ಈ ಜಗತ್ತಿನಲ್ಲಿ ತನ್ನನ್ನು ಆಶ್ರಯಿಸಿದವನನ್ನು ಯಾವನು (ಯಾವ ದೊರೆ) ವೈಭವದಿಂದ ತನಗೆ ಸಮಾನನನ್ನಾಗಿ ಮಾಡುವದಿಲ್ಲವೋ ಅವನಿಂದೇನು ಉಪಯೋಗ?

ಟಿಪ್ಪಣಿ:— ನೀನಂತೂ ನಿನ್ನನ್ನು ಮೊರೆಹೊಕ್ಕು, ನಿನ್ನಲ್ಲಿರುವ ಗುಣಗಳಿಂದ ನಿನ್ನನ್ನು ಸ್ತೋತ್ರ ಮಾಡುವವರನ್ನು ನಿನ್ನ ಸರಿಸಮಾನರನ್ನಾಗಿ ಮಾಡಿ ಕೊಳ್ಳುವೆ. ಇದರಲ್ಲಿ ಆಶ್ಚರ್ಯವೇನೂ ಇಲ್ಲ; ಆದರೆ ಇದಕ್ಕೆ ವಿರುದ್ಧವಾಗಿ, ಈ ಜಗತ್ತಿನಲ್ಲಿ ಯಾರು ತಮ್ಮನ್ನು ಮೊರೆಹೊಕ್ಕರುವರೋ, ಅವರಿಗೆ ಆಶ್ರಯ ಕೊಟ್ಟು, ಅವರಿಗಾದರೂ ತಮ್ಮಂತಹ ಐಶ್ವರ್ಯ, ವೈಭವ ಮುಂ. ದೊರೆಯುವಂತೆ ಮಾಡದೆ ಇರುವ ಪ್ರಭುಗಳಿಂದ ಏನು ತಾನೇ ಉಪಯೋಗ? ಅವರ ಬಾಳ್ವೆ ನಿರರ್ಥಕವಾದುದು ಎಂದು ತಾತ್ಪರ್ಯ.

ಭುವನಭೂಷಣ:—ಜಗದ್ಭೂಷಣನೇ ಭುವನಸ್ಯ ಭೂಷಣಂ ಭುವನಭೂಷಣಂ (ಷ.ತ.ಸ) ತಸ್ಯ ಸಂಬೋಧನಂ. ಭೂತನಾಥ:—ಲೋಕದೊರೆಯೇ ಭೂತಾನಾಂ ನಾಥಃ ಭೂತನಾಥಃ (ಷ.ತ.ಸ) ತಸ್ಯ ಸಂಬೋಧನಂ. ಭುವಿ—ಭೂಮಿಯಲ್ಲಿ. ಭೂ (ಸ್ತ್ರೀ) ಶಬ್ದದ ಸ.ಏ.ವ. ಭೂತೈಃ ಗುಣೈಃ—ಇದ್ದ ಗುಣಗಳಿಂದ ನಿನ್ನಲ್ಲಿ ನಿಜವಾಗಿಯೂ ಇರುವ ಗುಣಗಳಿಂದ 'ಸತ್ಯೈಃ ಗುಣೈಃ' ಟೀಕಾ **ಅಭಿಷ್ಟುವಂತಃ**— ಸ್ತುತಿಸುವವರು. ಅಭಿ+ಸ್ತು (೨.ಪ) ಧಾತುವಿನ ವ. ಕಾ. ಕೃ. (ಸ್ತ್ರ) ಪ್ರ. ಬ. ವ. ತುಲ್ಯಾಃ — ಸಮಾನರು. ಅತ್ರ — ಈ ವಿಷಯದಲ್ಲಿ ನಿನ್ನನ್ನು ನಿನ್ನಲ್ಲಿರುವ ಗುಣಗಳಿಂದ ಸ್ತುತಿಸುವ ಭಕ್ತರು ನಿನ್ನ ಸಮಾನರಾಗುವದರಲ್ಲಿ ಆಶ್ಚರ್ಯವೇನೂ ಇಲ್ಲ. ಅದ್ಭುತಂ—ಆಶ್ಚರ್ಯವು. ಆಶ್ರಿತಂ

ಭೂತ್ವಾ ಆತ್ಮಸಮಂ ನ ಕರೋತಿ ಯಾರು ತನ್ನನ್ನು ಆಶ್ರಯಿಸಿದವನನ್ನು ಸಂಪತ್ತು, ವೈಭವ ಮುಂ. ಗಳಿಂದ ತಮಗೆ ಸಮಾನರನ್ನಾಗಿ ಮಾಡುವದಿಲ್ಲವೋ. ಎಂದರೆ, ಯಾರು ಮೊರೆಹೊಕ್ಕವರಿಗೆ ಯೋಗ್ಯ ಆಶ್ರಯ ಕೊಡುವದಿಲ್ಲವೋ ತೇನ ಕಿಂ—ಅವನಿಂದೇನು ಪ್ರಯೋಜನ ಕಿಂ ಶಬ್ದವು ತೃತೀಯಾ ವಿಭಕ್ತಿಯೊಡನೆ ಏನು ಉಪಯೋಗ ? ಏನು ಪ್ರಯೋಜನ ಎಂಬ ಅರ್ಥದಲ್ಲಿ ಉಪಯೋಗಿಸಲ್ಪಡುತ್ತದೆ. ಉದಾ—ಕ್ಷಾಂತಿಶ್ಚೇತ್ ವಚನೇನ ಕಿಮ್ ।

## EXERCISES.

**ಅಭ್ಯಾಸಕ್ಕಾಗಿ ಪ್ರಶ್ನೆಗಳು:—**

೧. **ಕನ್ನಡಕ್ಕೆ ಪರಿವರ್ತಿಸಿರಿ:—** (i) ೧–೨. (ii) ೩, ೫. (iii) ೭, ೯, ೧೦.

೨. **ವಿಗ್ರಹಿಸಿ ಸಮಾಸಗಳ ಹೆಸರು ಹೇಳಿರಿ—** ಭವಜಲೇ; ವಿಭುಧಾರ್ಜಿತಪಾದಪೀಠ; ವಿಗತತ್ರಪಃ; ಶಶಾಂಕಕಾಂತಾನ್; **ಪರಿಪಾಲನಾರ್ಥಂ**; ತನುಧಿಯಾ; **ಉದಬಿಂದುಃ**; **ಸಹಸ್ರಕಿರಣಃ**; ವಿಕಾಸಭಾಂಜಿ;

೩. **ರೂಪಗುರುತಿಸಿರಿ:—** ಸ್ತೋಷ್ಯೇ; **ತರೀತುಂ**; ಅಭ್ಯೇತಿ; ಮುಖರೀಕುರುತೇ; **ಸತಾಂ**; ಹರಿಷ್ಯತಿ; ಭುವಿ; **ಉಪೈತಿ**; ಆಸ್ತಾಂ; **ಅಭಿಷ್ಟುವಂತಃ**

೪. **ಟಿಪ್ಪಣಿ ಬರೆಯಿರಿ :—** ಜಿನಪಾದಯುಗಂ; ಪ್ರಥಮಂ-ಜಿನೇಂದ್ರಂ; ಸುರಗುರುಃ;

೫. **ವಾಕ್ಯಗಳಲ್ಲಿ ಉಪಯೋಗಿಸಿರಿ:—** ನೂನಂ; ವಿನಾ; ಅಪಿ;

೬. **ಪ್ರಯೋಗ ಬದಲಿಸಿರಿ:—** (i) ಬಾಲಂ ವಿಹಾಯ ಕಃ ಅನ್ಯಃ ಜಲಸಂಸ್ಥಿತಮಿಂದುಬಿಂಬಂಗ್ರಹೀತುಮಿಚ್ಛತಿ.
(ii) ಮಯಾ ಇದಂ ತವ ಸಂಸ್ತವನಂ ಆರಭ್ಯತೇ ।

೭. **ಸಂಧಿ ಬಿಡಿಸಿರಿ:—** ಮತ್ವೇತಿ; ಮಯೇದಮಾರಭ್ಯತೇ; ಭೂತ್ಯೈರ್ಗುಣೈರ್ಭುವಿ; ಕಸ್ತೇ.



# ೭. ದೇವ್ಯಪರಾಧಕ್ಷಮಾಪನಸ್ತೋತ್ರಮ್

**ಕವಿ ಹಾಗೂ ಕಾವ್ಯ:—** ಈ ಪಾಠವು ಶ್ರೀಮತ್ **ಶಂಕರಾಚಾರ್ಯರಿಂದ** ವಿರಚಿತವಾದ ಒಂದು ಸ್ವತಂತ್ರ ಸ್ತೋತ್ರವು. ಆಚಾರ್ಯರು ಪಾರ್ವತೀದೇವಿಯನ್ನುದ್ದೇಶಿಸಿ ಇದನ್ನು ರಚಿಸಿದ್ದಾರೆ.

**ಕವಿ:—** ಶ್ರೀ. ಶಂಕರಾಚಾರ್ಯರು ಕ್ರಿ. ಶ. ೭೮೮ ರಲ್ಲಿ ಕೇರಳ ದೇಶದಲ್ಲಿಯ ಕಾಲಟೀ ಗ್ರಾಮದಲ್ಲಿ ಹುಟ್ಟಿದರು. ತೈತ್ತರೀಯ ಶಾಖೆಯ ನಂಬುದ್ರೀ ಬ್ರಾಹ್ಮಣ ಮನೆತನದಲ್ಲಿ ಇವರ ಜನನವಾಯಿತು. ಆಚಾರ್ಯರಿನ್ನೂ ಚಿಕ್ಕವರಿರುವಾಗಲೇ ಇವರ ತಂದೆಯವರು ತೀರಿಕೊಂಡರು. ಹೀಗಾಗಿ ಇವರ ಪೋಷಣೆಯ ಹೊಣೆ ಇವರ ತಾಯಿಯ ಮೇಲೆ ಬಿದ್ದಿತು. ಆಚಾರ್ಯರಿನ್ನೂ ಚಿಕ್ಕವರಿರುವಾಗಲೇ ತುಂಬ ಬುದ್ಧಿವಂತರೆಂದು ಹೆಸರು ಗಳಿಸಿದ್ದರು. ಇವರ ಮದುವೆಯನ್ನು ಮಾಡಬೇಕೆಂದು ಇವರ ತಾಯಿಯವರಿಗೆ ಆಶೆ, ಆದರೆ ಮಗನಿಗಾದರೋ ಸನ್ಯಾಸ ಸ್ವೀಕರಿಸಬೇಕೆಂಬ ಆಶೆ. ಮೊಸಳೆಯ ಪವಾಡದ ಮೂಲಕ ಸನ್ಯಾಸ ಸ್ವೀಕರಿಸಲಿಕ್ಕೆ ತಾಯಿಯ ಅಪ್ಪಣೆ ಪಡೆದು ತಮ್ಮ ವಯಸ್ಸಿನ ಆನೆಯ ವರ್ಷ ನರ್ಮದಾ ತೀರದಲ್ಲಿಯ **ಗೋವಿಂದ ಭಗವತ್ಪಾದರ** ಬಳಿಗೆ ಹೋಗಿ ಅವರಿಂದ ಸನ್ಯಾಸ ಸ್ವೀಕರಿಸಿ ಅಲ್ಲಿಯೇ ಅಧ್ಯಯನ ಮಾಡಿದರು. ನ್ಯಾಯ ವೇದಾಂತ ವ್ಯಾಕರಣ ಮುಂತಾದ ಶಾಸ್ತ್ರಗಳ ಅಧ್ಯಯನ ಮಾಡಿ ಗುರುಗಳ ಪ್ರೀತಿಗೆ ಪಾತ್ರರಾದರು. ಗುರುಗಳ ಆಶೀರ್ವಾದ ಪಡೆದು ಅವರ ಆಜ್ಞೆಯ ಮೇರೆಗೆ ಕಾಶಿಗೆ ಹೋಗಿ ಅಲ್ಲಿಯ ಪಂಡಿತರ ಕೂಡ ವಾದವಿವಾದ ಮಾಡಿ ಅವರನ್ನು ಜಯಿಸಿದರು.

ಕುಮಾರಿಲಭಟ್ಟರ ಶಿಷ್ಯರಾದ ಮಂಡನ ಮಿಶ್ರರೆಂಬ ಪ್ರಸಿದ್ಧ ಕರ್ಮಮಾರ್ಗಾವಲಂಬಿಗಳನ್ನು ಸೋಲಿಸಿ ತಮ್ಮ ಶಿಷ್ಯರನ್ನಾಗಿ ಮಾಡಿಕೊಂಡರು. ಹೀಗೆ ಬೌದ್ಧ ಜೈನ ಹಾಗೂ ಕರ್ಮಮಾರ್ಗಾವಲಂಬಿಗಳನ್ನು ವಾದದಲ್ಲಿ ಗೆಲ್ಲುತ್ತ ೩ ಸಲ ಆಸೇತು ಹಿಮಾಚಲ ಪರ್ಯಂತ ದಿಗ್ವಿಜಯ ಮಾಡಿದರು. ಬೌದ್ಧ ಜೈನ ಮತಗಳ ಪ್ರಾಬಲ್ಯದಿಂದ ಕ್ಷೀಣಾವಸ್ಥೆಯಲ್ಲಿದ್ದ ವೈದಿಕ ಮತವನ್ನು ಎತ್ತಿ ಹಿಡಿದರು ಕರ್ಮಮಾರ್ಗಾವಲಂಬಿಗಳನ್ನು ಜಯಿಸಿ ಅದ್ವೈತ ಮತವನ್ನು ಸ್ಥಾಪಿಸಿದರು. ಶೃಂಗೇರಿ, ಬದರಿ, ದ್ವಾರಕಾಪುರಿಗಳಲ್ಲಿ ಜ್ಯೋತಿರ್ಮಠಗಳನ್ನು ಸ್ಥಾಪಿಸಿದರು. ಪ್ರಸ್ಥಾನತ್ರಯಿ (ಉಪನಿಷತ್ತು, ಬ್ರಹ್ಮಸೂತ್ರ

ಭಗವದ್ಗೀತೆಗಳಿಗೆ) ಭಾಷ್ಯ ಬರೆದರು. ಹೀಗೆ ಅವರು ಅದ್ವೈತ ಮತಸ್ಥಾಪನಾಚಾರ್ಯ ಹಾಗೂ ಜಗದ್ಗುರು ಎಂದೂ ಪ್ರಸಿದ್ಧರಾಗಿದ್ದಾರೆ. ಕ್ರಿ. ಶ. ೮೨೦ ರಲ್ಲಿ ಬದರಿಕಾಶ್ರಮದಲ್ಲಿ ಸಮಾಧಿಸ್ಥರಾದರು.

ಆಚಾರ್ಯರು ನಿರೀಶ್ವರ ವಾದಿಗಳನ್ನು ಖಂಡಿಸಿ ವೇದ ಪ್ರಾಮಾಣ್ಯವನ್ನು ಸ್ಥಾಪಿಸಿದರು. ಕರ್ಮಮಾರ್ಗವನ್ನು ಖಂಡಿಸಿ ಜ್ಞಾನಮಾರ್ಗವನ್ನು ಉಪದೇಶಿಸಿದರು. ಇವರ ಉಪದೇಶವನ್ನು ಹೀಗೆ ಸಂಗ್ರಹಿಸುವರು. "ಬ್ರಹ್ಮಸತ್ಯಂಜಗನ್ಮಿಥ್ಯಾ ಜೀವೋಬ್ರಹ್ಮೈವನಾಽಪರಃ" ಈ ಜಗತ್ತಿನಲ್ಲಿ ಬ್ರಹ್ಮನೊಬ್ಬನೇ ಸತ್ಯನಾದವನು ಜಗತ್ತು ಸುಳ್ಳಾದದ್ದು ಜೀವನು ಬ್ರಹ್ಮನೇ ಬೇರೆಯಲ್ಲ. ಬ್ರಹ್ಮನೊಬ್ಬನೇ ಸತ್ಯನೂ ನಿತ್ಯನೂ ಆದವನು. ನಮ್ಮ ಕಣ್ಣಿಗೆ ಕಾಣುವ ಈ ಜಗತ್ತು ಮಿಥ್ಯೆ, ಸುಳ್ಳು ಮಾಯೆ. ಕಣ್ಣು ಗುಡ್ಡೆಯನ್ನು ಮಿಟಿಕಿಸಿದರೆ ಎರಡು-ವಸ್ತುಗಳು ತೋರುವವು; ಆದರೆ ನಿಜವಾಗಿ ಎರಡು ವಸ್ತುಗಳಿರುವದಿಲ್ಲ. ಅಲ್ಲದೆ ಕನಸಿನಲ್ಲಿ ನಡೆದ ಘಟನೆಗಳು ನಿಜವೆಂದು ತೋರುವವು ಆದರೆ ನಿಜವಾಗಿ ಅವು ನಡೆದಿರುವದಿಲ್ಲ. ಹಾಗೆಯೇ ಈ ಜಗತ್ತು ಕೂಡ ಇರುತ್ತದೆ. ಜೀವಾತ್ಮ ಹಾಗೂ ಪರಮಾತ್ಮರಲ್ಲಿ ಭೇದವಿಲ್ಲ. ಇವರ ಈ ತತ್ವವು ಅದ್ವೈತವೆಂದೂ ಜೀವಾತ್ಮ ಪರಮಾತ್ಮ ಒಂದೇ ಎಂಬವಾದ ಮಾಯಾವಾದವೆಂದೂ ಪ್ರಸಿದ್ಧವಿದೆ.

**ಕಾವ್ಯ:**—ಇಲ್ಲಿ ಪ್ರಸ್ತುತಪಾಠದಲ್ಲಿ ಆಚಾರ್ಯರು ದೇವಿಯನ್ನು ಸ್ತುತಿಸುತ್ತಾರೆ. ತಾವು ಮಾಡಿದ ಅಪರಾಧಗಳನ್ನು ಕ್ಷಮಿಸೆಂದು ಮಹಾದೇವಿಯನ್ನು ಅತ್ಯಂತ ದೈನ್ಯದಿಂದ ಬೇಡಿಕೊಳ್ಳುತ್ತಾರೆ. ಈ ಸ್ತೋತ್ರದ ಶೈಲಿ ಸರಳವೂ ಸುಂದರವೂ ಸುಭಗವೂ ಆಗಿದೆ. ಗಂಗಾಪ್ರವಾಹದಂತೆ ನಿರರ್ಗಳವಾಗಿ ಹರಿಯುತ್ತದೆ.

**ಟೀಪು:**— ಈ ಸ್ತೋತ್ರದ ೫ನೆಯ ಶ್ಲೋಕದಲ್ಲಿ ತಮ್ಮ ಆಯುಷ್ಯದ ೮೫ ವರುಷಗಳು ಸಂದಿಹೋದರೂ ದೇವಿಯ ಚರಣಸೇವೆಯನ್ನು ಸರಿಯಾಗಿ ಮಾಡುವದಾಗಲಿಲ್ಲವೆಂದೂ ಅದಕ್ಕಾಗಿ ತಮ್ಮನ್ನು ಕ್ಷಮಿಸಿ ತಮ್ಮ ಮೇಲೆ ದಯೆ ತೋರಬೇಕೆಂದೂ ಬೇಡಿಕೊಳ್ಳುತ್ತಾರೆ. ಆದರೆ ಶ್ರೀ ಶಂಕರಾಚಾರ್ಯರು ೩೨ ವರುಷಗಳ ವರೆಗೆ ಜೀವಿಸಿದ್ದರೆಂಬುದು ಇತಿಹಾಸ ಪ್ರಸಿದ್ಧವಿದೆ. ಕಾರಣ ಈ ಸ್ತೋತ್ರವು ಆದ್ಯ ಶಂಕರಾಚಾರ್ಯರದು ಇರದೆ ತತ್ಪೀಠಸ್ಥ ಬೇರೆ ಒಬ್ಬ ಶಂಕರಾಚಾರ್ಯರಿಂದ ರಚಿತವಾಗಿರಬೇಕೆಂಬ ಸಂಶಯಕ್ಕೆ ಆಸ್ಪದ ಕೊಡುತ್ತದೆ.

**ಪಾಠದ ಸಾರಾಂಶ:—** ಜಗನ್ಮಾತೆ, ನನಗೆ ಮಂತ್ರ, ಯಂತ್ರ, ತಂತ್ರ, ಧ್ಯಾನ ಮೊದಲಾದವು ಗೊತ್ತಿಲ್ಲ. ಈ ವರೆಗೆ ನಾನು ಬೇರೆಯವರನ್ನು ಆರಾಧಿಸಿದ್ದಾಯಿತು. ಆದರೆ ಅದರಿಂದ ಯಾವ ಫಲವೂ ದೊರೆಯದಿದ್ದುದರಿಂದ ಅವರನ್ನು ಬಿಟ್ಟು ದೇವಿಯಾದ ನಿನ್ನನ್ನು ಆಶ್ರಯಿಸಿದ್ದೇನೆ. ಹೀಗಾಗಿ ೮೫ ವರ್ಷ ಆಯುಷ್ಯ ಸಂದಿಹೋದರೂ ನಿನ್ನ ಚರಣಸೇವೆ ಸರಿಯಾಗಿ ಮಾಡುವದಾಗಲಿಲ್ಲ. ಆದ್ದರಿಂದ ನನ್ನ ಅಪರಾಧವನ್ನು ಕ್ಷಮಿಸು. ನಾನು ಶಿಥಿಲ ಹಾಗೂ ಚಂಚಲವೃತ್ತಿಯವನು. ಆದರೂ ನನ್ನ ಮೇಲೆ ದಯೆ ತೋರು ಕೆಟ್ಟ ಮಗನು ಹುಟ್ಟಬಹುದು, ಆದರೆ ತಾಯಿ ಎಂದೂ ಕೆಟ್ಟ ಇರುವದಿಲ್ಲ. ಕಾರಣ, ಕೃಪಾಸಮುದ್ರಳೇ, ದೀನನಾದ ನನ್ನ ಮೇಲೆ ಕೃಪಾದೃಷ್ಟಿಯನ್ನು ಬೀರು. ನಿನ್ನ ಅನುಸರಣೆವೊಂದನ್ನೇ ಬಲ್ಲ ನನಗೆ ಆಶ್ರಯಕೊಡು. ಇಲ್ಲವಾದರೆ ನಿರಾಧಾರನಾದ ನಾನು ಯಾರಿಗೆ ಶರಣುಹೋಗಲಿ ? ತಾಯೀ, ನಿನ್ನ ಮಹಿಮೆ ನಿಜವಾಗಿಯೂ ಅಗಾಧವಾಗಿದೆ. ಶಿವನಿಗೆ ಜಗದೀಶ ಎಂಬ ಬಿರುದು ದೊರೆಯಲಿಕ್ಕೆ ನೀನೇ ಕಾರಣ. ಈ ವರೆಗೆ ನಾನು ನಿನ್ನನ್ನು ಆರಾಧಿಸದೆ ಇದ್ದುದು ನಿಜ, ಆದರೂ ಸಂಕಟಗಳಲ್ಲಿ ಮುಳುಗಿದ ನನ್ನನ್ನು ಉದ್ಧಾರ ಮಾಡು. ನಾನೇನು ಮೋಕ್ಷ, ಸುಖ, ಸಂಪತ್ತು ಮುಂ. ಬೇಡುವದಿಲ್ಲ. ಆದರೆ ನನ್ನ ಜನ್ಮ ಮಾತ್ರ ಹೋಗುವಂತೆ ಮಾಡು ( ಅರ್ಥಾತ್ ಪುನರ್ಜನ್ಮವಾಗದಂತೆ ಮಾಡು. ) ಒಟ್ಟಿನ ಮೇಲೆ, ನನ್ನ ಸಮಾನನಾದ ಪಾಪಿಷ್ಠನಿಲ್ಲ, ನಿನ್ನಂತಹ ಪಾಪ ಪರಿಹರಿಸುವವರಿಲ್ಲ. ಆದ್ದರಿಂದ ದೇವೀ, ನಿನಗೆ ಉಚಿತವೆಂದು ತೋರಿದುದನ್ನು ಮಾಡು.

## ಅನ್ವಯ, ಭಾಷಾಂತರ ಹಾಗೂ ಟೀಕೆ-ಟಿಪ್ಪಣಿಗಳು.

### देव्यपराधक्षमापन स्तोत्रम्

### ೭. ದೇವಿಗೆ ಅಪರಾಧ ಕ್ಷಮಿಸೆಂದು ಬೇಡುವ ಸ್ತೋತ್ರ.

**ಪುಟ ೪೩.** ೧. ಅನ್ವಯ:—ಅಹೋ ಮಾತಃ, ಮಂತ್ರಂ ನ ಜಾನೇ, ತತ್ ಯಂತ್ರಂ ಅಪಿ ಚ ನೋ ಜಾನೇ, ಸ್ತುತಿಂ ನ ಜಾನೇ, ಆಹ್ವಾನಂ ನ ಜಾನೇ, ತತ್ ಧ್ಯಾನಂ ಅಪಿ ಚ ನ ಜಾನೇ, ಸ್ತುತಿಕಥಾಃ ನ ಜಾನೇ, ತೇ ಮುದ್ರಾಃ ನ ಜಾನೇ; ತತ್ ವಿಲಪನಂ ಅಪಿಚ ನ ಜಾನೇ; ಪರಂ ಕ್ಲೇಶಹರಣಂ ತ್ವದನುಸರಣಂ ಜಾನೇ।

ಭಾಷಾಂತರ:— ತಾಯೀ, ನನಗೆ ಮಂತ್ರಗೊತ್ತಿಲ್ಲ, ತಂತ್ರವೂ ಗೊತ್ತಿಲ್ಲ ಸ್ತೋತ್ರ ಗೊತ್ತಿಲ್ಲ; ಕರೆಯುವ ವಿಧಿ (ಆಹ್ವಾನ) ಗೊತ್ತಿಲ್ಲ, ಧ್ಯಾನವೂ ಗೊತ್ತಿಲ್ಲ. ನಿನ್ನನ್ನು ಹೊಗಳುವ ಕಥೆಗಳನ್ನು ನಾನರಿಯೆ. ನಿನ್ನ ಮುದ್ರೆಗಳು ನನಗೆ ಗೊತ್ತಿಲ್ಲ. ಮತ್ತು ಆ ಶೋಕಿಸುವದನ್ನೂ ಅರಿಯೆನು. ಆದರೆ ದುಃಖವನ್ನು ದೂರಮಾಡುವ ನಿನ್ನನ್ನನುಸರಿಸುವದೊಂದು ಮಾತ್ರ ನನಗೆ ಗೊತ್ತುಂಟು.

ಟಿಪ್ಪಣಿ :— ದೇವ್ಯಪರಾಧಕ್ಷಮಾಪನಸ್ತೋತ್ರಮ್ — ೩-೪ ರೀತಿಗಳಿಂದ ಈ ಸಮಾಸವನ್ನು ಬಿಡಿಸಲು ಬರುತ್ತದೆ. ಅವುಗಳಲ್ಲಿ ಕೆಲವನ್ನು ಕೆಳಗೆ ಕೊಟ್ಟಿದೆ. (i) ಅಪರಾಧಾನಾಂ ಕ್ಷಮಾ ಅಪರಾಧಕ್ಷಮಾ (ಷ.ತ.ಸ.) ತಸ್ಯಾಃ ಆಪನಂ ಅಪರಾಧ-ಕ್ಷಮಾಪನಂ (ಷ. ತ. ಸ.) ಅಪರಾಧಕ್ಷಮಾಪನಂ ಸ್ತೋತ್ರಂ ಅಪರಾಧ ಕ್ಷಮಾಪನ ಸ್ತೋತ್ರಂ (ಕ. ಸ.) ದೇವೀಂ ಉದ್ದಿಶ್ಯ ( ದೇವ್ಯಾಃ ಕೃತೇವಾ) ಕೃತಂ ಅಪರಾಧಕ್ಷಮಾಪನಸ್ತೋತ್ರಂ ದೇವ್ಯಪರಾಧ ಕ್ಷಮಾಪನಸ್ತೋತ್ರಮ್ (ಮಧ್ಯಮಪದ ಲೋಪೀ ತ.ಸ.) ii) ದೇವ್ಯಾಂ ಅಪರಾಧಾಃ ದೇವ್ಯಪರಾಧಾಃ (ಸ. ತ.ಸ.) ತೇಷಾಂ ಕ್ಷಮಾಪನಂ(ಷ.ತ.ಸ.) ತಸ್ಯ ಸ್ತೋತ್ರಂ (ಷ.ತ.ಸ.). (iii) ದೇವ್ಯಾಃ ಅಪರಾಧಸ್ಯ ಅಪರಾಧಾನಾಂ ವಾ ಕ್ಷಮಾಪನಂ (ಷ. ತ. ಸ.) ತಸ್ಯ ಸ್ತೋತ್ರಂ (ಷ. ತ. ಸ.) (iv) 'ಕರ್ಮಣಿ ಷಷ್ಠೀ' ದೇವ್ಯಾಃ ಅಪರಾಧಾಃ (ಷ. ತ. ಸ.) ತೇಷಾಂ ಕ್ಷಮಾ (ಷ.ತ.ಸ.) ತಸ್ಯಾಃ ಆಪನಂ (ಷ.ತ.ಸ.) ತಸ್ಯ ಸ್ತೋತ್ರಂ

ಅರ್ಥದ ದೃಷ್ಟಿಯಿಂದ (i) ನೆಯ ರೀತಿ ಹೆಚ್ಚು ಸಮಂಜಸ ತೋರುತ್ತದೆ. ತಾಯೀ, ನನಗೆ ಮಂತ್ರ, ತಂತ್ರ, ಸ್ತೋತ್ರ, ಆಹ್ವಾನ, ಧ್ಯಾನ, ಕಥೆ ಮುದ್ರೆ, ರೋದನ ಇವಾವೂ ಗೊತ್ತಿಲ್ಲ. ಆಪತ್ತುಗಳನ್ನು ದೂರಮಾಡುವ ನಿನ್ನನ್ನನುಸರಿಸುದೊಂದು ಮಾತ್ರ ಗೊತ್ತಿದೆ. ಎಂದು ಶಂಕರಾಚಾರ್ಯರು ಪಾರ್ವತೀ ದೇವಿಗೆ ಹೇಳಿಕೊಳ್ಳುತ್ತಾರೆ ಜಾನೇ—ನನಗೆ ಗೊತ್ತಿದೆ. ಜ್ಞಾ (೯ ಉ) ಧಾತುವಿನ ವ. ಪ್ರ. ಪು. ಏ. ವ. ಪರಂ—ಆದರೆ. ಕ್ಲೇಶಹರಣಂ – ಸಂಕಟವನ್ನು ದೂರಮಾಡುವ ಕ್ಲೇಶಸ್ಯ ಹರಣಂ (ಷ. ತ. ಸ.) ಅಥವಾ ಕ್ಲೇಶಂ ಹರತಿ ಇತಿ (ಉಪ.ತ.) ಸ್ತುತೇಃ ಕಥಾಃ ಸ್ತುತಿಕಥಾಃ (ಷ.ತ.ಸ.) ಮಾತಃ— ಮಾತೃ ಮಾತೃ (ಸ್ತ್ರೀ) ಶಬ್ದದ ಸಂಬೋಧನ ಏ. ವ.

ಮಂತ್ರ:—ಇಷ್ಟ ಕಾರ್ಯಗಳು ಸಿದ್ಧಿಸುವದಕ್ಕಾಗಿ ಅನ್ನುವ ಮಂತ್ರಗಳು ಉದಾ:—ಚೋಳಿನ ಮಂತ್ರ, ಹಾವಿನಮಂತ್ರ ಇತ್ಯಾದಿ. ಅಥವಾ ಇಚ್ಛಿತ

ಕಾರ್ಯಕ್ಕೆ ಕೈಗೂಡುವದಕ್ಕಾಗಿ ಮಾಡುವ ಮಾಟಕ್ಕೂ ಮಂತ್ರವೆಂಬ ಹೆಸರಿದೆ. ಇವನ್ನು ಹೆಚ್ಚಾಗಿ ದೇವೀ ಉಪಾಸನೆ ಮಾಡುವ ಶಾಕ್ತರು ಮಾಡುವರು.

ಯಂತ್ರ:—ಅಭೀಷ್ಟ ಸಿದ್ಧಿಗಾಗಿ ತಾಮ್ರ, ಬೆಳ್ಳಿ ಇಲ್ಲವೆ ಬಂಗಾರದ ತಗಡಿನ ಮೇಲೆ ಕೆಲವೊಂದು ಮಂತ್ರಗಳನ್ನು ವಿಧಿಪೂರ್ವಕವಾಗಿ ಬರೆದು ಬಳಿಕ ಆ ತಗಡುಗಳನ್ನು ಕೈಯಲ್ಲಿ ಇಲ್ಲವೆ ಕೊರಳಲ್ಲಿ ಧರಿಸುವದುಂಟು. ಇದಕ್ಕೆ ಯಂತ್ರವೆಂದು ಹೆಸರು.

ಸ್ತುತಿ:— ಸ್ತೋತ್ರಂ ಯಾರಾದರನ್ನುದ್ದೇಶಿಸಿ ಮಾಡುವ ಸ್ತೋತ್ರ ಉದಾ:—ವೆಂಕಟೇಶಸ್ತೋತ್ರ, ಭಕ್ತಾಮರಸ್ತೋತ್ರ, ದೇವ್ಯಪರಾಧಕ್ಷಮಾಪನ ಸ್ತೋತ್ರ, ಇದರಲ್ಲಿ ಆ ಆ ವಿವಿಧ ದೇವತೆ ಇಲ್ಲವೆ ಪುರುಷರ ವರ್ಣನೆ ಇಲ್ಲವೆ ಹೊಗಳಿಕೆ ಇರುತ್ತದೆ.

ಆಹ್ವಾನ:—ಕರೆಯುವ ವಿಧಿ. ಸಂಬೋಧಿಸುವ ವಿಧಿ.

ಧ್ಯಾನ:—ದೇವರ ಇಲ್ಲವೆ ದೇವತೆಯ ಗುಣಗಳನ್ನು ಮನಸ್ಸಿನಲ್ಲಿ ಚಿಂತನೆ ಮಾಡುವದು.

ಸ್ತುತಿಕಥಾ:—ಸ್ತೋತ್ರದಲ್ಲಿದ್ದ ಕಥೆ ಇಲ್ಲವೆ ವರ್ಣನೆ.

ಮುದ್ರಾ:—ದೇವತಾರಾಧನೆ ಮಾಡುವಾಗ ಕೈಬೆರಳುಗಳನ್ನು ಬೇರೆ ಬೇರೆ ವಿಧವಾಗಿ ಮಡುಚುವದುಂಟು. ಅವುಗಳಿಗೆ ಬೇರೆ ಬೇರೆ ಹೆಸರುಗಳಿವೆ. ಉದಾ:—ಶಂಖಮುದ್ರಾ ಮುಂ.

ವಿಲಪನ:—ರೋದನ. ಮಾಡಿದ ದುಷ್ಕೃತ್ಯಗಳಿಗಾಗಿ ಪಶ್ಚಾತ್ತಾಪಬಟ್ಟು ತಮಗುಂಟಾದ ದುಃಖವನ್ನು ಆರಾಧಿಸುವ ದೇವತೆಯ ಎದುರಿಗೆ ತೋಡಿಕೊಳ್ಳುವದು.

೨. ಅನ್ವಯ:— ಸಕಲೋದ್ಧಾರಿಣಿ, ಜನನಿ, ಶಿವೇ, ವಿಧೇಃ ಅಜ್ಞಾನೇನ, ದ್ರವಿಣವಿರಹೇಣ, ಅಲಸತಯಾ, ವಿಧೇಯಾಶಕ್ಯತ್ವಾತ್, ತವ ಚರಣಯೋಃ ಯಾ ಚ್ಯುತಿಃ ಅಭೂತ್, ತತ್ ಏತತ್ ಕ್ಷಂತವ್ಯಂ, ಕುಪುತ್ರಃ ಜಾಯೇತ, ಕುಮಾತಾ ಕ್ವಚಿದಪಿ ಚ ನ ಭವತಿ ।

ಭಾಷಾಂತರ:—ಎಲ್ಲರನ್ನುದ್ಧರಿಸುವ ತಾಯಿಯಾದ ಗೌರಿಯೇ, ಪೂಜಾವಿಧಾನದ ಅಜ್ಞಾನದಿಂದ, ಹಣವಿಲ್ಲದಿದ್ದುದರಿಂದ, ಆಲಸ್ಯದಿಂದ, ಮತ್ತು ಮಾಡಬೇಕಾದುದನ್ನು ಮಾಡಲು ಅಶಕ್ಯವಾದುದರಿಂದ, ನಿನ್ನ ಚರಣಸೇವೆಯಲ್ಲಿ ಏನು ತಪ್ಪಾಗಿರುವದೋ, ಅದನ್ನು ಕ್ಷಮಿಸು, ಕೆಟ್ಟ ಹುಡುಗನು

ಹುಟ್ಟಬಹುದು; ಆದರೆ ದುಷ್ಟತಾಯಿ (ಮಾತ್ರ) ಎಂದೂ (ಎಲ್ಲಿಯೂ) ಇರುವದಿಲ್ಲ.

ಟಿಪ್ಪಣೆ:— ಸಕಲೋದ್ಧಾರಿಣಿ—ಎಲ್ಲರನ್ನುದ್ಧರಿಸುವವಳೇ. ಸಕಲಾನ್ ಉದ್ಧರತಿ ಇತಿ ಸಕಲೋದ್ಧಾರಿಣೀ (ಉಪ. ತ) ತಸ್ಯಾಃ ಸಂಬೋಧನಂ. ಜನನಿ–ತಾಯಿಯೇ. ಶಿವೇ–ಪಾರ್ವತಿಯೇ. ವಿಧೇಃ ಅಜ್ಞಾನೇನ—ಪೂಜೆ, ತಂತ್ರ ಮೊದಲಾವುಗಳ ಅಜ್ಞಾನದಿಂದ ನ ಜ್ಞಾನಂ ಅಜ್ಞಾನಂ (ನ.ತ) ತೇನ ದ್ರವಿಣವಿರಹೇಣ – ಹಣವಿಲ್ಲದಿದ್ದುದರಿಂದ. ದ್ರವಿಣಸ್ಯ ವಿರಹಃ ದ್ರವಿಣವಿರಹಃ (ಷ. ತ. ಸ) ತೇನ ಅಲಸತಯಾ—ಆಲಸ್ಯದಿಂದ- ಸೋಮಾರಿತನದಿಂದ. ವಿಧೇಯಾಶಕ್ಯತ್ವಾತ್–ಮಾಡಬೇಕಾದುದನ್ನು ಮಾಡಲು ಅಶಕ್ಯವಾದುದರಿಂದ ವಿಧೇಯ–ಮಾಡಲ್ಪಡತಕ್ಕ. ವಿ+ಧಾ (೩. ಉ) ಧಾತುವಿನ ಕರ್ಮಣಿ ವಿಧ್ಯರ್ಥ ಧಾ. ಸಾ. ವಿ. ವಿಧೇಯಸ್ಯ ಅಶಕ್ಯತ್ವಂ ವಿಧೇಯಾಶಕ್ಯತ್ವಮ್ (ಷ. ತ. ಸ.) ತಸ್ಮಾತ್ । ತವ ಚರಣಯೋಃ ಯಾ ಚ್ಯುತಿಃ ಅಭೂತ್–ನಿನ್ನ ಚರಣಸೇವೆಯಲ್ಲಿ ಯಾವ ತಪ್ಪಾಯಿತೋ. ಚರಣ (ಪು.ನ)—ಪಾದ. ಚ್ಯುತಿ (ಸ್ತ್ರೀ)— ತಪ್ಪು. ಅಭೂತ್—ಆಯಿತು. ಭೂ. (೧.ಪ.)ಧಾತುವಿನ ತೃ. ಭೂ. ತೃ. ಪು. ಏ. ವ. ಕ್ಷಂತವ್ಯಂ–ಕ್ಷಮಿಸಲ್ಪಡಬೇಕು. ಕ್ಷಮ್ (೧. ಆ, ೪. ಪ) ಧಾತುವಿನ ಕರ್ಮಣಿ ವಿಧ್ಯರ್ಥ ಧಾ. ಸಾ. ವಿ. (ನ) ಪ್ರ. ಏ. ವ. ಕುಪುತ್ರಃ ಜಾಯೇತ — ಕೆಟ್ಟ ಮಗನು ಹುಟ್ಟಬಹುದು. ಕುಪುತ್ರಃ–ಕೆಟ್ಟ ಮಗ. ಕುತ್ಸಿತಃ ಪುತ್ರಃ (ಕ. ಸ.) ಜಾಯೇತ–ಹುಟ್ಟಬಹುದು. ಜನ್ (೪. ಆ ) ಧಾತುವಿನ ವಿಧ್ಯರ್ಥ ತೃ. ಪು. ಏ. ವ. ಕ್ವಚಿತ್ ಅಪಿ–ಎಲ್ಲಿಯೂ; ಎಂದೂ ಕುಮಾತಾ–ಕೆಟ್ಟ ತಾಯಿ. ಕುತ್ಸಿತಾ ಮಾತಾ (ಕ. ಸ)

೩. ಅನ್ವಯ:— ಜನನಿ, ಶಿವೇ, ಪೃಥಿವ್ಯಾಂ ಬಹವಃ (ತವ.) ಸರಲಾಃ ಪುತ್ರಾಃ ಸಂತಿ । ಪರಂ ತೇಷಾಂ ಮಧ್ಯೇ ತವ ಸುತಃ ಅಹಂ ವಿರಲತರಲಃ । ಮದೀಯಃ ಅಯಂ ತ್ಯಾಗಃ ತವ ಇದಂ ನ ಸಮುಚಿತಮ್ । ಕುಪುತ್ರಃ ಜಾಯೇತ ಕುಮಾತಾ ಕ್ವಚಿತ್ ಅಪಿ ನ ಭವತಿ ।

ಭಾಷಾಂತರ:— ತಾಯಿಯಾದ ಪಾರ್ವತಿಯೇ, ಭೂಮಿಯ ಮೇಲೆ (ನಿನಗೆ) ಸಭ್ಯವೃತ್ತಿಯ ಅನೇಕ ಮಕ್ಕಳಿದ್ದಾರೆ, ಆದರೆ ಅವರೊಳಗೆ, ನಿನ್ನ ಮಗನಾದ ಈ ನಾನು ಶಿಥಿಲ ಹಾಗೂ ಚಂಚಲವೃತ್ತಿಯವನು ಇರುವೆ. ಈ

ನನ್ನನ್ನು ಬಿಡುವದು ನಿನಗೆ ಯೋಗ್ಯವಲ್ಲ. ಕೆಟ್ಟ ಮಗನು ಹುಟ್ಟಬಹುದು; ಆದರೆ ಕೆಟ್ಟ ತಾಯಿಯು ಎಂದೂ (ಎಲ್ಲಿಯೂ) ಇರುವದಿಲ್ಲ.

ಟಿಪ್ಪಣಿ:— ಸರಲಾಃ–ಸರಳವೃತ್ತಿಯ. ಸರಳಸ್ವಭಾವದ. ಸಭ್ಯ-ವೃತ್ತಿಯ, ಪರಂ–ಆದರೆ. ವಿರಲತರಲಃ–ಶಿಥಿಲ ಹಾಗೂ ಚಂಚಲವೃತ್ತಿ-ಯುವ. ವಿರಲ–ವಿರಳ. ಶಿಥಿಲ (*loose*). ತರಲ–ಚಂಚಲ. ವಿರಲಶ್ಚಾಸೌ ತರಲಶ್ಚ ವಿರಲತರಲಃ (ಕ. ಸ.) ಮದೀಯಃ ತ್ಯಾಗಃ–ನನ್ನನ್ನು ಬಿಡುವದು. ಸಮುಚಿತ–ಯೋಗ್ಯ.

೪. ಅನ್ವಯ:— ಜಗನ್ಮಾತಃ, ತವ ಚರಣಸೇವಾ ನ ರಚಿತಾ। ಮಾತಃ, ಭೂಯಃ ದ್ರವಿಣಂ ಅಪಿ ಮಯಾ ನ ವಾ ದತ್ತಮ್। ತಥಾಪಿ ತ್ವಂ ಮಯಿ ನಿರುಪಮಂ ಸ್ನೇಹಂ ಕುರುಷೇ। ಕುಪುತ್ರಃ ಜಾಯೇತ, ಕ್ವಚಿದಪಿ ಕುಮಾತಾ ನ ಭವತಿ।

ಭಾಷಾಂತರ:— ಜಗದಂಬೆಯೇ, ನಾನು ನಿನ್ನ ಚರಣಸೇವೆ ಮಾಡ-ಲಿಲ್ಲ; ತಾಯೀ, ಹೆಚ್ಚು ಹಣವನ್ನೂ ನಾನು ನಿನಗೆ ಅರ್ಪಿಸಲಿಲ್ಲ; ಆದರೂ ನೀನು ನನ್ನಲ್ಲಿ ಅನುಪಮವಾದ ಪ್ರೀತಿಯನ್ನು ಮಾಡುವಿ. (ಏಕೆಂದರೆ), ಕೆಟ್ಟ ಮಗನು ಹುಟ್ಟಬಹುದು; (ಆದರೆ) ಕೆಟ್ಟ ತಾಯಿಯು ಎಲ್ಲಿಯೂ (ಎಂದೂ) ಇರುವದಿಲ್ಲ.

ಟಿಪ್ಪಣಿ:— ಜಗನ್ಮಾತಃ– ಜಗದಂಬೆಯೇ. ಜಗತಃ ಮಾತಾ ಜಗ-ನ್ಮಾತಾ. (ಷ. ತ. ಸ) ತಸ್ಯಾಃ ಸಂಬೋಧನಂ. ಚರಣಸೇವಾ–ಪಾದಸೇವೆ, ಚರಣಯೋಃ ಸೇವಾ (ಷ. ತ. ಸ.) ಭೂಯಃ ದ್ರವಿಣಂ–ಹೆಚ್ಚು ಹಣ. ಭೂಯಃ–ಹೆಚ್ಚು. ಬಹು ಶಬ್ದದ ತರವಾಚಕ ವಿಶೇಷಣ ಬಹು, ಭೂಯಸ್ ಭೂಯಿಷ್ಠ. ದ್ರವಿಣಂ–ಹಣ ಮಯಾ ನ ದತ್ತಂ (ಕರ್ಮಣಿ) ಅಹಂ ನ ದತ್ತವಾನ್ (ಕರ್ತರಿ), ತಥಾಪಿ–ಹೀಗಿದ್ದರೂ. ಹಾಗಾದರೂ. ನಿರುಪಮಂ (ಸ್ನೇಹಂ)–ನಿರ್ಗತಾ ಉಪಮಾ ಯಸ್ಮಾತ್ ಸಃ ನಿರುಪಮಃ (ಪ್ರಾದಿ ಬ. ಸ.) ತಂ. ಮಯಿ–ನನ್ನಲ್ಲಿ. ನನ್ನ ಮೇಲೆ, ಸ್ನೇಹ ಶಬ್ದವು ಸ್ನಿಹ್ (೪. ಪ) ಧಾತುವಿನಿಂದ ಆಗಿದೆ. ಆದ್ದರಿಂದ ಸಪ್ತಮೀ ವಿಭಕ್ತಿ ತೆಗೆದುಕೊಂಡಿದೆ. ಉದಾ:— ಜನಕಃ ಪುತ್ರೇ ಸ್ನಿಹ್ಯತಿ; ಪುತ್ರೇ ಮಾತುಃ ಅತಿಶಯಃ ಸ್ನೇಹಃ ಅಸ್ತಿ। ಶಕುಂತಲಾ ಆಶ್ರಮಪಾದಪೇಷು ಸೋದರೇ ಇವ ಸ್ನೇಹಂ ಕರೋತಿ।

೫. ಅನ್ವಯ:— ಲಂಬೋದರಜನನಿ, ವಿವಿಧವಿಧಸೇವಾಕುಲ-ತಯಾ ಪಂಚಾಶೀತೇಃ ಅಧಿಕಂ ವಯಸಿ ಅಪನೀತೇ, ಮಯಾ ದೇವಾಃ ಪರಿತ್ಯಕ್ತಾಃ । [ಮಯಾ ದೇವಾನ್ ಪರಿತ್ಯಜ್ಯ (ಸ್ಥಿತಃ)] । ಮಾತಃ ಇದಾನೀಂ ತವ ಕೃಪಾ ಅಪಿ ನ ಭವಿತಾ ಚೇತ್ ನಿರಾಲಂಬಃ ಅಹಂ ಕಂ ಶರಣಂ ಯಾಮಿ ।

ಭಾಷಾಂತರ:— ಗಣಪತಿಯ ತಾಯಿಯಾದ ಪಾರ್ವತಿದೇವಿಯೇ, ನಾನಾಬಗೆಯ ಸೇವೆಯಲ್ಲಿ ತೊಡಗಿದ್ದರಿಂದ, ವಯಸ್ಸಿನ ೮೫ ಕ್ಕೆ ಹೆಚ್ಚು (ವರ್ಷ) ಕಾಲ ಕಳೆದ ಮೇಲೆ ನಾನು ದೇವರನ್ನು ಬಿಟ್ಟು ಬಿಟ್ಟೆನು. ತಾಯೀ, ಈಗ ನನ್ನ ಮೇಲೆ ನಿನ್ನ ದಯೆಯೂ ಇರದೆ ಇದ್ದರೆ, ನಿರಾಧಾರನಾದ ನಾನು ಯಾರಿಗೆ ಶರಣು ಹೋಗಲಿ ?

ಟಿಪ್ಪಣಿ:— 'ನಾನು ಈ ೮೫ ವರ್ಷಗಳವರೆಗೆ ದೇವರನ್ನು ವಿವಿಧ ಬಗೆಯಿಂದ ಆರಾಧಿಸಿದೆನು. ಅನೇಕ ರೀತಿಯಿಂದ ಅವರ ಸೇವೆ ಮಾಡಿದೆನು. ಆದರೆ ಅದರಿಂದ ಯಾವ ಪ್ರಯೋಜನವೂ ಆಗಲಿಲ್ಲ, ಆದ್ದರಿಂದ ಈಗ ದೇವರನ್ನು ಬಿಟ್ಟೆನು. ಕಾರಣ, ಅವರಿಂದ ಯಾವ ಸಹಾಯವೂ ದೊರೆಯುವದಿಲ್ಲ. ಅಂತೆಯೇ ದೇವರನ್ನು ಬಿಟ್ಟು ದೇವಿಯಾದ ನಿನ್ನೆಡೆಗೆ ಬಂದಿದ್ದೇನೆ. ನೀನು ನನ್ನ ಮೇಲೆ ದಯೆ ತೋರದೆ ಹೋದರೆ, ನಿರಾಧಾರನಾದ ನಾನು ಯಾರಿಗೆ ಶರಣುಹೋಗಲಿ ?' ಎಂಬ ಅಭಿಪ್ರಾಯವಿದೆ.

ಪರಿತ್ಯಕ್ತ್ವಾದೇವಾನ್ ಎಂಬ ಪಾಠ ಅಷ್ಟೊಂದು ಸಮಂಜಸವಾಗಿ ತೋರುವದಿಲ್ಲ. ಗೋರಖಪುರದ ಪುಸ್ತಕದಲ್ಲಿದ್ದಂತೆ ಪರಿತ್ಯಕ್ತಾದೇವಾ. ಎಂಬ ಪಾಠ ಇಟ್ಟುಕೊಳ್ಳುವದು ಒಳಿತು. ಮೇಲಾಗಿ ಪರಿತ್ಯಕ್ತ್ವಾ ಎಂಬುದು ಶುದ್ಧ ರೂಪವಲ್ಲ. ಪರಿತ್ಯಜ್ಯ ಎಂಬುದು ಶುದ್ಧರೂಪ. ಪರಿ+ತ್ಯಜ್ (೬. ಪ) ಧಾತುವಿನ ಲ್ಯಬಂತಾವ್ಯಯ.

ಲಂಬೋದರಜನನಿ–ಗಣಪತಿಯ ತಾಯಿಯೇ, ಲಂಬೋದರ ಎಂಬದು ಗಣಗತಿಯ ಹೆಸರು, ಲಂಬೋದರಸ್ಯ ಜನನೀ ಲಂಬೋದರ ಜನನೀ(ಷ.ತ.ಸ.) ತಸ್ಯಾಃ ಸಂಬೋಧನಂ. ವಿವಿಧವಿಧಸೇವಾಕುಲತಯಾ ಬಗೆಬಗೆಯ ಸೇವೆಯಲ್ಲಿ ತೊಡಗಿದ್ದರಿಂದ ವಿವಿಧಾಃ ವಿಧಾಃ ಯಸ್ಯಾಃ ಸಾ ವಿವಿಧವಿಧಾ (ಬ. ಸ.) ವಿವಿಧವಿಧಾ ಸೇವಾ ವಿವಿಧವಿಧಸೇವಾ (ಕ. ಸ.) ತಯಾ ಆಕುಲಃ (ತೃ. ತ.) ತಸ್ಯ ಭಾವಃ (ತದ್ಧಿತ) ತಯಾ ಪಂಚಾಶೀತೇಃ ಅಧಿಕಂ ಅಪನೀತೇ

ಲಿಕ್ಕಿಂತ ಹೆಚ್ಚುಕಾಲ ಸಂದಿಹೋದಮೇಲೆ ತವಕೃಪಾನೋ ಭವಿತಾ ಚೇತ್- ನಿನ್ನ ಕೃಪೆ (ದಯೆ) ದೊರೆಯದೆ ಹೋದರೆ, **ಭವಿತಾ**-ಭೂ (೧. ಪ) ಧಾತು ವಿನ ಪ್ರ. ಭ. ತೃ. ಪು. ಏ. ವ. ನಿರಾಲಂಬಃ – ನಿರಾಧಾರನಾದ ನಿರ್ಗತಃ ಆಲಂಬಃ ಯಸ್ಮಾತ್ ಸಃ (ಬ.ಸ) ಕಂ ಶರಣಂ ಯಾಮಿ– (ಯಾರಿಗೆ ಶರಣ ಹೋಗಲಿ). (ಕರ್ತರಿ)– ಕಃ ಶರಣಂ ಮಯಾ ಯಾಯತೇ (ಕರ್ಮಣಿ).

**ಪುಟ ೪೮.** ೬. ಅನ್ವಯ:- ಭವಾನಿ, ಚಿತಾಭಸ್ಮಾಲೇಪಃ, ಗರಲಂ ಅಶನಂ (ಯಸ್ಯ), ದಿಕ್ಪಟಧರಃ, ಜಟಾಧಾರೀ, ಕಂಠೇ ಭುಜಗಪತಿಹಾರೀ, ಕಪಾಲೀ, ಭೂತೇಶಃ, ಪಶುಪತಿಃ ಜಗದೀಶೈಕಪದವೀಂ ಭಜತಿ। ಇದಂ ತ್ವತ್ಪಾಣಿಗ್ರಹಣಪರಿಪಾಟೀಫಲಂ.

ಭಾಷಾಂತರ:— ಪಾರ್ವತಿಯೇ, ಚಿತೆಯ ಬೂದಿಯೇ ಆಲೇಪವಾಗಿ- ಯುಳ್ಳ (ಚಿತೆಯ ಬೂದಿಯನ್ನು ಹಚ್ಚಿಕೊಂಡ), ವಿಷವೇ ಆಹಾರವಾದ, ದಿಕ್ಕೆಂಬ ವಸ್ತ್ರಧರಿಸಿದ, ಜಡೆಯನ್ನು ಧಾರಣಮಾಡಿದ, ಕೊರಳೊಳಗೆ ವಾಸುಕಿ ಎಂಬ ಹಾರ ಹಾಕಿಕೊಂಡ, ಭಿಕ್ಷಾಪಾತ್ರೆಯುಳ್ಳ, ಪಿಶಾಚಿಗಳ ಒಡೆಯ ನಾದ ಶಿವನು (ಪಶುಪತಿ) ಜಗದೀಶನೆಂಬ ಮುಖ್ಯ ಬಿರುದನ್ನು ದೊರಕಿಸಿ- ದ್ದಾನೆ. ಇದು ನಿನ್ನನ್ನು ಲಗ್ನಮಾಡಿಕೊಳ್ಳುವ ಮಾರ್ಗವನ್ನವಲಂಬಿಸಿದುದರ ಫಲವು (ಶಬ್ದಶಃ ನಿನ್ನ ವಿವಾಹಮಾರ್ಗದ ಫಲವು.)

ಟಿಪ್ಪಣಿ:— ಶಿವನಿಗೆ ಜಗದೀಶನೆಂಬ ಬಿರುದು ಬರಲಿಕ್ಕೆ ನೀನೇ ಮುಖ್ಯ ಕಾರಣ ಎಂದು ಆಚಾರ್ಯರಿಗೆ ಹೇಳಬೇಕಾಗಿದೆ. ಅದನ್ನೇ ಪರ್ಯಾಯದಿಂದ ಹೇಳುತ್ತಾರೆ. ಮೈತುಂಬ ಹೆಣದಬೂದಿ ಬಳಿದುಕೊಂಡರೂ ವಿಷವನ್ನು ಸೇವಿಸಿದರೂ, ದಿಗಂಬರನಾದರೂ, ಜಟಾಧಾರಣ ಮಾಡಿದರೂ, ಕೊರಳೊಳಗೆ ಹಾವನ್ನು ಧರಿಸಿದರೂ, ಭಿಕ್ಷಾಪಾತ್ರೆ ಧರಿಸಿದರೂ, ಕೂಡ ಶಿವನಿಗೆ ಜಗದೀಶನೆಂಬ ಏಕಮೇವ ಬಿರುದು ಬಂದಿದೆ. ಇದಕ್ಕೆ ಕಾರಣ ವೆಂದರೆ ನಿನ್ನ ಪಾಣಿಗ್ರಹಣ, ನಿನ್ನಿಂದಲೇ ಆತನಿಗೆ ಇಷ್ಟು ಮಹತಿ ಬಂದಿವೆ ಎಂಬ ಅಭಿಪ್ರಾಯವಿದೆ.

ಭವಾನಿ – ಪಾರ್ವತಿಯೇ ಚಿತಾಭಸ್ಮಾಲೇಪಃ — ಚಿತಾಬೂದಿಯೇ ಆಲೇಪವಾಗಿಯುಳ್ಳವ. ಚಿತಾಯಾಃ ಭಸ್ಮ ಚಿತಾಭಸ್ಮ (ಷ. ತ. ಸ.) ತೇನ ಆಲೇಪಃ ಯಸ್ಯ ಸಃ) (ಬ.ಸ.) ಗರಲಂ - ಕಾಲಕೂಟ ವಿಷ. ಜಗತ್ತ ನ್ನೆಲ್ಲ ತನ್ನ ಉಗ್ರತೆಯಿಂದ ಬೆದರಿಸಿದ, ಸಮುದ್ರದಿಂದ ಹೊರಟ ಕಾಲಕೂಟ ವೆಂಬ ಗಳನೇ ರತ್ನವನ್ನು, ಲೋಕಕಲ್ಯಾಣಾರ್ಥವಾಗಿ ಶಿವನು ಕುಡಿದು

ಬಿಟ್ಟನು. ಅಶನಂ—ಆಹಾರ. ದಿಕ್ಪಟಧರಃ— ದಿಕ್ ಏವ ಪಟಃ ದಿಕ್ಪಟಃ (ಕ.ಸ.) ತಸ್ಯ ಧರಃ (ಷ.ತ.ಸ.) ದಿಕ್ಕೆಂಬ ವಸ್ತ್ರ ಧರಿಸಿದವನು. ಜಟಾಧಾರೀ—ಜಡೆಯನ್ನು ಧಾರಣಮಾಡಿದ. ಜಟಾಂ ಧಾರಯತಿ ಇತಿ (ಉಪ.ತ.) ಕಂಠೇ—ಕೊರಳಲ್ಲಿ, ಭುಜಗಪತಿಹಾರಃ – ಭುಜಗಾನಾಂ ಪತಿಃ ಭುಜಗಪತಿಃ (ಷ. ತ. ಸ.) ಸಃ ಏವ ಹಾರಃ ಭುಜಗಪತಿಹಾರಃ (ಕ. ಸ.) ಸಃ ಅಸ್ಯ ಅಸ್ತಿ ಇತಿ (ತದ್ಧಿತ) ಶಿವನು ಕೊರಳಲ್ಲಿ ಸರ್ಪಗಳ ಒಡೆಯನಾದ ವಾಸುಕಿಯನ್ನು ಹಾರವೆಂದು ಧರಿಸಿದ್ದಾನೆ. ಕಪಾಲೀ—ಕಪಾಲಃ ಅಸ್ಯ ಅಸ್ತಿ ಇತಿ (ತದ್ಧಿತ) ಭಿಕ್ಷಾಪಾತ್ರೆಯುಳ್ಳ ಕಪಾಲ (ಪು. ನ) — ಭಿಕ್ಷಾಪಾತ್ರೆ, ತಲೆಬುರುಡೆ, ಭೂತೇಶಃ—ಪಿಶಾಚಿಗಳ ಒಡೆಯ. ಭೂತಾನಾಂ ಈಶಃ (ಷ. ತ. ಸ.) ಭೂತಂ-ಪಿಶಾಚಿ. ಪಶುಪತಿಃ—ಪ್ರಾಣಿಗಳ ಒಡೆಯನಾದ ಶಿವ. ಪಶೂನಾಂ ಪತಿಃ(ಷ.ತ.ಸ.)ಜಗದೀಶೈಕಪದವೀಂ—ಏಕಾ(ಮುಖ್ಯಾ)ಪದವೀ ಏಕಪದವೀ (ಕ. ಸ.) ಜಗತಃ ಈಶಃ ಜಗದೀಶಃ (ಷ.ತ.ಸ.) ಜಗದೀಶಃ ಇತಿ ಏಕಪದವೀ ಜಗದೀಶೈಕಪದವೀ (ಕ. ಸ.) ತಾಂ. ಜಗದೀಶನೆಂಬ ಮುಖ್ಯ ಪದವಿಯನ್ನು ಭಜತಿ—ಪಡೆದಿದ್ದಾನೆ. ಇದಂ—ಇದು. ಈ ಪದವಿ ದೊರೆತದ್ದು. ತ್ವತ್ಪಾಣಿಪರಿಗ್ರಹಣಪರಿಪಾಟೀಫಲಂ—ನಿನ್ನ ವಿವಾಹಮಾರ್ಗದ ಫಲ. ನಿನ್ನ ವಿವಾಹ ಮಾರ್ಗ ಅವಲಂಬನ ಇಲ್ಲವೆ ಸ್ವೀಕಾರ ಮಾಡಿದುದರ ಫಲ. ಅರ್ಥಾತ್ ನಿನ್ನ ಮಹಿಮೆಯೇ ಇದಕ್ಕೆ ಕಾರಣವೆಂದು ಅಭಿಪ್ರಾಯ. ಪಾಣೇಃ ಗ್ರಹಣಂ ಪಾಣಿಗ್ರಹಣಂ (ಷ. ತ. ಸ.) ತವ ಪಾಣಿಗ್ರಹಣಂ ತ್ವತ್ಪಾಣಿಗ್ರಹಣಂ (ಷ. ತ. ಸ.) ತಸ್ಯ ಪರಿಪಾಟೀ (ಷ. ತ. ಸ.) ತಸ್ಯಾಃ ಫಲಃ (ಷ. ತ. ಸ.) ಪರಿಪಾಟೀ(ಸ್ತ್ರೀ)—ಮಾರ್ಗ. ದಾರಿ ರೀತಿ.

೭. ಅನ್ವಯ:— ಶಶಿಮುಖಿ, ಜನನಿ, ಮೇ ಮೋಕ್ಷಸ್ಯ ಆಕಾಂಕ್ಷಾ ನ (ಅಸ್ತಿ), ವಿಭವವಾಂಛಾ ಅಪಿನ, ವಿಜ್ಞಾನಾಪೇಕ್ಷಾ ಚ ನ, ಸುಖೇಚ್ಛಾ ಅಪಿ ಪುನಃ ನ। (ಅತಃ) ಮೃಡಾನೀ, ರುದ್ರಾಣೀ ಶಿವ, ಶಿವ, ಭವಾನೀ ಇತಿ ಜಪತಃ ಮಮ ಜನನಂ ವೈ ಯಾತು ಇತಿ ತ್ವಾಂ ಸಂ ಯಾಚೇ।

ಭಾಷಾಂತರ :— ಚಂದ್ರನಂತೆ ಮುಖವುಳ್ಳ ತಾಯಿಯೇ, ನನಗೆ ಮೋಕ್ಷದ ಅಪೇಕ್ಷೆ ಇಲ್ಲ, ಸಂಪತ್ತಿನ ಅಭಿಲಾಷೆಯೂ ಇಲ್ಲ, ವಿಜ್ಞಾನದ (ವಿಜ್ಞಾನ ದೊರೆಯಬೇಕೆನ್ನುವ) ಅಪೇಕ್ಷೆಯೂ ಇಲ್ಲ; ಸುಖದ ಇಚ್ಛೆಯೂ ಇಲ್ಲ; ಮೃಡಾನೀ, ರುದ್ರಾಣೀ, ಶಿವ, ಶಿವ ಭವಾನೀ, ಎಂದು ಜಪಿಸುವ ನನ್ನ ಜನ್ಮವು ಹೋಗಬೇಕು ಎಂದು ನಿನ್ನನ್ನು ಬೇಡಿಕೊಳ್ಳುತ್ತೇನೆ.

ಟಿಪ್ಪಣಿ:— ನನ್ನ ಜನ್ಮವನ್ನು ನೀಗಿಸು, ಅರ್ಥಾತ್ ಪುನರ್ಜನ್ಮ ಬರ-ದಂತೆ ಸಂಸಾರಸಾಗರದಿಂದ ಮೋಚನಗೊಳಿಸು ಎಂದು ಶಂಕರಾಚಾರ್ಯರು ಪಾರ್ವತಿಗೆ ಬೇಡಿಕೊಳ್ಳುತ್ತಾರೆ.

ಶಶಿಮುಖಿ—ಶಶೀ ಇವ ಮುಖಂ ಯಸ್ಯಾಃ ಸಾ ಶಶಿಮುಖೀ (ಬ.ಸ.) ತಸ್ಯಾಃ ಸಂಬೋಧನಂ। ಚಂದ್ರನಂತೆ ಮುಖವುಳ್ಳವಳೇ ಮೋಕ್ಷ—ದುಃಖದ ಲವಲೇಶವೂ ಇಲ್ಲದ ಕೇವಲ ಸುಖಮಯವಾದ ಶಾಶ್ವತ ಸ್ಥಾನ. ವಿಭವ ವಾಂಛಾ— ಸಂಪತ್ತಿನ ಅಭಿಲಾಷೆ. ವಿಭವಃ—ಸಂಪತ್ತು. ಐಹಿಕ ಸಂಪತ್ತು. ವಿಭವಸ್ಯ ವಾಂಛಾ (ಷ.ತ.ಸ) ವಿಜ್ಞಾನಾಪೇಕ್ಷಾ—ವಿಜ್ಞಾನ ದೊರೆಯಬೇಕೆಂಬ ಇಚ್ಛೆ ವಿಜ್ಞಾನಸ್ಯ ಅಪೇಕ್ಷಾ (ಷ.ತ ಸ.) ವಿಶಿಷ್ಟಂ ಜ್ಞಾನಂ ವಿಜ್ಞಾನಂ (ಪ್ರಾದಿ.ತ.ಸ.) ಪರಬ್ರಹ್ಮನ ವಿಷಯವಾಗಿ ಶಾಸ್ತ್ರದಿಂದ ಹುಟ್ಟಿದ ಜ್ಞಾನಕ್ಕೆ ಜ್ಞಾನ ಎಂದೂ, ಈ ಜಗತ್ತಿನ ವಿಷಯವಾಗಿ ಅನುಭವದಿಂದ ಹುಟ್ಟಿದ ಜ್ಞಾನಕ್ಕೆ ವಿಜ್ಞಾನ ಎಂದೂ ಹೇಳುತ್ತಾರೆ. ಸುಖಸ್ಯ ಇಚ್ಛಾ ಸುಖೇಚ್ಛಾ (ಷ.ತ.ಸ.) ಮೃಡಾನೀ, ರುದ್ರಾಣೀ ಭವಾನೀ, ಎಂಬವು ಪಾರ್ವತಿಯ ಹೆಸರುಗಳು. ಶಿವ—ಶಂಕರ, ಇಲ್ಲಿ ಐದೂ ಮೂಲ ಹೆಸರುಗಳನ್ನು ತೆಗೆದುಕೊಂಡಿವೆ ಆದ್ದರಿಂದ ಅವಕ್ಕೆ ವಿಭಕ್ತಿಪ್ರತ್ಯಯಗಳು ಸೇರಿಲ್ಲ. ಇತಿ ಜಪತಃ ಮಮ ಜನ್ಮ ಯಾತು—ಹೀಗೆ ಜಪಿಸುವ ನನ್ನ ಜನ್ಮವು ಹೋಗಲಿ ಅರ್ಥಾತ್ ಪುನರ್ಜನ್ಮ ಬರದಂತೆ ನನ್ನ ಈ ಜನ್ಮವನ್ನು ನೀಗಿಸು. ಎಂಬ ಅಭಿಪ್ರಾಯವಿದೆ.

೮. ಅನ್ವಯ:— ಶ್ಯಾಮೇ, ವಿವಿಧೋಪಚಾರೈಃ ವಿಧಿನಾ ನ ಆರಾಧಿತಾ ಅಸಿ। ರೂಕ್ಷಚಿಂತನಪರೈಃ ವಚೋಭಿಃ (ಮಯಾ) ಕಿಂ ನ ಕೃತಮ್ ಅನಾಥೇ ಮಯಿ ತ್ವಂ ಏವ ಯದಿ ಕಿಂಚನ ಕೃಪಾಂ ಧತ್ಸೇ (ತರ್ಹಿ) ಅಂಬ ತವ ಪರಂ ಉಚಿತಂ ಏವ।

ಭಾಷಾಂತರ:— ದೇವೀ, ಬೇರೆ ಬೇರೆ ಉಪಚಾರಗಳಿಂದ ವಿಧಿಪೂರ್ವಕವಾಗಿ ನಿನ್ನನ್ನು ನಾನು ಪೂಜಿಸಿಲ್ಲ; ಕಠೋರ ಇಲ್ಲವೆ (ನೀರಸ) ಭಾವನೆಯುಳ್ಳ ಶಬ್ದಗಳಿಂದ ನಾನು ಏನು ಮಾಡಿಲ್ಲ? (ಆದರೂ) ಅನಾಥನಾದ ನನ್ನ ಮೇಲೆ ತುಸು ದಯೆ ತೋರಿದರೆ, ಅದು ತಾಯೀ ನಿನಗೆ ಅತ್ಯಂತ ಯೋಗ್ಯವಾಗಿದೆ.

ಟಿಪ್ಪಣಿ:— ಶ್ಯಾಮೇ— ಪಾರ್ವತಿಯೇ. ದೇವಿಯ ವರ್ಣ ಕಪ್ಪು ಇದ್ದುದರಿಂದ ಅವಳಿಗೆ ಶ್ಯಾಮಾ, ಕಾಲೀ, ಮುಂತಾದ ಹೆಸರುಗಳು ಬಂದಿವೆ.

ವಿವಿಧೋಪಚಾರೈಃ— ಅನೇಕ ಉಪಚಾರಗಳಿಂದ ವಿವಿಧಾಃ ಉಪಚಾರಾಃ (ಕ ಸ.) ತೈಃ। ದೇವರನ್ನು ಗಂಧ, ಪುಷ್ಪ, ಧೂಪ, ದೀಪ, ಮುಂತಾದ ಸಾಮಗ್ರಿಗಳಿಂದ ಪೂಜಿಸಲು ಬರುತ್ತದೆ. ಗಂಧದಿಂದ ಪೂಜಿಸುವದಕ್ಕೆ ಗಂಧೋಪಚಾರ ಎಂದೂ, ಹೂಗಳಿಂದ ಪೂಜಿಸುವದಕ್ಕೆ ಪುಷ್ಪೋಪಚಾರ ಎಂದು ಮುಂತಾಗಿ ಹೇಳುವರು. ಮುಖ್ಯವಾಗಿ ೧೬ ಉಪಚಾರಗಳಿವೆ. ಈ ೧೬ ಉಪಚಾರಗಳಿಂದ ನಿತ್ಯವಲ್ಲಿ ದೇವರನ್ನು ಪೂಜಿಸಬೇಕು. ವಿಧಿನಾ—ವಿಧಿ ಪೂರ್ವಕವಾಗಿ ನಿಯಮಾನುಸಾರವಾಗಿ ವಿಧ್ಯುಕ್ತ ರೀತಿಯಂತೆ ಆರಾಧಿತಾ-ಪೂಜಿತಾ. ಆ+ರಾಧ್ (೧೦.ಪ) ಧಾತುವಿನ ಕರ್ಮಣಿ ಭೂ. ಧಾ. ವಿ. (ಸ್ತ್ರೀ) ಪ್ರ.ಏ.ವ. ಅಹಂ ವಿವಿಧೋಪಚಾರೈಃ ತ್ವಾಂ ನ ಆರಾಧಿತವಾನ್ ಎಂಬದು ಕರ್ತರಿ ಪ್ರಯೋಗ. ರೂಕ್ಷಚಿಂತನಪರೈಃ — ಕಠೋರ ವಿಚಾರ ಪುಳ ಶಬ್ದಗಳಿಂದ ರೂಕ್ಷ—ಕಠೋರ. ನೀರಸ, ಚಿಂತನಂ—ಧ್ಯಾನಂ ವಿಚಾರ. ರೂಕ್ಷಂ ಚಿಂತನಂ ರೂಕ್ಷಚಿಂತನಂ (ಕ.ಸ) ರೂಕ್ಷಚಿಂತನಂ ಪರಂ ಯೇಷಾಂ ತಾನಿ ರೂಕ್ಷಚಿಂತನಪರಾಣಿ (ಬ.ಸ.) ತೈಃ ವಚೋಭಿಃ—ಮಾತುಗಳಿಂದ ವಚಸ್ (ನ) ಶಬ್ದದ ತೃ. ಬ. ವ. ನಾನು ಶುಷ್ಕ ಇಲ್ಲ ಕಠೋರ ಭಾವನೆಯುಳ್ಳ ಶಬ್ದಗಳಿಂದ ಏನು ಮಾಡಿಲ್ಲ. ಅನೇಕ ಕಠೋರ ಶಬ್ದಗಳನ್ನು ಆಡಿರುವೆ ಎಂದರೆ ನಾನು ಕಿಂಚನ (ಅವ್ಯಯ)—ತುಸು. ಯದಿಧತ್ಸೇ—ಧರಿಸಿದರೆ, ತಾಳಿದರೆ ಧಾ (೩.ಉ) ಧಾತುವಿನ ವರ್ತಮಾನಕಾಲ ದ್ವಿ. ಪು. ಏ. ವ. ಉಚಿತ-ಯೋಗ್ಯ. ಅಂಬ—ತಾಯಿಯೇ ಅಂಬಾ ಶಬ್ದದ ಸಂಬೋಧನ ಏ.ವ.

೯. ಅನ್ವಯ:— ಕರುಣಾರ್ಣವೇ, ಶಿವೇ, ದುರ್ಗೇ, ಆಪತ್ಸು ಮಗ್ನಃ ತ್ವದೀಯಂ ಸ್ಮರಣಂ ಕರೋಮಿ। ಏತತ್ ಮಮ ಶಠತ್ವಂ ನ ಭಾವಯೇಥಾಃ। ಕ್ಷುಧಾ—ತೃಷಾರ್ತಾಃ ಜನನೀಂ ಸ್ಮರಂತಿ।

ಭಾಷಾಂತರ:— ಕೃಪಾಸಮುದ್ರಳಾದ, ಮಂಗಲವನ್ನುಂಟುಮಾಡುವ ದುರ್ಗಾದೇವಿಯೇ, ಸಂಕಟಗಳಲ್ಲಿ ಮುಳುಗಿದ ನಾನು ನಿನ್ನನ್ನು ಸ್ಮರಿಸುತ್ತೇನೆ. ಇದು ನನ್ನ ಠಕ್ಕತನವೆಂದು ತಿಳಿಯಬೇಡ. ಹಸಿವೆ—ನೀರಡಿಕೆಗಳಿಂದ ಬಳಲುವವರು ತಾಯಿಯನ್ನು ನೆನೆಯುವರು.

ಟಿಪ್ಪಣಿ:— ಕರುಣಾರ್ಣವೇ—ದಯಾಸಮುದ್ರಳೇ, ಕರುಣಾ ಅರ್ಣವಃ ಇವ ಯಸ್ಯಾಃ ಸಾ ಅಥವಾ ಕರುಣಾ ಏವ ಅರ್ಣವಃ ಯಸ್ಯಾಃ ಸಾ ಕರುಣಾ

ರ್ಣವಾ (ಬ. ಸ.) ತಸ್ಯಾಃ ಸಂಬೋಧನಂ. ಅರ್ಣವಃ–ಸಮುದ್ರ. ಆಪತ್ಸು–ಆಪತ್ತುಗಳಲ್ಲಿ ಆಪದ್ (ಸ್ತ್ರೀ) ಶಬ್ದದ ಸ. ಬ. ವ. ಮಗ್ನಃ–ಮುಳುಗಿದ. ಮಸ್ಜ್ (೬. ಪ) ಧಾತುವಿನ ಕರ್ಮಣಿ ಭೂ. ಧಾ. ವಿ. (ಪು) ಪ್ರ. ಏ. ವ. ತ್ವದೀಯ–ನಿನ್ನ, ನಿನ್ನ ಸಂಬಂಧಿಕವಾದ ಶಠತ್ವಂ– ಠಕ್ಕತನ. ಮೋಸ ನ ಭಾವಯೇಥಾಃ–ತಿಳಿಯಬೇಡ, ಭಾವ್ಯಯೇಥಾಃ–ಭೂ (೧.ಪ) ಧಾತುವಿನ ಪ್ರಯೋಜಕ ರೂಪದ ವಿಧ್ಯರ್ಥ ದ್ವಿ. ಪು. ಏ. ವ. ಭಾವಿಸಬೇಡ. ತಿಳಿಯಬೇಡ. ಕ್ಷುಧಾತೃಷಾರ್ತಾಃ – ಹಸಿವೆ ನೀರಡಿಕೆಗಳಿಂದ ಬಳಲಿದವರು. ಕ್ಷುಧಾ–ಹಸಿವೆ. ತೃಷಾ–ನೀರಡಿಕೆ. ಕ್ಷುಧಾ ಚ ತೃಷಾ ಚ ಕ್ಷುಧಾತೃಷೇ (ದ್ವಂದ್ವ) ತಾಭ್ಯಾಂ ಆರ್ತಾಃ (ತೃ. ತ) ಜನನೀಂ ಸ್ಮರಂತಿ–ತಾಯಿಯನ್ನು ನೆನೆಯುತ್ತಾರೆ. (ಕರ್ತರಿ)–ಜನನೀ ಸ್ಮರ್ಯತೇ (ಕರ್ಮಣಿ).

೧೦. ಅನ್ವಯ:— ಜಗದಂಬ, ಮಯಿ ಪರಿಪೂರ್ಣಾ ಕರುಣಾ ಅಸ್ತಿ ಚೇತ್, ಅತ್ರ ವಿಚಿತ್ರಂ ಕಿಮ್। ಮಾತಾ ಹಿ ಅಪರಾಧಪರಂಪರಾವೃತಂ ಸುತಂ ನ ಸಮುಪೇಕ್ಷತೇ.

ಭಾಷಾಂತರ:— ಜಗನ್ಮಾತೇ, (ನಿನಗೆ) ನನ್ನ ಮೇಲೆ ಪೂರ್ಣ ಕೃಪೆ ಇದ್ದರೆ ಇದರಲ್ಲಿ ಆಶ್ಚರ್ಯವೇನು ? ಏಕೆಂದರೆ, ತಾಯಿಯು ಸಹಸ್ರಾರ ತಪ್ಪು ಮಾಡಿದ (ತಪ್ಪುಗಳ ಮೇಲೆ ತಪ್ಪು ಮಾಡಿದ) ಮಗನನ್ನು (ಕೂಡ) ಮರ್ಲಕ್ಷಿಸುವದಿಲ್ಲ.

ಟಿಪ್ಪಣಿ: — ಜಗದಂಬ- ಜಗನ್ಮಾತೇ, ಜಗತಃ ಅಂಬಾ ಜಗದಂಬಾ (ಷ.ತ.ಸ.)ತಸ್ಯಾಃ ಸಂಬೋಧನಂ ಪರಿಪೂರ್ಣ–ತುಂಬಾ, ಪೂರಾ, ಪೂರ್ಣವಾದ. ಕರುಣಾ — ದಯೆ ಕೃಪೆ. ಅತ್ರ ಇಲ್ಲಿ ಈ ವಿಷಯದಲ್ಲಿ ವಿಚಿತ್ರಂ-ಆಶ್ಚರ್ಯ. ಹಿ-ಏಕೆಂದರೆ ಅಪರಾಧ ಪರಂಪರಾವೃತಂ - ಸಹಸ್ರಾರು ತಪ್ಪುಗಳಿಂದ ಯುಕ್ತನಾದ. ಅಪರಾಧಾನಾಂ ಪರಂಪರಾ ಅಪರಾಧಪರಂಪರಾ (ಷ.ತ.ಸ.) ತಯಾ ಆವೃತಃ (ತೃ.ತ) ತಂ ನ ಸಮುಪೇಕ್ಷತೇ–ಮರ್ಲಕ್ಷಿಸುವದಿಲ್ಲ. ಸಮುಪೇಕ್ಷತೇ–ಸಮ್+ಉಪ+ಈಕ್ಷ್ (೧.ಆ) ಧಾತುವಿನ ವ. ತೃ. ಪು. ಏ. ವ.

೧೧. ಅನ್ವಯ: — ಮಹಾದೇವಿ, ಮತ್ಸಮಃ ಪಾತಕೀ ನ ಅಸ್ತಿ। ತ್ವತ್ಸಮಾ ಪಾಪಘ್ನೀ ನ ಹಿ। ಏವಂ ಜ್ಞಾತ್ವಾ, ಯಥಾ ಯೋಗ್ಯಂ ತಥಾ ಕುರು।

ಭಾಷಾಂತರ:—ಮಹಾದೇವಿಯೇ, ನನ್ನಂತಹ ಪಾಪಿಷ್ಠನಿಲ್ಲ ಮತ್ತು ನಿನ್ನಂತಹ ಪಾಪ ಪರಿಹರಿಸುವವರಿಲ್ಲ. ಹೀಗೆ ತಿಳಿದು, ಯೋಗ್ಯವೆನಿಸಿದಂತೆ (ಶಬ್ದಶಃ ಯೋಗ್ಯ ವಿದ್ದಂತೆ) ಮಾಡು.

ಟಿಪ್ಪಣಿ:—ಶಂಕರಾಚಾರ್ಯರು ಈ ವರೆಗೆ ತಾವು ಮಾಡಿದ ಅಪರಾಧಗಳನ್ನು ದೇವಿ ಪಾರ್ವತಿಯೆದುರಿಗೆ ನಿರೂಪಿಸಿ ಅವುಗಳಿಗಾಗಿ ಕ್ಷಮಿಸಬೇಕೆಂದು ಬೇಡಿಕೊಂಡಿದ್ದರು. ಈ ಕೊನೆಯ ಶ್ಲೋಕದಲ್ಲಿ ಯಾರೂ ತಮ್ಮಂತಹ ಪಾಪಿಷ್ಠರಿಲ್ಲವೆಂದೂ, ಪಾರ್ವತಿಗೆ ಸದೃಶರಾದ ಪಾಪ ಪರಿಹರಿಸುವವರಿಲ್ಲವೆಂದೂ ಹೇಳಿ, 'ತಾಯೀ, ಹೀಗೆ ತಿಳಿದು ನಿನಗೆ ಯೋಗ್ಯವೆನಿಸಿದಂತೆ ಮಾಡು' ಎಂದು ಸ್ತೋತ್ರ ಮುಗಿಸುವರು.

ಮಹಾದೇವಿ— ಮಹಾದೇವಿಯೇ ಪಾರ್ವತಿಯೇ ಮಹಾದೇವೀ ತಸ್ಯಾಃ ಸಂಬೋಧನಮ್ ಮಹತ್ ಶಬ್ದ ಕರ್ಮಧಾರಯ ಇಲ್ಲವೆ ಬಹುವ್ರೀಹಿ ಸಮಾಸದ ಪೂರ್ವಪದವಿದ್ದಾಗ ಮಹಾ ಎಂಬ ರೂಪ ತಾಳುತ್ತದೆ. ಮತ್ಸಮಃ—ನನ್ನಂತಹ ನನಗೆ ಸಮಾನನಾದ. ಮಯಾ ಸಮಃ (ತೃ. ತ.) ಅಥವಾ ಮಮ ಸಮಃ (ಷ ತ. ಸ.) ಪಾತಕೀ ಪಾಪಿಷ್ಠ ಪಾತಕಂ—ಪಾಪ ಪಾತಕಂ ಅಸ್ಯ ಅಸ್ತಿ ಇತಿ ಪಾತಕೀ (ತದ್ಧಿತ) ತ್ವತ್ಸಮಾ — ನಿನ್ನಂತಹ ನಿನಗೆ ಸಮಾನಳಾದ ತ್ವಯಾ ಸಮಾ(ತೃ.ತ.)ಅಥವಾ ತವ ಸಮಾ(ಷ.ತ.)ಪಾಪಘ್ನೀ ಪಾಪ ಪರಿಹರಿಸುವವಳು. ಪಾಪವನ್ನು ಹೊಡೆದೋಡಿಸುವವಳು. ಪಾಪಂ ಹಂತಿ ಇತಿ ಪಾಪಘ್ನೀ (ಉಪ. ತ.) ಏವಂ ಜ್ಞಾತ್ವಾ— ಹೀಗೆ ತಿಳಿದು ನಾನು ಪರಮ ಪಾಪಿಷ್ಠನೆಂದೂ, ನೀನು ಶ್ರೇಷ್ಠ ಪಾಪಪರಿಹಾರಕಳೆಂದೂ ತಿಳಿದು ಜ್ಞಾತ್ವಾ—ಜ್ಞಾ (ಕ.ಉ.) ಧಾತುವಿನ ಲ್ಯಬಂತಾವ್ಯಯ ಯಥಾಯೋಗ್ಯಂ—ಯೋಗ್ಯವಿದ್ದಂತೆ. ತಥಾಕುರು—ಹಾಗೆ ಮಾಡು. ಯಥಾಯೋಗ್ಯಂ ತಥಾ ಕುರು (ಕರ್ತರಿ)—ಯಥಾಯೋಗ್ಯೇನ ಭೂಯತೇ (ಭೂಯತೇ ವಾ) ತಥಾ (ತ್ವಯಾ) ಕ್ರಿಯತಾಮ್ । (ಕರ್ಮಣಿ) ಯಥಾ....ತಥಾ— ಇವು ಪರಸ್ಪರ ಸಂಬಂಧವಿದ ಅವ್ಯಯಗಳು ಇವುಗಳ ಕೆಲವೊಂದು ಉಪಯೋಗ ಕೆಳಗೆ ಕೊಟ್ಟಿದೆ.

(i) ಯಥಾರಾಜಾ ತಥಾ ಪ್ರಜಾಃ । ಯಥಾವೃಕ್ಷಃ ತಥಾಫಲಂ । ಯಥಾ ಬೀಜಂ ತಥಾಂಕುರಃ । (ii) ಅಹಂ ಸ್ವಾಮಿನಂ ವಿಜ್ಞಾಪ್ಯ ತಥಾ ಕರಿಷ್ಯೇ ಯಥಾ ಸ ವಧಂ ಕರಿಷ್ಯತಿ । (iii) ಯಥಾ ಇತೋ ಮುಖಾಗತೈ-

ರಪಿ ಕಲಕಲಃ ಶ್ರುತಃ ತಥಾ ತರ್ಕಯಾಮಿ । (iv) ವಾಙ್ಮನಃಕರ್ಮಭಿಃ ಪತ್ಯೌ ವ್ಯಭಿಚಾರೋ ಯಥಾ ನ ಮೇ। ತಥಾ ವಿಶ್ವಂಭರೇ ದೇವಿಮಾಮಂತರ್ಧಾತುಮರ್ಹಸಿ ॥

## EXERCISES

ಅಭ್ಯಾಸಕ್ಕಾಗಿ ಪ್ರಶ್ನೆಗಳು:-

**೧. ಕನ್ನಡಕ್ಕೆ ಪರಿವರ್ತಿಸಿರಿ:-** (i) ಶ್ಲೋಕಗಳು ೨-೩. (ii) ಶ್ಲೋಕಗಳು ೫, ೬. (iii) ಶ್ಲೋಕಗಳು ೭, ೮, ೯.

**೨. ವಿಗ್ರಹಿಸಿ ಸಮಾಸಗಳ ಹೆಸರು ಹೇಳಿರಿ:—** ಸಕಲೋದ್ಧಾರಿಣಿ, **ಕುಪುತ್ರಃ; ಕುಮಾತಾ;** ನಿರುಪಮಂ; ನಿರಾಲಂಬಃ; ದಿಕ್ಪಟಧರಃ; ಶಶಿಮುಖಿ; ಕ್ಷುಧಾತೃಷಾರ್ತಾಃ; **ಪಾಪಘ್ನೀ;**

**೩. ರೂಪ ಗುರುತಿಸಿರಿ:- ಅಭೂತ್;** ಕ್ಷಂತವ್ಯಂ; ಜಾಯೇತ; **ಭವಿತಾ;** ಅಂಬ; **ಭಾವಯೇಥಾಃ.**

**೪. ಲಘು ಟಿಪ್ಪಣಿ ಬರೆಯಿರಿ:—** ಪಶುಪತಿಃ; ಕುಪುತ್ರೋ ಜಾಯೇತ ಕ್ವಚಿದಪಿ ಕುಮಾತಾ ನ ಭವತಿ.

**೫. ವಾಕ್ಯಗಳಲ್ಲಿ ಉಪಯೋಗಿಸಿರಿ:-** ಹಿ, ಚೇತ್, ಸ್ಮಿಹ್.

**೬. ಪ್ರಯೋಗ ಬದಲಿಸಿರಿ:—** (i) ದೇವಿ, ಮಯಾ ಭೂಯಃ ದ್ರವಿಣಂ ನ ದತ್ತಮ್ । (ii) ಕ್ಷುಧಾತೃಷಾರ್ತಾ ಜನನೀಂ ಸ್ಮರಂತಿ । (iii) ಮಹಾದೇವಿ, ಯಥಾ ಯೋಗ್ಯಂ ತಥಾ ಕುರು ।

**೭. ಸಂಧಿ ಬಿಡಿಸಿರಿ:—** ಜಗನ್ಮಾತರ್ಮಾತಸ್ತವ; ನೈತಚ್ಛಠತ್ವಮ್ ।

# GENERAL SECTION

## ಪದ್ಯೇತರ ವಿಭಾಗ

### ಕೆಲವು ಉಪಯುಕ್ತ ಸೂಚನೆಗಳು.

ಪದ್ಯೇತರ ವಿಭಾಗದಲ್ಲಿ ವ್ಯಾಕರಣ ಪ್ರಶ್ನೆಗಳನ್ನು ಬಿಟ್ಟು ಬೇರೆ ಮೂರು ಪ್ರಶ್ನೆಗಳಿರುತ್ತವೆ. ಅವುಗಳಲ್ಲಿ ಒಂದು ಸಂಸ್ಕೃತದಿಂದ ಕನ್ನಡಕ್ಕೆ ಭಾಷಾಂತರಿಸುವದು; ಇನ್ನೊಂದು ಸುಭಾಷಿತಗಳಲ್ಲಿಯ ವಿಚಾರ ವಿಸ್ತರಣ; ಮತ್ತು ಕೊನೆಯದು ಕನ್ನಡದಿಂದ ಸಂಸ್ಕೃತಕ್ಕೆ ಭಾಷಾಂತರಿಸುವದು. ಇವುಗಳಲ್ಲಿ ಸಾಮಾನ್ಯವಾಗಿ ಸಂಸ್ಕೃತದಿಂದ ಕನ್ನಡಕ್ಕೆ ಪರಿವರ್ತಿಸುವ ಪ್ರಶ್ನೆಯನ್ನು ಎಲ್ಲ ವಿದ್ಯಾರ್ಥಿಗಳೂ ಬಿಡಿಸೇ ಬಿಡಿಸುತ್ತಾರೆ. ಆದರೆ ಈ ಪ್ರಶ್ನೆಯನ್ನು ಬಿಡಿಸುವಾಗ ಮುಖ್ಯವಾಗಿ ನೆನಪಿಡತಕ್ಕ ಮಾತೆಂದರೆ, ಶಬ್ದಶಃ ಭಾಷಾಂತರ ಮಾಡಬೇಕೆಂಬ ನಿಯಮವಿಲ್ಲ. ಇದರರ್ಥ ಕೇವಲ ಸಾರಾಂಶ ಬರೆದರಾಯಿತೆಂದು ತಿಳಿಯಕೂಡದು. ಕೊಟ್ಟ ಅವತರಣಿಕೆಯ ಸರಳ ಹಾಗೂ ಸಾಮಾನ್ಯ ಅರ್ಥವು ನೀವು ಮಾಡಿದ ಭಾಷಾಂತರದಲ್ಲಿ ಕಂಡು ಬರಬೇಕು. ಇದಕ್ಕಾಗಿ ಪ್ರಶ್ನೆಯನ್ನು ಬಿಡಿಸಿ ಬರೆಯುವ ಮೊದಲು ಆ ಪ್ರಶ್ನೆಯನ್ನು ಕನಿಷ್ಠ ಎರಡು ಮೂರು ಸಾರೆಯಾದರೂ ಓದಿ ಅದರಲ್ಲಿ ವಿಚಾರಗಳ ಅಥವಾ ಸಂಗತಿಗಳ ಬಗ್ಗೆ ಸ್ಥೂಲವಾಗಿ ಸುಸಂಬದ್ಧವಾಗಿ ಕೆಲವು ಮುಖ್ಯ ಮಾತುಗಳನ್ನರಿತುಕೊಳ್ಳಬೇಕು. ನಂತರ ಪ್ರತಿಯೊಂದು ವಾಕ್ಯದ ಭಾಷಾಂತರ ಪ್ರಾರಂಭಿಸಬೇಕು. ಕೆಲವು ವೇಳೆ ಒಂದೆರಡು ವಾಕ್ಯಗಳ ಸರಿಯಾದ ಅರ್ಥವು ತಿಳಿಯದಿದ್ದರೆ ಅವುಗಳನ್ನು ಬಿಟ್ಟು ಮುಂದಿನ ವಾಕ್ಯಗಳನ್ನು ಪ್ರಯತ್ನಿಸುವದೊಳ್ಳೇದು. ಇದರಿಂದ ಕೊನೆಯ ಪಕ್ಷಕ್ಕೆ ಕೊಟ್ಟ ಭಾಗದ ಸಾರಾಂಶವಾದರೂ ಬಂದರೆ ಸಾಕು. ಆದರೆ ಕೇವಲ ಒಂದೆರಡು ಶಬ್ದಗಳ ಸಹಾಯದಿಂದ ಅಜಮಾಸು ಊಹಿಸಿ ಅರ್ಥ ಬರೆಯಲು ಹೊರಟರೆ ಅದರಿಂದೇನೂ ಲಾಭವಾಗಲಾರದು.

ಎರಡನೆಯದಾಗಿ ಸುಭಾಷಿತಗಳಲ್ಲಿಯ ವಿಚಾರ ವಿಸ್ತರಣೆಯ ಕಾಲಕ್ಕೆ ಆಯಾ ಶ್ಲೋಕಗಳ ಭಾಷಾಂತರ ಮುಖ್ಯವಲ್ಲ. ಅವುಗಳಲ್ಲಿ ಮುಖ್ಯ ವಿಚಾರ, ಅಥವಾ ಕಲ್ಪನೆ ಮಹತ್ವದ್ದು. ಅದನ್ನು ಹುಡುಕಿ ಮೊದಲು ಬರೆಯಬೇಕು. ಆ ಮೇಲೆ ಆ ಮುಖ್ಯ ಮಾತಿನ ವಿವರಣೆ ಅಥವಾ ಸ್ಪಷ್ಟೀಕರಣ-

ಕ್ಕಾಗಿ ಶ್ಲೋಕದ ಭಾಷಾಂತರ ಮಾಡಿ ಅರ್ಥ ವಿವರಣೆ ಮಾಡಬೇಕು. ಅನೇಕ ವೇಳೆ ಆ ಮುಖ್ಯ ಮಾತು ಆಯಾ ಶ್ಲೋಕಗಳಲ್ಲಿಯೇ ಇರುತ್ತದೆ. ಸಾಮಾನ್ಯವಾಗಿ ಒಂದು ಸಾಲಿನಲ್ಲಿ ಮುಖ್ಯ ಮಾತು ಒಂದು ಎರಡನೇದರಲ್ಲಿ ಅದರ ವಿವರಣೆಗಾಗಿ ಒಂದು ಉದಾಹರಣೆ ಕೊಡಲ್ಪಟ್ಟಿರುತ್ತದೆ. ಈ ರೀತಿಯಾದ ಶ್ಲೋಕಗಳನ್ನು ವಿವರಿಸುವಾಗ ವಿದ್ಯಾರ್ಥಿಗಳು ತಮ್ಮ ಅನುಭವದಲ್ಲಿ ಬರುವ ಅಥವಾ ಅದೇ ಮುಖ್ಯ ಮಾತನ್ನು ಒಳಗೊಂಡ ಇತರ ಭಾಷೆಗಳಲ್ಲಿಯ ಮುಖ್ಯವಾಗಿ ಕನ್ನಡದಲ್ಲಿ ಬರುವ ಅನೇಕ ಗಾದೆಯ ಮಾತು ಅಥವಾ ಪದ್ಯಗಳ ಉದಾಹರಣೆ ಕೊಟ್ಟರೆ ಹೆಚ್ಚು ಒಳ್ಳೇದು. ಆದರೆ ಅನಾವಶ್ಯಕವಾಗಿ ವಿವರಣೆಯನ್ನು ಬೆಳೆಸುತ್ತ ಹೋಗಬಾರದು. ಇದರಿಂದ ಬರವಣಿಗೆಯಲ್ಲಿ ಸುಸಂಬದ್ಧತೆ ಇಲ್ಲದಂತಾಗುವದು. ಹೀಗೆ ಬರೆಯದೆ ಕೇವಲ ಶ್ಲೋಕಗಳ ಭಾಷಾಂತರ ಮಾಡಿದರೆ ಹೆಚ್ಚು ಗುಣಗಳು ದೊರೆಯಲಾರವು. ಈ ಪ್ರಶ್ನೆಯನ್ನು ಸರಿಯಾಗಿ ಬಿಡಿಸಲು ಅನುಕೂಲವಾಗುವಂತೆ ಮೊದಲು ನೀವು ನಿಮ್ಮ ಅಭ್ಯಾಸ ಕಾಲಕ್ಕೆ ೮ನೇ, ೯ನೇ ಮತ್ತು ೧೦ನೇ ಇಯತ್ತೆಯ ಪಠ್ಯಪುಸ್ತಕಗಳಲ್ಲಿ ಕಲಿತ ಸುಭಾಷಿತಗಳ ವಿಚಾರ ವಿಸ್ತರಣೆ ಪ್ರಯತ್ನಿಸಿ ಅವುಗಳನ್ನು ಬಲ್ಲವರಿಂದ ತಿದ್ದಿಸಿಕೊಂಡರೆ ಬಹಳ ಉಪಯೋಗವಾಗುವದು. ಯಾಕೆಂದರೆ ಪರೀಕ್ಷೆಯಲ್ಲಿ ಬರುವ ಸುಭಾಷಿತಗಳು ಬಹಳ ಗಡುಚಾದವೇನೂ ಇರುವದಿಲ್ಲ. ಸಾಮಾನ್ಯವಾದವುಗಳಿರುತ್ತವೆ. ಎಷ್ಟೋ ಸಾರೆ ಅವುಗಳ ಅರ್ಥ ಬಹು ಸರಲವಾಗಿರುತ್ತದೆ. ಕಾರಣ ಈ ಪ್ರಶ್ನೆಯನ್ನು ಬಿಡಿಸುವ ರೀತಿಯನ್ನರಿತುಕೊಂಡರೆ ಸಾಕು.

ಇನ್ನು ಕೊನೆಯದಾಗಿ ಕನ್ನಡದಿಂದ ಸಂಸ್ಕೃತಕ್ಕೆ ಭಾಷಾಂತರಿಸುವಾಗ ನೆನಪಿಡತಕ್ಕ ಮಾತೆಂದರೆ, ಭಾಷಾಂತರವು ಶುದ್ಧವಾಗಿಯೂ ( ವ್ಯಾಕರಣ ದೋಷಗಳಿಲ್ಲದ್ದು) ಮತ್ತು ಸುಂದರವಾಗಿಯೂ ಇರತಕ್ಕದು. ಇದಕ್ಕಾಗಿ ಆದಷ್ಟು ಚಿಕ್ಕ ಚಿಕ್ಕ ವಾಕ್ಯಗಳನ್ನು ರಚಿಸುವದರಿಂದ ತಪ್ಪುಗಳು ಕಡಿಮೆಯಾಗುವವು. ಮತ್ತು ಭೂತ ಕರ್ಮಣಿ ಧಾತು ಸಾಧಿತ ವಿಶೇಷಣಗಳನ್ನು ಕ್ರಿಯಾಪದಗಳ ಬದಲು ಉಪಯೋಗಿಸುವದರಿಂದ ವಾಕ್ಯಗಳು ಕರ್ಮಣಿ ಪ್ರಯೋಗದಲ್ಲಿ ಬಂದು ತಪ್ಪುಗಳು ಸ್ವಲ್ಪ ಮಟ್ಟಿಗೆ ಕಡಿಮೆಯಾಗುತ್ತವೆ. ಅಲ್ಲದೆ ವಾಕ್ಯರಚನೆಯೂ ಸಂಸ್ಕೃತ ಶೈಲಿಯನ್ನು ಹೋಲುವದು. ಈ ವಿಷಯದಲ್ಲಿ ಇನ್ನೊಂದು ಮಾತೆಂದರೆ ಸಮಾಸ ಶಬ್ದಗಳ ಉಪಯೋಗ. ಸಂಸ್ಕೃತಭಾಷೆಯ ವೈಶಿಷ್ಟ್ಯಗಳಾದ ಸಮಾಸ ಮತ್ತು ಸಂಧಿ ಅವುಗಳನ್ನು ಹೆಚ್ಚೆಚ್ಚು ಬಳಸಿದಂತ

ಶೈಲಿಯು ಹೆಚ್ಚು ಗಂಭೀರವಾಗುವದು. ಒಂದು ಬಗೆಯ ಸೌಂದರ್ಯವನ್ನು ಪಡೆಯುವದು. कश्चित्, किंचित् – नाम ಮುಂತಾದ ಶಬ್ದಗಳನ್ನುಪಯೋಗಿಸುವಾಗ ಆ ಶಬ್ದಗಳಿಗೆ ಸಂಬಂಧಿಸಿದ ನಾಮಗಳು ಯಾವ ವಿಭಕ್ತಿಯಲ್ಲಿರುತ್ತವೆಯೋ ಅದೇ ವಿಭಕ್ತಿಯಲ್ಲಿ ಈ ಶಬ್ದಗಳನ್ನು ಉಪಯೋಗಿಸಬೇಕು. ವಿದ್ಯಾರ್ಥಿಗಳು ಸಾಮಾನ್ಯವಾಗಿ ಈ ಶಬ್ದಗಳ ಉಪಯೋಗಕ್ಕೆ ಬಹಳ ತಪ್ಪು ಮಾಡುತ್ತಾರೆ. ಕನ್ನಡದಲ್ಲಿ ಅನೇಕ ಸಮ-ಸಂಸ್ಕೃತ ಶಬ್ದಗಳುಂಟು. ಇದರಿಂದ ಭಾಷಾಂತರಕ್ಕೆ ಎಷ್ಟೋ ಅನುಕೂಲ-ವಾಗುವದೇನೋ ನಿಜ. ಆದರೆ ಭಾಷಾಂತರವೆಂದರೆ ಕೇವಲ ಕನ್ನಡದಲ್ಲಿಯ ಸಂಸ್ಕೃತ ಶಬ್ದಗಳಿಗೆ ಸಂಸ್ಕೃತ ಪ್ರತ್ಯಯ ಹಚ್ಚುವದೆಂದು ತಿಳಿಯಬಾರದು. ಆದಷ್ಟು ಕನ್ನಡ ಅವತರಣಿಕೆಯಲ್ಲಿ ಕೊಟ್ಟ ಶಬ್ದಗಳನ್ನು ಬಿಟ್ಟು ಬೇರೆ ಅದೇ ಅರ್ಥದ ಸಂಸ್ಕೃತ ಶಬ್ದಗಳನ್ನುಪಯೋಗಿಸುವದೊಳಿತು.



## ೧. ಸುಭಾಷಿತಗಳ ವಿಚಾರ ವಿಸ್ತರಣ

ಕೆಳಗೆ ಕೊಟ್ಟ ಶ್ಲೋಕಗಳಲ್ಲಿಯ ವಿಚಾರ ವಿವರಿಸಿರಿ.

(१) काचः काञ्चन संसर्गाद् धत्ते मारकतीं द्युतिम् ।
तथा सत्संनिधानेन मूर्खो याति प्रवीणताम् ॥

(२) कुसुमस्तबकस्येव द्वे वृत्ती तु मनस्विनः ।
सर्वेषां मूर्ध्नि वा तिष्ठेद् विशीर्येत वनेऽथवा ॥

(३) गतवयसामपि पुंसां येषामर्थाः भवंति ते तरुणाः ।
अर्थेन तु ये हीना वृद्धास्ते यौवनेऽपि स्युः ॥

(४) एकस्य दुःखस्य न यावदन्तं गच्छाम्यहं पारमिवार्णवस्य ।
तावद् द्वितीयं समुपस्थितं मे छिद्रेष्वनर्थाः बहुलीभवन्ति ॥

(५) मतिरेव बलाद्गरीयसी यदभावे करिणामियं दशा ।
इति घोषयतीव डिण्डिमः करिणो हस्तिपकाहतः क्वणन् ॥

(६) नलिकागतमपि कुटिलं न भवति सरलं शुनः पुच्छम् ।
तद्वत् खलजनहृदयं बोधितमपि नैव याति माधुर्यम् ॥

(७) बलीयसा हीनबलो विरोधं न भूतिकामो मनसापि वाञ्छेत् ।
न बध्यते वेतसवृत्तिरत्र व्यक्तं प्रणाशो हि पतङ्गवृत्तेः ॥

(८) दुर्जनदूषितमनसां पुंसां सुजनेऽपि नास्ति विश्वासः ।
पाणौ पायसदग्धे तक्रं फूत्कृत्य पामरः पिबति ॥

(९) पुराणमित्येव न साधु सर्वं न चापि काव्यं नवमित्यवद्यम् ।
सन्तः परीक्ष्यान्यतरद्भजन्ते मूढः परप्रत्ययनेयबुद्धिः ॥

(१०) यः पृष्ट्वा कुरुते कार्यं प्रष्टव्यान् स्वान् हितान् गुरून् ।
न तस्य जायते विघ्नः कस्मिंश्चिदपि कर्मणि ॥

(११) न कश्चित्कस्यचिन्मित्रं न कश्चित्कस्यचिद्रिपुः ।
व्यवहारेण जायन्ते मित्राणिरिपवस्तथा ॥

(१२) यद्ददासि विशिष्टेभ्यो यच्चाश्नासि दिने दिने ।
तत्ते वित्तमहं मन्ये शेषं कस्यापि रक्षसि ॥

(१३) दानं भोगो नाशास्तिस्रो गतयो भवन्ति वित्तस्य ।
यो न ददाति न भुङ्क्ते तस्य तृतीया गतिर्भवति ॥

(१४) दुन्दुभिस्तु सुतरामचेतनस्तन्मुखादपि घनं घनं धनम् ।
इत्थमेव निनदः प्रवर्तते किं पुनर्यदि जनः सचेतनः ॥

(१५) शास्त्राण्यधीत्यापि भवन्ति मूर्खा
यस्तु क्रियावान् पुरुषः सः विद्वान् ।
सुचिन्तितं चौषधमातुराणाम्
न नाम मात्रेण करोत्यरोगम् ॥

(१६) प्रतिकूलमुपगते हि विधौ विफलत्वमेति बहुसाधनता ।
अवलम्बनाय दिनभर्तुरभून्न पतिष्यतः करसहस्रमपि ॥

(१७) असम्भवं हेममृगस्य जन्म तथापि रामो लुलुभे मृगाय ।
प्रायः समापन्नविपत्तिकाले धियोऽपि पुंसां मलिनीभवन्ति ॥

(१८) तृणानि नोन्मूलयति प्रभञ्जनो मृदूनि नीचैः प्रणतानि सर्वतः ।
समुच्छ्रितानेव तरून् प्रबाधते महान्महत्स्वेव करोति विक्रमम् ॥

(१९) यथाह्येकेन चक्रेण न रथस्य गतिर्भवेत् ।
एवं पुरुषकारेण विना दैवं न सिध्यति ॥

(२०) वज्रादपि कठोराणि मृदूनि कुसुमादपि ।
लोकोत्तराणां चेतांसि को हि विज्ञातुमर्हति ॥

(२१) भवन्ति नम्रास्तरवः फलागमैर्नवाम्बुभिर्भूरिविलम्बिनो घनाः ।
अनुद्धताः सत्पुरुषाः समृद्धिभिः स्वभाव एवैषपरोपकारिणाम् ॥

(२२) दधि मधुरं मधु मधुरं द्राक्षा मधुरा सितापि मधुरैव ।
तस्य तदेव हि मधुरं यस्य मनो यत्र संलग्नम् ॥

(२३) अबला यत्र प्रबला बालो राजा निरक्षरो मन्त्री ।
न हि न हि तत्र धनाशा जीवितुमाशापि दुर्लभा भवति ॥

(२४) अतिपरिचयादवज्ञा सन्ततगमनादनादरो भवति ।
मलये भिल्लपुरंध्री चन्दनतरुकाष्ठमिन्धनं कुरुते ॥

(२५) उद्योगिनं पुरुषसिंहमुपैति लक्ष्मीः ।
दैवं हि दैवमिति कापुरुषा वदन्ति ।
दैवं निहत्य कुरु पौरुषमात्मशक्त्या
यत्ने कृति यदि न सिध्यति कोऽत्र दोषः ॥

# ವಿಚಾರವಿಸ್ತರಣ

## ಉತ್ತರಗಳು

೧. ಸಜ್ಜನರ ಸಹವಾಸದ ಮಹತ್ವವನ್ನು ಕವಿಯು ಈ ಪದ್ಯದಲ್ಲಿ ಹೇಳಿದ್ದಾನೆ. ಎಂತಹ ಮೂರ್ಖನಾದರೂ ಒಳ್ಳೆಯವರ ಸಹವಾಸದಿಂದ ತಿಳುವಳಿಕೆಯುಳ್ಳವನಾಗಬಲ್ಲನು, ಒಳ್ಳೆಯವನಾಗುವನು. ಈ ಮಾತನ್ನೇ ಕವಿಯು ಒಂದು ಉದಾಹರಣೆಯಿಂದ ಸ್ಪಷ್ಟೀಕರಿಸುತ್ತಾನೆ. ಅದು ಹೇಗೆಂದರೆ ಕಾಜಿನ ಮಣಿಯೂ ಸಹ ಬಂಗಾರದ ಜೊತೆಗೆ ಜೋಡಿಸಲ್ಪಟ್ಟಾಗ (ಉದಾ ಹರಳುಂಗರ) ಪಚ್ಚದಂತೆ ಹೊಳೆಯುತ್ತದೆ. ಅದಕ್ಕೆ ಕಾರಣ ಬಂಗಾರದ ಸಹವಾಸವೇ ಹೊರತು ಕಾಜಿನಮಣಿಯಲ್ಲಿಯ ಮೂಲ ಗುಣವಲ್ಲ. ಇದೇ ಮಾತೇ 'ಕೀಟೋಽಪಿ ಸುಮನಸಃ ಸಂಗಾದಾರೋಹತಿ ಸತಾಂ ಶಿರಃ' ಎಂಬ ಸುದಿಯಲ್ಲಿಯೂ ಪ್ರತಿಪಾದಿಸಲ್ಪಟ್ಟಿದೆ.

೨. ದೃಢನಿಶ್ಚಯವುಳ್ಳ ಧೀರರು ಸಾಮಾನ್ಯರಂತೆ ಎಂದೂ ಅಲ್ಪ ಸಂತೋಷಿಗಳಾಗರೆಂಬುದೇ ಈ ಪದ್ಯದ ಮುಖ್ಯ ಮಾತು. ಅವರ ಸತವಳಿಯನ್ನು ಕವಿ ಹೂವಿನ ಗೊಂಚಲಿಗೆ ಹೋಲಿಸಿದ್ದಾನೆ. ಹೂವಿನ ಗೊಂಚಲಿಗೆ ಎರಡೇ ಸ್ಥಿತಿಗಳಿರುತ್ತವೆ. ಎಲ್ಲರ ತಲೆಯ ಮೇಲಾದರೂ ಕೂತ್ರಬೇಕು. ಇಲ್ಲವೆ ಅಡವಿಯಲ್ಲಿಯೇ (ತೋಟದಲ್ಲಿಯೇ) ಬಿದ್ದು ಒಣಗಬೇಕು.

ಅದರಂತೆಯೇ ಧೀರರೂ ಸಹ ತಮ್ಮ ಆಕಾಂಕ್ಷೆಗಳು ಪೂರೈಸಿ ತಾವು ಎಲ್ಲರಿಗಿಂತಲೂ ಶ್ರೇಷ್ಠರಾಗಬೇಕು ಇಲ್ಲವೆ ಯಾರಿಗೂ ಅರಿಯದಂತೆ ಅಡವಿಯಲ್ಲಿ ಬಿದ್ದು ನಾಶಹೊಂದಬೇಕು ಎಂಬ ನಿಶ್ಚಯವುಳ್ಳವರಾಗಿರುತ್ತಾರೆ.

೩. ಈ ಪದ್ಯದಲ್ಲಿ ಕವಿಯು ದುಡ್ಡಿನ ಮಹತ್ವವನ್ನು ಹೇಳಿದ್ದಾನೆ. 'ಸರ್ವೇ ಗುಣಾಃ ಕಾಂಚನಮಾಶ್ರಯಂತೆ' ಎಂಬಂತೆ ದುಡ್ಡಿದ್ದರೆ ಎಲ್ಲ ಗುಣಗಳೂ ತಾವಾಗಿಯೇ ಬರುತ್ತವೆ. ಹೆಚ್ಚೇನು ಒಮ್ಮೆ ಕಳೆದುಹೋದ ತಾರುಣ್ಯವೂ ಸಹ ಮರಳಿ ಬರುತ್ತದೆ. ಅಂದರೆ ಶ್ರೀಮಂತರು ಮುದಕರಾದರೂ ದುಡ್ಡಿನ ಪ್ರಭಾವದಿಂದ ತರುಣರೆನಿಸುತ್ತಾರೆ. ಅದರಂತೆಯೇ ದುಡ್ಡಿಲ್ಲದ ತರುಣರೂ ಸಹ ಬಡತನದ ಬೇಗೆಯಿಂದ ಬಳಲಿ, ಮುದುಕರಾಗುತ್ತಾರೆ.

೪. ಇಂಗ್ಲೀಷಿನಲ್ಲಿ "*Misfortunes never come singly*" ಅಂದರೆ ವಿಪತ್ತು ಒಂಟಿಯಾಗಿ ಎಂದೂ ಬರುವದಿಲ್ಲ. ಎಲ್ಲವೂ ಕೂಡಿಯೇ ಬರುತ್ತವೆ ಎಂಬ ಉಕ್ತಿ ಇದೆ. ಅದರಂತೆ ಈ ಶ್ಲೋಕದ ತಾತ್ಪರ್ಯವಾದರೂ ಅದೇ. ಒಂದು ಅಪಾರವಾದ ಸಮುದ್ರದಂತಹ ದುಃಖವನ್ನು ಮನುಷ್ಯನು ಇನ್ನೂ ದಾಟಿರುವದಿಲ್ಲ. ಅಷ್ಟರಲ್ಲಿಯೇ ಮತ್ತೊಂದು ದುಃಖವು ಬಂದೊದಗುವದು. ಇದರಿಂದ ಕಂಡುಬರುವದೇನಂದರೆ ಒಮ್ಮೆ ಸಂಕಟ ಬರುವದೆಂದರೆ ಇನ್ನಿತರ ಸಂಕಟಗಳಿಗೆ ಆಮಂತ್ರಣ ಕೊಟ್ಟಂತೆಯೇ ಸರಿ. ಕನ್ನಡದಲ್ಲಿರುವ 'ಎಡವಿದ ಬಟ್ಟೇ ಎಡವುವದು' ಎಂಬ ಉಕ್ತಿಯಲ್ಲಿ ಇದೇ ಮಾತು ಅಡಕವಾಗಿರುತ್ತವೆ.

೫. ಶಾರೀರಿಕ ಬಲಕ್ಕಿಂತಲೂ ಬುದ್ಧಿ ಬಲವೇ ಹೆಚ್ಚಿನದು. ಅದಿಲ್ಲದವರು ಎಷ್ಟೇ ಶಕ್ತಿವಂತರಾದರೂ ಸಹ ಬುದ್ಧಿಶಾಲಿಗಳ ದಾಸರಾಗಬೇಕಾಗುವದು ಎಂಬುದೇ ಈ ಪದ್ಯದ ಮುಖ್ಯ ವಿಚಾರ. ಈ ಮಾತನ್ನು ಕವಿಯು ಆನೆಯ ಉದಾಹರಣೆಯಿಂದ ಸ್ಪಷ್ಟ ಮಾಡಿದ್ದಾನೆ. ಆನೆಯ ಮೇಲೆ ಕುಳಿತು ನಗಾರಿಯನ್ನು ಮಾವುತನು ಬಡಿಯುತ್ತಲಿದ್ದಾನೆ. ನಗಾರಿಯ ಧ್ವನಿ ಎಲ್ಲೆಡೆಗೂ ಕೇಳಬರುತ್ತದೆ. ನಗಾರಿ ಈ ರೀತಿಯಾಗಿ ಸಾರಿಸುತ್ತಾ 'ಕೇಳಿರಿ. ದೇಹಶಕ್ತಿಗಿಂತಲೂ ಬುದ್ಧಿಶಕ್ತಿಯೇ ಹೆಚ್ಚಿನದು. ಅದು ಯಾರಿಗಿಲ್ಲವೋ ಅವರ ಸ್ಥಿತಿ ಈ ಆನೆಯು ಅಂದರೆ ಮಾವುತನ ಅಧೀನವಾದ ಆನೆಯ ಸ್ಥಿತಿಯಂತಾಗುತ್ತದೆ' ಎಂದು ಹೇಳುತ್ತದೆಯೋ ಏನೋ ಎಂದು ಕವಿ ಕಲ್ಪಿಸುತ್ತಾನೆ.

೬. ದುಷ್ಟರ ಮನಸ್ಸು ಎಂದೂ ಒಳ್ಳೆಯದಾಗುವದಿಲ್ಲ. ಎಷ್ಟೇ ಸಂಸ್ಕಾರ ಹೊಂದಿದರೂ, ತಿಳಿಹೇಳಲ್ಪಟ್ಟರೂ ಸಹ ಅವರ ಮನಸ್ಸು ಎಂದೂ

ಕರಗುವದಿಲ್ಲ. ಇದೇ ಈ ಪದ್ಯದ ತಾತ್ಪರ್ಯ. ಹೇಗೆ ನಾಯಿಯ ಬಾಲ-ವನ್ನು ನಳಿಕೆಯಲ್ಲಿ ಹಾಕಿದರೂ ಸಹ, ನಳಿಕೆ ತೆಗೆದ ಮೇಲೆ ಅದು ಮತ್ತೆ ತನ್ನ ಮೊದಲಿನ ಸ್ಥಿತಿಯನ್ನೇ ಹೊಂದುವದೋ ಹಾಗೆಯೇ ದುಷ್ಟನು ಎಷ್ಟೇ ಉಪದೇಶ ಹೊಂದಿದರೂ ಸಹ ತನ್ನ ದುಷ್ಟತನವನ್ನು ಎಂದೂ ಬಿಡನು.

೭. ಅಲ್ಪಬಲವುಳ್ಳವನು ತನಗಿಂತ ಬಲಿಷ್ಠರೊಂದಿಗೆ ಎಂದೂ ವಿರೋಧ ಕಟ್ಟಿಕೊಳ್ಳಬಾರದು. ಇದರಿಂದ ಆತನ ನಾಶವೇ ಹೊರತು ಕಲ್ಯಾಣವೆಂದಿಗೂ ಸಾಧಿಸದು. ತನ್ನ ಕಲ್ಯಾಣವಾಗಬೇಕೆಂದು ಬಯಸುತ್ತಿದ್ದರೆ ಆತನು ನಮ್ರನಾಗಿ ನಡೆಯಬೇಕು. ಇದಕ್ಕೆ ಕವಿಯು ಸೃಷ್ಟಿಯಲ್ಲಿಯ ಎರಡು ವಸ್ತುಗಳ ಉದಾಹರಣೆ ಕೊಟ್ಟಿದ್ದಾನೆ. ಎಷ್ಟೇ ಬಿರುಗಾಳಿ ಬಿಟ್ಟರೂ ಸಹ ಬಿದಿರು ಎಂದೂ ಜೀಳುವದಿಲ್ಲ. ಯಾಕಂದರೆ ಅದು ಬಲಿಷ್ಠರೆದುರು ಬಾಗುತ್ತದೆ ಅದರಿಂದ ಬದುಕುತ್ತದೆ. ಆದರೆ ದೀಪದ ಹುಳವು ಈ ನಮ್ರತೆ ಇಲ್ಲದ ಮೂಲಕ ಬಲಿಷ್ಠರೊಡನೆ ಕಾದಾಡಹೋಗಿ ತಾನೇ ನಾಶ ಹೊಂದುತ್ತದೆ. ಇದರಂತೆ ತನಗಿಂತ ಬಲವುಳ್ಳವರೊಡನೆ ವಿನಯದಿಂದ ನಡೆದವನು ಬದುಕುತ್ತಾನೆ. ಇದಕ್ಕೆ ವಿರೋಧವಾಗಿ ನಡೆದವನ ನಾಶ ನಿಶ್ಚಿತ.

೮. ಮನುಷ್ಯರ ಮನಸ್ಸು ಒಮ್ಮೆ ದೂಷಿತವಾಯಿತೆಂದರೆ, ಅಂದರೆ ದುರ್ಜನರು ಒಮ್ಮೆ ಓರ್ವನ ಮನಸ್ಸು ಕೆಡಿಸಿದರೆ, ಆತನು ಮುಂದೆ ಸಜ್ಜನರ ವಿಷಯದಲ್ಲಿಯೂ ಅದೇ ತರಹದ ಸಂಶಯ, ಅವಿಶ್ವಾಸಗಳನ್ನು ತಾಳುತ್ತಾನೆ. ಒಮ್ಮೆ ಉಂಟಾದ ಹೆದರಿಕೆ ಅಥವಾ ಸಂಶಯದಿಂದ ಆತನು ಇವನು ಒಳ್ಳೆ-ಯವ ಇವನು ದುಷ್ಟ ಎಂಬ ಭೇದ ತಿಳಿಯಲಸಮರ್ಥನಾಗುವನು. ಅದು ಹೇಗೆಂದರೆ ಒಮ್ಮೆ ಬಿಸಿ ಪಾಯಸದಿಂದ ಕೈಸುಟ್ಟಿತೆಂದರೆ, ಮುಂದೆ ಮಜ್ಜಿಗೆ ಕುಡಿಯುವಾಗಲೂ ಕೂಡ ಉಫ್ ಎನ್ನಬೇಕೆನ್ನಿಸುತ್ತದೆ. ಇದು ಒಂದು ಸ್ವಾಭಾವಿಕ ಸಂಗತಿ. ಅಂದರೆ ಒಮ್ಮೆ ನೋವು ತಿಂದ ಮನುಷ್ಯನು ಮತ್ತೊಮ್ಮೆ ಅದೇ ತರದ ಸನ್ನಿವೇಶವಿಲ್ಲದಿದ್ದರೂ ಸಹ ಗಾಬರಿಯಾಗುತ್ತಾನೆ.

೯. ಮನುಷ್ಯನು ಸಾರಾಸಾರ ವಿಚಾರಮಾಡಿ, ಸೂಕ್ಷ್ಮವಾಗಿ ಪರೀಕ್ಷಿಸಿ ಒಬ್ಬನ ವಿಷಯದಲ್ಲಾಗಲೀ ಅಥವಾ ಒಂದು ವಸ್ತುವಿನ ಬಗ್ಗೆಯಾಗಲೀ ನಿರ್ಣಯ ಕೊಡಬೇಕು. ಮತ್ತು ಅದರಂತೆ ನಡೆಯಬೇಕು. ಹಳೆಯದೆಲ್ಲ ಹೊನ್ನು, ಹೊಸದೆಲ್ಲ ಮಣ್ಣು' ಎಂಬ ಮೂಢ ಭಾವನೆ ಎಂದಿಗೂ ಸಲ್ಲದು. ಅದರಂತೆ ಹೊಸದೆಲ್ಲ ಹೊನ್ನು, ಹಳೆಯದೆಲ್ಲ ಮಣ್ಣು ಎಂಬ ತದ್ವಿಪರೀತ

ನಂಬಿಕೆಯೂ ಯೋಗ್ಯವಲ್ಲ. ಒಳಿತು ಕೆಡಕುಗಳಬಗ್ಗೆ ನಿರ್ಣಯ ಕೊಡುವಾಗ ಸರಿಯಾದ ವಿಮರ್ಶೆ (ಸಾರಾಸಾರ ವಿಚಾರವೇ) ಮುಖ್ಯ. ಸಜ್ಜನರು ತಮ್ಮ ಅಭಿಪ್ರಾಯವನ್ನು ಇದೇ ರೀತಿಯಿಂದ ತಿಳಿಸುತ್ತಾರೆ. ಆದರೆ ಮೂರ್ಖರು ಮಾತ್ರ ಹೆರವರ ಹೇಳಿಕೆಯಂತೆಯೇ ನಡೆಯುತ್ತಾರೆ. ತಮ್ಮ ಬುದ್ಧಿಯನ್ನೇನೂ ಉಪಯೋಗಿಸುವದಿಲ್ಲ.

೧೦. ಹಿತಚಿಂತಕರಾದ ಹಿರಿಯರ ಮಾತನ್ನು ಕೇಳಿ ಮಾಡಿದ ಕೆಲಸವು ಎಂದೂ ಹಾಳಾಗುವದಿಲ್ಲ. ಇದೇ ಈ ಪದ್ಯದ ಮುಖ್ಯ ಮಾತು. ಹಿರಿಯರ ಮಾತಿನಲ್ಲಿ ಅನುಭವವಿರುತ್ತದೆ. ಇದರಿಂದ ಅನುಭವಿಕರಾದರೆ ಮುಂಬರುವ ವಿಘ್ನಗಳ ಪರಿಚಯವಾಗುತ್ತದೆ. ಹೀಗೆ ಅವರು ವಿಘ್ನಗಳ ನಿವಾರಣೆಯ ಉಪಾಯವನ್ನು ಮೊದಲೇ ಯೋಚಿಸಬಲ್ಲರು. ಅಲ್ಲದೆ ಹಿರಿಯರ ಮಾತಿನಂತೆ ನಡೆದರೆ ವಿಘ್ನಗಳೇ ಬರಲಾರವು ಎಂದು ಕವಿಯ ಅಭಿಪ್ರಾಯವಿದೆ.

೧೧. ಮನುಷ್ಯನಿಗೆ ಸ್ವಾಭಾವಿಕವಾಗಿ ಯಾರೂ ಶತ್ರುಗಳಲ್ಲ ಅಥವಾ ಯಾರೂ ಮಿತ್ರರಲ್ಲ. ಆತನ ನಡವಳಿಕೆಯೇ ಆತನಿಗೆ ಶತ್ರುಗಳನ್ನು ಮಿತ್ರರನ್ನು ಉಂಟುಮಾಡುತ್ತದೆ. ಯಾಕೆಂದರೆ ತನ್ನ ನಡೆವಳಿಕೆಯಿಂದ ಆತನು ಯಾರಿಗೆ ನೋವನ್ನುಂಟುಮಾಡುವನೋ ಅವರು ಆತನ ಶತ್ರುಗಳಾಗುವರು. ಅದರಂತೆ ಆತನ ನಡತೆಯಿಂದ ಹಿತಹೊಂದಿದವರು ಆತನ ಮಿತ್ರರಾಗುವರು. ಇದೇ ಜಗತ್ತಿನ ರೀತಿ ಎಂದು ಕವಿ ಹೇಳಿದ್ದಾನೆ. ಈ ಮಾತಿನ ಸತ್ಯತೆಯನ್ನು ಜೀವನದಲ್ಲಿಯ ಒಂದು ಸಾಧಾರಣ ಉದಾಹರಣೆಯಿಂದಲೇ ಕಂಡುಕೊಳ್ಳಬಹುದು. ವಚನಕಾರರು ಹೇಳಿದಂತೆ "ಅಯ್ಯಾ ಎಂದಡೆ ಸ್ವರ್ಗ, ಎಲವೋ ಎಂದಡೆ ನರಕ" ಎಂಬಂತೆ ಯಾವನನ್ನಾದರೂ ಅಯ್ಯಾ ಎಂದು ಸಂಬೋಧಿಸಲು ಆತನ ಮನಸ್ಸಿನಲ್ಲಿ ನಮ್ಮ ವಿಷಯಕ್ಕೆ ಸಹಜವಾಗಿಯೇ ಸ್ನೇಹಭಾವ ಮೂಡುತ್ತದೆ. ಅದರಂತೆ ಎಲವೋ ಎಲೈ ಮುಂತಾದ ಪದಗಳಿಂದ ಆತನ ಮನಸ್ಸು ನೊಂದು ಆತನು ನಮ್ಮ ವಿಷಯಕ್ಕೆ ಕೋಪಿಸುವದು ಸ್ವಾಭಾವಿಕವಾಗಿದೆ.

೧೩. ಈ ಪದ್ಯದಲ್ಲಿ ಕವಿಯು ದುಡ್ಡಿನ ನಿಜವಾದ ಉಪಯೋಗ ಯಾವುದು ಮತ್ತು ದುಡ್ಡಿನ ಸಾರ್ಥಕತೆಯೆಲ್ಲಿ ಎಂಬುದನ್ನು ನಿರೂಪಿಸಿದ್ದಾನೆ. ದುಡ್ಡಿನ ಉಪಯೋಗವೆಂದರೆ, ಅದನ್ನು ಉಪಭೋಗಿಸುವದು ಮತ್ತು ಯೋಗ್ಯರಿಗೆ ದಾನಮಾಡುವದು. ಯಾವ ದುಡ್ಡು ಸ್ವಂತ ಉಪಭೋಗಕ್ಕೆ ಬಾರದೋ ಮತ್ತು ಯಾವುದು ಇತರರಿಗೆ ದಾನಕ್ಕೆ ಬರುವದಿಲ್ಲವೋ ಅದು ತನ್ನ

ದುಡ್ಡಲ್ಲ; ಇತರರದು. ಯಾಕೆಂದರೆ ಅದರಿಂದ ತನಗೂ ಉಪಯೋಗವಿಲ್ಲ ಮತ್ತು ಪರರಿಗೂ ಹಿತವಿಲ್ಲ. ಎಂದಮೇಲೆ ಅಂಥ ಸಂಪತ್ತು ತನ್ನ ಮನೆಯಲ್ಲಿದ್ದರೂ ಅದು ಪರರದೇ. ತಾನು ಮಾತ್ರ ಅದನ್ನು ಪರರಿಗಾಗಿ ರಕ್ಷಿಸುತ್ತಿದ್ದಾನೆ. ಇದೇ ಮಾತನ್ನೇ ಕವಿಯು ಓರ್ವ ಧನಿಕನನ್ನುದ್ದೇಶಿಸಿ ಹೇಳಿದ್ದಾನೆ.

೧೩. ಈ ಪದ್ಯದಲ್ಲಿಯೂ ಸಹ ಮೇಲಿನ ಪದ್ಯದ ಮುಖ್ಯ ಮಾತನ್ನೇ ಕವಿಯು ಬೇರೊಂದು ತೆರನಾಗಿ ಹೇಳಿದ್ದಾನೆ. ದುಡ್ಡಿಗೆ ಮೂರು ಅವಸ್ಥೆಗಳು. ದಾನ, ಭೋಗ ಮತ್ತು ನಾಶ. ಎಂದರೆ ದುಡ್ಡನ್ನು ಸ್ವತಃ ಸುಖಕ್ಕಾಗಿ ಉಪಯೋಗಿಸಬೇಕು. ಅದೇ ಭೋಗ. ಇಲ್ಲವೇ ಸತ್ಪಾತ್ರರಿಗೆ ಕೊಡಬೇಕು. ಇದೇ ದಾನ. ಇವೆರಡನ್ನೂ ಮಾಡದಿದ್ದವನ ಸಂಪತ್ತು ಮೂರನೆಯ ಸ್ಥಿತಿಯನ್ನು ಹೊಂದುತ್ತದೆ. ಅಂದರೆ ನಾಶವಾಗುತ್ತದೆ. 'ತಾನೂ ತಿನ್ನ, ಪರರಿಗೂ ಕೊಡ' ಎಂಬವನ ಸಂಪತ್ತು ಹಾಳಾಗುವದೇ ಸರಿ. ಕಾರಣ ಸಂಪತ್ತುಳ್ಳವರು ಅದರಿಂದ ತಾವೂ ಸುಖಬಟ್ಟು ಇತರರಿಗೂ ದಾನಮಾಡಬೇಕೆಂಬುವದೇ ಕವಿಯ ಅಭಿಪ್ರಾಯ.

೧೪. 'ಹಣವೆಂದರೆ ಹೆಣ ಕೂಡ ಬಾಯಿ ತೆರೆಯುತ್ತದೆ' ಎಂಬ ಕನ್ನಡ ಗಾದೆಯ ಮಾತಿನಲ್ಲಿರುವ ತಾತ್ಪರ್ಯವನ್ನೇ ಕವಿಯು ಈ ಪದ್ಯದಲ್ಲಿ ಬೇರೊಂದು ಉದಾಹರಣೆಯಿಂದ ತಿಳಿಸಿದ್ದಾನೆ. ನಗಾರಿಯು ನಿರ್ಜೀವವಸ್ತುವು. ಹೀಗಿದ್ದರೂ ಸಹ, ಅದರಿಂದಲೂಕೂಡ (ಅದರ ಮುಖದಿಂದಲೂ ಸಹ) ದುಡ್ಡು ದುಡ್ಡು ಎಂಬ ನಾದವು ಹೊರಹೊಮ್ಮುತ್ತದೆ. ಅಂದರೆ ಅದನ್ನು ಬಾರಿಸಿದಾಗ ಹೊರಡುವ ನಾದವು 'ಧನಂ, ಧನಂ' ಎಂದಾಗುತ್ತದೆಂದು ಕವಿಯು ಕಲ್ಪಿಸಿದ್ದಾನೆ. ನಗಾರಿಯ ಢಂ, ಢಂ ಎಂಬ ಸಪ್ಪಳವು 'ಧನಂ, ಧನಂ' ಎಂದು ಕವಿ ತಿಳಿಯುತ್ತಾನೆ. ಇಂಥ ನಿರ್ಜೀವ ವಸ್ತುವೂ ಕೂಡ ದುಡ್ಡನ್ನೇ ಸ್ಮರಿಸಿ ಜಪಿಸುವಾಗ, ಸಚೇತನ ಪ್ರಾಣಿಗಳಾದ ಮನುಷ್ಯರ ಮಾತೇನು ಅಂದರೆ, ಮನುಷ್ಯರು ದುಡ್ಡಿಗೆ ಮೋಹಬೀಳುವದು ಸ್ವಾಭಾವಿಕವೆಂದು ಕವಿಯ ಅಭಿಪ್ರಾಯ.

೧೫. ಮನುಷ್ಯನು ಕೇವಲ ಓದಿನಿಂದಾಗಲೀ, ಜ್ಞಾನದ ಹೊರೆಯಿಂದಾಗಲಿ ನಿಜವಾದ ವಿದ್ವಾಂಸನೆನಿಸಲಾರನು. ಯಾವನ ಜ್ಞಾನವು ಆತನ ಕೃತಿಗಳಲ್ಲಿ ಕಂಡು ಬರುವದೋ ಅವನೇ ನಿಜವಾದ ಪಂಡಿತ; ವಿದ್ವಾಂಸ. ತಿಳುವಳಿಕೆಗೂ ನಡವಳಿಕೆಗೂ ಮೇಳವಿಲ್ಲದಿದ್ದರೆ ಅಂಥ ತಿಳುವಳಿಕೆ ವ್ಯರ್ಥವೇ ಸರಿ. ಅಂಥ ಮನುಷ್ಯನು ಎಂದೂ ನಿಜವಾದ ಜ್ಞಾನಿ ಎನಿಸಲಾರನು. ಈ ಪದ್ಯದ ಮುಖ್ಯಮಾತು. ಇದನ್ನು ಕವಿ ಒಂದು ಸ್ವಾಭಾವಿಕ

ಸಂಗತಿಯಿಂದ ಸ್ಪಷ್ಟ ಮಾಡಿದ್ದಾನೆ. ರೋಗ ಬಂದಾಗ, ಔಷಧವು ಎಷ್ಟೇ ಒಳ್ಳೆಯದಿದ್ದರೂ ಸಹ ಕೇವಲ ಅದರ ಹೆಸರನ್ನು ತೆಗೆದುಕೊಂಡ ಕ್ಷಣಕ್ಕೆ ಆ ರೋಗ ಪರಿಹಾರವಾಗದು. ಆ ಔಷಧಿ ತಯಾರಿಸಿ ರೋಗಿಗೆ ಕೊಟ್ಟರೆ ಗುಣವಾದೀತೇ ಹೊರತು ಕೇವಲ ಆ ಔಷಧಿಯ ಹೆಸರನ್ನುಚ್ಚರಿಸುವದರಿಂದ ಏನೂ ಪ್ರಯೋಜನವಿಲ್ಲ. ಅದರಂತೆ ಜೀವನದಲ್ಲಿ ಕೃತಿಗೆ ಬಾರದ ಜ್ಞಾನವು ಜ್ಞಾನವಲ್ಲ. ಅದು ಕೇವಲ ತಲೆಯ ಮೇಲಿನ ಭಾರ. ಅಂಥವನೂ ಎಂದಿಗೂ ವಿದ್ವಾಂಸನಾಗಲಾರನು.

೧೬. ಮನುಷ್ಯನಿಗೆ ದೈವಾನುಕೂಲವಿಲ್ಲದಿದ್ದರೆ ಆತನಲ್ಲಿರುವಂಥ ಇತರ ಯಾವ ಸಾಧನ ಸಂಪತ್ತೂ ಉಪಯೋಗವಾಗಲಾರದು. ಆತನಲ್ಲಿ ಬುದ್ಧಿ ಇರಬಹುದು. ಸಂಪತ್ತಿರಬಹುದು; ಶಕ್ತಿ ಇರಬಹುದು. ಆದರೆ ದೈವಬಲದ ಮುಂದೆ ಇವಾವೂ ನಡೆಯಲಾರವು. ಉದಾಹರಣೆಗಾಗಿ, ಸೂರ್ಯನು ಮುಳುಗುವ ಕಾಲಕ್ಕೆ (ಬೀಳುವಾಗ) ಆತನ ಸಾವಿರಾರು ಕಿರಣಗಳೂ ಸಹ (ಕೈಗಳೂ ಸಹ) ಆತನನ್ನು ಬೀಳದಂತೆ ತಡೆದು ನಿಲ್ಲಿಸಲಾರವು.

೧೭. ಆಪತ್ತು ಬರುವ ಕಾಲಕ್ಕೆ ಮನುಷ್ಯನ ಬುದ್ಧಿಯು ಮಂಕಾಗುತ್ತದೆ. ಆತನಿಗೆ ಹಿಂದುಮುಂದಿನ ವಿಚಾರಮಾಡುವ ತಾಳ್ಮೆಯೇ ಇರಲಾರದು. ಇದೇ ಮಾತನ್ನೇ ಕವಿಯು ಶ್ರೀರಾಮಚಂದ್ರನ ಉದಾಹರಣೆಯಿಂದ ವಿವರಿಸಿದ್ದಾನೆ. ಬಂಗಾರದ ಚಿಗರೆಯು ಹುಟ್ಟುವದು ಅಸಂಭವ. ಹೀಗಿದ್ದರೂ ಸಹ ಇದು ನಿಜವಾಗಿಯೂ ಬಂಗಾರದ ಚಿಗರೆಯಿರಬಹುದೇ ಅಥವಾ ಮಾಯಾಮೃಗವೇ ಎಂದು ವಿಚಾರಮಾಡದೇ ಶ್ರೀರಾಮಚಂದ್ರನು ಆ ಮೃಗಕ್ಕಾಗಿ ಮನಸೋತನು. ಮುಂದೆ ಆತನಿಗೆ ಸಂಕಟ ಬರುವದಿದ್ದುದರಿಂದ ಆತನ ಬುದ್ಧಿಯು ಮಂಕಾಗಿತ್ತು. ಇಲ್ಲದಿದ್ದರೆ ಅಂಥ ಅಸಾಮಾನ್ಯವ್ಯಕ್ತಿಯು ಹೀಗೆ ವಿಚಾರಿಸದೆ ಮರುಳಾಗುತ್ತಿದ್ದನೇ ?

೧೮. ದೊಡ್ಡವರು ಅಥವಾ ಪರಾಕ್ರಮಿಗಳು ತಮ್ಮ ಸಾಹಸವನ್ನ ಕೊಡಸೆಯಿಂದ ಗುಣಸಾಮರ್ಥ್ಯದಿಂದ ತೋರ್ಪ ತಮಗಿಂತ ಕಡಿಮೆಯವರ ಕೊಂಡಿಗಳಿ, ಎಂಬುದೇ ಈ ಪದ್ಯದ ಮುಖ್ಯಾಭಿಪ್ರಾಯ. ಇದಕ್ಕೆ ಕವಿಯು ಸೃಷ್ಟಿಯಲ್ಲಿಯ ಒಂದು ಸಂಗತಿಯನ್ನು ನಿದರ್ಶಿಸಿದ್ದಾನೆ. [illegible] ಕೇವಲ ಸಣ್ಣ [illegible] ಗಿಡಗಳನ್ನಷ್ಟೇ ಕಿತ್ತೊಗೆಯುವದು ತೋರ್ಪ [illegible] ಬಾಗಿದ ಮೂಲ್ಗಳನ್ನ [illegible] ಕಿತ್ತೊಗೆಯುವದಿಲ್ಲ. [illegible] ಕತ್ತರಿಸುವದರಲ್ಲಿ [illegible]

ಶಕ್ತಿ ವಿನಿಯೋಗವಾದರೆ ಅದೆಂದೂ ಭೂಷಣವಾಗಲಾರದು. ಹಾಗೆಯೇ ಶೂರರು ತಮ್ಮ ಕಾರ್ಯವನ್ನು ಅಸಹಾಯರು, ಅಶಕ್ತರು, ಅಸಮಾನರು ಮುಂತಾದವರ ಮೇಲೆಂದೂ ತೋರಿಸುವದಿಲ್ಲ.

(೧೯) ಯಾವ ಕೆಲಸವಾಗಲಿ ಕೈಗೂಡಬೇಕಾದರೆ ಮನುಷ್ಯ ಪ್ರಯತ್ನ ದೊಡನೆ ದೈವ ಬಲವೂ ಬೇಕೇ ಬೇಕು ಎಂಬುದೇ ಕವಿಯ ಅಭಿಪ್ರಾಯ ಮನುಷ್ಯಪ್ರಯತ್ನ ಮತ್ತು ದೈವಬಲ ಇವೆರಡೂ ಕಾರ್ಯವೆಂಬ ರಥದ ಎರಡು ಗಾಲಿಗಳಿದ್ದಂತೆ. ಒಂದೇ ಗಾಲಿಯಿಂದ ರಥವು ನಡೆಯಲಾರದು. ಹಾಗೆಯೇ ಕೇವಲ ಪುರುಷ ಪ್ರಯತ್ನದಿಂದಲೇ ಕಾರ್ಯ ಕೈಗೂಡಲಾರದು. ಜೊತೆಗೆ ದೈವಾನುಕೂಲವು ಬೇಕು. ಈ ಮಾತನ್ನು ನಾವು ನಮ್ಮ ನಿತ್ಯಜೀವನದಲ್ಲಿ ಅನೇಕ ಉದಾಹರಣೆಗಳಿಂದ ಕಂಡುಕೊಳ್ಳಬಹುದು.

೨೦. ಮಹಾತ್ಮರ ಮನಸ್ಸರಿಯುವದು ಅಸಾಧ್ಯ, ಯಾಕೆಂದರೆ ಅವರ ಮಹಿಮೆಯೇ ಹಾಗಿರುತ್ತದೆ. ಒಮ್ಮೆ ಅವರ ಮನಸ್ಸು ಹೂವಿಗಿಂತಲೂ ಮೃದುವಾಗಬಹುದು. ಅಂದರೆ ಹೆರವರ, ದೀನರ ದುಃಖವನ್ನು ಕಂಡಾಗ ಅವರ ಮನಸ್ಸು ಮೃದುವಾಗಿ ಕನಿಕರ ಪಡುತ್ತದೆ. ಆದರೆ ಅದೇ ಮನಸ್ಸು ಸಂಕಟಗಳನ್ನೆದುರಿಸುವಾಗ ಕಲ್ಲಿಗಿಂತಲೂ ( ವಜ್ರಕ್ಕಿಂತಲೂ ) ಬಿರುಸಾಗು ತ್ತದೆ; ಕಠಿಣವಾಗುತ್ತದೆ. ಜಗತ್ತಿನ ದುಃಖವನ್ನೆಲ್ಲ ಕಂಡು ಮನಕರಗಿದ ಭಗವಾನ್ ಬುದ್ಧನು ತನ್ನ ಸತಿಸುತರ ಮೋಹವನ್ನು ತೊರೆಯುವಾಗ ಅದೆಂ ತಹ ಕಠಿಣ ಹೃದಯದವನಾದನು.?

೨೧. ಸಜ್ಜನರು ಸಂಪತ್ತಿನಿಂದ ಎಂದೂ ಸೊಕ್ಕುವದಿಲ್ಲ. ಇದಕ್ಕೆ ಬದಲು ಬಹು ನಮ್ರರಾಗಿರುತ್ತಾರೆ. ಇದು ಅವರ ಸ್ವಭಾವವೇ. ಇದೇ ಮಾತನ್ನು ಕವಿಯು ಕೆಲವು ಉದಾಹರಣೆಗಳಿಂದ ಸ್ಪಷ್ಟಪಡಿಸಿದ್ದಾನೆ. ಗಿಡ ಗಳು ಹಣ್ಣುಬಿಡುವದೆಂದರೆ ಸಂಪತ್ತನ್ನು ಪಡೆದಂತೆ, ಆದರೆ ಆ ಕಾಲಕ್ಕೆ ಅವೆಂದೂ ಸೊಕ್ಕುವದಿಲ್ಲ. ಅಂದರೆ ಮೇಲೇರುವದಿಲ್ಲ. ತದ್ವಿಪರೀತವಾಗಿ ಬಾಗುತ್ತವೆ. ಅದರಂತೆಯೇ ಮೋಡಗಳು ನೀರುತುಂಬಿದೊಡನೆ ಕೆಳಗಿಳಿ ಯುತ್ತವೆಯೇ ಹೊರತು ಮತ್ತಷ್ಟು ಮೇಲೇರುವದಿಲ್ಲ. ಇದರಿಂದ ಕಂಡು ಬರುವದೇನೆಂದರೆ, ಪರೋಪಕಾರಿಗಳೆಂದೂ ತಮ್ಮ ಸಮೃದ್ಧಿಯ ಕಾಲಕ್ಕೆ ಸೊಕ್ಕಿಗೇಳುವದಿಲ್ಲ. ವಿನಯಿಗಳಾಗಿಯೇ ವರ್ತಿಸುತ್ತಾರೆ.

೨೨. ಜಗತ್ತಿನಲ್ಲಿ ಅನೇಕ ಸಿಹಿಯಾದ ವಸ್ತುಗಳಿರುತ್ತವೆ. ಆದರೆ ಎಲ್ಲರಿಗೂ ಅವೇ ವಸ್ತುಗಳೇ ರುಚಿಕರವಾಗಿರುತ್ತವೆ ಅಥವಾ ಸಿಹಿಯಾಗಿರು

ತ್ತವೆ ಎಂದು ಹೇಳಲಾಗದು. ಏಕೆಂದರೆ, ಯಾರಿಗೆ ಯಾವ ವಸ್ತುವಿನ ಮೇಲೆ ಪ್ರೀತಿ ಇದೆಯೋ ಅದೇ ಅವರಿಗೆ ಸಿಹಿ ಎನಿಸುವದು. ಉದಾ:— ಮೊಸರು ಸಿಹಿ, ಜೇನು ತುಪ್ಪವೂ ಸಿಹಿ, ದ್ರಾಕ್ಷೆಯೂ ಸಿಹಿ, ಅದರಂತೆ ಕಲ್ಲು ಸಕ್ಕರೆಯೂ ಸಿಹಿ, ಆದರೆ ಎಲ್ಲರಿಗೂ ಇವೆಲ್ಲವೂ ಅಷ್ಟೇ ರುಚಿಕರ ಅಥವಾ ಸಿಹಿಯಾಗಿರುತ್ತವೆಂದು ಹೇಳಲು ಬರುವದಿಲ್ಲ. ಅದು ಅವರ ಒಲವನ್ನವಲಂಬಿಸಿರುತ್ತದೆ. ಇದೇ ಮಾತನ್ನೇ ಕಾಲಿದಾಸಕವಿಯು 'ಭಿನ್ನರುಚಿರ್ಹಿ ಲೋಕಃ' ಎಂಬ ಉಕ್ತಿಯಲ್ಲಿ ಹೇಳಿದ್ದಾನೆ. ( Tastes differ; What is one man's meat is another man's Poison):

೨೩. ಯಾವ ರಾಜ್ಯದಲ್ಲಿ ಸ್ತ್ರೀಯರು ಪ್ರಬಲರಾಗಿರುತ್ತಾರೋ, ಅರಸನು ಹುಡುಗನಾಗಿರುವನೋ, ಮತ್ತು ಮಂತ್ರಿಯು ನಿರಕ್ಷರಿಯೋ, ಅಂತಹ ಪ್ರದೇಶದಲ್ಲಿ ಒಂದು ಕ್ಷಣ ಸಹ ನಿಲ್ಲಬಾರದೆಂಬುದೇ ಕವಿಯ ಅಭಿಪ್ರಾಯ. ಏಕೆಂದರೆ ಅಲ್ಲಿ ಜೀವಿಸುವದು ಸಹ ಕಠಿಣವಾಗುತ್ತದೆ. ರಾಜ್ಯದಲ್ಲಿ ವ್ಯವಸ್ಥೆ, ಶಾಂತಿ ಸುಖಗಳು ನೆಲೆಗೊಳ್ಳಲಾರವು. ಅಂದ ಮೇಲೆ ಎಲ್ಲಿ ಜೀವಿಸುವದೇ ಕಠಿಣವಾಗುವದೋ, ಅಂಥಲ್ಲಿ ದುಡ್ಡು ಗಳಿಸುವೆವೆಂಬುದು ತೀರ ಅಸಂಭವ. ಸಾಮಾನ್ಯವಾಗಿ ಕವಿಗಳು ರಾಜರನ್ನು ಆಶ್ರಯಿಸಿ ಹಣಗಳಿಸುತ್ತಿದ್ದರು. ಕಾರಣ, ಯಾವ ರಾಜ್ಯದಲ್ಲಿ ಬದುಕುವದೇ ಅಸಾಧ್ಯವೋ ಅಲ್ಲಿ ಸಂಪತ್ತು ಪಡೆಯುವದು ಹೇಗೆ ಸಾಧ್ಯ ?

೨೪. ಈ ಪದ್ಯದ ಅಭಿಪ್ರಾಯವು 'ಅತಿ ಸರ್ವತ್ರ ವರ್ಜಯೇತ್' ಎಂಬ ಉಕ್ತಿಯಲ್ಲಿ ಅಡಕವಾಗಿದೆ. ಗೆಳೆತನವಾಗಲಿ, ಪರಿಚಯವಾಗಲಿ ಅತಿಯಾದರೆ, ಅದರಲ್ಲಿ ಗೌರವ ಉಳಿಯದು. ಅದರ ಬದಲು ತಿರಸ್ಕಾರವೂ ಅನಾದರವೂ ಉಂಟಾಗುವವು. ಅದರಂತೆ ಯಾರೇ ಆಗಲಿ, ಮೇಲಿಂದ ಮೇಲೆ ಬರುವದರಿಂದ ತಮಗಿದ್ದ ಮಾನವನ್ನು ಕಳೆದುಕೊಳ್ಳುತ್ತಾರೆ. ಇದಂತೂ ಸರ್ವಸಾಮಾನ್ಯವಾದ ಸಂಗತಿ. ಗೆಳೆಯನೇ ಆಗಲೀ ಅತಿಥಿಯೇ ಆಗಲಿ, ಮೊದಲು ಸಲ ಬಂದಾಗ ಹೊಂದುವ ಮರ್ಯಾದೆಯು ಅವನಿಗೆ ಕೊನೆಯ ವರೆಗೂ ಉಳಿಯಲಾರದು. ಇದೇ ಮಾತನ್ನೇ ಕವಿಯು ಬೇರೊಂದು ಉದಾಹರಣೆಯಿಂದ ಸ್ಪಷ್ಟೀಕರಿಸಿದ್ದಾನೆ. ನಮಗೆಲ್ಲ ಚಂದನಗಂಧದ ಕಟ್ಟಿಗೆಯೆಂದರೆ ಬಹು ಅಮೂಲ್ಯವಾಗಿದೆ. ಕಾರಣ ನಾವು ಅದನ್ನು ಬಹು ಜೋಕೆಯಿಂದ, ಗೌರವದಿಂದ ಕಾಣುತ್ತೇವೆ. ಆದರೆ ಮಲಯ ಪರ್ವತದಲ್ಲಿ

ಎಲ್ಲೆಡೆಯಲ್ಲಿಯೂ ಗಂಧದ ಕಟ್ಟಿಗೆಯೇ ಇರುವದರಿಂದ, ಅಲ್ಲಿಯ ಭಿಲ್ಲ ಸ್ತ್ರೀಯು ಅದನ್ನು ಉರುವಲಿನಂತೆ ಉಪಯೋಗಿಸುತ್ತಾಳೆ. ಏಕೆಂದರೆ ಅದು ಅಲ್ಲಿ ಅತಿಯಾಗಿರುವದರಿಂದ ಅವಳಿಗೆ ಅದರ ಮಹತ್ವವೇ ಇಲ್ಲ; ಮೇಲಾಗಿ ಅದರ ಬಗ್ಗೆ ತಿರಸ್ಕಾರವೇ ಉಂಟಾಗಿದೆ. ಈ ಪದ್ಯವು ಆಂಗ್ಲ ಭಾಷೆಯ 'Familiarity breeds contempt' ಎಂಬ ನಾಣ್ಣುಡಿಯನ್ನು ನೆನಪಿಗೆ ತಂದು ಕೊಡುತ್ತದೆ.

(೨೫) ಈ ಶ್ಲೋಕದಲ್ಲಿ ಕವಿಯು ಪ್ರಯತ್ನವಾದವನ್ನು ಪುರಸ್ಕರಿಸಿದ್ದಾನೆ. ಲಕ್ಷ್ಮಿಯು (ಸಂಪತ್ತು) ಸೋಮಾರಿಗಳಿಗೆ ಒಲಿಯದೆ ಉದ್ಯೋಗಶೀಲರಿಗೆ ಮಾತ್ರ ಒಲಿಯುತ್ತಾಳೆ. ಆದ್ದರಿಂದ ದೈವವೆಂದು ಸುಮ್ಮನೆ ಕೂಡದೆ ಉದ್ಯೋಗವನ್ನು ಮಾಡಬೇಕು ಎಂದು ಕವಿಗೆ ಹೇಳಬೇಕಾಗಿದೆ. ದೇವರು, ದೈವವು ಎಂದು ದೈವದ ಮೇಲೆ ಭಾರ ಹಾಕಿ ಕೂಡುವದು ಕೀಳು ಮನುಷ್ಯರ ಲಕ್ಷಣ. ಆದ್ದರಿಂದ ಪ್ರಯತ್ನ ಮಾಡಬೇಕು. ದೈವವನ್ನು ಬದಿಗಿರಿಸಬೇಕು. ಎಂದರೆ, ಕೆಲಸವು ತಾನೇ ಕೈಗೂಡುವದು. ಪ್ರಯತ್ನ ಮಾಡಿದರೂ ಕಾರ್ಯ ಕೈಗೂಡದಿದ್ದರೆ ಆವ ದೋಷವೂ ಇಲ್ಲ, ಎಂದು ಕವಿಯ ಅಭಿಪ್ರಾಯವಿದೆ.

---

## ೨. ಭಾಷಾಂತರಕ್ಕಾಗಿ ಪದ್ಯೇತರ ಅವತರಣಿಕೆಗಳು.

### ಅ. ಸಂಸ್ಕೃತದಿಂದ ಕನ್ನಡಕ್ಕೆ

(१) सा नृपात्मजा विग्रहवती श्रीरिव वर्धमाना गच्छता कालेन यौवनावस्था बभूव । तां काञ्चनीं प्रतिमामिव तेजसा ज्वलन्तीं दृष्ट्वा सर्वे जना देवकन्येयं प्राप्तेति मेनिरे । तस्यास्तेजसा प्रतिवारितश्च न कोऽपि तां वरयामास । तां यौवनावस्थामपि नृपतिभिरयाच्यमानां दृष्ट्वा पिता परमदुःखितोऽभवत् । तामाहूयोवाच च । पुत्रि प्रदानकालस्तेऽयम् । न च कश्चित्त्वां वृणोति । तस्माद्गुणैरात्मनः सदृशं भर्तारं स्वयमन्विच्छेति । सा तथेति पितुर्वचनमादाय सचिवैर्युता हैमं रथमास्थाय राजर्षीणां तपोवनानि जगाम । तीर्थान्याश्रमांश्चाभिगम्य पितुर्वेश्म निववृते । तदा स सभामध्ये भगवता नारदेन सह कथायोगेनोपविष्ट आसीत् । तां तथायान्तीं दृष्ट्वा नारदोऽश्वपतिं पप्रच्छ । क्व तवेयंसुता गताभूत् । कुतश्चागता किमर्थं च त्वमिमां भर्त्रे नाद्यापि प्रयच्छसीति ।

(२) अस्ति कस्मिंश्चिद्वनोद्देशे करालकेसरो नाम सिंहः प्रतिवसति स्म । तस्य च धूसरको नाम शृगालः सदैवानुयायी परिचारकोऽस्ति । अथ कदाचित्तस्य हस्तिना सह युद्धमानस्य शरीरे प्रहाराः सञ्जाताः पदमेकमपि चलितुं न शक्नोति । तस्याचलनाच्च धूसरकः क्षुत्क्षामकण्ठो दौर्बल्यं गतः । अन्यस्मिन्नहनि तमवोचत् । स्वामिन् बुभुक्षया पीडितोऽहं पदात्पदमपि चलितुं न शक्नोमि । तत्कथं ते शुश्रूषां करोमि । सिंह आह । भो गच्छान्वेषय किंचित् सत्त्वं येनेमामवस्थां गतोऽपि व्यापादयामि । तदाकर्ण्य शृगालोऽन्वेषयन् कंचित्समीपवर्तिनं ग्राममासादितवान् ॥

(३) **भीमः**— काञ्चनस्तम्भसदृशो रिपूणां निग्रहे रतः ।
अयं तु दक्षिणो बाहुरायुधं सहजं मम ॥

**घटोत्कचः** — इदमुपपन्नं पितुर्मे भीमसेनस्य ।

**भीमः** — अथ कोऽयं भीमो नाम ।
विश्वकर्ता शिवः कृष्णः शक्रः शक्तिधरो यमः ।
एतेषु कथ्यतां भद्र केन ते सदृशः पिता ॥

**घटोत्कचः** — सर्वैः

**भीमः** — धिगनृतमेतत् ।

**घटोत्कचः** — कथमनृतमित्याह । क्षिपसि मे गुरुम् । भवतु इमं स्थूलं वृक्षमुत्पाद्य प्रहरामि । (उत्पाद्य प्रहरति) कथमनेनापि न शक्यते हन्तुम् । किं नु खलु करिष्ये भवतु, दृष्टम् । एतद् गिरिकूटमुत्पाट्य प्रहरामि शैलकूटं मया क्षिप्तं प्राणानादाय यास्यति ।

(४) सीताया वचनं श्रुत्वा मारुतिर्भीमविक्रमः ।
शिरस्यञ्जलिमाधाय वाक्यमुत्तरमब्रवीत् ॥
न त्वामिहस्थां जानीते रामः कमललोचनः ।
तेन त्वां नानयत्याशु शचीमिव पुरंदरः ॥
श्रुत्वैव वचो मह्यं क्षिप्रमेष्यति राघवः ।
चमूं प्रकर्षन् महतीं हर्यृक्षगणसंयुताम् ।
तत्र यद्यन्तरा मृत्युर्यदि देवा महासुराः ।
स्थास्यन्ति पथि रामस्य स तानपि वधिष्यति ॥
तवादर्शनजेनार्ये शोकेन परिपूरितः ।
न शर्म लभते रामः सिंहार्दित इव द्विपः ॥

(५) ततस्तेषु प्रयातेषु कौंतेयः सत्यसंगरः ।
अभ्यभाषत धर्मात्मा भ्रातॄन्सर्वान्युधिष्ठिरः ॥१॥
द्वादशेमानि वर्षाणि वस्तव्यं निर्जने वने ।
समीक्षध्वं महारण्ये देशं बहुमृगद्विजम् ॥२॥
बहुपुष्पफलं रम्यं शिवं पुण्यजनोचितम् ।
यत्रेमा द्वादशसमाः सुखंप्रतिवसेमहि ॥३॥
एवमुक्ते प्रत्युवाच धर्मराजं धनंजयः ।
गुरुवन्मानववरं मानयित्वा मनस्विनम् ॥४॥
भवानेव महर्षीणां वृद्धानां पर्युपासितः ।
यत्रेच्छसि महाराज निवासं तत्र कुर्महे ॥५॥

**ಉತ್ತರಗಳು ಕನ್ನಡಕ್ಕೆ ಪರಿವರ್ತಿಸಿದ್ದು.**

೧. ಆ ರಾಜಪುತ್ರಿಯು ಸಾಕ್ಷಾತ್ ಲಕ್ಷ್ಮಿಯೇ ಈ ರೂಪವನ್ನು ಧರಿಸಿರುವಳೋ ಏನೋ ಅನ್ನುವಂತೆ ಬೆಳೆಯುತ್ತಾ ಕೆಲಕಾಲದ ಮೇಲೆ ಯೌವನಾವಸ್ಥೆಯನ್ನು ಹೊಂದಿದಳು. ಬಂಗಾರದ ಪ್ರತಿಮೆಯಂತೆ ತೇಜಸ್ವಿನಿಯಾಗಿ ಹೊಳೆಯುವ ಅವಳನ್ನು ಕಂಡು ಜನರೆಲ್ಲರೂ ಇವಳು ದೇವಕನ್ಯೆಯೇ ಎಂದು ತಿಳಿದರು. ಅವಳ ತೇಜಸ್ಸಿನಿಂದ ಕಳೆಗುಂದಿ ಯಾರೂ ಅವಳನ್ನು ಲಗ್ನವಾಗಲು ಬಯಸಲಿಲ್ಲ. ಅವಳು ಯುವತಿಯಾಗಿದ್ದರೂ ಸಹ ಯಾರ ಅರಸರಿಂದ ಬೇಡಲ್ಪಡದಿರುವದನ್ನು ಕಂಡು ಅವಳ ತಂದೆಯು ಬಹಳ ದುಃಖಿತನಾದನು. ಅವಳನ್ನು ಕರೆದು ಅಂದನು. ' ಮಗಳೇ ಈಗ ನಿನ್ನನ್ನು ಲಗ್ನಮಾಡಿಕೊಡುವ ಕಾಲವು. ಯಾರೂ ನಿನ್ನನ್ನು ಲಗ್ನವಾಗಲು ಬಯಸ ಲೊಲ್ಲರು. ಆದುವರಿಂದ ನಿನ್ನ ಗುಣಗಳಿಗೆ ಅನುರೂಪನಾದ ಗಂಡನನ್ನು ನೀನೇ ಹುಡುಕು " ಅವಳು ಹಾಗೇ ಆಗಲಿ ಎಂದು ತಂದೆಯ ಮಾತನ್ನು ಮನ್ನಿಸಿ ಮಂತ್ರಿಗಳೊಡನೆ ಬಂಗಾರದ ರಥವನ್ನೇರಿ ಋಷಿ ಸದೃಶರಾದ ರಾಜರ ತಪೋವನಗಳಿಗೆ ಹೋದಳು. ಮತ್ತು ಅನೇಕ ತೀರ್ಥ ಕ್ಷೇತ್ರಗಳನ್ನೂ ಆಶ್ರಮಗಳನ್ನೂ ಸುತ್ತಿ ಮರಳಿ ತಂದೆಯ ಮನೆಗೆ ಬಂದಳು. ಅವಳು ಬಂದಾಗ ಅವಳ ತಂದೆಯು ಸಭೆಯ ಮಧ್ಯದಲ್ಲಿ ಕುಳಿತು ಪೂಜ್ಯನಾದ ನಾರದನೊಡನೆ ಸಂಭಾಷಣೆಯಲ್ಲಿ ತೊಡಗಿದ್ದನು. ಅವಳು ಹಾಗೆ ಬರುತ್ತಿರುವದನ್ನು ಕಂಡು ನಾರದನು ಅಶ್ವಪತಿಗೆ ಕೇಳಿದನು. " ಈ ನಿನ್ನ ಮಗಳು ಎಲ್ಲಿ ಹೋಗಿದ್ದಳು ?

ಎಲ್ಲಿಂದ ಬಂದಳು ? ಇವಳನ್ನು ಇನ್ನೂವರೆಗೆ ನೀನು ಏಕೆ ಲಗ್ನಮಾಡಿ ಕೊಟ್ಟಿಲ್ಲ ?”

೨. ಒಂದು ಅಡವಿಯಲ್ಲಿ ಕರಾಲಕೇಸರನೆಂಬ ಹೆಸರಿನ ಒಂದು ಸಿಂಹವಿತ್ತು. ಧೂಸರಕನೆಂಬ ನರಿಯು ಯಾವಾಗಲೂ ಆ ಸಿಂಹನನ್ನೇ ಹಿಂಬಾಲಿಸುತ್ತಾ ಅದರ ಸೇವಕನಾಗಿತ್ತು. ಹೀಗಿರಲು ಒಮ್ಮೆ ಆ ಸಿಂಹವು ಆನೆಯೊಡನೆ ಹೊಡೆದಾಡುವಾಗ ಅದರ ಮೈಮೇಲೆ ಅನೇಕ ಗಾಯಗಳಾದವು ಮತ್ತು ಅದರಿಂದ ಅದಕ್ಕೆ ಒಂದು ಹೆಜ್ಜೆಯನ್ನು ಸಹ ಇಡಲು ಶಕ್ತಿ ಇರಲಿಲ್ಲ. ಆ ಸಿಂಹವು ಹೀಗೆ ಚಲಿಸದೇ ಇದ್ದುದರಿಂದ ಆ ಧೂಸರಕನೆಂಬ ನರಿಯು ಹಸಿವೆಯಿಂದ ಬಳಲಿ ದುರ್ಬಲವಾಯಿತು. ಬೇರೊಂದು ದಿನ ಆ ನರಿಯು ಸಿಂಹಕ್ಕೆ ಅಂದಿತು. “ ಒಡೆಯನೇ ಹಸಿವೆಯಿಂದ ಬಳಲುವಂಥ ನಾನು ಒಂದು ಹೆಜ್ಜೆಯನ್ನು ಸಹ ಇಡಲಾರೆ. ಕಾರಣ ನಿನ್ನ ಸೇವೆಯನ್ನಾದರೂ ಹೇಗೆ ಮಾಡಲಿ ?” ಎಂದು. ಸಿಂಹವು ಅಂದಿತು. “ಎಲೈ, ಹೋಗು ಯಾವುದಾದರೊಂದು ಪ್ರಾಣಿಯನ್ನು ಹುಡುಕು. ಇಂಥ ಅವಸ್ಥೆಯನ್ನು ಹೊಂದಿದ್ದರೂ ಸಹ ನಾನು ಆ ಪ್ರಾಣಿಯನ್ನು ಕೊಲ್ಲುವೆನು” ಅದನ್ನು ಕೇಳಿ ನರಿಯು ಪಶುವನ್ನು ಹುಡುಕುತ್ತಾ ಸಮೀಪದಲ್ಲಿಯೇ ಇದ್ದ ಒಂದು ಊರಿಗೆ ( ಹಳ್ಳಿಗೆ ) ಬಂದಿತು.

೩. ಭೀಮ:—ಬಂಗಾರದ ಕಂಬದಂತೆ ಹೊಳೆಯುವ ಮತ್ತು ವೈರಿಗಳ ಸಂಹಾರದಲ್ಲಿಯೇ ತೊಡಗಿದ ಈ ನನ್ನ ಬಲಗೈಯೇ ನನ್ನ ಸಹಜವಾದ ಆಯುಧವು.

ಘಟೋತ್ಕಚ:— ಇದು ನನ್ನ ತಂದೆಯಾದ ಭೀಮಸೇನನಿಗೆ ಒಪ್ಪುವ ಮಾತು.

ಭೀಮ:— ಹಾಗಾದರೆ ಈ ಭೀಮಸೇನೆಂದರೆ ಯಾರು? ಬ್ರಹ್ಮ, ಶಂಕರ ಕೃಷ್ಣ, ಇಂದ್ರ, ಚಕ್ರಧರ ಮತ್ತು ಯಮ ಇವರಲ್ಲಿ ಎಲೈ, ನಿನ್ನ ತಂದೆಯು ಯಾರನ್ನು ಹೋಲುವನು ?

ಘಟೋತ್ಕಚ:—ಎಲ್ಲರನ್ನೂ ಹೋಲುವನು.

ಭೀಮ:— ಧಿಕ್ಕಾರವು. ಈ ಮಾತು ಸುಳ್ಳು.

ಘಟೋತ್ಕಚ:— ಏನು, ಈ ಮಾತು ಸುಳ್ಳೆಂದನಲ್ಲ. ನನ್ನ ತಂದೆಯನ್ನು ಬಯ್ಯುವಿಯಾ ? ಇರಲಿ. ಈ ದೊಡ್ಡಗಿಡವನ್ನು ಕಿತ್ತಿ ನಿನ್ನನ್ನು ಹೊಡೆ

ಯುವೆನು. ( ಹೀಗೆಂದು ಗಿಡವನ್ನು ಕಿತ್ತಿ ಹೊಡೆಯುತ್ತಾನೆ. ) ಇದೇನು ಇದರಿಂದಲೂ ಇವನನ್ನು ಕೊಲ್ಲುವದು ಶಕ್ಯವಿಲ್ಲವಲ್ಲ. ಈಗೇನು ಮಾಡಲಿ. ಇರಲಿ ಗೊತ್ತಾಯಿತು. ಈ ಪರ್ವತ ಶಿಖರವನ್ನೇ ಕಿತ್ತಿ ಹೊಡೆಯುವೆನು. ನಾನು ಒಗೆದ ಈ ಪರ್ವತದ ತುದಿಯು ನಿನ್ನ ಪ್ರಾಣ ತೆಗೆದುಕೊಂಡೇ ಹೋಗುವದು.

(೪) ಸೀತೆಯ ಮಾತನ್ನು ಕೇಳಿ ಬಹು ಪರಾಕ್ರಮಿಯಾದ ಹನು- ಮಂತನು ತಲೆಯ ಮೇಲೆ ಕೈಜೋಡಿಸಿ (ಶಿರಬಾಗಿ ನಮಸ್ಕರಿಸಿ) ಅವಳ ಮಾತಿಗೆ ಉತ್ತರವಾಗಿ ಹೀಗೆಂದನು. ॥೧॥

ಕಮಲದಂತೆ ಸುಂದರವಾದ ಕಣ್ಣುಳ್ಳ ರಾಮನಿಗೆ ನೀನು ಇಲ್ಲಿ ಇರುವಿ ಯೆಂಬುದು ಗೊತ್ತಿಲ್ಲ. ಆದುದರಿಂದಲೇ ಇಂದ್ರನು ಶಚಿಯನ್ನು ಕರೆದೊಯ್ಯು ವಂತೆ ನಿನ್ನನ್ನು ಕೂಡಲೇ ಆತನು ಕರೆದೊಯ್ಯುವದಿಲ್ಲ. ॥೨॥

ನನ್ನ ಮಾತನ್ನು ಕೇಳಿದೊಡನೆಯೇ ರಾಮನು ಕಪಿಗಳ ಮತ್ತು ಕರಡಿ- ಗಳ ಒಂದು ದೊಡ್ಡ ಸೈನ್ಯವನ್ನು ತೆಗೆದುಕೊಂಡು ತೀವ್ರವಾಗಿ (ಇಲ್ಲಿಗೆ) ಬರುವನು. ॥೩॥

ಹಾಗೆ ಬರುವ ರಾಮನಿಗೆ ಹಾದಿಯಲ್ಲಿ ಮೃತ್ಯು ದೇವತೆಯೇ ಆಗಲಿ, ದೇವತೆಗಳೇ ಆಗಲಿ ಅಥವಾ ದೊಡ್ಡ ದೊಡ್ಡ ರಾಕ್ಷಸರೇ ಆಗಲಿ; ಯಾರೇ ಇದಿರಾದರೂ (ಅವನಿಗೆ ಅಡ್ಡಿಯನ್ನುಂಟುಮಾಡಿದರೂ) ರಾಮನು ಅವರೆಲ್ಲ- ರನ್ನೂ ಕೊಲ್ಲುವನು. ॥೪॥

ನಿನ್ನನ್ನು ಕಾಣದೇ ಇದ್ದುದರಿಂದುಟಾದ ದುಃಖದಿಂದ ತುಂಬಿದ ರಾಮ ನಿಗೆ, ಸಿಂಹದಿಂದ ಗಾಯಗೊಂಡ ಆನೆಯಂತೆ ( ಆನೆಗೆ ದೊರಕದಂತೆ ) ಸ್ವಲ್ಪವೂ ಶಾಂತಿ (ಸುಖ) ಸಿಗಲೊಲ್ಲದು. ॥೫॥

(೫) ಆಗ ಅವರೆಲ್ಲರೂ ಹೊರಟು ಹೋದ ಮೇಲೆ, ಸತ್ಯಸಂಧನಾದ ಧರ್ಮಿಷ್ಠನಾದ ಕುಂತಿಯ ಮಗನಾದ ಯುಧಿಷ್ಠಿರನು ತನ್ನ ಎಲ್ಲ ತಮ್ಮಂದಿ- ರನ್ನು ಕುರಿತು ಹೀಗೆ ಅಂದನು. ॥೧॥

ಯಾರೂ ಇಲ್ಲದ (ನಿರ್ಜನ) ಅರಣ್ಯದಲ್ಲಿ ಈ ಹನ್ನೆರಡು ವರುಷಗಳ ವರೆಗೆ ವಾಸಿಸಬೇಕಾಗಿದೆ. ಆದುದರಿಂದ ಈ ದೊಡ್ಡ ಅಡವಿಯಲ್ಲಿ ಅನೇಕ ಪಶುಪಕ್ಷಿಗಳುಳ್ಳ ಒಂದು ಸ್ಥಳವನ್ನು ಹುಡುಕಿರಿ. ॥೨॥

ಎಲ್ಲಿ ಹನ್ನೆರಡು ವರುಷಗಳ ಕಾಲ ನಾವು ಸುಖದಿಂದ ಇರಬಲ್ಲೆವೋ, ಮತ್ತು ಎಲ್ಲಿ ಬಹಳ ಹೂ, ಹಣ್ಣುಗಳಿರುವವೋ, ಮತ್ತು ಯಾವ ಸ್ಥಳವು

ರಮ್ಯವಾಗಿಯೂ ಮಂಗಲಕರವಾಗಿಯೂ ಇರುವದೋ ಮತ್ತು ಯಾವ ಸ್ಥಳ ಪುಣ್ಯವಂತರಿಗೆ (ಸಜ್ಜನರಿಗೆ) ಇರಲು ಯೋಗ್ಯವಾದುದೋ (ಅಂಥ ಒಂದು ಸ್ಥಳವನ್ನು ಹುಡುಕಿರಿ.) ॥೩॥

ಹೀಗೆಂದು ಧರ್ಮರಾಜನು ನುಡಿಯಲು, ಅರ್ಜುನನು, ಮನುಷ್ಯರಲ್ಲೆಲ್ಲ ಶ್ರೇಷ್ಠನಾದ, ದೃಢ ಮನಸ್ಸಿನವನಾದ ಧರ್ಮನನ್ನು ಹಿರಿಯರಿಗೆ(ತಂದೆಗೆ) ಮಾನಕೊಡುವಂತೆ ಮನ್ನಿಸಿ, ಈ ರೀತಿಯಾಗಿ ಅಂದನು. ॥೪॥ ಶ್ರೇಷ್ಠರಾದ ಋಷಿಗಳಿಗೂ, ಹಿರಿಯರಿಗೂ ಮೆಚ್ಚಿಗೆಯವನಾಗಿ ನೀನೇ ಇರುವೆ. (ಅವರೆಲ್ಲರಿಂದಲೂ ನೀನು ಮನ್ನಿಸಲ್ಪಡುವಿ) ಆದುದರಿಂದ ಮಹಾರಾಜನೇ ನೀನು ಎಲ್ಲಿ ಇಚ್ಛಿಸುವಿಯೋ ಅಲ್ಲಿಯೇ ನಾವು ವಸತಿಯನ್ನು ಮಾಡುವೆವು.

## ೨. ಬ ಕನ್ನಡದಿಂದ ಸಂಸ್ಕೃತಕ್ಕೆ

(೧) ಯಾವದೋ ಒಂದು ಹಳ್ಳಿಯಲ್ಲಿ ಒಬ್ಬ ಮುದುಕೆಯು ಇದ್ದಳು. ಅವಳ ಹತ್ತಿರ ಒಂದು ಕೋಳಿಯೂ ಬಹು ಜನ ದಾಸಿಯರೂ ಇದ್ದರು. ಕೋಳಿಯು ಕೂಗಿದಾಗ ಆ ಮುದುಕೆಯು ದಾಸಿಯರನ್ನು ಕೆಲಸ ಮಾಡಲಿಕ್ಕೆ ಎಬ್ಬಿಸುತ್ತಿದ್ದಳು. ಆ ದಾಸಿಯರ ನಿದ್ರೆಯು ಹೀಗೆ ಪ್ರತಿ ದಿವಸ ಕೆಡುತ್ತಿತ್ತು. ಆದುದರಿಂದ ಕಂಗೆಟ್ಟಂಥ ಆ ದಾಸಿಯರು ತಮ್ಮ ತಮ್ಮೊಳಗೆ ಆಲೋಚನೆಮಾಡಿ ಆ ಕೋಳಿಯನ್ನು ಕೊಂದರು. ಆದರೆ ಇದು ಅವರ ತೊಂದರೆಯನ್ನು ಹೆಚ್ಚಿಸಿತು. ಯಾಕೆಂದರೆ ಕೋಳಿಯು ಸತ್ತದ್ದರಿಂದ ಮಧ್ಯರಾತ್ರಿಯಾಗಿರಬಹುದಾಗಿದ್ದರೂ, ಆ ಮುದುಕೆಯು ತನಗೆ ಎಚ್ಚರವಾದಾಗ, ಆ ದಾಸಿಯರನ್ನು ಅವರ ಹಾಸಿಗೆಗಳಿಂದ ಎಬ್ಬಿಸಹತ್ತಿದಳು.

(೨) ಒಮ್ಮೆ ಒಂದು ಸಿಂಹವು ಅರಣ್ಯದಲ್ಲಿ ಸೊಗಸಾಗಿ ಸುಳಿದಾಡುತ್ತಿರುವ ಸುಂದರಳಾದ ಒಬ್ಬ ವನಚರನ ಮಗಳನ್ನು ನೋಡಿ, ಅವಳ ಮೇಲೆ ಪ್ರೀತಿಯನ್ನಿಟ್ಟಿತು. ಅದರ ಮನೋವಿಕಾರವು ಇಷ್ಟು ಹೆಚ್ಚು ಬೆಳೆಯಿತಲ್ಲಾ ಎಷ್ಟೆಂದರೆ ಅದು ಕೂಡಲೇ ಆ ಹುಡುಗೆಯ ತಂದೆಯ ಹತ್ತರ ಹೋಯಿತು. ಮತ್ತು ಆಕೆಯನ್ನು ತನ್ನ ಹೆಂಡತಿಯನ್ನಾಗಿ ಮಾಡಿಕೊಡಬೇಕೆಂದು ಕೇಳಿತು. ವನಚರನು ತುಸು ಹೊತ್ತು ಆಲೋಚಿಸಿ ಅದಕ್ಕೆ ತನ್ನ ಒಪ್ಪಿಗೆಯನ್ನು ಕೊಟ್ಟನು. ಮತ್ತು "ಆದರೆ ನನ್ನ ಮಗಳು ನಿನ್ನ ಹಲ್ಲುಗಳನ್ನು ಹಾಗೂ

ಉಗುರುಗಳನ್ನು ನೋಡಿ ಹೆದರುತ್ತಾಳೆ. ಅವನ್ನು ನೀನು ತೆಗೆಯಿಸಲಿಕ್ಕೇ ಬೇಕು," ಎಂದನು. ವಿಕಾರವಶದಿಂದ ಹುಚ್ಚನಾದ ಸಿಂಹವು ಕೂಡಲೇ ಹಾಗೆ ಮಾಡಿತು. ಮತ್ತು ಆ ವನಚರನಿಂದ ಸುಲಭವಾಗಿ ದೊಡ್ಡ ಬಡಿಗೆಯಿಂದ ಕೊಲ್ಲಲ್ಪಟ್ಟಿತು.

(೩) ಒಮ್ಮೆ ಒಂದು ಕತ್ತಲೆಯ ರಾತ್ರಿಯಲ್ಲಿ ಓರ್ವ ಕುರುಡನು ತನ್ನ ಕೈಯಲ್ಲಿ ಒಂದು ದೀಪವನ್ನೂ ತಲೆಯ ಮೇಲೆ ಒಂದು ಗಡಿಗೆಯನ್ನು ಇಟ್ಟು ಕೊಂಡು ಹೋಗುತ್ತಿದ್ದನು. ದಾರಿಯಲ್ಲಿ ಒಬ್ಬ ಮನುಷ್ಯನು ಆತನಿಗೆ ಭೆಟ್ಟಿಯಾದನು. ಮತ್ತು "ಎಲೈ ಮೂರ್ಖನೇ, ನಿನಗೆ ಕತ್ತಲೆ ಬೆಳಕುಗಳೆರಡೂ ಒಂದೇ; ಹೀಗಿರಲು ಈ ದೀಪದ ಉಪಯೋಗವೇನು," ಎಂದು ಅಂದನು ಆ ಕುರುಡನು ನಕ್ಕು ಅಂದನು "ಈ ದೀಪವು ನನ್ನ ಸಲುವಾಗಿ ಇಲ್ಲ ಆದರೆ ನಿಮ್ಮಂಥ ಮೂರ್ಖರು ಕತ್ತಲೆಯಲ್ಲಿ ನನಗೆ ಹಾಯ್ದು ನನ್ನ ಗಡಿಗೆಯನ್ನು ಒಡೆಯಬಾರದೆಂದು, ನಿಮ್ಮಂಥವರ ಸಲುವಾಗಿ ಇದೆ."

(೪) ಒಮ್ಮೆ ಒಬ್ಬ ಒಕ್ಕಲಿಗನು ಪೇಟೆಗೆ ಹೋದನು. ಮತ್ತು ಏಳು ಕತ್ತೆಗಳನ್ನು ಕೊಂಡುಕೊಂಡನು. ಒಂದು ಕತ್ತೆಯನ್ನೇರಿ ಆತನು ಉಳಿದವು ಗಳೊಡನೆ ಮನೆಕಡೆಗೆ ಹೊರಟನು. ದಾರಿಯಲ್ಲಿ ಆತನು ತನ್ನ ಕತ್ತೆಗಳನ್ನು ಅನೇಕ ಸಾರೆ ಎಣಿಸಿದನು. ಆಗ ಅವನು ಆರೇ ಕತ್ತೆಗಳನ್ನೆಣಿಸುತ್ತಿದ್ದನು. ಯಾಕಂದರೆ ಆತನಿಗೆ ಆರೇ ಕತ್ತೆಗಳು ಕಾಣಿಸುತ್ತಿದ್ದವು. ಮತ್ತು ತಾನು ಕುಳಿತಂಥ ಕತ್ತೆಯನ್ನು ಆತನು ಎಣಿಸುತ್ತಲೇ ಇರಲಿಲ್ಲ. ಅವನು ಬಹಳ ದುಃಖಿತನಾದನು. ಮತ್ತು ತನ್ನಷ್ಟಕ್ಕೆ "ಅವರು ಒಂದು ಕತ್ತೆಯನ್ನು ಕದ್ದಿದ್ದಾರೆ" ಎಂದು ಅಂದು ಕೊಂಡನು. ಆಮೇಲೆ ಆತನು ಮನೆಗೆ ಬಂದು ತನ್ನ ಹೆಂಡತಿಯನ್ನು ಕೂಗಿ ಕರೆದ "ಅಯ್ಯೋ; ನಾನು ಏಳು ಕತ್ತೆಗಳನ್ನು ಕೊಂಡಿದ್ದೆನು. ಆದರೆ, ನೋಡು, ಇಲ್ಲಿ ಕೇವಲ ಆರೇ ಇವೆ. ಅವರು ಒಂದನ್ನು ಕದ್ದಿದ್ದಾರೆ" ಎಂದು ಹೇಳಿದನು. ಆ ಹೆಂಗಸು ಅವನ ಮಾತಿಗೆ ನಕ್ಕಳು. ಮತ್ತು ಅಂದಳು. "ನೀನು ಒಂದು ಕತ್ತೆಯನ್ನು ಕಳೆದುಕೊಂಡಿಲ್ಲ. ತದ್ವಿರುದ್ಧವಾಗಿ ನನಗ ಎಂಟು ಕತ್ತೆಗಳು ಕಾಣುತ್ತವೆ. ಮತ್ತು ಆ ಎಂಟನೆಯ ಕತ್ತೆಯು ನೀನು."

(೫) ಶ್ವೇತಕೇತುವೆಂಬ ಒಬ್ಬ ಮಹಾ ತೇಜಸ್ವಿಯಾದ ಋಷಿ ಇದ್ದನು ಅವನು ದೇವರ ಪೂಜೆಯ ದೆಶೆಯಿಂದ ಆಕಾಶ ಗಂಗೆಯಲ್ಲಿಯ ಕಮಲಗಳನ್ನು

ಹರಿಯುತ್ತಿರುವಾಗ ಲಕ್ಷ್ಮೀದೇವಿಯು ಅವನನ್ನು ನೋಡಿದಳು. ಈ ಋಷಿಯಂತೆಯೇ ತನಗೆ ತೇಜಃಪುಂಜನಾದ ಮಗನೊಬ್ಬನಾಗಬೇಕೆಂದು ಆವಾಗ ಅವಳಿಗೆನಿಸಿತು. ಲಕ್ಷ್ಮಿಯು ಆ ವೇಳೆಯಲ್ಲಿ ಒಂದು ಬಿಳಿಯ ಕಮಲದ ಮೇಲೆ ಕುಳಿತಿದ್ದಳು; ಅದರೊಳಗಿಂದಲೇ ಆಕ್ಷಣದಲ್ಲಿ ಒಬ್ಬ ಹುಡುಗನು ಹುಟ್ಟಿದನು. ಅವಳು ಆ ಹುಡುಗನನ್ನು ಆ ಋಷಿ ಶ್ರೇಷ್ಠನಿಗೆ ಅರ್ಪಿಸಿದಳು. "ಮುನಿ ಶ್ರೇಷ್ಠನೇ, ಈ ಹುಡುಗನು ನಿಮ್ಮವನೇ ಆಗಿದ್ದಾನೆ. ಇವನನ್ನು ಸ್ವೀಕರಿಸಬೇಕು" ಎಂದು ಅವಳು ಅಂದಳು. ಶ್ವೇತಕೇತುವು ಅವಳ ಮಾತಿಗೆ ಒಪ್ಪಿದನು. ಮತ್ತು ಆ ಹುಡ ಗನ ಜಾತಕರ್ಮಾದಿ ಸಂಸ್ಕಾರಗಳನ್ನು ಮಾಡಿದನು. ಮತ್ತು ಆ ಹುಡುಗನು ಬಿಳಿಯ ಕಮಲದಲ್ಲಿಂದ ಹುಟ್ಟಿದ್ದರಿಂದ ಅವನಿಗೆ ಪುಂಡರೀಕನೆಂದು ಹೆಸರಿಟ್ಟನು.

## ಸಂಸ್ಕೃತದಲ್ಲಿ ಭಾಷಾಂತರಿಸಿದ್ದು.

(१) कस्मिन्नपि ग्रामे कापि वृद्धासीत्। तस्या एकः कुक्कुरश्चानेकाः परिचारिकाश्चासन्। यदा कुक्कुरो रवं करोति तदैव सा ताः दासीः आत्मनः कार्याणि प्रारब्धुं जागरयति स्म । एवं प्रत्यहं तासां निद्राभंगोऽभूत् । तेन भृशं कुपितास्ताः दास्यः मिथः आलोच्य तं कुक्कुरं व्यापादयामासुः । किंतु अनेन व्यापारेण तासां पीडा वर्धितैव। यतः कुक्कुरे मृते सा वृद्धा मध्यरात्रेऽपि यदा प्रबुद्धा तदैव ताः दासीः शयनात् जागरयति स्म ।

(२) एकदा कश्चित् सिंहोऽरण्ये सुखेन परिभ्रमतीं कांचित् रूपाढ्यां वनचरकन्यां दृष्ट्वा तां चकमे । तस्यानुरागः एवं वृद्धः यत् स तस्मिन्नेव क्षणे तस्याः पितरमेत्य तां भार्यात्वेनात्मने प्रदातुं तं याचितवान्। वनचरोऽपि मुहूर्तं विचिन्त्य तद्याचनामनुमेने अवदत् च "किंतु मम दुहिता तव दंष्ट्रा नखात् बिभेति । तस्मात्त्वयावश्यं दूरीकर्तव्यं इति: सोऽपि सिंहो विचारमूढो भूत्वा तथैवाकरोत् तदा स वनचरेण लीलयैव बृहल्लगुडेन व्यापादितः ।

(३) एकदा रात्रौ घनीभूतेऽन्धकारे कश्चिदन्धः हस्तेदीपं गृहीत्वा शिरसि घटमेकं वहन् गच्छति स्म । मार्गे सः केनापि नरेण दृष्टः पृष्टश्च, रे, मूर्ख, तव प्रकाशान्धकारौ समावेव । अतः किंतेऽनेन दीपेन प्रयोजनमिति।

सोऽपि अंधः किंचित् प्रहस्यावोचत् – मदर्थं दीपो नास्ति । किंतु त्वादृशैर्मूर्खैराहृ तस्य मम घटो मा भग्नो भूयादिति । त्वत्सदृशानां कृत एव मयायं नीयत इति ।

(४) एकदा कश्चित् कृषीवल आपणंगत्वा सप्त रासभान् क्रीतवान् । तेषु गर्दभमेकमारुह्यान्यैः सह गृहं प्रतिप्रस्थितः । मार्गे स तस्य रासभान् बहुवारमगणयत् । तदा तेन षडेव रासभाः गणिताः । यतस्तेन षडेव गर्दभा दृष्टाः अपिचात्मनारूढो रासभस्तेन नैव गणितः । तदा सोऽतीव दुःखितो भूत्वालोचितवान् 'तैरेको गर्दभोऽपहृत एवेति । अनंतरं गृहमागत्य स आत्मनो भार्यामुच्चैराहूयावदत्,' हा, हंत; मया सप्तरासभाः क्रीताः । किंतु पश्यात्र षडेवसंति । तैरेकोऽपहृतः इति । सापि तस्य वचनं श्रुत्वा प्रहस्यावदत् तवैको गर्दभो न नष्टः । अहमत्र अष्टरासभान् पश्यामि । सोऽष्टमो गर्दभः त्वमसीति ।

(५) श्वेतकेतुः नाम महातेजस्वी ऋषिरासीत् । स एकदा सुरसरिति देवपूजार्थं कमलान्यवचिन्वन् देव्या लक्ष्म्या दृष्टः । ऋषिरिव तेजस्वी पुत्रो मेऽपि भवत्विति सैच्छत् । तदा सा लक्ष्मीः कस्मिन्नपि पुंडरीके उपविष्टासीत् । तस्मिन्नेवक्षणे तस्मात् पुंडरीकात् कोऽपि बालो जातः । सा तं बालकं ऋषयेऽर्पयामास अवदच्च भो मुनिश्रेष्ठ तवैवायं बालः । कृपया स्वीकुरु इति । श्वेतकेतवेऽपि तस्या वचनं संमतमभवत् । स तं स्वीकृत्य तस्य जातकर्मादिसंस्कारान् कृतवान् । पुंडरीकाज्जातोऽयं बाल इति तस्य पुंडरीक इति नाम चकार ।

**धातु साधितगळु**

| १ | २ | ३ | ४ | ५ | ६ | ७ | ८ | ९ | १० |
|---|---|---|---|---|---|---|---|---|---|
| व. धा. वि. (कुर्वत् वंदमान) | व. कर्मणि धा. वि. (क्रियमाण वंद्यमान) | भविष्यत् धा. वि. (गमिष्यत् करिष्यत्) | भ. कर्मणि धा. वि. (गमिष्यमाण, करिष्यमाण, कारिष्यमाण) | परोक्ष भू. धा. वि. (तस्थिवस्, ददान, चोरयां-चकृवस्, चोरयां-चक्राण | कर्मणि भू. धा. वि. (गत, श्रुत) | भू. कर्तरि धा. वि. (गतवत्, श्रुतवत्) | कर्मणि विद्यर्थ धा. वि. (कर्तव्य कार्य, करणीय) | ल्यबंत अव्यय (कृत्वा, आदाय) | तुमंत अव्यय (कर्तुं, गंतुं) |

ಧಾತುಸಾಧಿತಗಳನ್ನು ( ಲ್ಯಬಂತ ಮತ್ತು ತುಮಂತ ಅವ್ಯಯಗಳನ್ನು ಬಿಟ್ಟು ) ಸಾಮಾನ್ಯ ವಿಶೇಷಣಗಳಂತೆ ಉಪಯೋಗಿಸಲಾಗುತ್ತವೆ. ಎಂದರೆ ಈ ಧಾತುಸಾಧಿತಗಳು ಸಂಬಂಧವಿದ್ದ ನಾಮಗಳ ಲಿಂಗ, ವಚನ, ವಿಭಕ್ತಿ ಗಳನ್ನು ತೆಗೆದುಕೊಳ್ಳುತ್ತವೆ. ಉದಾ :— ಇತಿ ವಿಚಾರಯನ್ ಏವ ತುರ ಗಾದವತತಾರ, ನಷ್ಟಂ ವಸ್ತು, ರಾಮೇಣ ಪರಿತ್ಯಕ್ತಾ ಸೀತಾ ಮುಕ್ತಕಂಠಂ ವಿಲಲಾಪ; ಸಪಾಟಲಾಯಾಂ ಗವಿ ತಸ್ಥಿವಾಂಸಂ ಧನುರ್ಧರಃ ಕೇಸರಿಣಂ ದದರ್ಶ; ಗ್ರಾಮಂ ಗಮಿಷ್ಯನ್ ಪಾಂಥಃ ಬಹೂನಿ ಉಪಕರಣಾನಿ ಜಗ್ರಾಹ; ಅಶೋಚ್ಯಾನ್ (ಜನಾನ್) ಅನ್ವಶೋಚಃ ತ್ವಂ.

ಕರ್ಮಣಿ ಭೂ. ಧಾ. ಕರ್ತರೀ ಭೂ. ಧಾ. ಹಾಗೂ ಕರ್ಮಣಿ ವಿಧ್ಯರ್ಥ ಧಾ. ಗಳನ್ನು ಕ್ರಿಯಾಪದಗಳ ಬದಲು ಹಲವು ಸಲ ಉಪಯೋಗಿ ಸುತ್ತಾರೆ. ಉದಾ:—ನೃಪೇಣ ವಾರ್ತಾ ಶ್ರುತಾ. ಪಕ್ಷಿಣಾವಕಃ ಕೋಲಾ ಹಲಂ ಕೃತವಂತಃ ತೇನ ತತ್ರ ಗಂತವ್ಯಮ್.

ಧಾತುಸಾಧಿತಗಳ ಹತ್ತು ಪ್ರಕಾರಗಳನ್ನು ಎರಡೆರಡು ಉದಾಹರಣೆ ಗಳೊಂದಿಗೆ ಮೇಲಿನ ಕೋಷ್ಟಕದಲ್ಲಿ ಕೊಟ್ಟಿದೆ. ಅವುಗಳ ಅಲ್ಪ ವಿವರಣೆ ಯನ್ನು ಕೆಳಗೆ ಕೊಡಲಾಗಿದೆ.

**೧. ೨. ವರ್ತಮಾನ ಧಾತು ಸಾಧಿತ ವಿಶೇಷಣಗಳು ( ಕರ್ತರಿ ಹಾಗು ಕರ್ಮಣಿ )**

**ರಚನೆ:—** ಧಾತುವಿನ ವರ್ತಮಾನಕಾಲದ ತೃ. ಪು. ಬಹುವಚನದ ರೂಪವನ್ನು ತೆಗೆದುಕೊಂಡು, ಅದರಲ್ಲಿಯ ಕೊನೆಯ ಪ್ರತ್ಯಯವನ್ನು (ಅಂತಿ, ಅಂತೇ, ಅತೇ ) ತೆಗೆಯಬೇಕು; ಬಳಿಕ ಧಾತು ಪರಸ್ಮೈಪದವಿದ್ದಲ್ಲಿ ಅತ್ ಪ್ರತ್ಯಯವನ್ನೂ ಆತ್ಮನೇ ಪದ ವಿದ್ದಲ್ಲಿ ಮಾನ ಪ್ರತ್ಯಯವನ್ನೂ ಹಚ್ಚ ಬೇಕು. ಕರ್ಮಣೀ ರೂಪ ಬೇಕಾಗಿದ್ದರೆ ಮಾನ ಪ್ರತ್ಯಯ ಬರುವದು. ಉದಾ:—ಕುರ್ವತ್, ವಂದಮಾನ, ಕ್ರಿಯಮಾಣ.

**ಕೆಲವು ಮಹತ್ವದ ರೂಪಗಳು:**—ಭೂ—ಭವತ್; ದಿವ್—ದೀವ್ಯತ್ ಯಾ—ಯಾತ್, ಹು-ಜುಹ್ವತ್, ಜುಹ್ವಾನ; ತನ್—ತನ್ವತ್, ತನ್ವಾನ: ಕ್ರೀ— ಕ್ರೀಣತ್, ಕ್ರೀಣಾನ; ಹನ್—ಘ್ನತ್, ಘ್ನಾನ (ಹನ್ಯಮಾನ); ಆಪ್—ಆಪ್ನು ವತ್, ಆಪ್ನುವಾನ; ಅಧಿ+ಇ=ಅಧೀಯಾನ; ಚುರ್—ಚೋರ ಯತ್, ಚೋರಯಮಾಣ, (ಚೋರ್ಯಮಾಣ ಕ.); ವಿದ್- ವಿದತ್, (ವಿದ್ವಸ್), ವಿಂದಾನ (ವಿದ್ಯಮಾನ ಕ.) ಆಸ್-ಆಸೀನ (ಆಸ್ಯಮಾನ ಕ.)

**ಉಪಯೋಗ:** — (i) ಎರಡು ಕ್ರಿಯೆಗಳು ಏಕಕಾಲಕ್ಕೆ ನಡೆದಾಗ ಉದಾ:—ಇತಿ ವಿಚಾರಯನ್ನೇವ ತುರಗಾದವತತಾರ; ಕಾರ್ಯಂ ಕುರ್ವನ್ ಕ್ರೀಡತಿ. (ii) ಶೀಲ, ವಯ, ಶಕ್ತಿ ವ.ಎಂ. ಸೂಚಿಸಲು ಉದಾ: —ಭೋಗಂ ಭುಂಜಾನಃ; ಕವಚಂ ಬಿಭ್ರಾಣಃ; ಶತ್ರುಂ ನಿಘ್ನನ್; (iii) ಕ್ರಿಯೆಯ ಲಕ್ಷಣ ಮತ್ತು ಹೇತು ನಿರೂಪಿಸಲು ಉದಾ:— ಶಯಾನಾಭುಂಜತೇ ಯವನಃ ಹರಿಂ ಪಶ್ಯನ್ ಮುಚ್ಯತೇ. (iv) ಕ್ರಿಯೆಯು ಸತತವಾಗಿ ನಡೆದಿದೆ ಎಂದು ಸೂಚಿಸಲು ವ. ಧಾ. ವಿ ಗಳನ್ನು ಆಸ್, ಸ್ಥಾ, ಭೂ ಮತ್ತು ಅಸ್ ಧಾತುಗಳ ರೂಪಗಳೊಂದಿಗೆ ಉಪಯೋಗಿಸಲಾಗುವದು. ಉದಾ:— ಸಃ ಸಿಂಹಃ ವಧಂ ಕುರ್ವನ್ ಆಸ್ತೇ; ಗೀತಸಮಾಪ್ತ್ಯವಸರಂ ಪ್ರತೀಕ್ಷಮಾಣಃ ತಸ್ಥೌ.

## ೩. ೪. ಭವಿಷ್ಯತ್ ಧಾತುಸಾಧಿತ ವಿಶೇಷಣಗಳು (ಕರ್ತರಿ ಮತ್ತು ಕರ್ಮಣಿ)

**ರಚನೆ** :—ಪರಸ್ಮೈಪದದಲ್ಲಿ ಸ್ಯತ್ ಮತ್ತು ಆತ್ಮನೇಪದ ಹಾಗೂ ಕರ್ಮಣಿಗಳಲ್ಲಿ ಸ್ಯಮಾನ ಎಂಬ ಪ್ರತ್ಯಯಗಳನ್ನು ಧಾತುಗಳಿಗೆ ಜೋಡಿಸಬೇಕು. ಉದಾ:—ಗಮಿಷ್ಯತ್, ಕರಿಷ್ಯತ್, ಗಮಿಷ್ಯಮಾಣ, ಕರಿಷ್ಯಮಾಣ, ಕಾರಿಷ್ಯಮಾಣ ಮುಂ.

**ಕೆಲವು ಮಹತ್ವದ ರೂಪಗಳು**:— ದಾ-ದಾಸ್ಯತ್, ದಾಸ್ಯಮಾನ (ದಾಯಿಷ್ಯಮಾಣ, ಕ.) ಭೂ—ಭವಿಷ್ಯತ್, (ಭವಿಷ್ಯಮಾಣ, ಭಾವಿಷ್ಯಮಾಣ, ಕ.). ಬುಧ್—ಬೋಧಿಷ್ಯತ್, ಬೋಧಿಷ್ಯಮಾಣ; ಚುರ್‌ಚೋರಯಿಷ್ಯತ್, ಚೋರಯಿಷ್ಯಮಾಣ. (ಚೋರಯಿಷ್ಯಮಾಣ ಕ).

**ಉಪಯೋಗ** :— (i) ಕೆಲಸಮಾಡಲು ಇಚ್ಛಿಸುವವನು ಅಥವಾ ಕೆಲಸಮಾಡುವ ಹಂಚಿಕೆಯಲ್ಲಿದುವವನು ಎಂಬ ಅರ್ಥದಲ್ಲಿ ಉಪಯೋಗಿಸುವರು. ಉದಾ:—ಗ್ರಾಮಂಗಮಿಷ್ಯನ್ ಪಾಂಥಃ ಬಹೂನಿ ಉಪಕರಣಾನಿ ಜಗ್ರಾಹ; ಯೋತ್ಸ್ಯಮಾನೌ ವೀರೌ ಸೇನಾಪತೇಃ ಆದೇಶೇನ ಏವ ಯುದ್ಧಂ ಆಕುರುತಾಂ (ii) ಕೆಲಸ್ಪೊಂದು ಸಲ ಉದ್ದೇಶ ಸೂಚಿಸುವದು. ಉದಾ:— ಕರಿಷ್ಯಮಾಣಃ ಸಶರಂ ಶರಾಸನಂ (iii) ಮುಂಚೆ ಮೊದಲು ಎಂಬ ಅರ್ಥದಲ್ಲಿ, ಉದಾ:—ಪ್ರಯಾಣಾಂ ಕರಿಷ್ಯನ್ ಸಃ ಕಿಂಚಿತ್ ಜಲಂ ಪಪೌ

**೫ ಪರೋಕ್ಷ ಭೂತಕಾಲದ ಧಾತು ಸಾಧಿತ ವಿಶೇಷಣಗಳು,**

**ರಚನೆ:—** ಪರೋಕ್ಷ ಭೂಲಕಾಲದ ತೃ. ಪ್ರ. ಬ. ವ. ರೂಪದಲ್ಲಿದ್ದ ಕೊನೆಯ ಪ್ರತ್ಯಯವನ್ನು ತೆಗೆದು, ಪರಸ್ಮೈಪದದಲ್ಲಿ ವಸ್ ಮತ್ತು ಆತ್ಮನೇ ಪದದಲ್ಲಿ ಆನ ಜೋಡಿಸಬೇಕು. ಉದಾ:— ತಸ್ಥಿವಸ್, ದದಾನ, ಚೋರ ಯಾಂಚಕ್ರಾಣ. ಮುಂ.

**ಕೆಲವು ಮಹತ್ವದ ರೂಪಗಳು:—**ಭಿದ್....ಬಿಭಿದ್ವಸ್ ಬಿಭಿದಾನ; ನೀ-ನಿನೀವಸ್, ನಿನ್ಯಾನ; ಕೃ—ಚಕೃವಸ್, ಚಕ್ರಾಣ; ದಾ— ದದಿವಸ್, ದದಾನ; ಗಮ್-ಜಗ್ಮಿವಸ್, ಜಗನ್ವಸ್; ಹನ್— ಜಘ್ನಿವಸ್, ಜಘನ್ವಸ್; ದೃಶ್–ದದೃಶಿವಸ್, ದದೃಶ್ವಸ್; ಸ್ತು— ತುಷ್ಟುವಾನ, ನಿ+ಸದ್ — ನಿಷೇದಿವಸ್; ಇ—ಈಯಿವಸ್ ಬಂಧ್—ಬಬಧ್ವಸ್; ಉಪ + ಇ—ಉಪೇಯಿವಸ್; ಖನ್—ಚಖ್ನಿವಸ್,, ಚಖ್ನಾನ; ಶೀ—ಶಿಶ್ಯಾನ.

**ಉಪಯೋಗ:—** ಸಾಹಿತ್ಯದಲ್ಲಿ ಇವುಗಳ ಉಪಯೋಗ ಕಡಿಮೆ. ಮಾಡಿದವ, ಮಾಡಿದ, ಮಾಡಲ್ಪಟ್ಟ ಎಂಬ ಅರ್ಥದಲ್ಲಿ ಇವುಗಳನ್ನು ಉಪ-ಯೋಗಿಸಲಾಗುವದು.

ಉದಾ:— ಸಿಂಹಾಸನೇ ನಿಷೇದುಷೀ ರಾಜ್ಞೀ ದಾಸೀಭಿಃ ಪರಿಷೇ-ವ್ಯತೇ; ಸಂಪದಂ ಅಧಿಜಗ್ಮುಷಃ ನರಸ್ಯ ಸುಖಂ ವರ್ಧತೇ.

**೬,೭. ಭೂತಕಾಲ ಧಾತುಸಾಧಿತ ವಿಶೇಷಣಗಳು (ಕರ್ತರಿ ಮತ್ತು ಕರ್ಮಣಿ)**

**ರಚನೆ:–**ಸಾಮಾನ್ಯವಾಗಿ ಧಾತುಗಳಿಗೆ ತ ಹಚ್ಚುವದರಿಂದ ಕರ್ಮಣೀ ಭೂ. ಧಾ. ವಿ. ಗಳು ಆಗುತ್ತವೆ. ಕೆಲವ್ರೊಂದು ಸಲ ತ ದ ಬದಲು ನ ಹಚ್ಚಲಾಗುವದು. ಉದಾ:— ಗತ, ಶ್ರುತ, ಭಿನ್ನ, ಕೀರ್ಣ, ಮುಂ. ಕರ್ಮಣೀ ಭೂ. ಧಾ. ವಿ. ಗಳಿಗೆ ವತ್ ಹಚ್ಚುವದರಿಂದ ಕರ್ತರಿ ಭೂ. ಧಾ. ವಿ. ಗಳು ಆಗುತ್ತವೆ. ಉದಾ:— ಗವತತ್ ಶ್ರುತವತ್; ಭಿನ್ನವತ್; ಕೀರ್ಣವತ್ ಮುಂ.

**ಕೆಲವು ಮಹತ್ವದ ರೂಪಗಳು:—** ಮುಚ್—ಮುಕ್ತ; ಗ್ಲೈ— ಗ್ಲಾನ; ಹಾ—ಹಾನ, ಹೀನ; ಸದ್—ಸನ್ನ; ಯುಜ್—ಯುಕ್ತ; ಗುಹ್– ಗೂಢ; ವೃಧ್—ವೃದ್ಧ, ಪ್ರಚ್ಛ್—ಪೃಷ್ಟ; ಲಭ್—ಲಬ್ಧ; ಲಿಹ್—ಲೀಢ; ಮುಹ್—ಮುಗ್ಧ, ಮೂಢ; ಸಹ್—ಸೋಢ; ಬುಧ್ — ಬುದ್ಧ

ಚುರ್—ಚೋರಿತ; ವಚ್—ಉಕ್ತ; ವದ್—ಉದಿತ; ಯಜ್—ಇಷ್ಟ; ಹ್ವೇ—ಹೂತ; ಶಾಸ್—ಶಿಷ್ಟ; ಬಂಧ್—ಬದ್ಧ; ದಂಶ್—ದಷ್ಟ; ಗ್ರಂಥ್—ಗ್ರಥಿತ; ಭಂಜ್....ಭಗ್ನ; ಶಮ್—ಶಾಂತ; ಕ್ರಮ್—ಕ್ರಾಂತ; ತನ್–ತತ; ಸಿವ್—ಸ್ಯೂತ; ದಿವ್—ದ್ಯೂತ, ದ್ಯೂನ; ಧಾ—ಹಿತ; ಸೋ–ಸಿತ; ಗೈ—ಗೀತ; ಪಾ—ಪಿತ; ಧಾವ್—ಧೌತ; ವ್ಯಧ್—ವಿದ್ಧ; ತ್ರೈ—ತ್ರಾಣ, ತ್ರಾತ; ಜೃ—ಜೀರ್ಣ; ಭ್ರಂಶ್—ಭ್ರಷ್ಟ.

**ಉಪಯೋಗ:—** (i) ಸಕರ್ಮಕ ಹಾಗೂ ಅಕರ್ಮಕ ಧಾತುಗಳ ಭೂ. ಧಾ. ವಿ. ಗಳನ್ನು ತೃ, ವಿಭಕ್ತಿಯೊಂದಿಗೆ ಉಪಯೋಗಿಸುವರು. ಉದಾ:— ಪ್ರತಿಬುದ್ಧಂ ಸಖೀಜನೇನ ಜಿತಂ ಅಪತ್ಯಸ್ನೇಹೇನ. (ii) ಗತ್ಯರ್ಥಕ ಅಕರ್ಮಕ ಕರ್ಮಣೀ ಭೂ. ಧಾ. ವಿ. ಗಳಿಗೆ ಕರ್ತರೀ ಅರ್ಥ ಆಗುತ್ತದೆ. ಉದಾ:— ಗತೋಽಹಂ ಕಲಿಂಗಾನ್; ಶೇಷಂ ಅಧಿಶಯಿತಃ

**೮. ಕರ್ಮಣಿ ವಿಧ್ಯರ್ಥ ಧಾ. ವಿ.**

**ರಚನೆ:—** ಧಾತುಗಳಿಗೆ ಇಲ್ಲವೆ ಕೆಲವೊಂದು ಸಲ ಅಂಗಗಳಿಗೆ ತವ್ಯ; ಅನೀಯ ಮತ್ತು ಯ ಪ್ರತ್ಯಯಗಳನ್ನು ಹಚ್ಚುವದರಿಂದ ಕರ್ಮಣಿ ವಿಧ್ಯರ್ಥ ಧಾ. ವಿ. ಗಳು ಆಗುತ್ತವೆ. ಉದಾ:— ಕರ್ತವ್ಯ, ಕರಣೀಯ, ಕಾರ್ಯ.

**ಕೆಲವು ಮಹತ್ವದ ರೂಪಗಳು:—** ಬುಧ್– ಬೋದ್ಧವ್ಯ, ಬೋಧನೀಯ, ಬೋಧ್ಯ; ದಾ–ದಾತವ್ಯ, ದಾನೀಯ, ದೇಯ; ಜಿ–ಜೇತವ್ಯ, ಜಯನೀಯ, ಜೇಯ; ಭೂ–ಭವಿತವ್ಯ, ಭವನೀಯ, ಭಾವ್ಯ; ಶ್ರು–ಶ್ರೋತವ್ಯ ಶ್ರವಣೀಯ, ಶ್ರಾವ್ಯ; ಮುಚ್–ಮೋಕ್ತವ್ಯ, ಮೋಚನೀಯ, ಮೋಚ್ಯ; ಮೃಜ್–ಮಾರ್ಜಿತವ್ಯ, ಮಾರ್ಷ್ಟವ್ಯ ಮಾರ್ಜನೀಯ, ಮೃಜ್ಯ, ಗುಹ್–ಗೋಢವ್ಯ, ಗೂಹಿತವ್ಯ, ಗೂಹನೀಯ, ಗುಹ್ಯ, ಗೋಹ್ಯ; ಪಠ್–ಪಠಿತವ್ಯ ಪಠನೀಯ, ಪಾಠ್ಯ; ಪಾ–ಪಾತವ್ಯ, ಪಾನೀಯ, ಪೇಯ; ಶಾಸ್–ಶಾಸಿತವ್ಯ, ಶಾಸನೀಯ, ಶಿಷ್ಯ; ಹನ್–ಹಂತವ್ಯ, ಹನನೀಯ, ಘಾತ್ಯ, ವಧ್ಯ, ಗೈ–ಗಾತವ್ಯ, ಗಾನೀಯ, ಗೇಯ.

**ಉಪಯೋಗ:—** (i) ಕ್ರಿಯೆಯು ಮಾಡಲ್ಪಡತಕ್ಕದ್ದು ಅಥವಾ ಮಾಡಲು ಯೋಗ್ಯವಾದದ್ದು ಎಂಬ ಅರ್ಥದಲ್ಲಿ ಇವುಗಳನ್ನು ಉಪಯೋಗಿಸುವರು. ಉದಾ:– ಮಯಾ ತತ್ರ ಗಂತವ್ಯಂ; ತೇನ ಇದಂ ಕರ್ತವ್ಯಂ ಸಃ ರಾಜಾ ವಾಚ್ಯಃ; (ii) ಭಾವೇ ಪ್ರಯೋಗದಲ್ಲಿ ಕ್ರಿಯಾಪದವ ಬದಲು

ನಪುಂಸಕಲಿಂಗ ಏಕವಚನದಲ್ಲಿ ಉಪಯೋಗಿಸುವರು. ಉದಾ:— ತತ್ರ-ಭವತಾ ತಪೋವನಂ ಗಂತವ್ಯಂ; ತಯಾ ಅಸ್ಮಿನ್ ಲತಾಮಂಡಪೆ ಸನ್ನಿ-ಹಿತಯಾ ಭವಿತವ್ಯಂ.

## ೯. ಲ್ಯಬಂತ ಅವ್ಯಯಗಳು.

**ರಚನೆ:—** ಧಾತುವಿಗೆ ತ್ವಾ ಪ್ರತ್ಯಯ ಹಚ್ಚುವದರಿಂದ ಲ್ಯಬಂತ ಅವ್ಯಯ ಆಗುತ್ತದೆ. ಆದರೆ ಧಾತುವು ಉಪಸರ್ಗಯುಕ್ತವಿದ್ದರೆ ಯ ಪ್ರತ್ಯ-ಯವು ಹತ್ತುತ್ತದೆ. ಉದಾ:— ಕೃತ್ವಾ, ಆದಾಯ.

**ಕೆಲವು ಮಹತ್ವದ ರೂಪಗಳು:—** ನೀ – ನೀತ್ವಾ; ಚುರ್ – ಚೋರಯಿತ್ವಾ; ಬುಧ್ – ಬುದ್ಧ್ವಾ; ಜ್ಞಾ – ಜ್ಞಾತ್ವಾ; ಜಿ – ಜಿತ್ವಾ; ತೄ – ತೀರ್ತ್ವಾ; ಮುಚ್ – ಮುಕ್ತ್ವಾ; ಇಷ್ – ಏಷಿತ್ವಾ; ಇಷ್ಟ್ವಾ ಖನ್ – ಖನಿತ್ವಾ, ಖಾತ್ವಾ; ವೃತ್ – ವರ್ತಿತ್ವಾ, ವೃತ್ವಾ; ಯಜ್ – ಇಷ್ಟ್ವಾ; ವಚ್ – ಉಕ್ತ್ವಾ; ದಿವ್ – ದ್ಯೂತ್ವಾ, ದೇವಿತ್ವಾ; ದ್ಯುತ್ – ದ್ಯುತಿತ್ವಾ, ೯ತಿತ್ವಾ; ಕ್ಲಿಶ್ – ಕ್ಲಿಶಿತ್ವಾ, ಕ್ಲಿಷ್ಟ್ವಾ; ವಸ್ – ಉಷಿತ್ವಾ; ಆದಾ – ಜಗ್ಧ್ವಾ; ಕ್ರಮ್ – ಕ್ರಾಂತ್ವಾ, ಕ್ರಂತ್ವಾ, ಕ್ರಮಿತ್ವಾ; ಗುಹ್ – ಗುಹಿತ್ವಾ, ಗೂಹಿತ್ವಾ, ಗೂಢ್ವಾ; ನಶ್ – ನಂಷ್ಟ್ವಾ, ನಷ್ಟ್ವಾ, ನಶಿತ್ವಾ; ಹಾ – ಹಿತ್ವಾ; ಆದಾ – ಆದಾಯ; ವಿನೀ – ವಿನೀಯ; ಅನುಭೂ – ಅನುಭೂಯ; ವಿಜಿ – ವಿಜಿತ್ಯ; ಅಧಿ+ಇ – ಅಧೀತ್ಯ; ಪ್ರ+ಇ – ಪ್ರೇತ್ಯ; ಪ್ರವಚ್ – ಪ್ರೋಚ್ಯ ಆಹ್ವೇ – ಆಹೂಯ; ಆಗಮ್ – ಆಗತ್ಯ, ಆಗಮ್ಯ; ಅವಮನ್ – ಅವಮತ್ಯ ಪ್ರವಸ್ – ಪ್ರೋಷ್ಯ;

**ಉಪಯೋಗ:—** ಪೂರ್ವಭಾವಿ ಕ್ರಿಯೆಯನ್ನು ಸೂಚಿಸಲು ಲ್ಯಬಂತ ಅವ್ಯಯಗಳನ್ನುಪಯೋಗಿಸುವರು. ಉದಾ:—ಭೂಮಿಪಾಲಃ ಮುಹೂರ್ತ-ಮಿವ ತೂಷ್ಣೀಂಸ್ಥಿತ್ವಾ ನಿಜಗಾದ; ಸರ್ವೈಃ ಪಶುಭಿಃ ಮಿಲಿತ್ವಾಸಿಂಹೋ ವಿಜ್ಞಪ್ತಃ.

## ೧೦. ತುಮಂತ ಅವ್ಯಯ.

**ರಚನೆ:—** ಧಾತುಗಳಿಗೆ ತುಮ್ ಪ್ರತ್ಯಯ ಹಚ್ಚುವದರಿಂದ ತುಮಂತ ಅಥವಾ ಹೇತ್ವರ್ಥಕ ಅವ್ಯಯಗಳು ಸಿದ್ಧವಾಗುತ್ತವೆ. ಉದಾ:— ಕರ್ತುಂ, ಗಂತುಂ.

**ಕೆಲವು ಮಹತ್ವದ ರೂಪಗಳು**:–ದಾ–ದಾತುಂ; ಜಿ–ಜೇತುಂ ನೀ–ನೇತುಂ; ಭೂ – ಭವಿತುಂ; ತೄ –ತರೀತುಂ; ತರಿತುಂ; ಗೈ–ಗಾತುಂ ಪಚ್–ಪಕ್ತುಂ; ಜೀವ್ – ಜೀವಿತುಂ; ಚುರ್–ಚೋರಯಿತುಂ; ಇಷ್ – ಏಷಿತುಂ, ಏಷ್ಟುಂ; ಸಹ್–ಸಹಿತುಂ, ಸೋಢುಂ; ವೃ–ವರಿತುಂ, ವರೀತುಂ ಕ್ಷಮ್–ಕ್ಷಮಿತುಂ, ಕ್ಷಂತುಂ; ನಶ್ – ನಶಿತುಂ, ನಷ್ಟುಂ; ಮುಹ್ – ಮೋಹಿತುಂ, ಮೋಗ್ಧುಂ, ಮೋಢುಂ; ಮೃಜ್ – ಮಾರ್ಜಿತುಂ, ಮಾರ್ಷ್ಟುಂ.

**ಉಪಯೋಗ**:— (i) ಒಂದು ಕ್ರಿಯೆಯನ್ನು ಇನ್ನೊಂದು ಕ್ರಿಯೆಯ ಸಲುವಾಗಿ ಮಾಡಿದೆ ಎಂದು ಸೂಚಿಸಲು; ಉದಾ:— ತತಃ ಪಾರಸೀಕಾನ್ ಜೇತುಂ ಸಃ ನೃಪಃ ಪ್ರತಸ್ಥೇ. (ii) ತುಮಂತ ಅವ್ಯಯವು ವಾಕ್ಯದ ಕರ್ತೃಪದ ಇಲ್ಲವೆ ಕರ್ಮಪದ ಆಗಲಾರದು. ಉದಾ:— ಅಹಂ ಗಾತುಂ ಅಧಿಯೇ ಎಂಬ ವಾಕ್ಯವು ತಪ್ಪು, ಅದು ಅಹಂ ಗಾನಂ ಅಧಿಯೇ ಎಂದು ಇರಬೇಕು. ಅದರಂತೆ, ಪ್ರಾತರೇವ ಉತ್ಥಾನಂ (ಆದರೆ ಉತ್ಥಾತುಂ ಅಲ್ಲ) ಆರೋಗ್ಯಾವಹಂ. (iii) ಇತರ ಅರ್ಥಗಳು. ಪಿನಾಕಪಾಣಿಂ ಪತಿಂ ಆಪ್ತುಂ ಇಚ್ಛತಿ; ನ ಶಕ್ನೋಮಿ ಹೃದಯಂ ಅವಸ್ಥಾಪಯಿತುಂ – ಅಸ್ತಿ ಮೇ ವಿಭವಃ ಸರ್ವಂ ಪರಿಜ್ಞಾತುಂ; ಪ್ರಿಯೇ, ಜಾನಕಿ, ನ ಮಾಂ ಏವಂ ವಿಧಂ ಪರಿತ್ಯಕ್ತುಂ ಅರ್ಹಸಿ.

## ೪. ಕೆಲವು ಮಹತ್ವದ ರೂಪಗಳು

**ಪ್ರಥಮಾ. ದ್ವಿ. ವ**:— ನಾಮನೀ ವಿಶತ್; (ಸ್ತ್ರೀ); ತಸ್ಥಿವಸ್ (ಪು); ಲಕ್ಷ್ಮೀ; ಸಖಿ (ಪು); ದಿವ್; ದ್ಯೋ;

**ರೂಪಗಳು**:— ನಾಮನೀ, ನಾಮ್ನೀ; ವಿಶತ್ಯೌ, ವಿಶಂತ್ಯೌ; ತಸ್ಥಿವಾಂಸೌ; ಲಕ್ಷ್ಮ್ಯೌ; ಸಖಾಯೌ; ದಿವೌ; ದ್ಯಾವೌ.

**ದ್ವಿ. ಬ. ವ**:— ಮಹತ್ (ಪು); ಅಹನ್; ವಿದ್ವಸ್; ಯುವನ್; ಗಿರಿ; ಅದಸ್(ಪು); ಪಥಿನ್; ತಿರ್ಯಚ್; ಗೋ; ದಿವ್; ದ್ಯೋ.

**ರೂ**:— ಮಹತಃ; ಅಹಾನಿ; ವಿದುಷಃ; ಯೂನಃ; ಗಿರೀನ್; ಅಮೂನ್; ಪಥಃ; ತಿರಶ್ಚಃ; ಗಾಃ; ದಿವಃ; ದ್ಯಾಃ.

**ತೃ. ಏ. ವ**:— ಹರಿ; ತಸ್ಥಿವಸ್; ಯುವನ್; ಧುರ್, ನೃ

ರೂ:— ಹರಿಣಾ; ತಸ್ಥುಷಾ; ಯೂನಾ; ಧುರಾ; ನ್ರಾ.

ಚ. ಏ. ವ:—ಸರ್ವ (ಸ್ತ್ರೀ); ಇದಂ (ಪು); ಅಸ್ಮತ್; ಯುಷ್ಮತ್; ಶ್ರೀ.

ರೂ:— ಸರ್ವಸ್ಯೈ; ಅಸ್ಮೈ; ಮಹ್ಯಂ—ಮೇ; ತುಭ್ಯಂ-ತೇ; ಶ್ರಿಯೈ—ಶ್ರಿಯೇ.

ಪಂ. ಏ. ವ:— ರಾಜನ್; ಅದಸ್ (ಸ್ತ್ರೀ); ಮತಿ; ಯತ್ (ಪು); ವಾರಿ.

ರೂ:— ರಾಜ್ಞಃ; ಅಮುಷ್ಯಾಃ; ಮತೇಃ, ಮತ್ಯಾಃ; ಯಸ್ಮಾತ್; ವಾರಿಣಃ.

ಷ. ಏ. ವ:— ಪಥಿನ್; ಗೋ; ಮಘವನ್: ನೃ; ವೃತ್ರಹನ್;

ರೂ:— ಪಥಃ; ಗೋಃ; ಮಘೋನಃ; ನುಃ; ವೃತ್ರಘ್ನಃ

ಷ. ಬ. ವ:— ನೃ; ಅಸ್ಮದ್; ಕರಿನ್; ಶ್ರೀ; ಚತುರ್ (ಸ್ತ್ರೀ);

ರೂ:— ನೃಣಾಂ; ಅಸ್ಮಾಕಂ, ನಃ; ಕರಿಣಾಂ; ಶ್ರೀಣಾಂ, ಶ್ರಿಯಾಂ ಚತಸೃಣಾಂ.

ಸ. ಏ. ವ:— ಅಸ್ಥಿ; ಧೇನು; ವಾಪೀ; ವಾಚ್; ಶ್ರೀ; ಮೂರ್ಧನ್.

ರೂ:—ಅಸ್ಥ್ನಿ, ಅಸ್ಥನಿ; ಧೇನೌ ಧೇನ್ವಾಂ; ವಾಪ್ಯಾಂ; ವಾಚಿ; ಶ್ರಿಯಾಂ, ಶ್ರಿಯಿ; ಮೂರ್ಧ್ನಿ.

ಸಂ. ಏ. ವ:—ಅಂಬಾ; ವನ; ಮಾತೃ; ಚಂದ್ರಮಸ್; ಉಶನಸ್; ಸಖಿ.

ರೂ:— ಅಂಬ; ವನ; ಮಾತಃ; ಚಂದ್ರಮಃ; ಉಶನಃ, ಉಶನ—ಉಶನನ್; ಸಖೇ;

ವ. ತೃ.ಪು. ಬ. ವ:—ಜಾಗೃ; ವಿದ್; ಹನ್; ಶಾಸ್; ಬಂಧ್ ಬ್ರೂ.

ರೂ: —ಜಾಗ್ರತಿ; ವಿದಂತಿ, ವಿದುಃ; ಘ್ನಂತಿ—ಘ್ನತೇ; ಶಾಸತಿ ಬಧ್ನಂತಿ; ಬ್ರುವಂತಿ—ಬ್ರುವತೇ—ಆಹುಃ

ಪ್ರ. ಭೂ. ತೃ. ಪು. ಏ. ವ:—ಶೀ; ಹಾ; ವಿದ್; ಜಾಗೃ; ದ್ವಿಷ್

ರೂ :— ಅಶೇತ; ಅಜಹಾತ್—ಅಜಹೀತ; ಅವೇತ್—ದ್; ಅಜಾಗಃ; ಅದ್ವೇಟ್—ಡ್ ಅದ್ವಿಷ್ಯಾಃ;

ಆಜ್ಞಾರ್ಥ ದ್ವಿ. ಪು. ಏ. ವ:— ಹಾ; ದಾ (೩. ಪ.) ಶಾಸ್; ಮುಷ್; ಅಶ್ (೯. ಪ.); ದುಹ್; ಹನ್; ಜನ್; ಛಿದ್; ಚಿ;

ರೂ:— ಜಹಾಹಿ, ಜಹಿಹಿ, ಜಹಿಹಿ; ದೇಹಿ; ಶಾಧಿ; ಮುಷಾಣ; ಅಶಾನ; ದುಗ್ಧಿ, ಧುಕ್ಷ್ವ; ಜಹಿ; ಜಾಯಸ್ವ; ಛಿಂಧ್ಧಿ; ಚಿನು, ಚಿನುಷ್ವ; ಬಧಾನ; ಏಹಿ.

**ವಿಧ್ಯರ್ಥ ದ್ವಿ. ಪು. ದ್ವಿ. ವ:**— ಗಮ್; ಯಾ; ಭೃ; ಆಪ್; ಭುಜ್;

ರೂ:—ಗಚ್ಛೇತಮ್; ಯಾಯಾತಂ; ಬಿಭೃಯಾತಂ-ಬಿಭ್ರೀಯಾಥಾಂ ಆಪ್ನುಯಾತಂ, ಆಪ್ನುವೀಯಾಥಾಂ; ಭುಂಜ್ಯಾತಮ್ ಭುಂಜೀಯಾಥಾಂ;

**ಪರೋಕ್ಷಭೂತ ತೃ ಪು. ಏ. ವ**— ಜಿ; ಸ್ವಪ್; ಕೃಷ್; ಇಷ್; ಅರ್ದ್; ಮನ್; ಸ್ಥಾ; ಗದ್; ಅರ್ಚ್; ಇ; ಸ್ತು; ದಯ್; ತ್ರಪ್

ರೂ:— ಜಿಗಾಯ; ಸುಷ್ವಾಪ; ಚಕರ್ಷ ಚಕೃಷೇ; ಇಯೇಷ; ಆನರ್ದ; ಮೇನೇ; ತಸ್ಥೌ; ಜಗಾದ; ಆನರ್ಚ; ಇಯಾಯ; ತುಷ್ಟಾವ-ತುಷ್ಟುವೇ; ದಯಾಂಚಕ್ರೇ; ತ್ರೇಪೇ;

**ದ್ವಿ ಭ. ತೃ ಪು. ಬ. ವ**— ದಾ; ಭೂ; ಮುದ್; ದೃಶ್ ಮೃಜ್.

ರೂ:— ದಾಸ್ಯಂತಿ; ಭವಿಷ್ಯಂತಿ; ಮೋದಿಷ್ಯಂತೇ; ದ್ರಕ್ಷ್ಯಂತಿ; ಮಾರ್ಜಿಷ್ಯಂತಿ-ಮಾರ್ಕ್ಷ್ಯಂತಿ ।

**ಸಂಕೇತಾರ್ಥ ತೃ. ಪು. ಏ. ವ** :— ಧಾ; ಜನ್; ವೃಷ್; ದೃಶ್; ಅಧಿ + ಇ.

ರೂ: — ಅಧಾಸ್ಯತ್; ಅಧಾಸ್ಯತ; ಅಜನಿಷ್ಯತ; ಅವರ್ಷಿಷ್ಯತ್; ಅದ್ರಕ್ಷ್ಯತ್; ಅಧ್ಯೈಷ್ಯತ – ಅಧ್ಯಗೀಷ್ಯತ.

**ತುಮುಂತಾವ್ಯಯ:**— ಸಹ್; ಕ್ಷಮ್; ತ್ರೈ; ಅಧಿ+ಇ; ಮೃಜ್; ಗಣ್; ದಹ್; ಪರಾ + ಅಯ್; ತೄ

ರೂ:— ಸಹಿತುಂ – ಸೋಢುಂ; ಕ್ಷಮಿತುಂ–ಕ್ಷಂತುಂ; ತ್ರಾತುಂ; ಅಧ್ಯೇತುಂ; ಮಾರ್ಷ್ಟುಂ; ಗಣಯಿತುಂ; ದಗ್ಧುಂ; ಪಲಾಯಿತುಂ; ತರೀತುಂ

**ಲ್ಯಬಂತಾವ್ಯಯ:**— ಪ್ರತಿ + ಶ್ರು; ಆ + ಗಮ್; ಅಧಿ + ಇ; ಪರಿ + ತ್ಯಜ್; ಹನ್.

ರೂ:—ಪ್ರತಿಶ್ರುತ್ಯ; ಆಗತ್ಯ – ಆಗಮ್ಯ; ಅಧೀತ್ಯ; ಪರಿತ್ಯಜ್ಯ; ಹತ್ವಾ

**ಕರ್ಮಣಿ ಭೂ. ಧಾ. ವಿ** :— ಶೀ; ಧಾ; ಖನ್; ವಹ್; ತ್ರೈ; ಕ್ಷಿ; ಪ್ರ + ಬ್ರೂ; ಋ (ಪ್ರಯೋಜಕ); ಹ್ವೇ; ತೃ; ಜ್ಯಾ

**ರೂ**—ಶಯಿತ; ಹಿತ; ಖಾತ; ಊಢ; ಅಣ–ತ್ರಾತ; ಕ್ಷಿತ–ಕ್ಷೀಣ; ಪ್ರೋಕ್ಷ; ಅರ್ಪಿತ; ಹೂತ; ತೀರ್ಣ; ಜೀರ್ಣ.

**ಕರ್ಮಣಿ ವಿಧ್ಯರ್ಥ ಧಾ. ಸಾ. ವಿ :**— ದಾ; ಭೂ; ಹನ್; ಶ್ರು, ಪಠ್.

**ರೂ:**—ದಾತವ್ಯ–ದಾನೀಯ–ದೇಯ; ಭವಿತವ್ಯ - ಭವನೀಯ-ಭಾವ್ಯ ಹಂತವ್ಯ–ಹನನೀಯ–ಘಾತ್ಯ– ವಧ್ಯ; ಶ್ರೋತವ್ಯ – ಶ್ರವಣೀಯ – ಶ್ರಾವ್ಯ; ಪಠಿತವ್ಯ – ಪಠನೀಯ - ಪಾಠ್ಯ.

## ತಾರತಮ್ಯ ವಾಚಕ ರೂಪಗಳು

| ಶಬ್ದ. | ತರ ವಾಚಕ. | ತಮ ವಾಚಕ. |
|---|---|---|
| ಪ್ರಶಸ್ಯ | ಜ್ಯಾಯಸ್, ಶ್ರೇಯಸ್ | ಜ್ಯೇಷ್ಠ, ಶ್ರೇಷ್ಠ |
| ವೃದ್ಧ | ಜ್ಯಾಯಸ್, ವರ್ಷೀಯಸ್ | ಜ್ಯೇಷ್ಠ, ವರ್ಷಿಷ್ಠ |
| ಅಂತಿಕ | ನೇದಿಯಸ್ | ನೇದಿಷ್ಠ |
| ಯುವನ್ | ಯವೀಯಸ್, ಕನೀಯಸ್ | ಯವಿಷ್ಠ, ಕನಿಷ್ಠ |
| ಅಲ್ಪ | ಅಲ್ಪೀಯಸ್, ಕನೀಯಸ್ | ಅಲ್ಪಿಷ್ಠ, ಕನಿಷ್ಠ |
| ಬಹು | ಭೂಯಸ್ | ಭೂಯಿಷ್ಠ |
| ದೀರ್ಘ | ದ್ರಾಘೀಯಸ್ | ದ್ರಾಘಿಷ್ಠ |
| ಕ್ಷುದ್ರ | ಕ್ಷೋದೀಯಸ್ | ಕ್ಷೋದಿಷ್ಠ |
| ಗುರು | ಗರೀಯಸ್ | ಗರಿಷ್ಠ |
| ಬಾಢ | ಸಾಧೀಯಸ್ | ಸಾಧಿಷ್ಠ |
| ಉಚ್ಚೈಃ | ಉಚ್ಚೈಸ್ತರಾಂ | ಉಚ್ಚೈಸ್ತಮಾಂ |
| ವಿಜಯತೇ | ವಿಜಯತೇ ತರಾಂ | ವಿಜಯತೇತಮಾಂ |

## ಸಂಖ್ಯಾವಾಚಕಗಳು

**(ಅ) ಸಲ**, ಸಕೃತ್; ದ್ವಿಃ; ತ್ರಿಃ; ಚತುಃ; ಪಂಚಕೃತ್ವಃ ದಶಕೃತ್ವಃ.

**(ಬ) ರೀತಿಯಿಂದ** ಏಕಧಾ; ದ್ವಿಧಾ – ದ್ವೇಧಾ; ತ್ರಿ – ತ್ರೇಧಾ; ಚತುರ್ಧಾ; ಪಂಚಧಾ; ಷಡ್ಧಾ – ಷೋಢಾ; ಸಪ್ತಧಾ....ದಶಧಾ....

**(ಕ) ಒಬ್ಬೊಬ್ಬರು, ಇಬ್ಬಿಬ್ಬರು ಮುಂ.** ಏಕಶಃ; ದ್ವಿಶಃ; ತ್ರಿಶಃ; ಚತುಃಶಃ; ಪಂಚಶಃ

(ಡ) **ಗುಂಪು;** ಏಕಂ; ದ್ವಯಂ – ದ್ವಿತಯಂ – ದ್ವಯೀ–ಯುಗಂ–ಯುಗಲಂ ಯುಗ್ಮಂ; ತ್ರಯಂ – ತ್ರಿತಯಂ – ತ್ರಯೀ; ತ್ರಿಕಂ; ಚತುಷ್ಕಂ; ಪಂಚಕಂ; ಷಟ್ಕಂ; ಸಪ್ತಕಂ; ಅಷ್ಟಕಂ; ನವಕಂ; ದಶಕಂ....ಶತಕಂ.........

(ಇ) ೧ನೆಯ—ಪ್ರಥಮ, ಅಗ್ರಿಮ, ಆದಿಮ; ೪ನೆಯ—ಚತುರ್ಥ, ತುರ್ಯ, ತುರೀಯ; ೧೬ನೆಯ—ಷೋಡಶ; ೮೩ನೆಯ— ತ್ರ್ಯಶೀತ, ತ್ರ್ಯಶೀತಿತಮ – ತ್ರ್ಯಶೀತೀ – ತ್ರ್ಯಶೀತಿತಮೀ.

೧೮೫೭ —ಸಪ್ತಪಂಚಾಶದಧಿಕಾಷ್ಟಶತಾಧಿಕಸಹಸ್ರಂ.

೮೪೩೦೫ ಜನರು—ಪಂಚಶೂನ್ಯತ್ರಿಚತುರಷ್ಟಮಿತಾಃನರಾಃ

ಅಥವಾ ಪಂಚಾಧಿಕತ್ರಿಶತೋತ್ತರಚತುರಶೀತಿಃಸಹಸ್ರಾಣಿನರಾಃ

೧೯೫೫ ರಲ್ಲಿ – ಪಂಚಪಂಚಾಶದಧಿಕ ನವಶತಾಧಿಕ ಸಹಸ್ರತಮೇ ಕ್ರಿಸ್ತಾಬ್ದೇ

ಅಥವಾ ಪಂಚಪಂಚನವೈಕಮಿತೇಕ್ರಿಸ್ತಾಬ್ದೇ.

೩೪೯ ಹುಡಿಗೆಯರು —ಏಕೋನಪಂಚಾಶದಧಿಕತ್ರಿಶತಂ ಕನ್ಯಾಃ

ಅಥವಾ ನವಚತುಸ್ತ್ರಿ ಮಿತಾಃ ಕನ್ಯಾಃ.

೯೨ನೇ ಹುಡಿಗೆಗೆ— ದ್ವಿ-(ದ್ವಾ) ನವತ್ಯೈಕನ್ಯಾಯೈ.

ದಿನಕ್ಕೆ ೩ ಸಲ – ದಿವಸಸ್ಯ ತ್ರಿಃ.

ವಾರಕ್ಕೆ ೫ ಸಲ—ಸಪ್ತಾಹಸ್ಯ ಪಂಚಕೃತ್ವಃ

೬೪ ಕಲೆಗಳಲ್ಲಿ—ಚತುಃ ಷಷ್ಟೌ ಕಲಾಸು.

ಸುಮಾರು ೨೮ ವಿದ್ಯಾರ್ಥಿಗಳು—ಆಸನ್ನಾಷ್ಟಾವಿಂಶಾಃ ಛಾತ್ರಾಃ

೩೩ನೆಯ ಅಧ್ಯಾಯ—ತ್ರಯಸ್ತ್ರಿಂಶಃ ಅಥವಾ ತ್ರಯಸ್ತ್ರಿಂಶತ್ತಮಃ-ಅಧ್ಯಾಯಃ

ಸುಮಾರು ೫ ವರ್ಷದ ಹುಡುಗ – ಪಂಚವರ್ಷದೇಶೀಯಃ ಬಾಲಃ.

## ೫. ವಿಶಿಷ್ಟ ಶಬ್ದಗಳ ಉಪಯೋಗ

**ಅಂತರೇಣ:** — (೧) ತ್ವಾಮಂತರೇಣ ಕೋ ನಾಮ ಶಕ್ತಃ ಪ್ರತಿಕರ್ತುಮ್ । (೨) ಕಿಂ ನು ಖಲು ಮಾಮಂತರೇಣ ಚಿಂತಯತಿ ವೈಶಂಪಾಯನಃ ।

**ಅಪರಾಧ್:**— (೧) ಕಸ್ಮಿನ್ನಪಿ ಪೂಜಾರ್ಹೇ ಅಪರಾಧ್ಯಾ ಶಕುಂತಲಾ । (೨) ಅಪರಾದ್ಧೋಽಸ್ಮಿ ತತ್ರಭವತಃ ಕಣ್ವಸ್ಯ.

**ಅಪಿ:**— (೧) ಧ್ರುವಃ ಬಾಲೋಽಪಿ ತಪಃ ತೇಪೇ । (೨) ಸೀತಾಪಿ ರಾಮೇಣ ಸಹ ವನಂ ಗತಾ। (೩) ಇಯಮಧಿಕಮನೋಜ್ಞಾ ವಲ್ಕಲೇನಾಪಿ ತನ್ವೀ । (೪) ಅಪ್ಯೇತಜ್ಜಲಂ ಮಧುರಮ್ । ಅಪ್ಯಹಮಾಗಚ್ಛೇಯಮ್ (೫) ವಿಷ್ಣುಶರ್ಮಣಾಪಿ ರಾಜಪುತ್ರಾಃ ಪಾಠಿತಾಃ । (೬) **ಅಪಿನಾಮ ರಾಮಭದ್ರಃ ಪುನರಪಿ ಇದಂ ವನಂ ಅಲಂ-ಕುರ್ಯಾತ್** ।

**ಅಲಂ:**— (೧) ಅಲಂ ರುದಿತೇನ. (೨) ಅಲಂ ರುದಿತ್ವಾ. (೩) ಅಲಂ ಮಲ್ಲೋ ಮಲ್ಲಾಯ. (೪) ಅಲಂ ಏಷಾ ಕ್ಷುಧಿತಸ್ಯ ಮೇ ತೃಪ್ತ್ಯೈ । (೫) ಭೀಮಃ ದುರ್ಯೋಧನಂ ಹಂತುಂ ಅಲಂ ।

**ಅಹೋ:**— (೧) ಅಹೋ ರಾಜಾನಃ. (೨) ಅಹೋ ರಮಣೀಯತಾ ವನಸ್ಯ । (೩) ಅಹೋ ಧರ್ಮಾಪೇಕ್ಷಿತಾ ಭರ್ತುಃ ।

**ಅಧಿ + ಆಸ್** } ಮಹಾರಾಜಃ ಕ್ರೀಡಾಪರ್ವತಂ ಅಧ್ಯಾಸ್ತೇ । 
**ಅಧಿ + ಶೀ** } ಚಂದ್ರಾಪೀಡಃ ಮುಕ್ತಾಶಿಲಾಪಟ್ಟಂ ಅಧಿಶಿಶ್ಯೇ । 
**ಅಧಿ + ಸ್ಥಾ** } ಅರ್ಧಾಸನಂ ಗೋತ್ರಭಿದೋಽಧಿತಷ್ಠೌ ।

**ಈಶ್:**— ರಾಜಾ ಪ್ರಜಾನಾಂ ಈಷ್ಟೇ ।

**ಋತೇ:**— ಋತೇ ಸಮುದ್ರಾದನ್ಯಃ ಕೋ ಬಭರ್ತಿ ವಡವಾನಲಂ ।

**ಕಾಮಂ:**— ಕಾಮಂ ಖಲು ಸರ್ವಸ್ಯಾಪಿ ಕುಲವಿದ್ಯಾ ಬಹುಮತಾ ಮಹಾಭಾಗಃ ಕಾಮಂ ನರಪತಿರಭಿನ್ನಸ್ಥಿತಿರಸೌ ।

**ಕಿಮ್:**— (೧) ಕಿಮೇತತ್ । (೨) ಸುಕವಿತಾ ಯದ್ಯಸ್ತಿ ರಾಜ್ಯೇನ ಕಿಂ ।

**ಕಿಮು:**— (೧) ಕಿಮು ವಿಷವಿಸರ್ಪಃ ಕಿಮು ಮದಃ॥ ಏಕೈಕಮಪ್ಯನರ್ಥಾಯ ಕಿಮುಯತ್ರ ಚತುಷ್ಟಯಂ ।

**ಕಿಮುತ:**— ಮಯಿ ಸಾಂತಕೋಽಪಿ ಪ್ರಭುಃ ಪ್ರಹರ್ತುಂ ಕಿಮುತ ಅನ್ಯಹಿಂಸ್ರಾಃ

**ಕಿಂ ಪುನಃ:**— ಸ್ವಯಂ ರೋಪಿತೇಷು ತರುಷು ಉತ್ಪದ್ಯತೇ ಸ್ನೇಹಃ ಕಿಂ ಪುನರಂಗಸಂಬಂಧೇಷ್ವಪತ್ಯೇಷು ।

**ಕೃತೇ:**— ಅಮೀಷಾಂ ಪ್ರಾಣಾನಾಂ ಕೃತೇ ನರಃ ಅಕಾರ್ಯಮಪಿ

**ಕ್ರುಧ್:**— ಸ್ವಾಮೀ ಭೃತ್ಯಾಯ ಕ್ರುಧ್ಯತಿ ।

**ಕ್ವ....ಕ್ವ:** — ಕ್ವ ರಘುವಂಶಃ ಕ್ವ ಮಮ ಮತಿಃ । ಧೂಮಜ್ಯೋತಿಃ ಸಲಿಲಮರುತಾಂ ಸನ್ನಿಪಾತಃ ಕ್ವ ಮೇಘಃ। ಸಂದೇಶಾರ್ಥಾಃ ಕ್ವ ಪಟುಕರಣೈಃ ಪ್ರಾಣಿಭಿಃ ಪ್ರಾಪಣೀಯಾಃ ।

**ಕ್ವಚಿತ್:** — ಕ್ವಚಿದ್ವೀಣಾವಾದ್ಯಂ ಕ್ವಚಿದಪಿ ಚ ಹಾಹೇತಿ ರುದಿತಂ।

**ಕ್ಷಿಪ್:**— ಬಾಲಾಃ ಮಂಡೂಕೇಷು ಶಿಲಾಖಂಡಾನ್ ಕ್ಷಿಪಂತಿ ।

**ದಿಷ್ಟ್ಯಾ:**— (೧) ದಿಷ್ಟ್ಯಾ ಪ್ರತಿಹತಂ ದುರ್ಜಾತಂ. (೨) ದಿಷ್ಟ್ಯಾ ಮಹಾರಾಜೋ ವಿಜಯೇನ ವರ್ಧತೇ ।

**ಧಿಕ್:**— (೧) ಧಿಗಿಯಂ ದರಿದ್ರತಾ. (೨) ಧಿಕ್ ತಾನ್ ಧಿಕ್ ತಾನ್ ಧಿಗೇತಾನ್ ಕಥಯತಿ ಸತತಂ ಕೀರ್ತನಸ್ಥೋ ಮೃದಂಗಃ (೩) ಧಿಕ್ ಮೂರ್ಖ.

**ಧೃ:**— ರಾಮಃ ಮಹ್ಯಂ ಪಂಚವಿಂಶತಿಂ ರೂಪಕಾನ್ ಧಾರಯತಿ ।

**ನಮಃ :**— ಶ್ರೀ ಗಣೇಶಾಯ ನಮಃ

**ನಾಮ:**— ಕಸ್ಮಿಂಶ್ಚಿದ್ವನೋದ್ದೇಶೇ ಖರನಖರಃ ನಾಮ ಸಿಂಹಃ ಪ್ರತಿವಸತಿ ಸ್ಮ ।

**ಪ್ರಭೃತಿ:**— ಪ್ರಿಯಂವದಾ ಶಕುಂತಲಾಯಾಃ ವೃತ್ತಾಂತಂ ಜನ್ಮನಃ ಪ್ರಭೃತಿ ಕಥಿತವತೀ ।

**ಪ್ರಾಕ್:**— ಸೂರ್ಯೋದಯಾತ್ ಪ್ರಾಕ್ ಕುಕ್ಕುಟಃ ರವಂ ಕರೋತಿ ।

**ಬಹಿಃ :**— ವಿದುಷಾಂ ವದನಾದ್ವಾಚೋ ಸಹಸಾ ಯಾಂತಿ ನೋ ಬಹಿಃ ।

**ಭವತ್:**— ಭವಾನ್ ಭಿಕ್ಷಾಂ ದದಾತು ।

**ಭೀ:**— ರಾಮಃ ವ್ಯಾಘ್ರಾತ್ ಬಿಭೇತಿ ।

**ಯಥಾ....ತಥಾ:**— (೧) ಯಥಾ ವೃಕ್ಷಸ್ತಥಾ ಫಲಂ. (೨) ಅಹಂ ಸ್ವಾಮಿನಂ ವಿಜ್ಞಾಪ್ಯ ತಥಾ ಕರಿಷ್ಯೇ ಯಥಾ ಸ ವಧಂ ಕರಿಷ್ಯತಿ। (೩) ಯಥಾ ಇತೋ ಮುಖಾಗತೈರಪಿ ಕಲಕಲಃ ಶ್ರುತಃ ತಥಾ ತರ್ಕಯಾಮಿ ! (೪) ವಾಙ್ಮನಃ ಕರ್ಮಭಿಃ ಪತ್ಯೌ ವ್ಯಭಿಚಾರೋ ಯಥಾನಮೇ । ತಥಾ ವಿಶ್ವಂಭರೇದೇವಿ ಮಾಮಂತರ್ಧಾತು ಮರ್ಹಸಿ ।

**ಯದಾ........ತದಾ:**— ಯದಾ ಸೂರ್ಯಃ ಅಸ್ತಂಗತಃ ತದಾ ಗೋಪಾಲಾಃ ಗೃಹಂ ಆಗತಾಃ

**ಯಾವತ್.... ತಾವತ್:**— (೧) ಯಾವತ್ ಉತ್ಥಾಯ ನಿರೀಕ್ಷತೇ ತಾವತ್ ಹಂಸಃ ವಿಲೋಕಿತಃ (೨) ಯಾವತ್ ದತ್ತಂ ತಾವತ್ ಭುಕ್ತಂ. (೩) ಯಾವತ್ ವಿತ್ತೋಪಾರ್ಜನಶಕ್ತಃ ತಾವನ್ನಿಜ-ಪರಿವಾರೋ ರಕ್ತಃ. (೪) ಯಾವತಃ ಕುರುತೇ ಜಂತುಃ ಸಂಬಂಧಾನ್ಮನಸಃ ಪ್ರಿಯಾನ್। ತಾವಂತೋಽಪಿ ನಿಖನ್ಯಂತೇ ಹೃದಯೇ ಶೋಕಶಂಕವಃ ।

**ಯದಿ....ತರ್ಹಿ:**— ಯದಿ ವೃಷ್ಟಿಃ ಭವೇತ್ ತರ್ಹಿ ಸಸ್ಯಂ ಸುವಿಪುಲಂ ಭವೇತ್ ।

**ರುಚ್:**— ವಾನರೇಭ್ಯಃ ಫಲಾನಿ ರೋಚಂತೇ ।

**ವರಂ... ನ:**— ವರಮೇಕೋ ಗುಣೀ ಪುತ್ರೋ ನ ಚ ಮೂರ್ಖಶತಾನ್ಯಪಿ ।

**ವಿನಾ:**– ಕಾರಣಂ (ಕಾರಣೇನ್, ಕಾರಣಾತ್ ವಾ) ವಿನಾ ಕಾರ್ಯಂ ನ ಸಮುತ್ಪದ್ಯತೇ ।

**ವಿರಮ್:**— ವತ್ಸ, ವಿರಮ ಅಸ್ಮಾತ್ ಸಾಹಸಾತ್ ।

**ಶ್ರು *with* ಪ್ರತಿ:**— ಪ್ರತಿಶುಶ್ರಾವ ಕಾಕುತ್ಸ್ಥಃ ತೇಭ್ಯೋ ವಿಘ್ನಪ್ರತಿಕ್ರಿಯಾಂ

**ಸಹ:**— ಶಶಿನಾ ಸಹ ಯಾತಿ ಕೌಮುದೀ ಸಹ ಮೇಘೇನ ತಡಿತ್ ಪ್ರಲೀಯತೇ ।

**ಸ್ಥಾನೇ:**— ಸ್ಥಾನೇ ಪ್ರಾಣಾಃ ಕಾಮಿನಾಂ ದೂತ್ಯಧೀನಾಃ ।

**ಸ್ನಿಹ್:**— ಕಿಂನು ಖಲು ಬಾಲೇಸ್ಮಿನ್ ಸ್ನಿಹ್ಯತಿ ಮೇ ಮನಃ ।

**ಸ್ವಸ್ತಿ:**— ಸ್ವಸ್ತಿ ಭವತೇ ।

**ಹಂತ:**— (೧) ಹಂತ ಪ್ರವೃತ್ತಂ ಸಂಗೀತಕಮ್ । (೨) ಪುತ್ರ ಹಂತತೇ ಧಾನಾಕಾಃ. (೩) ಹಂತ ಧಿಕ್ ಮಾಮಧನ್ಯಂ । (೪) ಹಂತ ತೇ ಕಥಯಿಷ್ಯಾಮಿ ।



# ೬. ಸಮಾಸಗಳು

## (ಪಠ್ಯಪುಸ್ತಕದಲ್ಲಿಯ ಉದಾಹರಣೆಗಳನ್ನು ಕೊಟ್ಟಿದೆ)

ಎರಡು ಇಲ್ಲವೆ ಹಲವು ಪದಗಳು ಸೇರಿ ಒಂದು ಅರ್ಥವನ್ನು ಹೇಳುವ ಒಂದೇ ಪದವಾಗುವದು ಸಮಾಸವೆನಿಸುವದು. ಹೀಗೆ ಜೋಡಿಸಲ್ಪಟ್ಟ ಪದಗಳು ನಾಮಪದ, ವಿಶೇಷಣ ಇಲ್ಲವೆ ಅವ್ಯಯ ಇರಬಹುದು. ಅಥವಾ ಎರಡು ಸಮಾಸಗಳ ನಡುವೆ ಇಲ್ಲವೆ ಒಂದು ಸಮಸ್ತ ಪದ ಹಾಗೂ ಇನ್ನೊಂದು ಸಾಮಾನ್ಯಪದ ಇವುಗಳ ನಡುವೆಯೂ ಸಮಾಸವಾಗುವದುಂಟು. ಉದಾ:— ರಘುರಾಘವೌ, ಧೂರ್ತವಿಪ್ರಃ, ಮಧ್ಯೇಪೃಷ್ಠಂ, ವಿಬುಧಾರ್ಚಿತ-ಪಾದಪೀಠಃ, ಕಾಮಾನಲತಪ್ತಗಾತ್ರಾ ಮುಂ.

ಸಮಾಸ ಮಾಡುವಾಗ (ವಿಭಕ್ತಿರಹಿತ) ಮೂಲಪದಗಳನ್ನು ಜೋಡಿ-ಸಬೇಕು. ಹೀಗೆ ಸಿದ್ಧವಾದ ಸಮಸ್ತಪದಕ್ಕೆ ಲಿಂಗ, ವಚನ, ವಿಬಕ್ತಿಗಳು ಇರುತ್ತವೆ. (ಅವ್ಯಯೀ ಭಾವ ಸಮಾಸ ಮಾತ್ರ, ಇದಕ್ಕೆ ಅಪವಾದ), ಉದಾ:— ಲಗುಡಪ್ರಹಾರೈಃ **ಸಮಾಸದ ಅರ್ಥವನ್ನು ಹೇಳುವ ವಾಕ್ಯವು ವಿಗ್ರಹವು.** ವಿಗ್ರಹ ಮಾಡುವಾಗ ಸಮಸ್ತಪದದ ಪ್ರಥಮಾ ವಿಭಕ್ತಿಯನ್ನು ಗಮನಿಸಲಾಗುವದು. ಮುಂದೆ ತತ್ ಸರ್ವನಾಮವನ್ನುಪ-ಯೋಗಿಸಿ ಸಮಾಸದ ವಿಭಕ್ತಿಯನ್ನು ಸೂಚಿಸಲಾಗುವದು. ಉದಾ:— ಲಗುಡಾನಾಂ ಪ್ರಹಾರಾಃ ಲಗುಡಪ್ರಹಾರಾಃ (ಷ. ತ. ಸ.) ತೈ.

ಸಮಾಸಗಳಲ್ಲಿ ಮುಖ್ಯವಾಗಿ (೧) ದ್ವಂದ್ವ (೨) ತತ್ಪುರುಷ (೩) ಕರ್ಮಧಾರಯ (೪) ದ್ವಿಗು (೫) ಬಹುವ್ರೀಹಿ ಮತ್ತು (೬) ಅವ್ಯಯೀ ಭಾವ ಎಂಬ ಆರು ವಿಧಗಳಿವೆ.

ಸಾಮಾನ್ಯ ಲಕ್ಷಣ:— ಪೂರ್ವಪದವು (ಮೊದಲಿನದು) ಮುಖ್ಯ-ವಾಗಿದ್ದರೆ ಅದು ಅವ್ಯಯೀಭಾವ ಸಮಾಸವು ಉದಾ:— ಹರೌ ಹರೌ ಇತಿ ಅಧಿಹರಿ.

ಉತ್ತರ (ಎರಡನೆಯ) ಪದವು ಮುಖ್ಯವಾಗಿದ್ದರೆ ಅದು ತತ್ಪುರುಷ ಸಮಾಸವು. ಉದಾ:— ರಾಜ್ಞಃ ಪುರುಷಃ ರಾಜಪುರುಷಃ.

ಎರಡೂ ಪದಗಳು ಮುಖ್ಯವಾಗಿದ್ದರೆ ಅದು ದ್ವಂದ್ವ ಸಮಾಸವು ಉದಾ:— ರಘುಃ ಚ ರಾಘವಃ ಚ ರಘುರಾಘವೌ.

ಎರಡೂ ಪದಗಳನ್ನು ಬಿಟ್ಟು ೩ನೆಯ ಪದವು ಪ್ರಧಾನವಾಗಿದ್ದರೆ ಅದು ಬಹುವ್ರೀಹಿ ಸಮಾಸವು. ಉದಾ:— ಪತಿಃ ವ್ರತಂ ಯಸ್ಯಾಃ ಸಾ ಪತಿವ್ರತಾ.

ದ್ವಿಗು ಮತ್ತು ಕರ್ಮಧಾರಯ ಸಮಾಸಗಳು ತತ್ಪುರುಷದ ಪ್ರಭೇದಗಳು.

## ೧. ದ್ವಂದ್ವ ಸಮಾಸ
## ( ಚಾರ್ಥೇ ದ್ವಂದ್ವಃ )

ಇದರಲ್ಲಿ ಎಲ್ಲ ಪದಗಳು ಅಷ್ಟೇ ಮುಖ್ಯ ಇರುತ್ತವೆ. ಇದರ ಅವಾಂತರ ಭೇದಗಳು ಮೂರು. (i) ಇತರೇತರ (ii) ಸಮಾಹಾರ (iii) ಏಕಶೇಷ.

(i) ಇತರೇತರ ದ್ವಂದ್ವ:— ವಿಗ್ರಹದಲ್ಲಿ ಪದಗಳನ್ನು ಚ ಎಂಬ ಸಮುಚ್ಚಾಯಕ ಅವ್ಯಯದಿಂದ ಕೂಡಿಸುವರು. ಉದಾ:— ಚಾಣಕ್ಯಃ ಚ ಚಂದನ ದಾಸಃ ಚ ಚಾಣಕ್ಯಚಂದನದಾಸೌ; ಪಶವಃ ಚ ಪಕ್ಷಿಣಃ ಚ ಪಶುಪಕ್ಷಿಣಃ; ಗಂಗಾ ಚ ಸಿಂಧುಃ ಚ ಗಂಗಾಸಿಂಧೂ; ಉದಯಃ ಚ ಅಪವರ್ಗಃ ಚ ಉದಯಾಪವರ್ಗೌ.

[ಈ ಸಮಾಸದಲ್ಲಿ ಕೊನೆಯ ಪದದ ಲಿಂಗವೇ ಸಮಾಸದ ಲಿಂಗ ಆಗುವದು. ಸಮಾಸದ ವಚನವು ಜೋಡಿಸಲ್ಪಡುವ ವ್ಯಕ್ತಿ ಇಲ್ಲವೆ ಗುಂಪು-ಗಳ ಸಂಖ್ಯೆಯನ್ನವಲಂಬಿಸಿರುತ್ತದೆ.]

(ii) ಸಮಾಹಾರದ್ವಂದ್ವ:— ಇದು ಯಾವಾಗಲೂ ಸಮೂಹ ಸೂಚಿಸುತ್ತದೆ. ಆದ್ದರಿಂದ ನಪುಂಸಕಲಿಂಗ ಏಕವಚನದಲ್ಲಿರುತ್ತದೆ. ಉದಾ:— ಪಾನಂ ಚ ಅಶನಂ ಚ ಏತಯೋಃ ಸಮಾಹಾರಃ ಪಾನಾಶನಮ್ I.

(ಅ) ಪ್ರಾಣಿಗಳ ಅವಯವ ಪಾಣೀ ಚ ಪಾದೌ ಚ ಮುಖಂ ಚ ಏತೇಷಾಂ ಸಮಾಹಾರಃ ಪಾಣಿಪಾದಮುಖಂ. ಇದರಂತೆ ಚರ್ಮಮಾಂ-ಸರುಧಿರಂ; ನಖನಯನಂ; ವದನೋದರಂ ಮುಂ. (ಆ) ವಾದ್ಯಗಳ ವಿಭಾಗ. ಶಂಖಃ ಚ ಪಟಹಃ ಚ ಶಂಖಪಟಹಂ ಇದರಂತೆ ಮಾರ್ದಂಗಿಕ-ವೈಣವಿಕಂ. (ಕ) ಸ್ವಾಭಾವಿಕವಾದ ವಿರೋಧವಿದ್ದ ಪ್ರಾಣಿಗಳು. ಅಹಿಃ ಚ ನಕುಲಃ ಚ ಅಹಿನಕುಲಂ. (ಡ) ಸೈನ್ಯದ. ಭಾಗಗಳು. ರಾಜನ್ಯಾಃ ಚ ರಥಾಃ ಚ ಅಶ್ವಾಃ ಚ ರಾಜನ್ಯರಥಾಶ್ವಂ.

(iii) ಇತರೇತರದ್ವಂದ್ವ:— ಸಮಸ್ತ ಪದದಲ್ಲಿ ಕೊನೆಯ ಶಬ್ದ-ವನ್ನು ಮಾತ್ರ ಇಟ್ಟು ಮೊದಲನೆಯ ಶಬ್ದ ಲೋಪವಾಗುವದು. ಉದಾ:— ಮಾತಾ ಚ ಪಿತಾ ಚ ಪಿತರೌ; ಸ್ವಸಾ ಚ ಭ್ರಾತಾ ಚ ಭ್ರಾತರೌ; ಶ್ವಶ್ರೂಃ ಚ ಶ್ವಶುರಃ ಚ ಶ್ವಶುರೌ.

(iv) ಅನಿಯಮಿತ ದ್ವಂದ್ವ:— ಜಾಯಾ ಚ ಪತಿಃ ಚ ದಂಪತೀ **ಅಹಃ ಚ ರಾತ್ರಿಃ ಚ ಅಹೋರಾತ್ರಂ**; ಅಹನಿ ಚ ನಿಶಾಯಾಂ ಚ ಅಹ-ರ್ನಿಶಂ; ದ್ಯೌಃ ಚ ಪೃಥಿವೀ ಚ ದ್ಯಾವಾಪೃಥಿವ್ಯೌ.

## ೨. ತತ್ಪುರುಷ ಸಮಾಸ

**(ಪ್ರಾಯೇಣ ಉತ್ತರ ಪದಾರ್ಥಪ್ರಧಾನಃ ಉತ್ತರ ಪದಲಿಂಗಶ್ಚ)**

ಇದರಲ್ಲಿ ಉತ್ತರಪದವು ಮುಖ್ಯವಾಗಿದ್ದು ಪೂರ್ವಪದವು ಆ ಅರ್ಥವನ್ನು ಮರ್ಯಾದಿತಗೊಳಿಸುತ್ತದೆ. ಅಥವಾ ಪೂರ್ವಪದವು ಉತ್ತರ ಪದಕ್ಕೆ 'ಅರ್ಥವ್ಯಕ್ತಿ' ಮಾಡುತ್ತದೆ. ಇದರಲ್ಲಿ ೧೧ ಅವಾಂತರ ಭೇದಗಳಿವೆ.

೧. ಪ್ರಥಮಾ ತತ್ಪುರುಷ:— ಅರ್ಧಂ ಪಿಪ್ಪಲ್ಯಾಃ ಅರ್ಧ ಪಿಪ್ಪಲೀ; ಪೂರ್ವಂ ಕಾಯಸ್ಯ ಪೂರ್ವಕಾಯಃ (ಕೆಲವರು ಇದನ್ನು ಷ. ತ. ಸ. ದಲ್ಲಿ ಸೇರಿಸುವರು).

೨. ದ್ವಿತೀಯಾ ತತ್ಪುರುಷ:— ಶ್ರಿತ, ಅತೀತ, ಆಪನ್ನ, ಗತ, ಪ್ರಾಪ್ತ ಮುಂತಾದವುಗಳೊಡನೆ ಸೇರಿ ಈ ಸಮಾಸವಾಗುತ್ತದೆ. ಉದಾ:—ಗವಾಕ್ಷಂ ಗತಾ ಗವಾಕ್ಷಗತಾ (ಮಾಲವಿಕಾ); ಕೃಷ್ಣಂ ಶ್ರಿತಃ ಕೃಷ್ಣಶ್ರಿತಃ; ವರ್ಷಂ ಭೋಗ್ಯಃ ವರ್ಷಭೋಗ್ಯಃ.

೩. ತೃತೀಯಾ ತತ್ಪುರುಷ:— ಪೂರ್ವ, ಅಪರ, ಸದೃಶ, ಸಮ, ಊನ, ಮಿಶ್ರ, ಅಧಿಕ ಮುಂತಾದವುಗಳೊಡನೆ ಸೇರಿ ಈ ಸಮಾಸ ವಾಗು ತ್ತದೆ. ಉದಾ:— ಮಯಾ ಸಮಃ ಮತ್ಸಮಃ; ತ್ವಯಾ ಸಮಾ ತ್ವತ್ಸಮಾ; ಹರೇಣ ತುಲ್ಯಃ ಹರತುಲ್ಯಃ; ಏಕೇನ ಊನಃ ಏಕೋನಃ; ವರ್ಣೇನ ಅವರಃ ವರ್ಣಾವರಃ; ಪಾಶೇನ ವಿರಹಿತಃ ಪಾಶವಿರಹಿತಃ; ಆರ್ತ, ಪೂತ ಮುಂ. ಬಂದರೂ ತೃ. ತ. ಆಗುವದು. ಉದಾ:— ದುಃಖೇನ ಆರ್ತಃ ದುಃಖಾರ್ತಃ; ಕುಶೈಃ ಪೂತಃ ಕುಶಪೂತಃ.

೪. ಚತುರ್ಥೀ ತತ್ಪುರುಷ:— ಅರ್ಥ, ಅರ್ಥೀ, ಅರ್ಥಾಯ ಮುಂ. ಹಿತ, ರಕ್ಷಿತ ಬಲಿ ಮುಂತಾದವುಗಳೊಡನೆ ಸೇರಿ ಆಗುತ್ತದೆ. ಗವೇ ಇದಂ

ಗವಾರ್ಥೇ; ಬ್ರಾಹ್ಮಣೇಭ್ಯಃ ಇದಂ ಬ್ರಾಹ್ಮಣಾರ್ಥೇ; ದ್ವಿಜಾಯ ಅಯಂ ದ್ವಿಜಾರ್ಥಃ; ಪರಿಪಾಲನಾಯ ಇದಂ ಪರಿಪಾಲನಾರ್ಥಮ್; ಭೂತೇಭ್ಯಃ ಬಲಿಃ ಭೂತಬಲಿಃ ಇದೇ ಮೇರೆಗೆ ಯೂಪದಾರು, ಕುಂಡಲಹಿರಣ್ಯಂ ಮುಂತಾದವುಗಳು.

೫. ಪಂಚಮೀ ತತ್ಪುರುಷ:— ಭಯವಾಚಕ ಶಬ್ದ ಇಲ್ಲವೆ ಪತಿತ, ಅಪೇತ ಅಪಗತ ಮುಂತಾದವುಗಳೊಡನೆ ಸೇರಿ ಆಗುತ್ತದೆ. ಉದಾ:— ಬಂಧನಾತ್ ಭಯಂ ಬಂಧನಭಯಂ; ಭಯಾತ್ ಚ್ಯುತಾಃ ಭಯಚ್ಯುತಾಃ; ಶತಾತ್ ಪರಾಃ ಪರಃ ಶತಂ; ಇದರಂತೆಯೇ ಜಾತಿಭ್ರಷ್ಟಃ, ಸುಖಾಪೇತಃ, ಸ್ವರ್ಗಪತಿತಃ ಮುಂತಾದವುಗಳು.

೬. ಷಷ್ಠೀ ತತ್ಪುರುಷ:— ಪೂರ್ವಪದ ಮತ್ತು ಉತ್ತರಪದಗಳ ನಡುವಿನ ಸಂಬಂಧವು ಉಳಿದ ವಿಭಕ್ತಿಗಳಿಂದ ಸೂಚಿಸಲ್ಪಡದೆ ಇದ್ದರೆ ಈ ಸಮಾಸವಾಗುವದು. ಉದಾ:— ಸ್ನೇಹಸ್ಯ ಪಾಶಃ ಸ್ನೇಹಪಾಶಃ; ಗಿರೇಃ ಗುಹಾ ಗಿರಿಗುಹಾ; ನೃಣಾಂ ಪತಿಃ ನೃಪತಿಃ; ಇಂದೋಃ ಬಿಂಬಃ ಇಂದುಬಿಂಬಃ; ಪಶೂನಾಂ ಪತಿಃ ಪಶುಪತಿಃ। ಭೂತಾನಾಂ ಈಶಃ ಭೂತೇಶಃ; ರಾಜ್ಞಃ ಪುತ್ರೀ ರಾಜಪುತ್ರೀ; ರಾಜ್ಞಃ ಸಭಾ ರಾಜಸಭಾ; ಅರ್ಧರಾತ್ರಃ (ಅರ್ಧಂ ರಾತ್ರ್ಯಾಃ), ಸಂವತ್ಸರಮೃತಃ (ಸಂವತ್ಸರಃ ಮೃತಸ್ಯ ಅಸ್ಯ) ಮುಂ.

೭. ಸಪ್ತಮೀ ತತ್ಪುರುಷ:— ಪೂರ್ವಪದವು ಕಾಲವಾಚಕ ಇಲ್ಲವೆ ಅಧಿಕರಣ ವಾಚಕ ಇದ್ದರೆ, ಅಥವಾ ಉತ್ತರಪದವು ಧೂರ್ತ, ಆಸಕ್ತ ಮುಂ. ಇದ್ದರೆ ಈ ಸಮಾಸ ಆಗುವದು. ಉದಾ:— ಬಂಧೌ ಪ್ರೇಮ ಬಂಧುಪ್ರೇಮ; ಗುರುಷು ಭಕ್ತಿಃ ಗುರುಭಕ್ತಿಃ ಇದರಂತೆ ಕಾರ್ಯಕುಶಲಃ ಅಕ್ಷಪ್ರವೀಣಃ; ಪುರುಷಶ್ರೇಷ್ಠಃ; ದೈವಾಧೀನಃ (ದೈವೇ ಅಧಿ) ರಾಜಾಧೀನಃ (ರಾಜ್ಞಿ ಅಧಿ).

೮. ನಞ್ ತತ್ಪುರುಷ:— ನಿಷೇಧಾರ್ಥಕ ಅವ್ಯಯದೊಡನೆ. ಉದಾ:— ನ ಪರಿಕ್ಲೇಶಃ ಅಪರಿಕ್ಲೇಶಃ; ನ ಋತಂ ಅನೃತಂ; ನ ಅಶನಂ ಅನಶನಂ; ನ ಏಕಂ ಅನೇಕಾನಿ; ಮುಂ.

೯. ಪ್ರಾದಿ ತತ್ಪುರುಷ:— ಪೂರ್ವಪದವು ಪ್ರ ಮುಂ. ಉಪಸರ್ಗವಿದ್ದರೆ ಉದಾ:— ಪ್ರಕೃಷ್ಟಃ ವಾತಃ ಪ್ರವಾತಃ; ಪ್ರತಿಗತಃ ರವಃ ಪ್ರತಿರವಃ; ಪ್ರತಿರೂಪಂ (ಪ್ರತಿಗತಂ, ಪ್ರತಿಕೃತಂ ವಾ ರೂಪಂ) ಪ್ರತಿ ಪ್ರಿಯಂ.

೧೦. ಉಪಪದ ತತ್ಪುರುಷ:— ಉತ್ತರಪದವು ಧಾತುವಾಚಕ ಶಬ್ದವಿದ್ದರೆ. ಉದಾ:—ಸ್ವರ್ಗೇತಿಷ್ಠತಿ ಇತಿ ಸ್ವರ್ಗಸ್ಥಃ; ಆತ್ಮನಃ ಜಾಯತೇ ಇತಿ ಆತ್ಮಜಃ; ಪೃಥಿವ್ಯಾಂ ರೋಹಂತಿ ಇತಿ ಪೃಥಿವೀರುಹಾಃ; ಇದರಂತೆ ಸಿಮ್ಮಗಾ, ಮನೋಭೂಃ; ದುರಾಸದಃ, ದುರುತ್ತರಃ; ವ ಶಜಃ; ಪಾಪಘ್ನೀ (ಪಾಪಂ ಹಂತಿ ಇತಿ) ಮುಂ.

೧೧. ಅಲುಕ್ ತತ್ಪುರುಷ:— ಪೂರ್ವಪದದ ವಿಭಕ್ತಿಯು ಹಾಗೆಯೇ ಉಳಿಯುವದು. ಉದಾ:— ಜನುಷಾ ಅಂಧಃ ಜನುಷಾಂಧಃ; ಇದರಂತೆಯೇ ಪರಸ್ಮೈಪದಂ; ಯುಧಿಷ್ಠಿರಃ; ಪಂಕೇರುಹಃ; ಮುಂ.

## ೩. ಕರ್ಮಧಾರಯ ಸಮಾಸ

## (ತತ್ಪುರುಷ ಪ್ರಭೇದಃ)

ಇದು ತತ್ಪುರುಷ ಸಮಾಸದ ಪ್ರಭೇದವು. ಇದರಲ್ಲಿ ಪೂರ್ವಪದವು ಸಾಮಾನ್ಯವಾಗಿ ವಿಶೇಷಣ ಇಲ್ಲವೆ ಸಮಾನಾಧಿಕರಣ ನಾಮಪದವಿರುತ್ತದೆ. ಅವಾಂತರ ಭೇದಗಳು ಕೆಳಗಿನಂತಿವೆ.

೧. ವಿಶೇಷಣ ಪೂರ್ವಪದ ಕ. ಸ:— ಧೂರ್ತಃ ವಿಪ್ರಃ ಧೂರ್ತವಿಪ್ರಃ; ನವಃ ಈಶ್ವರಃ ನವೇಶ್ವರಃ; ಮಹಾಮುನಿಃ; ಮಹಾನದೀ; ಸದ್ವಿದ್ಯಾ; ಸರ್ವವಸ್ತೂನಿ; ನೀಚಪಥಃ; ಮಿಥ್ಯಾಗೌರವಂ; ಬಹಿಃಪ್ರದೇಶಃ;

೨. ವಿಶೇಷ್ಯ ಪೂರ್ವಪದ ಕ. ಸ:— ಅಧಮಃ ಪುರುಷಃ ಪುರುಷಾಧಮಃ; ಹತಃ (ದುಷ್ಟಃ) ಚಾಣಕ್ಯಃ ಚಾಣಕ್ಯಹತಃ, ಚಾಣಕ್ಯಹತಕಃ।

೩. ವಿಶೇಷಣೋಭಯಪದ ಕ. ಸ:— ವಿರಲಃ ತರಲಃ ಚ ವಿರಲತರಃ; ಶ್ಯಾಮಃ ಚ ಅವದಾತಃ ಚ ಶ್ಯಾಮಾವದಾತಃ।

೪. ಉಪಮಾನಪೂರ್ವಪದ ಕ. ಸ:— ಅಲಿಃ ಇವ ನೀಲಃ ಅಲಿನೀಲಃ; ಮೇಘಶ್ಯಾಮಃ;

೫. ಉಪಮಾನೋತ್ತರ ಕ. ಸ:— ನರಃ ಸಿಂಹಃ ಇವ ನರಸಿಂಹಃ; ಮುಖಂ ಚಂದ್ರಃ ಇವ ಮುಖಚಂದ್ರ;

೬. ಸಂಭಾವನಾಪೂರ್ವಪದ ಕ. ಸ:— ಗುಣಃ ಇತಿಬುದ್ಧಿಃ ಗುಣಬುದ್ಧಿಃ; ಪಾಪಂ ಇತಿ ಸಂಕಟಂ ಪಾಪಸಂಕಟಂ.

೭. ಅವಧಾರಣಾಪೂರ್ವಪದ ಕ. ಸ:— ವಿದ್ಯೈವ ಧನಂ ವಿದ್ಯಾಧನಂ; ತಪೋಧನಂ. ಇವಲ್ಲದೆ ಕೆಳಗಿನ ಅವಾಂತರ ಭೇದಗಳಿವೆ.

(ಅ) ಮಧ್ಯಮ ಪದ ಲೋಪೀ (ಅಥವಾ ಶಾಕಪಾರ್ಥಿವಾದಿ) ಕ. ಸ:— ಶಾಕಪ್ರಿಯಃ ಪಾರ್ಥಿವಃ ಶಾಕಪಾರ್ಥಿವಃ; ದೇವಪೂಜಕಃ ಬ್ರಾಹ್ಮಣಃ

ದೇವಬ್ರಾಹ್ಮಣಃ; ಛಾಯಾಪ್ರಧಾನಃ; ತರುಃ; ಛಾಯಾತರುಃ; ವಿಷಮಿಶ್ರಂ ಅನ್ನಂ ವಿಷಾನ್ನಂ; ಅಗ್ನಿಪ್ರೇರಿತಃ ರಥಃ ಅಗ್ನಿರಥಃ ।

(ಬ) ನಿತ್ಯ ಕ. ಸಃ— ಅನ್ಯ ಗುಣಃ ಗುಣಾಂತರಃ; ಅನ್ಯಃ ದೇಶಃ ದೇಶಾಂತರಂ; ಅನ್ಯತ್ ಜನ್ಮ ಜನ್ಮಾಂತರಂ; ಅನ್ಯಾ ಭಾಷಾ ಭಾಷಾಂತರಂ.

(ಕ) ಆದೌ ಸುಪ್ತಃ ಪಶ್ಚಾತ್ ಉತ್ಥಿತಃ ಸುಪ್ತೋತ್ಥಿತಃ; ಆದೌ ಸ್ನಾತಃ ಪಶ್ಚಾತ್ ಅನುಲಿಪ್ತಃ. ಸ್ನಾತಾನುಲಿಪ್ತಃ

(ಡ) ಶೋಭನಃ ಪುರುಷಃ ಸುಪುರುಷಃ; ಕುತ್ಸಿತಃ ಪುತ್ರಃ ಕುಪುತ್ರಃ; ಕುತ್ಸಿತಾ ಮಾತಾ ಕುಮಾತಾ; ಕುತ್ಸಿತಂ ಕರ್ಮ ಕುಕರ್ಮ; ಶೋಭನಾನಿ ಭಾಷಿತಾನಿ ಸುಭಾಷಿತಾನಿ.

(ಇ) ಮಯೂರ ವ್ಯಂಸಕಾದಿ ಸಮಾಸ:— ಮಯೂರಃ ಚ ಅಸೌ ವ್ಯಂಸಕಃ ಚ ಮಯೂರವ್ಯಂಸಕಃ; ಉದಕ್ ಚ ಅವಾಕ್ ಚ ಉಚ್ಚಾವಚಂ, ನಾಸ್ತಿ ಕಿಂಚನ ಯಸ್ಯ ಸಃ ಅಕಿಂಚನಃ; ಅಕುತೋಭಯಃ; ಚಿನ್ಮಾತ್ರಂ ಚಿತ್ ಏವ); ಅಹಂ ಅಹಂ ಇತಿ ಯಸ್ಯಾಂ ಕ್ರಿಯಾಯಾಂ ಅಭಿಧೀಯತೇ ಸಾ ಅಹಮಹಮಿಕಾ;

೪. ದ್ವಿಗುಸಮಾಸ **(ತತ್ಪುರುಷ ಪ್ರಭೇಧಃ ಸಂಖ್ಯಾಪೂರ್ವಃ)**

ಇದು ತತ್ಪುರುಷದ ಪ್ರಭೇದವು; ಇದರಲ್ಲಿ ಪೂರ್ವಪದವು ಸಂಖ್ಯಾವಾಚಕವಿದ್ದು ಸಮಸ್ತಪದವು ಸಮೂಹಾರ್ಥವುಳ್ಳದ್ದಿರುತ್ತದೆ. ಉದಾಃ-ಸಪ್ತಾನಾಂ ಪದಾನಾಂ ಸಮಾಹಾರಃ ಸಪ್ತಪದೀ; ಪಂಚಾನಾಂ ತಂತ್ರಾಣಾಂ ಸಮಾಹಾರಃ ಪಂಚತಂತ್ರಂ; ಚತುರ್ಯುಗಂ; ತ್ರಿಭುವನಂ; ತ್ರಿಲೋಕೀ; ಪಂಚವಟೀ ಮುಂ. [ ಸಪ್ತರ್ಷಯಃ ( ಸಪ್ತಚತೇ ಋಷಯಃ ಚ ) ಎಂಬುದಾದರೂ ಪೂರ್ವಪದ ಸಂಖ್ಯಾವಾಚಕವಿರುವುದರಿಂದ ದ್ವಿಗು ಎಂದು ಹೇಳಲಾಗುತ್ತದೆ. ಆದರೆ ಇಲ್ಲಿ ಸಮೂಹಾರ್ಥ ಸೂಚಿಸುವದಿಲ್ಲವಾದ್ದರಿಂದ ಇದು ದ್ವಿಗು ಸಮಾಸವಾಗದೆ ಕ. ಸ. ಎಂದು ಕೆಲವರ ಮತ ]

೫. ಬಹುವ್ರೀಹಿ ಸಮಾಸ **(ಅನ್ಯಪದಾರ್ಥ ಪ್ರಧಾನಃ)**

ಇದರಲ್ಲಿ ಎರಡು ಇಲ್ಲವೆ ಹಲವು ಪದಗಳಿದ್ದು, ಸಮಸ್ತಪದವು ಸಮಾಸದಲ್ಲಿ ಸೇರದೆ ಇದ್ದ ಬೇರೊಂದು ಪದದ ವಿಶೇಷಣವಾಗುತ್ತದೆ. ಉದಾ :— ರಕ್ತಾನಿ ವಾಸಾಂಸಿ ಯಸ್ಯ ಸಃ ರಕ್ತವಾಸಾಃ ( ಯಮಃ ). ಅವಾಂತರ ಭೇದಗಳನ್ನು ಕೆಳಗೆ ಕೊಡಲಾಗಿದೆ.

೧. ಸಮಾನಾಧಿಕರಣ ಬ. ಸ— ಪ್ರಾಪ್ತಂ ಉದಕಂ ಯಂ ಸಃ ಪ್ರಾಪ್ತೋದಕಃ (ಗ್ರಾಮಃ); ಭುಕ್ತಂ ಓದನಂ ಯೇನ ಸಃ ಭುಕ್ತೌದನಃ

ದತ್ತಃ ಸೂಪಃ ಯಸ್ಮೈ ಸಃ ದತ್ತಸೂಪಃ; ನಿರ್ಗತಾಃ ಅರಯಃ ಯಸ್ಮಾತ್ ಸಃ ನಿರ್ಗತಾರಿಃ (ದೇಶಃ); ಮಹಾಂತೌ ಬಾಹೂ ಯಸ್ಯ ಸಃ ಮಹಾಬಾಹುಃ; ವೀರಾಃ ಪುರುಷಾಃ ಯಸ್ಮಿನ್ ಸಃ ವೀರಪುರುಷಃ (ದೇಶಃ).

೨. ವ್ಯಧಿಕರಣ ಬ. ಸ :— ಚಕ್ರಂ ಪಾಣೌ ಯಸ್ಯ ಸಃ ಚಕ್ರಪಾಣಿಃ (ವಿಷ್ಣುಃ) ಶಶೀ ಶೇಖರೇ ಯಸ್ಯ ಸಃ ಶಶಿಶೇಖರಃ.

[ ಪಠ್ಯಪುಸ್ತಕದಲ್ಲಿಯ ಕೆಲವು ಬ. ಸ. ಗಳು :— ಚಿಂತಾವ್ಯಾಕುಲಿತ ಮನಾಃ, ಕ್ಷುತ್ಕ್ಷಾಮಕಂಠಾಃ, ಮನೋರಥಪ್ರಿಯಃ, ದುರಾತ್ಮಾ, ಪುಷ್ಪಪಸ್ತ್ರಾ, ಚತುಃಶಾಲಂ, ಕೃತಕ್ರಿಯಃ, ಕೈಕೇಯೀಮಾತಾ, ಅರ್ಘರುಚಿಃ, ತೀಕ್ಷ್ಣ ದಂಡಃ ಕ್ರೂರಕರ್ಮಾ, ಭಾರ್ಯಾಸಹಾಯಃ,ರಕ್ತವಾಸಾಃ, ದಕ್ಷಿಣಾಮುಖಃ ಸಹಸ್ರಕಿರಣಃ, ಶಶಾಂಕಃ, ]

೩. ಪ್ರಾದಿ ಬ. ಸಃ — ಪ್ರಬದ್ಧಃ ಅಂಜಲಿಃ ಯೇನ ಸಃ ಪ್ರಾಂಜಲಿಃ; ಪ್ರಗತಂ ವಯಃ ಯಸ್ಯ ಸಃ ಪ್ರವಯಾಃ.

೪. ಸಹ ಬ. ಸಃ — ಪುತ್ರೇಣ ಸಹ ಸಪುತ್ರಃ ಸಹಪುತ್ರಃ ವಾ; ಲಜ್ಜಯಾ ಸಹ ಸಲಜ್ಜಾ; ಸಪ್ರೇಯಸ್ಯಃ;

೫. ನಞ. ಬ. ಸಃ— ಅವಿದ್ಯಮಾನಾ ಕರುಣಾ ಯಸ್ಯ ಸಃ ಅಕರುಣಃ; ಅವಿದ್ಯಮಾನಂ ಉತ್ತರಂ ಯಸ್ಯ ತತ್ ಅನುತ್ತರಂ.

೬. ದಿಗ್ ಬ. ಸಃ— ದಕ್ಷಿಣಸ್ಯಾಃ ಪೂರ್ವಸ್ಯಾಃ ಚ ದಿಶೋಃ ಯತ್ ಅಂತರಾಲಂ ಸಾ ದಕ್ಷಿಣಪೂರ್ವಾ.

೭. ಸಂಖ್ಯಾ ಬ. ಸಃ—ದ್ವೌ ವಾ ತ್ರಯೋ ವಾ ದ್ವಿತ್ರಾಃ; ಪಂಚ ವಾ ಷಟ್ ವಾ ಪಂಚಷಾಃ; ದಶಾನಾಂ ಸಮೀಪೇ ಯೇ ಸಂತಿ ತೇ ಉಪ ದಶಾಃ; ವಿಂಶತೇಃ ಆಸನ್ನಾಃ ಆಸನ್ನವಿಂಶಾಃ.

ಅನಿಯಮಿತ ಬ. ಸಃ— ಸ್ತ್ರಿಯಾ ಸಹ ಸಸ್ತ್ರೀಕಃ; ಬಹ್ವ್ಯಃ ನದ್ಯಃ ಯಸ್ಮಿನ್ ಸಃ ಬಹುನದೀಕಃ; ಗತಃ ಭರ್ತಾ ಯಸ್ಯಾಃ ಸಾ ಗತಭರ್ತೃಕಾ; ಈಶ್ವರಃ ಕರ್ತಾ ಯಸ್ಯ ತತ್ ಈಶ್ವರಕರ್ತೃಕಂ; ಬಹ್ವ್ಯಃ ಭಾರ್ಯಾಃ ಯಸ್ಯ ಸಃ ಬಹುಭಾರ್ಯ (ರ್ಯಾ) ಕಃ; ಮಹತ್ ಯಶಃ ಯಸ್ಯ ಸಃ ಮಹಾಯಶಸ್ಕಃ; ಪೃಷತ್ ಉದರಂ ಯಸ್ಯ ಸಃ ಪೃಷೋದರಃ; ಕರ್ತುಂ ಕಾಮಃ ಯಸ್ಯ ಸಃ ಕರ್ತುಕಾಮಃ ಕೇಶೇಷು ಕೇಶೇಷು ಗೃಹೀತ್ವಾ ಇದಂ ಯುದ್ಧಂ ಪ್ರವರ್ತತೇ ಇತಿಕೇಶಾಕೇಶಿ ಯುದ್ಧಂ ]

## ೬. ಅವ್ಯಯೀಭಾವ ಸಮಾಸ

**(ಅವ್ಯಯತ್ವಾತ್ ತ್ರಿಷು ಲಿಂಗೇಷು ಸಮಾನಂ ರೂಪಂ)**

ಇದರಲ್ಲಿ ಉಪಸರ್ಗ ಅಥವಾ ಅವ್ಯಯವನ್ನು ನಾಮಪದದೊಡನೆ

ಕೂಡಿಸಲಾಗುವದು. ಈ ಸಮಾಸಗಳು ನಪುಂಸಕ ಲಿಂಗ ದ್ವಿತೀಯಾ ವಿಭಕ್ತಿಯ ಏಕವಚನಗಳೆಂದು ತಿಳಿಯಬೇಕು. ಉದಾ:— ತಟಂ ತಟಂ ಪ್ರತಿ ಅನುತಟಂ; ಗಿರಿಂ ಗಿರಿಂ ಪ್ರತಿ ಅನುಗಿರಿ; ಅಂಗೇ ಅಂಗೇ ಇತಿ ಪ್ರತ್ಯಂಗಂ; ಅಹನಿ ಅಹನಿ ಇತಿ ಪ್ರತ್ಯಹಂ; ಕಾಸೌ ಸಾಸೌ ಇತಿ ಅನುಕಾಸು; ಅಹನಿ ಅಹನಿ ಇತಿ ಪ್ರತ್ಯಹಂ. ಗಂಗಾಯಾಃ ಪಾರೇ ಪಾರೇಗಂಗಂ; ಗಂಗಾಯಾಃ ಮಧ್ಯೇ ಮಧ್ಯೇಗಂಗಂ; ಹರೌ ಹರೌ ಇತಿ ಅಧಿಹರಿ; ಕೈಲಾಸಾತ್ ಆ ಆಕೈಲಾಸಂ; ವಿಧಿಂ ಅನತಿಕ್ರಮ್ಯ ಯಥಾವಿಧಿ; ತೃಣಂ ಅಪಿ ಅಪರಿತ್ಯಜ್ಯ ಸತೃಣಂ. ಕರುಣಯಾ ಸಹಿತಂ ಯಥಾ ಸ್ಯಾತ್ ತಥಾ ಸಕರುಣಂ; ಅಭ್ಯರ್ಥನಯಾ ದೀನಂ ಯಥಾ ಸ್ಯಾತ್ ತಥಾ ಅಭ್ಯರ್ಥನಾದೀನಂ; ಇದರಂತೆ ಸಗದ್ಗದಂ; ಸಸ್ಮಿತಂ; ನಿರಪೇಕ್ಷಿತಂ. ಮುಂ.

ಮೇಲೆ ಕೊಟ್ಟ ಆರು ಬಗೆಯ ಸಮಾಸಗಳಲ್ಲದೆ, ಕೆಳಗಿನ ಸಮಾಸ-ಗಳನ್ನೂ ಲಕ್ಷ್ಯದಲ್ಲಿಡಬೇಕು:

ಅ. ನಿತ್ಯಸಮಾಸ:— ಸಮಾಸಗಳನ್ನು ವಿಗ್ರಹಿಸಲು ಬರದಿದ್ದರೆ ಅಥವಾ ವಿಗ್ರಹಿಸುವಾಗ ಬೇರೆ ಶಬ್ದಗಳ ಸಹಾಯ ಪಡೆದರೆ ಅದು ನಿತ್ಯ ಸಮಾಸವೆಂದು ಕರೆಯಲ್ಪಡುವದು. ಉದಾ:— ಮೃತೇನ ತುಲ್ಯಃ ಮೃತಪ್ರಾಯಃ; ಆಗತಃ ಏವ ಆಗತಮಾತ್ರಂ; ಜಮದಗ್ನಿಃ; ಧೃಷ್ಟದ್ಯುಮ್ನಃ.

(ಬ) ಕೇವಲ ಅಥವಾ ಸುಪ್ ಸುಪಾ ಸಮಾಸ:— ಮೇಲೆ ಹೇಳಿದ ಯಾವ ವರ್ಗಕ್ಕೂ ಸೇರದೆ ಇದ್ದ ಸಮಾಸವು ಕೇವಲ ಅಥವಾ ಸುಪ್ ಸುಪಾ ಸಮಾಸವೆಂದು ಕರೆಯಲ್ಪಡುವದು. ಉದಾ:— ಪೂರ್ವಂ ಭೂತಃ ಭೂತಪೂರ್ವಃ; ಪೂರ್ವಂ ಶ್ರುತಂ ಶ್ರುತಪೂರ್ವಂ; ತ್ರಿಃ ಸಪ್ತಕೃತ್ವಃ ತ್ರಿಃ ಸಪ್ತ-ಕೃತ್ವಃ.

(ಕ) ಚ್ವಿ ರೂಪಗಳು:— ನ ಶುಕ್ಲಾಃ; ಅಶುಕ್ಲಾಃ ಅಶುಕ್ಲಾಃ ಶುಕ್ಲಾಃ ಸಂಪದ್ಯಮಾನಾಃ ಕೃತಾಃ ಶುಕ್ಲೀಕೃತಾಃ.

ಮತ್ವರ್ಥೀಯಗಳು:— ಬುದ್ಧಿಃ ಅಸ್ಯ ಅಸ್ತಿ ಇತಿ ಬುದ್ಧಿಮಾನ್; ಧನಂ ಅಸ್ಯ ಅಸ್ತಿ ಇತಿ ಧನವಾನ್.

ತದ್ಧಿತಗಳು:— ಘಟಸ್ಯ ಭಾವಃ ಘಟತ್ವಂ; ಧೀರಸ್ಯ ಭಾವಃ ಧೀರತಾ; ಜಹ್ನೋಃ ಅಪತ್ಯಂ ಸ್ತ್ರೀ ಜಾಹ್ನವೀ; ಮೃಕಂಡೋಃ ಅಪತ್ಯಂ ಪುಮಾನ್ ಮಾರ್ಕಂಡಃ.

———

# ೭. ಪ್ರಯೋಗ ಬದಲಾವಣೆ

( ಹೆಚ್ಚಾಗಿ ಪಠ್ಯ ಪುಸ್ತಕದೊಳಗಿನ ವಾಕ್ಯಗಳನ್ನೇ ಆಯ್ದುಕೊಳ್ಳಲಾಗಿದೆ. )

| ಕರ್ತರಿ. | ಕರ್ಮಣಿ ಅಥವಾ ಭಾವೆ. |
|---|---|
| | ಅ ( ಸಕರ್ಮಕ ) |
| ೧ ಭಕ್ತಃ ಈಶ್ವರಂ ಪೂಜಯತಿ | ಭಕ್ತೇನ ಈಶ್ವರಃ ಪೂಜ್ಯತೇ |
| ೨ ಸಂಪದಃ ವಿಮೃಶ್ಯಕಾರಿಣಂ ವೃಣತೇ | ವಿಮೃಶ್ಯಕಾರೀ ಸಂಪದ್ಭಿಃ ವ್ರಿಯತೇ |
| ೩ ಅಹಂ ಜಲಂ ಪಿಬಾಮಿ | ಮಯಾ ಜಲಂ ಪೀಯತೇ |
| ೪ ರಜಕಃ ರಾಸಭಂ ಬಂಧನೇನ ನಿಯುನಕ್ತಿ | ರಜಕೇಣ ರಾಸಭಃ ಬಂಧನೇ ನಿಯುಜ್ಯತೇ |
| ೫ ಅಯಂ ಹಿಮಾಲಯಃ ಭೂಭೃದನುಕ್ರಿಯಾಂಧತ್ತೇ | ಅನೇನ ಹಿಮಾಲಯೇನ ಭೂಭೃದನುಕ್ರಿಯಾಧೀಯತೇ |
| ೬ ದಧಿಪುಚ್ಛಃ ಬಿಲೇ ಸಿಂಹಮಪಶ್ಯತ್ | ದಧಿಪುಚ್ಛೇನ ಬಿಲೇ ಸಿಂಹಃ ಅದೃಶ್ಯತ |
| ೭ ವರಂ ವೃಣೀಷ್ವ | (ತ್ವಯಾ) ವರಃ ವ್ರಿಯತಾಂ |
| ೮ ನಿರ್ಜಹತ ರಾಕ್ಷಸಸ್ಯ ಗೃಹಜನಂ | ನಿರುಹ್ಯತಾಂ ರಾಕ್ಷಸಸ್ಯ ಗೃಹಜನಃ |
| ೯ ಮುಂಚತು ಮಾಮಿದಾನೀಂ ಭದ್ರಮುಖಃ | ಭದ್ರಮುಖೇನ ಅಹಂ ಇದಾನೀಂ ಮುಚ್ಯೈ |
| ೧೦ ಪುತ್ರಃ ಮಾತರಂ ಪಿತರಂ ಚ ಪ್ರೀಣಯೇತ್ | ಪುತ್ರೇಣ ಮಾತಾ ಪಿತಾ ಚ ಪ್ರೀಣ್ಯೇಯಾತಾಮ್ |
| ೧೧ ಕಿರಾತಾಃ ಬ್ರಾಹ್ಮಣಾನ್ ಜಗ್ರಹುಃ | ಕಿರಾತೈಃ ಬ್ರಾಹ್ಮಣಾಃ ಜಗ್ರಹಿರೇ |
| ೧೨ (ಅಹಂ) ಅಜಾಭಿಃ ಗಾಃ ಗ್ರಹೀಷ್ಯಾಮಿ | (ಮಯಾ) ಅಜಾಭಿಃ ಗಾಃ ಗ್ರಹೀಷ್ಯಂತೇ |

| | ಕರ್ತರಿ | ಕರ್ಮಣಿ ಅಥವಾ ಭಾವೇ |
|---|---|---|
| | ಅ ( ದ್ವಿಕರ್ಮಕ ) | |
| ೧೩ | ಗೋಪಃ ಧೇನುಂ ಪಯಃ ದೋಗ್ಧಿ | ಗೋಪೇನ ಧೇನುಃ ಪಯಃ ದುಹ್ಯತೇ |
| ೧೪ | ಭಿಕ್ಷುಕಃ ಧನಿಕಂ ಧನಂ ಯಾಚತೇ | ಭಿಕ್ಷುಕೇಣ ಧನಿಕಃ ಧನಂ ಯಾಚ್ಯತೇ |
| ೧೫ | ಪಾಂಥಃ ರಾಮಂ ಮಾರ್ಗಂ ಅಪೃಚ್ಛತ್ | ಪಾಂಥೇನ ರಾಮಃ ಮಾರ್ಗಂ ಅಪ್ರಚ್ಛ್ಯತ |
| ೧೬ | ಪ್ರಹೃಷ್ಟಾತ್ಮಾ ಸಾವಿತ್ರೀಂ ಇದಂ ಅಬ್ರವೀತ್ | ಪ್ರಹೃಷ್ಟಾತ್ಮನಾ ಸಾವಿತ್ರೀ ಇದಂ ಉಚ್ಯತ । |
| ೧೭ | ಸಂತಃ ಧರ್ಮಂ ಪ್ರಧಾನಂ ಆಹುಃ | ಸದ್ಭಿಃ ಧರ್ಮಃ ಪ್ರಧಾನಃ ಉಚ್ಯತೇ |
| ೧೮ | ಶತಂ ಜಯತಿ ದೇವದತ್ತಂ | ಶತಂ ಜೀಯತೇ ದೇವದತ್ತಃ |
| ೧೯ | ದೇವಾಸುರಾಃ ಕ್ಷೀರಸಾಗರಂ ಅಮೃತಂ ಅಮಥ್ನನ್ | ದೇವಾಸುರೈಃ ಕ್ಷೀರಸಾಗರಃ ಅಮೃತಂ ಅಮಥ್ಯತ |
| ೨೦ | ಪ್ರಜಾಃ ತಂ ರಘುಂ ಏವ ಅಮನ್ಯಂತ | ಪ್ರಜಾಭಿಃ ಸಃ ರಘುಃ ಏವ ಅಮನ್ಯತ । |
| ೨೧ | ಗೋಪಾಲಃ ಅಜಾಂ ಗ್ರಾಮಂ ನಯತಿ ಹರತಿ ಕರ್ಷತಿ ವಹತಿ ವಾ । | ಗೋಪಾಲೇನ ಅಜಾ ಗ್ರಾಮಂ ನೀಯತೇ ಹ್ರಿಯತೇ, ಕೃಷ್ಯತೇ, ಉಹ್ಯತೇ ವಾ । |
| ೨೨ | ಸಃ ನೃಪತೀನ್ ವಶಂ ಅನಯತ್ | ತೇನ ನೃಪತಯಃ ವಶಂ ಅನೀಯಂತ |
| ೨೩ | ದೇವಾನಾಮಿಮಮಾನಂತಿ ಮುನಯಃ ಕಾಂತಂ ಕ್ರತುಂ ಚಾಕ್ಷುಷಂ | ಮುನಿಭಿಃ ಅಯಂ ದೇವಾನಾಂ ಕಾಂತಃ ಚಾಕ್ಷುಷಃ ಕ್ರತುಃ ಇತಿ ಅಮನ್ಯತೇ |
| | ಇ ( ಅಕರ್ಮಕ ) | |
| ೨೪ | ವಾನರಾಃ ವೃಕ್ಷೇ ತಿಷ್ಠಂತಿ | ವಾನರೈಃ ವೃಕ್ಷೇ ಸ್ಥೀಯತೇ |
| ೨೫ | ಮುನಯಃ ಅರಣ್ಯಂ ಅಧಿವಸಂತಿ | ಮುನಿಭಿಃ ಅರಣ್ಯಂ ಅಧ್ಯುಷ್ಯತೇ |

| | |
|---|---|
| ೨೬ ನೃಪತಯಃ ವಿಜಯೇನ ಮೋದಂತೇ | ನೃಪತಿಭಿಃ ವಿಜಯೇನ ಮುದ್ಯತೇ |
| ೨೭ ಏಷ ಧರ್ಮಃ ಸನಾತನಃ | ಏತೇನ ಸನಾತನೇನ ಧರ್ಮೇಣಂ ಭೂಯತೇ |
| ೨೮ ತತ್ ಉಪವಿಶ ಆಸನೇ ಏವ | ತತ್ ಉಪವಿಶ್ಯತಾಂ ಆಸನೇ ಏವ |
| ೨೯ ಅಹಂ ಅಪಿ ಯಶಸ್ವೀ ಭವೇಯಮ್ | ಮಯಾಪಿ ಯಶಸ್ವಿನಾ ಭವಿತವ್ಯಮ್ |

ಈ ( ಧಾತುಸಾಧಿತ )

| | |
|---|---|
| ೩೦ ರಘುಃ ವನಂ ಗತಃ | ರಘುಣಾ ವನಂ ಗತಮ್ |
| ೩೧ ಅರ್ಜುನಃ ರಣಾಂಗಣೇ ಸ್ಥಿತಃ | ಅರ್ಜುನೇನ ರಣಾಂಗಣೇ ಸ್ಥಿತಮ್ |
| ೩೨ ಪಾಂಡವಾಃ ವಿಜಯೇನ ಮುದಿತಾಃ | ಪಾಂಡವೈಃ ವಿಜಯೇನ ಮುದಿತಮ್ |
| ೩೩ ಸಿಂಹಃ ಚಿಂತಿತವಾನ್ | ಸಿಂಹೇನ ಚಿಂತಿತಮ್ |
| ೩೪ ಅಹಂ ಬಿಲಸ್ಯ ವಾಣೀಂ ನ ಶ್ರುತವಾನ್ | ಮಯಾ ಬಿಲಸ್ಯ ವಾಣೀ ನ ಶ್ರುತಾ |

ಊ (ಮಿಶ್ರ)

| ಕರ್ಮಣಿ ಅಥವಾ ಭಾವೆ. | ಕರ್ತರಿ. |
|---|---|
| ೩೫ ಅಹಂ ಅಪಿ ತತ್ರೈವ ನೀಯೈ | ಮಾಮಪಿ ತತ್ರೈವ ನಯತ |
| ೩೬ ಅನುಭೂಯತಾಂ ಚಿರಂ ವಿಚಿತ್ರೋ ರಾಜಪ್ರಸಾದಃ | ಅನುಭವ ಚಿರಂ ವಿಚಿತ್ರಂ ರಾಜಪ್ರಸಾದಂ |
| ೩೭ ನೂನಂ ಅಸ್ಯಾಂ ಅಂತರ್ಗತೇನ ಸಿಂಹೇನ ಭಾವ್ಯಂ | ನೂನಂ ಅಸ್ಯಾಂ ಅಂತರ್ಗತಃ ಸಿಂಹಃ ಭವೇತ್ |
| ೩೮ ದದೃಶಾತೇ ರಘುರಾಘವೌ ಜನೈಃ | ಜನಾಃ ರಘುರಾಘವೌ ದದೃಶುಃ |
| ೩೯ ವಿಪ್ರಾಃ ಚೌರೇಣ ರಕ್ಷಿತಾಃ | ವಿಪ್ರಾನ್ ಚೌರಃ ರಕ್ಷಿತವಾನ್ |
| ೪೦ ತೇನ ಸೇವಾ ಕರ್ತುಮಾರಬ್ಧಾ | ಸಃ ಸೇವಾಂ ಕರ್ತುಂ ಆರಬ್ಧವಾನ್ । |

| | |
|---|---|
| ೪೧ ತ್ರೈಃ ಬಹುಮೂಲ್ಯಾನಿ ರತ್ನಾನಿ ಕ್ರೀತಾನಿ | ತೇ ಬಹುಮೂಲ್ಯಾನಿ ರತ್ನಾನಿ ಕ್ರೀತವಂತಃ |
| ೪೨ ಕೃತಂ ಭರ್ತುಸ್ತ್ವಯಾನೃಣ್ಯಂ | ತ್ವಂ ಭರ್ತುಃ ಆನೃಣ್ಯಂ ಕೃತವತೀ |
| ೪೩ ಇಯಂ ಹಿಮವದ್ಗಿರಿಣಾಂಬೋಧೇಃ ಪ್ರಹಿತಾ | ಇಮಾಂ ಹಿಮವದ್ಗಿರಿಃ ಅಂಬೋಧೇಃ ಪ್ರಹಿತವಾನ್ |
| ೪೪ ನರನಾಥಸೇವಾಂ ವಿಧಾತುಂ ಗಚ್ಛನ್ ಕಶ್ಚಿದ್ಭಟಃ ಮಯಾ ದೃಷ್ಟಃ | ನರನಾಥಸೇವಾಂ ವಿಧಾತುಂ ಗಚ್ಛಂ ತಂ ಕಶ್ಚಿದ್ಭಟಂ ಅಹಂ ದೃಷ್ಟವತೀ |
| ೪೫ ತೈರ್ಬಹುಮೂಲ್ಯಾನಿ ರತ್ನಾನಿ ಕ್ರೀತಾನಿ | ತೇ ಬಹುಮೂಲ್ಯಾನಿ ರತ್ನಾನಿ ಕ್ರೀತವಂತಃ |
| ೪೬ ಕುಲಜ್ಞೈಃ ಕುಕರ್ಮ ನ ವಿಧೇಯಮ್ | ಕುಲಜಾಃ ಕುಕರ್ಮ ನ ವಿದಧ್ಯುಃ |
| ೪೭ ಮಯೋಚ್ಯಮಾನಾ ಗೀಃ ಶ್ರೂಯತಾಮ್ | ಮಯೋಚ್ಯಮಾನಾಂ ಗಿರಂ ಶೃಣು |

ಊ

| ಮೂಲ ವಾಕ್ಯ | ಪ್ರಯೋಜಕ ವಾಕ್ಯ |
|---|---|
| ೪೮ ರಾಮಲಕ್ಷ್ಮಣೌ ವನಂ ಪ್ರಾತಿಷ್ಠೇತಾಂ | ದಶರಥಃ ರಾಮಲಕ್ಷ್ಮಣೌ ವನಂ ಪ್ರಾಸ್ಥಾಪಯತ್ |
| ೪೯ ಮಾತಾ ಮೋದತೇ | ಪುತ್ರಸ್ಯ ಯಶಃ ಮಾತರಂ ಮೋದಯತಿ |
| ೫೦ ರಂಗಭೂಮೌ ನಟಾಃ ನೃತ್ಯಂತಿ | ಸೂತ್ರಧಾರಃ ನಟಾನ್ ರಂಗಭೂಮೌ ನರ್ತಯತೇ। |
| ೫೧ ದೇವದತ್ತಃ ಓದನಂ ಪಚತಿ | ಸಃ ದೇವದತ್ತೇನ ಓದನಂ ಪಾಚಯತಿ |
| ೫೨ ರಾಮಃ ಭಾರ್ಯಾಂ ತ್ಯಜತಿ | ಸಃ ರಾಮೇಣ ಭಾರ್ಯಾಂ ತ್ಯಾಜಯತಿ |
| ೫೩ ಶತ್ರವಃ ಸ್ವರ್ಗಂ ಅಗಚ್ಛನ್ | ಶತ್ರೂನ್ ಸ್ವರ್ಗಂ ಅಗಮಯತ್ |
| ೫೪ ದೇವಾಃ ಅಮೃತಂ ಅಶ್ನನ್ | ದೇವಾನ್ ಅಮೃತಂ ಆಶಯತ್ |
| ೫೫ ವಿಧಿಃ ವೇದಂ ಅಧ್ಯೈತ | ವಿಧಿಂ ವೇದಂ ಅಧ್ಯಾಪಯತ್ |

೭

| ಪ್ರಯೋಜಕ ವಾಕ್ಯ | ಮೂಲ ವಾಕ್ಯ |
|---|---|
| ೫೬ ಸಖಲು ಚಂದ್ರಗುಪ್ತದೋಷಾಃ ಅತಿಕ್ರಾಂತಪಾರ್ಥಿವ ಗುಣಾನಧುನಾ ಸ್ಮಾರಯಂತಿ ಪ್ರಕೃತೀಃ | ಪ್ರಕೃತಯಃ ಅತಿಕ್ರಾಂತಪಾರ್ಥಿವಗುಣಾನ್ ನ ಸ್ಮರಂತಿ ಖಲು |
| ೫೭ ಪಿತಾ ಪುತ್ರಂ ಸಂಸಾರಸುಖಂ ಅನುಭಾವಯತಿ | ಪುತ್ರಃ ಸಂಸಾರಸುಖಂ ಅನುಭವತಿ |
| ೫೮ ತದಹಂ ತ್ವಾಂ ತತ್ಪಾದಮೂಲಂ ಪ್ರಾಪಯಾಮಿ | ತತ್ ತ್ವಂ ತತ್ಪಾದಮೂಲಂ ಪ್ರಾಪ್ನುಹಿ |
| ೫೯ ಗೋಪಃ ಧೇನುಂ ಜಲಂ ಪಾಯಯತಿ | ಧೇನುಃ ಜಲಂ ಪಿಬತಿ |
| ೬೦ ಪಿತಾ ಬಾಲಂ ಶ್ಲೋಕಂ ಗಾಪಯತಿ | ಬಾಲಃ ಶ್ಲೋಕಂ ಗಾಯತಿ |
| ೬೧ ಧನಿಕಃ ಭಿಕ್ಷುಕೇಣ ಭಿಕ್ಷುಕಂ ವಾ ಧನಂ ಗ್ರಾಹಯತಿ | ಭಿಕ್ಷುಕಃ ಧನಂ ಗೃಹ್ಣಾತಿ |

೮

| ಪ್ರಯೋಜಕ ವಾಕ್ಯ | ಪ್ರಯೋಜಕ ಕರ್ಮಣಿ |
|---|---|
| ೬೨ ರಾಮಂ ಗ್ರಾಮಂ ಗಮಯತಿ | ರಾಮೋ ಗ್ರಾಮಂ ಗಮ್ಯತೇ |
| ೬೩ ಭೃತ್ಯೇನ ಭೃತ್ಯಂ ವಾ ಕಟಂ ಕಾರಯತಿ | ಭೃತ್ಯಃ ಕಟಂ ಕಾರ್ಯತೇ |
| ೬೪ ಗೋವಿಂದಂ ಮಾಸಂ ಆಸಯತಿ | ಗೋವಿಂದೋ ಮಾಸಂ ಆಸ್ಯತೇ |

## ಪರಿಶಿಷ್ಟ ಅ.

# ಮಾದರಿಯ ಪ್ರಶ್ನೆಪತ್ರಿಕೆ

### ಸಂಸ್ಕೃತ

[ಅವಧಿ ೩ ತಾಸು]

(ಬಲಗಡೆಗೆ ಬರೆದ ಅಂಕಿಗಳು ಪ್ರಶ್ನೆಗಳ ಪೂರ್ಣ ಗುಣಗಳು.)

**೧. ಕನ್ನಡದಲ್ಲಿ ಬೇಕಾದ ಎರಡನ್ನು ಮಾತ್ರ ಭಾಷಾಂತರಿಸಿರಿ. ೧೮**

(ಅ) ತತಃ ಕಿರಾತೈ..............ಪರಮಾಂ ಗತಿಃ (ಪುಟ ೬ -ಸಾಲು ೧೨ ರಿಂದ ಪುಟ ೭ ಶ್ಲೋಕ ೨ ಪೂರ್ಣ).

(ಬ). ಗಣದಾಸಃ— ಕಾಮಂ ಖಲು....................ಮೇ ಬಾಲಾ (ಪುಟ ೧೭. ಸಾಲು ೨—೧೫).

(ಕ) ಅಹೋ ಮೇ ಮಂದಪುಣ್ಯಸ್ಯ....................ಅನದಮ್ (ಪುಟ ೨೫. ಸಾಲು ೧೧—೨೪).

**೨. ಕೆಳಗೆ ಬರೆದವುಗಳಲ್ಲಿ ಬೇಕಾದ ಮೂರನ್ನು ಕನ್ನಡದಲ್ಲಿ ಭಾಷಾಂತರಿಸಿರಿ:— ೧೮**

(ಅ) ಶ್ಲೋಕಗಳು ೨೪, ೨೫, ೨೬. (ಪುಟ ೩೧).

(ಬ) ಶ್ಲೋಕಗಳು ೮, ೯, ೧೦. (ಪುಟ ೩೬).

(ಕ) ಪುಟ ೩೮ ಶ್ಲೋಕ ೧೦, ಶ್ಲೋಕಗಳು ೧೩, ೧೪(ಪುಟ ೪೧).

(ಡ) ಪುಟ ೪೫, ಶ್ಲೋಕ ೫; ಪುಟ ೪೮, ಶ್ಲೋಕ ೬.

**೩. (ಅ) ಬೇಕಾದ ನಾಲ್ಕರ ಬಗ್ಗೆ ವಿವರಣಾತ್ಮಕ ಟಿಪ್ಪಣಿಗಳನ್ನು ಕನ್ನಡದಲ್ಲಿ ಬರೆಯಿರಿ:— ೪**

ಆಚಮನಮ್; ತ್ರೈಗುಣ್ಯಂ; ಮ್ಲೇಚ್ಛಜಾತಿಃ; ಪರಮಾಣುಃ; ಸಾಪ್ತಪದಂ; ಷಟ್‌ಗುಣಾಃ; ಜಾಹ್ನವೀ; ಪ್ರಭುಶಕ್ತಿಃ; ತ್ರಿದಶಾಃ.

(ಬ) ಬೇಕಾದ ನಾಲ್ಕು ರೂಪಗಳನ್ನು ಗುರುತಿಸಿರಿ:— ೪

ಅತ್ತ್ಯಾಕ್ಷ್ವಮ್; ಪಿಪಾಸಯತಿ; ಪಲಾಯಮಾನಃ; ಶುಶ್ರೂಷಯತು; ಪಾಟಯಂತಃ; ಜಾಗ್ರತಾ; ಪಿಗಾಸ್ಯ; ಈಪ್ಸಿತಃ; ಮಾಂಸಸ್ಯ; ಪಿದಧೌ.

(ಕ) ಕೆಳಗೆ ಕೊಟ್ಟ ಸಮಸ್ತಪದಗಳಲ್ಲಿ ಬೇಕಾದ ನಾಲ್ಕರ ವಿಗ್ರಹ ಮಾಡಿ ಹೆಸರು ಹೇಳಿರಿ:— ೪

ಸಕರುಣಃ; ಪ್ರತ್ಯಕ್ಷಂ; ಚಾಣಕ್ಯಶತಕಃ; ದಕ್ಷಿಣಾಮುಖಃ; ನಾನಾಶನಂ; ಕ್ಷಿತ್ಯಾಕ್ರಮಣಃ; ಕುಮಾರತಾ; ಗವಾರ್ಥೇ; ಪರಃಶತಂ; ಜನ್ಮಾಂತರೇ;

(ಡ) ಬೇಕಾದ ಎರಡಕ್ಕೆ ಸಮವಾದ ಸಂಸ್ಕೃತ ಸಮಾಸಗಳನ್ನು ಕೊಡಿರಿ:— ೨

ಬೇರೆ ದೇಶ; ವರ್ಣದಿಂದ ಕೀಳನು; ಜಪವು ಪ್ರಿಯವಾಗಿಯುಳ್ಳವನು; ಹೆಚ್ಚು ವಯಸ್ಸಾದವನು;

(ಇ) ಕೆಳಗೆಬರೆದ ಬೇಕಾದ ಎರಡಕ್ಕೆ ಸಮವಾದ ಅರ್ಥವನ್ನು ಕೊಡುವ ಸಂಸ್ಕೃತ ಪದಗಳನ್ನು ಕೊಡಿರಿ:— ೨

ಎಲ್ಲ ಕಡೆಗಳಲ್ಲಿ; ವಾರಕ್ಕೆ ೫ ಸಲ; ಮೂರರ ಗುಂಪು; ೧೯೫೫ರಲ್ಲಿ.

(ಫ) ಕಂಸದಲ್ಲಿ ಕೊಟ್ಟ ಸೂಚನೆಯಂತೆ ಕೆಳಗೆ ಬರೆದ ನಾಲ್ಕಕ್ಕೆ ಮಾತ್ರ ಉತ್ತರ ಬರೆಯಿರಿ:— ೪

(೧) ಅಥ ತಚ್ಛ್ರುತ್ವಾ ಸಿಂಹಶ್ಚಿಂತಿತವಾನ್ । (ಪ್ರಯೋಗ ಬದಲಿಸಿರಿ).

(೨) ಮಹಾಪಗಾಭಿರಿತ್ಯಾಭಿರಲಂಘ್ಯಾಭಿರ್ವಿಭಾತ್ಯಯಂ । (ಸಂಧಿ ಬಿಡಿಸಿರಿ.)

(೩) ರಾಮಃ ರಾವಣಾಂ ಅಕುಪ್ಯತ್ ಸೀತಾಂ ಚ ಅಸ್ನಿಹ್ಯತ್ । (ತಪ್ಪು ತಿದ್ದಿರಿ).

(೪) ಸೀತಾ ರಥಮಾರೋಹತಿ (ಪ್ರಯೋಜಕಮಾಡಿ ಬರೆಯಿರಿ).

(೫) ವಿಷ್ಣವೇ ಪೂಜಾ ರೋಚತೇ (ರುಚ್ ದ ಬದಲು ಸ್ಪೃಹ್ ಉಪಯೋಗಿಸಿರಿ.)

(೬) ತಸ್ಮಿನ್ ಸೇವಾಂ ಕುರ್ವತಿ ಕೈರ್ವಿಪ್ರೈರ್ಬಹುಮೂಲ್ಯಾನಿ ರತ್ನಾನಿ ಕ್ರೀತಾನಿ (ಸತಿಸಪ್ತಮೀ ತೆಗೆಯಿರಿ.)

೪. ರೂಪಗಳನ್ನು ಕೊಡಿರಿ:—

(೧) ಷಷ್ಠೀ ಏಕವಚನದ ರೂಪಗಳನ್ನು (ಎರಡಕ್ಕೆ ಮಾತ್ರ) ಕೊಡಿರಿ:— ೨

ಪಿತೃ, ರಾಜನ್, ಸರಿತ್, ಯುಷ್ಮದ್.

(೨) ದ್ವಿತೀಯಾ ಬಹುವಚನದ ರೂಪಗಳನ್ನು (ಎರಡಕ್ಕೆ ಮಾತ್ರ) ಕೊಡಿರಿ:— ೨

ಗಿರಿ; ಅಹನ್; ವಿದ್ವಸ್; ಅದಸ್;

(೩) ಆಜ್ಞಾರ್ಥ ದ್ವಿತೀಯ ಪುರುಷ ಏಕವಚನದ ರೂಪಗಳನ್ನು (ಎರಡಕ್ಕೆ ಮಾತ್ರ) ಕೊಡಿರಿ:— ೨

ಹನ್; ಜನ್; ಶಾಸ್; ಛಿದ್.

(೪) ಪರೋಕ್ಷಭೂತ ತೃತೀಯ ಪುರುಷ ಏಕವಚನದ ರೂಪಗಳನ್ನು (ಎರಡಕ್ಕೆ ಮಾತ್ರ) ಕೊಡಿರಿ:— ೨

ಜಿ; ಸ್ವಪ್; ಕೃಷ್; ಇಷ್

(೫) ಕರ್ಮಣಿ ಭೂತಕಾಲ ಧಾತುಸಾಧಿತ ವಿಶೇಷಣಗಳನ್ನು (ಎರಡಕ್ಕೆ ಮಾತ್ರ) ಕೊಡಿರಿ:— ೨

ಶೀ; ಧಾ; ಖನ್; ವಪ್.

(೬) ದ್ವಿತೀಯ ಭವಿಷ್ಯತ್ಕಾಲದ ತೃತೀಯಪುರುಷ ಏಕವಚನದ ರೂಪಗಳನ್ನು (ಎರಡಕ್ಕೆ ಮಾತ್ರ) ಕೊಡಿರಿ:— ೨

ವಸ್, ದೃಶ್, ದಹ್.

(೭) ಬೇಕಾದ ಎರಡರ ಆಧಿಕ್ಯಾರ್ಥಕ ರೂಪಗಳನ್ನು ಕೊಡಿರಿ:— ೨

ಉಚ್ಚೈಃ; ಕ್ಷುದ್ರ; ಅಲ್ಪ.

**೫. (ಅ) ಕೆಳಗೆ ಬರೆದ ಬೇಕಾದ ಎರಡನ್ನು ಕನ್ನಡದಲ್ಲಿ ಸ್ಪಷ್ಟವಾಗಿ ವಿವರಿಸಿರಿ, ೧೦**

(೧) ದುರ್ಜನೇನ ಸಮಂ ಸಖ್ಯಂ ಪ್ರೀತಿಂ ಚಾಪಿ ನ ಕಾರಯೇತ್ ।
ಉಷ್ಣೋದಹತಿ ಚಾಂಗಾರಃ ಶೀತೋ ಕೃಷ್ಣಾಯತೇ ಕರಮ್॥

(೨) ಪಯಃ ಪಾನಂ ಭುಜಂಗಾನಾಂ ಕೇವಲಂ ವಿಷವರ್ಧನಮ್ ।
ಉಪದೇಶೋ ಹಿ ಮೂರ್ಖಾಣಾಂ ಪ್ರಕೋಪಾಯ ನ ಶಾಂತಯೇ ॥

(೩) ವಿಷಸ್ಯವಿಷಯಾಣಾಂ ಹಿ ದೃಶ್ಯತೆ ಮಹದಂತರಮ್ ।
ಉಪಭುಕ್ತಂ ವಿಷಂ ಹಂತಿ ವಿಷಯಾಃ ಸ್ಮರಣಾದಪಿ ॥

(ಬ) ಕೆಳಗೆ ಬರೆದವುಗಳಲ್ಲಿ ಬೇಕಾದ ಒಂದನ್ನು ಕನ್ನಡದಲ್ಲಿ ಭಾಷಾಂತರಿಸಿರಿ. ೧೦

(೧) ಅಸ್ತಿ ಕಸ್ಮಿಂಶ್ಚಿದ್ವನೋದ್ದೇಶೇ ನಾನಾಜಲಚರಸನಾಥಂ ಸರಃ। ತತ್ರ ಚ ಕೃತಾಶ್ರಯೋ ಬಕ ಏಕೋ ಮುಕ್ತಾಫಲಸದೃಶೈರಶ್ರುಪ್ರವಾಹೈ ರ್ಧರಾತ್ಮಮಭಿ. ಷಿಂಚನ್ ರುರೋದ। ಏಕಃ ಕುಲೀರಕೋ ನಾನಾಜಲಚರ ಸಮೇತಃ ಸಮೇತ್ಯ ತಸ್ಯ ದುಃಖೇನ ದುಃಖಿತಃ ಸಾದರಮಿದಮೂಚೇ। ಮಾಮ ಕಿಮದ್ಯ ತ್ವಯಾಹಾರವೃತ್ತಿರ್ನಾನು ಷ್ಠೀಯತೆ। ಕೇವಲಮಶ್ರುಪೂ-ರ್ಣನೇತ್ರಾಭ್ಯಾಂ ಸನಿಃಶ್ವಾಸೇನ ಸ್ಥೀಯತೇ। ಸ ಆಹ ಸತ್ಯಂ ಉಪಲಕ್ಷಿತಂ ಭವತಾ। ಮಯಾ ಹಿ ಮತ್ಸ್ಯಾದನಂ ಪ್ರತಿ ಪರಮ ವೈರಾಗ್ಯತಯಾ ಸಾಂಪ್ರತಂ ಪ್ರಾಯೋಪವೇಶ ನಂ ಕೃತ ತೇನಾಹಂ ಸಮೀಪಗತಾನಪಿ ಮತ್ಸ್ಯಾನ್ನ ಭಕ್ಷಯಾಮಿ। ಕುಲೀರಕಸ್ತಚ್ಛ್ರುತ್ವಾ ಪ್ರಾಹ – ಮಾಮ ಕಿಂ ತದ್ವೈರಾಗ್ಯ – ಕಾರಣಂ। ಸ ಪ್ರಾಹ-ಅಹಮಸ್ಮಿನ್ ಸರಸಿ ಜಾತೋ ವೃದ್ಧಿಂ ಗತಶ್ಚ। ತನ್ಮಯೈತಚ್ಛ್ರುತಂ ಯದ್ ದ್ವಾದಶವಾರ್ಷಿಕ್ಯನಾವೃಷ್ಟಿಃ ಸಂಪದ್ಯತೇ ಲಗ್ನಾ।

(೨) ಸ ಪ್ರವಿಶ್ಯ ತು ತದ್ವೇಶ್ಮ ರಾವಣೋ ರಾಕ್ಷಸಾಧಿಪಃ।
ಅಪಶ್ಯದ್ರಾಕ್ಷಸೀಮಧ್ಯೇ ಸೀತಾಂ ದುಃಖ ಪರಾಯಣಾಂ ॥೧॥
ಮೃಗಯೂಥಪರಿಭ್ರಷ್ಟಾಂ ಮೃಗೀಮಿವ ಶುನೀ ವೃತಾಂ।
ಅಧೋಗತ ಮುಖೀಂ ಸೀತಾಂ ತಾಮಭ್ಯೇತ್ಯ ನಿಶಾಚರಃ ॥೨॥
ಉವಾಚ ವಾಕ್ಯಂ ಪಾಪಾತ್ಮಾ ಸೀತಾನುನಯ ಕಾಂಕ್ಷಯಾ।
ಯದಿದಂ ರಾಜ್ಯತಂತ್ರಂ ಮೇ ತ್ವಯಿ ಸರ್ವಂ ಪ್ರತಿಷ್ಠಿತಂ ॥೩॥
ಜೀವಿತಂ ಚ ವಿಶಾಲಾಕ್ಷಿ ತ್ವಂ ಮೇ ಪ್ರಾಣೈರ್ಗರೀಯಸೀ।
ಪರಿಕ್ಷಿಪ್ತಾ ಸಮುದ್ರೇಣ ಲಂಕೇಯಂ ಶತಯೋಜನಾ ॥೪॥
ನೇಯಂ ಧರ್ಷಯಿತುಂ ಶಕ್ಯಾ ಸೇಂದ್ರೈರಪಿ ಸುರಾಸುರೈಃ
ನಾಹಂ ಪಶ್ಯಾಮಿ ಲೋಕೇಷು ಯೋ ಮೇ ವೀರ್ಯಸಮೋ ಭವೇತ್ ॥೫॥

ರಾಜ್ಯಭ್ರಷ್ಟೇನ ದೀನೇನ ತಾಪಸೇನ ಪದಾತಿನಾ ।
ಕಿಂ ಕರಿಷ್ಯಸಿ ರಾಮೇಣ ಮಾನುಷೇಣಲ್ಪತೇಜಸಾ ॥೬॥
ದರ್ಶನೇ ಮಾ ಕೃಥಾ ಬುದ್ಧಿಂ ರಾಘವಸ್ಯ ವರಾನನೇ ।
ನತಸ್ಯ ಶಕ್ತಿರಿಹಾಗಂತುಮಪಿ ಸೀತೆ ಮನೋರಥೈಃ

೭, **ಸಂಸ್ಕೃತಕ್ಕೆ ಭಾಷಾಂತರಿಸಿರಿ.** ೧೦

ಒಂದಾನೊಂದು ಪ್ರದೇಶದಲ್ಲಿ ಹರಿದತ್ತನೆಂಬ ಬ್ರಾಹ್ಮಣನಿರುತ್ತಿದ್ದನು. ಆತನು ಒಕ್ಕಲತನ ಮಾಡುತ್ತ ಬಹು ಪ್ರಯಾಸದಿಂದ ಕಾಲವನ್ನು ಕಳೆದನು. ಒಮ್ಮೆ ಒಂದು ದಿನ ಬಿಸಿಲಿನಿಂದ ಬಳಲಿದ ಆ ಹರಿದತ್ತನು ತನ್ನ ಹೊಲದಲ್ಲಿ ಗಿಡದ ನೆರಳಿನಲ್ಲಿ ಮಲಗಿದನು. ಆಗ ಅವನಿಗೆ ಸಮೀಪದಲ್ಲಿಯೇ ಹುತ್ತಿನ ಮೇಲ್ಭಾಗದಲ್ಲಿದ್ದ ಒಂದು ಹಾವು ಕಂಡಿತು. ಅದನ್ನು ಕಂಡು ಅವನು ಆಲೋಚಿಸಿದನು. "ಇದು ನಿಜವಾಗಿಯೂ ಹೊಲದ ದೇವತೆ; ನಾನು ಈ ವರೆಗೆ ಇದನ್ನು ಎಂದೂ ಪೂಜಿಸಿಲ್ಲ. ಅಂತೆಯೇ ನನ್ನ ಒಕ್ಕಲತನವು ನಿಷ್ಫಲವಾಗಿದೆ." ಹೀಗೆ ವಿಚಾರಿಸಿ ಆ ಹಾವಿಗೆ ಹಾಲು ಅರ್ಪಿಸಿದನು. ಆ ಸರ್ಪವಾದರೋ ಸಂತೋಷಗೊಂಡು ಅವನಿಗೆ ಒಂದು ಭಂಗಾರದ ನಾಣ್ಯವನ್ನು ಕೊಟ್ಟಿತು.

# ಪರಿಶಿಷ್ಟ ಬ

## ಮಾದರಿಯ ಉತ್ತರಗಳು

### ( ಸೂಕ್ತ ಸಲಹೆಯೊಂದಿಗೆ )

**ಪ್ರಶ್ನೆ ೧, ೨:— ಉತ್ತರಗಳಿಗಾಗಿ ಇದೇ ಗಾಯಿಡಿನ ಆಯಾ ಘಟಗಳನ್ನು ನೋಡಿರಿ. ಕನ್ನಡಕ್ಕೆ ಪರಿವರ್ತಿಸುವಾಗ ಆದಷ್ಟು ಶಬ್ದಶಃ ಭಾಷಾಂತರವಿರಬೇಕು. ಆದರೆ ಕೆಲವೊಂದು ಸಲ, ಶಬ್ದಶಃ ಭಾಷಾಂತರವು ಕನ್ನಡ ಭಾಷೆಗೆ ಹೊಂದದೆ ಹೋದರೆ, ಭಾಷಾಂತರವನ್ನು ಕನ್ನಡ ಭಾಷೆಗೆ ಅನುಗುಣವಾಗಿ ಮಾಡಬೇಕು. ಹಾಗೂ ಶಬ್ದಶಃ ಅರ್ಥವನ್ನು ಕಂಸುಗಳಲ್ಲಿ ಕೊಡಬೇಕು. ವಾಕ್ಯಗಳನ್ನು ಕೂಡಿಸುವಾಗ ಇಲ್ಲವೆ ಅರ್ಥವು ಹೆಚ್ಚು**

ಹೊಂದಿಕೆಯಾಗುವತೆ, ಮೂಲದಲ್ಲಿ ಇಲ್ಲದ ಶಬ್ದಗಳನ್ನು ಉಪಯೋಗಿಸಿದರೆ ಅವುಗಳನ್ನಾದರೂ ಕಂಸುಗಳಲ್ಲಿ ಕಾಣಿಸಬೇಕು. ಒಟ್ಟಿನ ಮೇಲೆ, ಮೂಲದ ಭಾವಕ್ಕೆ ಎಳ್ಳಷ್ಟೂ ಚ್ಯುತಿ ಬರಬಾರದು. ಕನ್ನಡ ಭಾಷೆಯ ಸೊಬಗೊಂದು ಕೂಡಿದರಂತೂ ಭಾಷಾಂತರಕ್ಕೆ ಹೆಚ್ಚು ಕಳೆ ಬರುವದು.

**ಪ್ರಶ್ನೆ ೩:— ವ್ಯಾಕರಣ ಪ್ರಶ್ನೆಯಲ್ಲಿ ಅಕ್ಷರ ಶುದ್ಧತೆಯ ಬಗ್ಗೆ ಹೆಚ್ಚು ಜಾಗ್ರತೆ ವಹಿಸಬೇಕು.**

ಪ್ರ. ೩. (ಅ) ಪ್ರತಿಯೊಂದು ಶಬ್ದದ ಟಿಪ್ಪಣಿಗೆ ಒಂದೇ ಗುಣವಿರು-ವದರಿಂದ, ಉತ್ತರವನ್ನು ಹೆಚ್ಚು ಬೆಳಿಸಬಾರದು. ಕೇವಲ ಸಂದರ್ಭ ಕೊಡುವದರಿಂದ ಉತ್ತರ ಮುಗಿಯುವದಿಲ್ಲ. ಆದ್ದರಿಂದ, ಮೊದಲು ಕೊಟ್ಟ ಶಬ್ದದ ಬಗ್ಗೆ ವ್ಯಾಕರಣ ವಿಷಯವಾಗಿ ಏನಾದರೂ ಹೇಳುವದಿದ್ದರೆ ಅದನ್ನು ೧ ಸಾಲಿನಲ್ಲಿ ಮುಗಿಸಿ, ಶಬ್ದದ ವಿವರಣೆಯನ್ನು ಮುಂದೆ ೪–೫ ಸಾಲುಗಳಲ್ಲಿ ಮಾಡಬೇಕು. ಹೇಳತಕ್ಕ ಮುಖ್ಯ ಮಾತನ್ನು ಸ್ಪಷ್ಟವಾಗಿ ಬರೆಯಬೇಕು. ಈ ಗಾಯಿಡ್‌ದಲ್ಲಿ ಬರೆದ ಟಿಪ್ಪಣಿಗಳನ್ನು ಮಾದರಿಯಾಗಿ ಇಟ್ಟುಕೊಂಡು ನೀವಾದರೂ ಅದೇ ಮೇರೆಗೆ ಬರೆಯುವ ರೂಢಿ ಇಟ್ಟುಕೊಳ್ಳಬೇಕು.

(ಬ) ಇಲ್ಲಿ ತರ್ಕಕ್ಕೆ ಎಳ್ಳಷ್ಟೂ ಅವಕಾಶವಿಲ್ಲ. ಆದ್ದರಿಂದ ಗೊತ್ತಿದ್ದ ರೂಪಗಳ ವಿಷಯವಾಗಿ ಮಾತ್ರ ಬರೆಯಬೇಕು; ಉತ್ತರಕ್ಕಾಗಿ ಗೈಡದ ಆಯಾ ಪುಟಗಳನ್ನು ನೋಡಿರಿ.

(ಕ) ಸಮಾಸ ಬಿಡಿಸುವಾಗ ಅಕ್ಷರ ಶುದ್ಧತೆಯ ಬಗ್ಗೆ ಜಾಗ್ರತೆ ವಹಿಸಿರಿ. ಅಕ್ಷರ ದೋಷ ಉಂಟಾದರೆ, ಗುಣಗಳು ದೊರೆಯದೆ ಇರಬ-ಹುದು. ಮೊದಲು ಸಮಾಸಗಳ ವಿಗ್ರಹ ಮಾಡಿ ನಂತರ ಹೆಸರು ಹೇಳ-ಬೇಕು. ಎರಡೂ ಅಷ್ಟೇ ಮಹತ್ವದವು. (ಉತ್ತರಕ್ಕಾಗಿ ಗೈಡಿನ ಆ ಆ ಪುಟಗಳನ್ನು ನೋಡಿರಿ).

(ಡ) ಇಲ್ಲಿ ಸಮಸ್ತ ಪದಗಳನ್ನೇ ಕೊಡಬೇಕು. ಇಲ್ಲದೆ ಹೋದರೆ, ಎಷ್ಟೂ ಗುಣ ದೊರೆಯಲಿಕ್ಕಿಲ್ಲ.

ಉತ್ತರ:—ದೇಶಾಂತರಮ್; ವರ್ಣಾವರಃ; ಅರ್ಥರುಚಿಃ; ಪ್ರವಯಾಃ.

(ಇ) ಚತುಃ ಷಷ್ಠಿ ಕಲಾಸು; ಸಪ್ತಾಹಸ್ಯ ಪಂಚಕೃತ್ವಃ; ತ್ರಯಂ, ತ್ರಿತಯಂ, ತ್ರಿಕಂ; ತ್ರಯೀ; ಪಂಚಪಂಚಾಶದಧಿಕನವಶತಾಧಿಕಸಹಸ್ರತಮೇ ಕ್ರಿಸ್ತಾಬ್ದೇ ಅಥವಾ ಪಂಚಪಂಚನವೈಕಮಿತೇ ಕ್ರಿಸ್ತಾಬ್ದೇ;

(ಫ) (೧) ಅಥ ತಚ್ಛ್ರುತ್ವಾ ಸಿಂಹೇನ ಚಿಂತಿತವಮ್ ।

(೨) ಮಹಾಪಗಾಭಿಃ ಇತಿ ಆಭಿಃ ಅಲಂಘ್ಯಾಭಿಃ ವಿಭಾತಿ ಅಯಂ ।

(೩) ರಾಮಃ ರಾವಣಾಯ ಅಕುಪ್ಯತ್ ಸೀತಾಯಾಂ ಚ ಅಸ್ನಿಹ್ಯತ್।

(೪) (ಲಕ್ಷ್ಮಣಃ) ಸೀತಾಂ ರಥಂ ಆರೋಪಯತಿ (ಆರೋಹಯತಿ) '

(೫) ವಿಷ್ಣುಃ ಪೂಜಾಯೈ ಸ್ಪೃಹಯತಿ ।

(೬) ಯದಾ ಸಃ ಸೇವಾಂ ಅಕರೋತ್ ತದಾ ತೈಃ ವಿಪ್ರೈಃ ಬಹು ಮೂಲ್ಯಾನಿ ರತ್ನಾನಿ ಕ್ರೀತಾನಿ ।

೪. ಅಕ್ಷರ ಶುದ್ಧತೆಯ ಬಗ್ಗೆ ಎಚ್ಚರವಿರಲಿ.

(೧) ಪಿತುಃ; ರಾಜ್ಞಃ; ಸರಿತಃ; ತವ–ತೇ.

(೨) ಗಿರೀನ್; ಅಹಾನಿ; ವಿದುಷಃ ( ವಿದುಷೀಃ, ವಿದ್ವಾಂಸಿ ); ಅಮೂನ್

(೩) ಜಹಿ; ಜಾಯಸ್ವ; ಶಾಧಿ; ಭಿಂಧ್ಧಿ, ಭಿಂತ್ಸ್ವ

(೪) ಜಿಗಾಯ; ಸುಷ್ವಾಪ; ಚಕರ್ಷ - ಚಕೃಷೇ; ಇಯೇಷ.

(೫) ಶಯಿತ; ಹಿತ; ಖಾತ; ಊಢ.

(೬) ವತ್ಸ್ಯತಿ; ದ್ರಕ್ಷ್ಯತಿ; ಧಕ್ಷ್ಯತಿ

(೭) ಉಚ್ಚೈಸ್ತರಾಮ್; ಕ್ಷೋದೀಯಸ್ (ಕ್ಷುದ್ರತರ); ಅಲ್ಪೀಯಸ್, ಕನೀಯಸ್, (ಅಲ್ಪತರ).

೫. ಬರೆಯುವ ಪದ್ಧತಿಗಾಗಿ, ಇದೇ ಪುಸ್ತಕದ ಪಠ್ಯೇತರ ವಿಭಾಗದ ಆರಂಭಕ್ಕೆ ಕೊಟ್ಟ ಸೂಚನೆಗಳನ್ನು ನೋಡಿರಿ.

(೧) ದುಷ್ಟಜನರೊಡನೆ ಯಾವ ರೀತಿಯ ಸಂಬಂಧವನ್ನೂ ಮಾಡ ಬಾರದು ಎಂಬುದೇ ಈ ಪದ್ಯದ ಮುಖ್ಯಮಾತು. ಅವರೊಡನೆ ಮಾಡಿದ ಗೆಳೆತನವಾಗಲಿ, ಪ್ರೀತಿಯಾಗಲಿ ಯಾವದೂ ನಮಗೆ ಹಿತವನ್ನುಂಟು ಮಾಡ ಲಾರದು. ಇದಕ್ಕೆ ಬದಲಾಗಿ ಅದರಿಂದ ನಮಗೆ ಕೆಡುಕೇ ಆಗುವದು. ಈ ಮಾತನ್ನು ಕವಿಯು ಬೆಂಕಿಯ ಉದಾಹರಣೆಯಿಂದ ಸ್ಪಷ್ಟೀಕರಿಸುತ್ತಾನೆ. ಬೆಂಕಿಯು ಬಿಸಿಯಿದ್ದಾಗ ಸುಡುತ್ತದೆ. ಅದೇ ಆರಿದಾಗ ಮುಟ್ಟಿದರೆ

ಕೈಯನ್ನು ಕಪ್ಪುಮಾಡುತ್ತದೆ. ಅದರಂತೆ ದುರ್ಜನರು ಯಾವ ಸ್ಥಿತಿಯಲ್ಲಿ ದ್ದರೂ ಸಹ ಅವರಿಂದ ಇತರರಿಗೆ ಅಹಿತವೇ ಹೊರ್ತು ಹಿತವಿಲ್ಲ.

(೨) ಮೂರ್ಖರಿಗೆ ಬುದ್ಧಿ ಹೇಳುವದು ವ್ಯರ್ಥ ಎಂಬುದೇ ಈ ಶ್ಲೋಕದ ಮುಖ್ಯ ಮಾತು. ಅದರಿಂದ ಅವರ ಮೂರ್ಖತನ ಹೆಚ್ಚುವದೇ ಹೊರತು ಬೇರೆ ಏನೂ ಉಪಯೋಗವಾಗುವದಿಲ್ಲ. ಉದಾಹರಣೆಗಾಗಿ ಹಾವಿಗೆ ಹಾಲೆರೆದರೆ ವಿಷ ಹೆಚ್ಚಾಗುವದೇ ಹೊರ್ತು ಅದರ ಸ್ವಭಾವ ಬದ ಲಾಗಲಾರದು. ಅದರಂತೆ ಮೂರ್ಖರಿಗೂ ಯಾವ ಪ್ರಯೋಜನವಾಗ ಲಾರದು. ಮೂರ್ಖರಿಗೆ ಬುದ್ಧಿಯನ್ನು ನೂರ್ಕಾಲ ಹೇಳಿದರೆ ಬೋರ್ಕಲ್ಲ ಮೇಲೆ ಮಳೆಗರೆದಂತೆ ಸರ್ವಜ್ಞ, ಎಂಬ ಕನ್ನಡ ಕವಿಯ ಉಕ್ತಿಯಲ್ಲಿಯೂ ಇದೇ ಮಾತನ್ನು ಹೇಳಿದೆ.

(೩) ವಿಷಕ್ಕಿಂತಲೂ ವಿಷಯ ಸುಖಗಳೇ ಹೆಚ್ಚು ಭಯಂಕರವಾದವು, ಎಂಬ ಮಾತನ್ನು ಕವಿಯು ಈ ಶ್ಲೋಕದಲ್ಲಿ ಹೇಳಿದ್ದಾನೆ. ಯಾಕಂದರೆ ವಿಷ ವನ್ನು ತಿಂದರೆ ಮಾತ್ರ ಅದು ಮನುಷ್ಯನನ್ನು ಕೊಲ್ಲುತ್ತದೆ. ಆದರೆ ವಿಷಯ ಸುಖಗಳ ಮಾತು ಹಾಗಲ್ಲ. ಕೇವಲ ಅವುಗಳನ್ನು ನೆನಪುಮಾಡಿಕೊಳ್ಳು ವದರಿಂದಲೇ ಅವು ನಮ್ಮನ್ನು ಕೊಲ್ಲುತ್ತದೆ. ಅಂದರೆ ಅವುಗಳ ಸ್ಮರಣ ಮಾತ್ರದಿಂದಲೇ ನಮ್ಮ ನಾಶ ಪ್ರಾರಂಭವಾಗುದು.

(ಬ) ೧. ಸಲಹೆಗಾಗಿ ಇದೇ ಗೈಡದ ಪಠ್ಯೇತರ ವಿಭಾಗದ ಆರಂ ಭಕ್ಕೆ ಕೊಟ್ಟ ಸೂಚನೆಗಳನ್ನು ಓದಿರಿ.

ಒಂದು (ಒಂದಾನೊಂದು) ಅಡವಿಯ ಭಾಗದಲ್ಲಿ ಅನೇಕ ಜಲಚರ (ನೀರಿನಲ್ಲಿರುವ) ಪ್ರಾಣಿಗಳಿಂದ ಕೂಡಿದ ಒಂದು ಸರೋವರವಿತ್ತು. ಅಲ್ಲಿ ಆಶ್ರಯ ಪಡೆದ ಒಂದು ಬಕಪಕ್ಷಿಯು ಮುತ್ತಿನಂತಿದ್ದ ಕಣ್ಣೀರಿನ ಪ್ರವಾಹ ದಿಂದ ಭೂಮಿಯನ್ನು ತೋಯಿಸುವಂತೆ ಅತ್ತಿತು. ಒಂದು ಏಡಿಯು ಅನೇಕ ಜಲಚರಪ್ರಾಣಿಗಳಿಂದ ಕೂಡಿಕೊಂಡು (ಅಲ್ಲಿಗೆ) ಬಂದು ಆ ಬಕಪಕ್ಷಿಯ ದುಃಖದಿಂದ ತಾನೂ ದುಃಖಗೊಂಡು ಆದರಪೂರ್ವಕವಾಗಿ ಹೀಗೆ (ಇದನ್ನು) ಅಂದಿತು— ಮಾವಾ,ನೀನು ಇಂದು ಆಹಾರವನ್ನು ಏಕೆ ತೆಗೆದುಕೊಂಡಿಲ್ಲ ? ಕೇವಲ ಕಂಬನಿದುಂಬಿದ ಕಣ್ಣುಗಳಿಂದ ನಿಟ್ಟುಸಿರು ಬಿಡುತ್ತ ನಿಂತಿರುವಿ. ಬಕಪಕ್ಷಿಯು ಅಂದಿತು— ನೀನು ಚೆನ್ನಾಗಿ ಕಂಡು ಹಿಡಿದೆ. ನಾನಾದರೋ

ಮೀನಗಳನ್ನು ತಿನ್ನುವ ವಿಷಯವಾಗಿ ಬಹಳ ವೈರಾಗ್ಯದಿಂದ, ಈಗ ಉಪವಾಸ ವ್ರತ ಕೈಕೊಂಡಿದ್ದೇನೆ. ಆದ್ದರಿಂದ ಸಮೀಪಕ್ಕೆ ಬರುವ ಮೀನಗಳನ್ನೂ ತಿನ್ನುವದಿಲ್ಲ. ಏಡಿಯು ಅದನ್ನು ಕೇಳಿ ಅಂದಿತು— ಮಾವಾ, ಆ ವೈರಾಗ್ಯದ ಕಾರಣವೇನು ? ಆ ಬಕಪಕ್ಷಿಯು ಅಂದಿತು— ನಾನು ಈ ಸರೋವರದಲ್ಲಿ ಹುಟ್ಟಿ ಬೆಳೆದಿದ್ದೇನೆ. ೧೨ ವರುಷಗಳ ಬರಗಾಲವು ಸಮೀಪದಲ್ಲಿಯೇ ಇದೆ ಎಂದು ನಾನು ಕೇಳಿದ್ದೇನೆ.

(ಬ) ೨. (೧) ರಾಕ್ಷಸರ ಒಡೆಯನಾದ ಆ ರಾವಣನು ಆ ವನದ ಯೊಳಗೆ ಹೋಗಿ, ರಾಕ್ಷಸಿಯರ ಮಧ್ಯದಲ್ಲಿ ದುಃಖಗೊಂಡ ಸೀತೆಯನ್ನು ಕಂಡನು.

(೨) ಚಿಗರೆಗಳ ಹಿಂಡಿನಿಂದ ಬಿಡಲ್ಪಟ್ಟ ಹೆಣ್ಣು ಚಿಗರೆಯು ಹೆಣ್ಣು ನಾಯಿಗಳಿಂದ ಸುತ್ತುವರಿಯಲ್ಪಟ್ಟಂತೆ ಕೆಳಗೆ ಮುಖಮಾಡಿದ ಸೀತೆಯೆಡೆಗೆ ಬಂದು ರಾವಣನು (ಅಂದನು).

(೩) ಪಾಪಿಷ್ಠನಾದ (ಅವನು) ಸೀತೆಯನ್ನು ಒಲಿಸಿಕೊಳ್ಳುವ ಇಚ್ಛೆ ಯಿಂದ ಮಾತನಾಡಿದನು. ಈ ನನ್ನ ರಾಜ್ಯವೆಲ್ಲ ನಿನ್ನನ್ನೇ ಕೂಡಿದೆ.

(೪) ವಿಶಾಲವಾದ ಕಣ್ಣುಗಳುಳ್ಳ ಸೀತೆಯೇ (ಈ ನನ್ನ) ಜೀವವೂ ನಿನ್ನನ್ನೇಕೂಡಿದೆ. ನೀನು ನನಗೆ ನನ್ನ ಜೀವಕ್ಕಿಂತಲೂ ಹೆಚ್ಚಿನವಳು. ನೂರು ಯೋಜನಗಳುಳ್ಳ ಈ ಲಂಕಾಪಟ್ಟಣವು ಸಮುದ್ರದಿಂದ ಸುತ್ತುವರಿ-ಯಲ್ಪಟ್ಟಿದೆ.

(೫) ದೇವೇಂದ್ರನಿಂದ ಕೂಡಿದ ದೇವದಾನವರೂ ಕೂಡ ಇದರ ಮೇಲೆ ದಾಳಿಯನ್ನು ಮಾಡಲಾರರು. ನನಗೆ ಸಮಾನವಾದ ಶೌರ್ಯವುಳ್ಳವ ನನ್ನು ಈ ಲೋಕಗಳಲ್ಲಿ ನಾನು ಕಾಣೆನು.

(೬) ರಾಜ್ಯ ಕಳೆದುಕೊಂಡ, ದೀನನಾದ, ಪದಾತಿಯಾದ (*foot oldier*) ಸ್ವಲ್ಪೇ ತೇಜಸ್ಸುಳ್ಳ ಆ ಕ್ಷುದ್ರ ಮನುಷ್ಯನಾದ ರಾಮನಿಂದ (ಕೂಡಿಕೊಂಡು) ಏನುಮಾಡುವೆ.

(೭) ಸುಂದರವಾದ ಮುಖವುಳ್ಳ ಸೀತೆಯೇ, ರಾಮನನ್ನು ಕಾಣುವ ವಿಷಯದಲ್ಲಿ ಮನಸ್ಸು ಮಾಡಬೇಡ. ಇಚ್ಛೆಯಿದ್ದರೂ ಇಲ್ಲಿಗೆ ಬರಲು ಯಾವ ಶಕ್ತಿಯಿದೆ ?

೬. ಸಲಹೆಗಾಗಿ ಇದೇ ಗೈಡದ ಪತ್ಯೇತರ ವಿಭಾಗದ ಆರಂಭಕ್ಕೆ ಕೊಟ್ಟ ಸೂಚನೆಗಳನ್ನು ಓದಿರಿ.

ಅಸ್ತಿ ಕಸ್ಮಿಂಶ್ಚಿತ್ಪ್ರದೇಶೇ ಹರಿದತ್ತೋ ನಾಮ ಬ್ರಾಹ್ಮಣಃ । ಕೃಷಿಂ ಕುರ್ವನ್ ಸ ದುಃಖೇನ ಕಾಲಂ ನಿನಾಯ । ಅಥೈಕಸ್ಮಿನ್ನಹನಿ ಸ ಬ್ರಾಹ್ಮಣೋ ಘರ್ಮಾರ್ತಃ ಸ್ವಕ್ಷೇತ್ರಮಧ್ಯೇ ವೃಕ್ಷಚ್ಛಾಯಾಯಾಂ ಪ್ರಸುಪ್ತಃ। ಅನತಿದೂರೇ ವಲ್ಮೀಕೋಪರಿ ಪ್ರಸಾರಿತಂ ಭೀಷಣಂ ಭುಜಂಗಂ ದೃಷ್ಟ್ವಾಸೌ ಚಿಂತಯಾಮಾಸ । ನೂನಮೇಷಾ ಕ್ಷೇತ್ರದೇವತಾ । ಏತಾವತ್ಪರ್ಯಂತಮೇಷಾ ಮಯಾ ನ ಪೂಜಿತಾ । ತೇನೇದಂ ಮಮ ಕೃಷಿಕರ್ಮ ವಿಫಲೀಭವತಿ । ಇತ್ಯಾಲೋಚ್ಯ ಭುಜಂಗಾಯ ಕ್ಷೀರಂ ನ್ಯವೇದಯತ್ । ಭುಜಂಗಸ್ತು ಪ್ರಹೃಷ್ಟಃ ತಸ್ಮೈ ದೀನಾರಮೇಕಮದಾತ್ ।



| | ಸಾಲು | ತಪ್ಪು. | ಒಪ್ಪು. |
|---|---|---|---|
| [illegible] | ೨೧ | ಉಪಗಮು | ಉಪಗಮ್ಯ |
| ೨ | ೧೮ | ನಿತ | ನಿಂತ |
| [illegible] | ೨೦ | ತ್ರತ್ವಾರ್ಥ | ತತ್ತ್ವಾರ್ಥ |
| [illegible] | ೧೪ | ಪ್ರೀತ್ಯಾಃ ಕರಃ (ಷ.ತ.) | **ಪ್ರೀತಿಂ ಕರೋತಿ ಇತಿ(ಉಪ.ತ)** |
| [illegible] | ೯ | ನಿರಾಕಸಿದ | ನಿರಾಕರಿಸಿದ |
| [illegible] | ೧೮ | ಯಂ ಸಃ | **ಯಸ್ಯ ಸಃ** |
| [illegible] | ೪ | ಸಂಹಿತಿ | ಸಂಹತಿ |
| [illegible] | ೨೯ | ಸತ | ಸತ್ಯ |
| ೨ | ೧೮ | ತಸ್ಮೈ | **ತಸ್ಮೈ** |
| ೫ | ೨೬ | ದ್ವಿಸದಾರಂಭಾ; | ದ್ವಿಷದಾರಂಭಾಃ |
| ೭ | ೭ | ಸಮಿಕ್ಷ್ಯ | ಸಮೀಕ್ಷ್ಯ |
| [illegible] | ೧೯ | ಸಿದ್ಧೀ | ಸಿದ್ಧಿಂ |
| [illegible] | ೧೪ | ನದಿ ಸಂಘ | **ನಂದಿ ಸಂಘ** |
| ೧ | ೧೭ | ಮಾನ್ಯಖೇಡರ | ಮಾನ್ಯ ಖೇಡದ |
| ೨ | ೨೨ | ಲಕಣಗಳು | ಲಕ್ಷಣಗಳು |
| ೩ | ೧೭ | ಕೀವಿ | ಕಿವಿ |
| ೩ | ೨೧,೨೨ | ಪುಣ....ಆಯುಷ | ಪುಣ್ಯ....ಆಯುಷ್ಯ |
| ೨೪ | ೪ | ಮನೋಹರವಾದ | ಹಾರಿಭಿಃ–ಮನೋಹರವಾದ |
| ೨೪ | ೨೭ | ಹುಟ್ಟಿದರೆ | ಹುಟ್ಟಿದರು |
| ೨೫ | ೧೨ | ಹಸಿಂತಿ | ಹಸಂತಿ |
| ೩೮ | ೮ | ಸಂದರ್ಬ | ಸಂದರ್ಭ |
| ೫೫ | ೨,೪ | ಶ್ರೀಮಾನ್ ತುಂಗಾಚಾರ್ಯ | **ಶ್ರೀ ಮಾನತುಂಗಾಚಾರ್ಯ** |
| ೫೫ | ೧೩ | ತುಂಗಾಚಾರ್ಯರು | **ಮಾನತುಂಗಾಚಾರ್ಯರು** |
| ೫೮ | ೯ | ಜಿನೇಂದ್ರ | ಜಿನೇಂದ್ರಂ |
| ೫೯ | ೩ | ಜಯಿಸಿದ | ಜಯಿಸಿದವ |
| ೬೩ | ೧೪ | ಸಮಾನವಿರುವ | ಸಮಾನವಿರುವದು. |

| ಪುಟ. | ಸಾಲು | ತಪ್ಪು | ಒಪ್ಪು |
|---|---|---|---|
| ೨೬೯ | ೭ | ಭವಿ | ಭುವಿ |
| ೨೭೭ | ೨೩ | ಯಸ್ಮಾತ್ | ಯಸ್ಮಾತ್ |
| ೨೮೦ | ೧೯ | ಫಲಃ | ಫಲಂ |
| ೨೮೨ | ೧೫–೧೬ | ಏನು....ನಾನು. | ಏನು ಮಾಡಿಲ್ಲ ? ಎಂದರೆ ನಾನು ಅನೇಕ ......ಆಡಿರುವೆ. |
| ೨೮೪ | ೨೪ | ಸಂಬಂಧವಿದ | ಸಂಬಂಧವಿದ್ದ |



